# ಶ್ರೀಮದ್ಭಾಗವತ

## ಏಕಾದಶಸ್ಕಂಧ ಭಾಗ - 03




ಅನುವಾದ ಹಾಗೂ ಸಂಪಾದನೆ

**ಪಂ. ಪೂ. ಗುತ್ತಲ ರಂಗಾಚಾರ್ಯರು**

ಕುಲಪತಿಗಳು ಶ್ರೀಜಯತೀರ್ಥವಿದ್ಯಾಪೀಠ



ಪ್ರಕಾಶನ : ವಿಶ್ವಮಧ್ವಮಹಾಪರಿಷತ್, ಬೆಂಗಳೂರು - 4

ವಿಶ್ವಮಧ್ವಮಹಾಪರಿಷತ್ ಗ್ರಂಥಮಾಲಾ - 198

# ಶ್ರೀಮದ್ಭಾಗವತ

# ಏಕಾದಶಸ್ಕಂಧ

## ಭಾಗ - 03

... ಅನುವಾದ ಹಾಗೂ ಸಂಪಾದನೆ ...

**ಪಂ.ಪೂಜ್ಯ ಗುತ್ತಲ ರಂಗಾಚಾರ್ಯರು**

ಕುಲಪತಿಗಳು ಶ್ರೀಜಯತೀರ್ಥವಿದ್ಯಾಪೀಠ

... ಪ್ರಕಾಶನ ...

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ

ಉತ್ತರಾದಿಮಠ

**ವಿಶ್ವಮಧ್ವಮಹಾಪರಿಷತ್**

ಬಸವನಗುಡಿ ಬೆಂಗಳೂರು - 4

**Srimad Bhagavata Ekadasha Skandha vol-03**

A highly scholarly yet simple translation in Kannada with word by word meaning, summary and detailed in-depth notes based on Bhavata Tatparya of Sri Madhwacharya a deptly summarizing all available commentaries on the subject by Sudha Visharada Pandita Poojya **Rangacharya Guttal**, Kulapati of Sri Jayateertha Vidyapitha.


| | |
|---|---|
| Kannada Anuvada by | **Poojya Rangacharya Guttal** |
| Published by | **Vishva Madhwa Maha Parishat**<br>Research Center,<br>Phone : 080 26603692 |

| **Edition** | **Year** | **Copies** | **Total** |
|---|---|---|---|
| First | 2019 | 1,000 | 1,000 |

| | |
|---|---|
| No.of Pages | xviii+342=360 |
| © | Reserved |
| Price. | **Rs. 200** |
| Type Setting | V.M.M.P Research wing |
| Cover Design by | GopalaKrishna Davanagere |

**Copies can be had from**

**Vishva Madhwa Maha Parishat**
Research Center, #11, 2nd Floor,
Uttaradi Math Building. Uttaradi Math Road,
Shankarpuram, Basavanagudi
BANGALORE - 4 Phone : 080 26603692

rinted by : **VAGARTHA,**
149, 8th Cross, N.R.Colony, Bangalore-4 Ph.22427677.



ಶ್ರೀಮಜ್ಜಗದ್ಗುರುಮಧ್ವಾಚಾರ್ಯ ಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ, ಶ್ರೀಜಯತೀರ್ಥವಿದ್ಯಾಪೀಠದ ಸಂಸ್ಥಾಪಕರಾದ
**ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರ**
ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಣೆ



ಶ್ರೀಮಜ್ಜಗದ್ಗುರುಮಧ್ವಾಚಾರ್ಯ ಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ, ಶ್ರೀಜಯತೀರ್ಥವಿದ್ಯಾಪೀಠದ ಪೋಷಕರಾದ

**ಶ್ರೀ 1008 ಶ್ರೀ ಸತ್ಯಾತ್ಮತೀರ್ಥಶ್ರೀಪಾದಂಗಳವರ**

ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಣೆ

॥ ಶ್ರೀ ದಿಗ್ವಿಜಯರಾಮೋ ವಿಜಯತೇ ॥
ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯವರ್ಯತ್ವಾದ್ಯನೇಕ ಗುಣಗಣಾಲಂಕೃತ,
ಶ್ರೀಮನ್ಮೂಲಸೀತಾಸಮೇತಶ್ರೀಮನ್ಮೂಲರಾಮ ಶ್ರೀದಿಗ್ವಿಜಯರಾಮವೇದವ್ಯಾಸದೇವರ
ದಿವ್ಯಪಾದಪದ್ಮಾರಾಧಕರಾದ, ಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯ
ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ,
ಶ್ರೀ ೧೦೦೮ ಶ್ರೀ ಸತ್ಯಾಭಿಜ್ಞತೀರ್ಥಕರಕಮಲಸಂಜಾತರಾದ
ಶ್ರೀ ೧೦೦೮ ಶ್ರೀ ಸತ್ಯಪ್ರಮೋದತೀರ್ಥಶ್ರೀಪಾದಂಗಳವರ ವರಕುಮಾರರಾದ

# ಶ್ರೀಮತ್ ಸತ್ಯಾತ್ಮತೀರ್ಥಶ್ರೀಪಾದಂಗಳವರ

# ''ಅನುಗ್ರಹಸಂದೇಶ''

**ಶ್ಲೋಕಾರ್ಧಂ ಶ್ಲೋಕಪಾದಂ ವಾ ನಿತ್ಯಂ ಭಾಗವತೋದ್ಭವಮ್ ।**
**ಯಃ ಪಠೇತ್ ಪ್ರಾತರುತ್ಥಾಯ ಸ ಜೀವನ್ನೇವ ಮುಕ್ತಿಗಃ ॥★॥**

ಎಂಬ ಉಕ್ತಿಯಂತೆ ಧರ್ಮದ ರಕ್ಷಣೆಗಾಗಿ ಅವತರಿಸಿದ ಶ್ರೀಕೃಷ್ಣನ ಪ್ರತಿಮೆಯಂತಿರುವ, ಅಜ್ಞಾನಾಂಧಕಾರಕ್ಕೆ ಸೂರ್ಯನಂತೆ ಇರುವ 'ಶ್ರೀಮದ್ಭಾಗವತ' ಗ್ರಂಥದ ಒಂದು ಶ್ಲೋಕದ ಅರ್ಧಭಾಗವನ್ನು ಅಥವಾ ಪಾದವನ್ನು ಪಠಿಸಿದರೂ ಮಹಾಫಲವಿದೆ. ಆದರೆ ಅರ್ಥಾನುಸಂಧಾನವಿದ್ದಾಗ ಮಾತ್ರ ಅಧಿಕವಾದ ಲಾಭ. ಆದರೆ ಭಾಗವತದ ಒಂದೊಂದು ಶ್ಲೋಕಗಳೂ ಕಬ್ಬಿಣದ ಕಡಲೆಗಳಂತೆ. ಶ್ರೀಮದಾಚಾರ್ಯರ ಭಾಗವತತಾತ್ಪರ್ಯ, ವಿಜಯಧ್ವಜತೀರ್ಥರು, ಯಾದವಾರ್ಯರು, ಶ್ರೀಸತ್ಯಧರ್ಮ ತೀರ್ಥರು, ಶ್ರೀನಿವಾಸತೀರ್ಥರೇ ಮೊದಲಾದವರ ವ್ಯಾಖ್ಯಾನಗಳ ಉಪಕಾರವಿಲ್ಲದೇ ಶ್ರೀಮದ್ಭಾಗವತ ಅರ್ಥವಾಗುವುದು ಅಸಾಧ್ಯ. ಈ ನಿಟ್ಟಿನಲ್ಲಿ ಶ್ರೀಮದ್ಭಾಗವತ ಹಾಗೂ ಶ್ರೀಮದ್ಭಾಗವತತಾತ್ಪರ್ಯಕ್ಕೆ ಉಪಲಬ್ಧವಿರುವ ಮುದ್ರಿತ ಹಾಗೂ ಅಮುದ್ರಿತ ಸಕಲಟೀಕಾಟಿಪ್ಪಣಿಗಳ ಅಭಿಪ್ರಾಯಗಳನ್ನು ಹಾಗೂ ಅದಕ್ಕನು-ಗುಣವಾಗಿ ಶ್ರೀಮದ್ಭಾಗವತದ ಪದಪದಾರ್ಥ ಹಾಗೂ ವಿಶೇಷಾರ್ಥಗಳನ್ನು ಭಾಗವತದ ಅಧ್ಯಯನ ಹಾಗೂ ಪಾಠಪ್ರವಚನಾಸಕ್ತರಾದ ನಮ್ಮ ಸ್ವರೂಪೋದ್ಧಾರಕ ಗುರುಗಳಾದ ಶ್ರೀ ಶ್ರೀ ೧೦೦೮ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದ ಒಡೆಯರ ಪ್ರಿಯಶಿಷ್ಯರಾದ, ಶ್ರೀಜಯತೀರ್ಥ- ವಿದ್ಯಾಪೀಠದ ಕುಲಪತಿಗಳಾದ, ನಿರಂತರ ಶ್ರೀಮನ್ನ್ಯಾಯಸುಧಾ, ವ್ಯಾಸತ್ರಯ, ದ್ವೈತದ್ಯುಮಣ್ಯಾದಿಗಳ ಪಾಠ ಪ್ರವಚನಗಳಲ್ಲಿ ಆಸಕ್ತರಾದ ಪಂಡಿತವರೇಣ್ಯ ಶ್ರೀಗುತ್ತಲ ಆಚಾರ್ಯರವರು

(ಪಂ.ರಂಗಾಚಾರ್ಯರು) ಸಕಲ ವ್ಯಾಖ್ಯಾನಗಳಿಂದ ಸಹಿತವಾದ ಶ್ರೀಮದ್ಭಾಗವತ ಅನುವಾದ ಕಾರ್ಯವನ್ನು ಮಾಡುತ್ತಾ ಬಂದಿದ್ದಾರೆ. ಈಗಾಗಲೇ ಸಮಗ್ರವಾದ ಭಾಗವತದ ಅನುವಾದ ಕಾರ್ಯವು ಸಂಪನ್ನವಾಗಿದೆ. ಈ ಭಾಗದ ಮುದ್ರಣದೊಂದಿಗೆ ಸಮಗ್ರ ಭಾಗವತ ಮುದ್ರಣವು ಶ್ರೀಕೃಷ್ಣನಿಗೆ ಸಮರ್ಪಿತವಾಯಿತು. ಅನೇಕ ಆಸಕ್ತ ವಿದ್ವಾಂಸರು ಹಾಗೂ ಲೌಕಿಕ ಜಿಜ್ಞಾಸುಗಳು ಇವುಗಳ ಅಧ್ಯಯನದಿಂದ ವಿಶೇಷ ಲಾಭವಾಗಿದೆ ಎಂಬುದಾಗಿ ಮುಕ್ತಕಂಠದಿಂದ ಹೇಳುತ್ತಿದ್ದಾರೆ. ಎಷ್ಟೋ ವ್ಯಾಖ್ಯಾನಗಳು ಮುದ್ರಿತವೇ ಆಗಿಲ್ಲ. ಮುದ್ರಿತವಾದ ವ್ಯಾಖ್ಯಾನಗಳಲ್ಲಿ ಮುದ್ರಣದೋಷಗಳು ಸಾಕಷ್ಟು ಇರುತ್ತವೆ. ಇವುಗಳೆಲ್ಲವನ್ನು ಸರಿಪಡಿಸಿಕೊಂಡು ಓದುವಷ್ಟು ಅವಧಾನ-ಅನುಕೂಲತೆಗಳು ಇರುವುದಿಲ್ಲ. ಇಂತಹ ಸಂದರ್ಭದಲ್ಲಿ ಬಹಳ ಪರಿಶ್ರಮಪೂರ್ವಕವಾಗಿ ಈ ಎಲ್ಲ ವ್ಯಾಖ್ಯಾನಗಳನ್ನು ಶೋಧಿಸಿ ಏಕತ್ರ ಸಂಗ್ರಹಿಸಿ ಮಾಡಿದ ಈ ಅನುವಾದಕಾರ್ಯವು ನಿಜಕ್ಕೂ ಲಾಭದಾಯಕವಾಗುವಲ್ಲಿ ಸಂದೇಹವಿಲ್ಲ. ಉಪವಾಸ, ಸಭೆ-ಸಮಾರಂಭ ಯಾವುದೇ ಪ್ರಸಂಗವಿರಲಿ ಹಗಲಿರುಳೆನ್ನದೆ ಈ ಅನುವಾದ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇದೊಂದು ಭಗವಂತನಿಗೆ ಅತ್ಯಂತ ಪ್ರೀತಿಕರವಾದ ತಪಸ್ಸು ಎನ್ನುವುದರಲ್ಲಿ ಸಂದೇಹವಿಲ್ಲ.

ಪ್ರಕೃತ ಭಾಗವತ-ತಾತ್ಪರ್ಯ-ವ್ಯಾಖ್ಯಾನಗಳಿಂದ ಸಹಿತವಾದ ಏಕಾದಶ ಸ್ಕಂಧದ ಮೂರನೆಯ ಸಂಪುಟದ ಅನುವಾದರೂಪವಾದ ಈ ಕೃತಿಯನ್ನು ವಿಶ್ವಮಧ್ವ ಮಹಾಪರಿಷತ್ತಿನ ವತಿಯಿಂದ ಪ್ರಕಾಶನ ಮಾಡಲಾಗುತ್ತಿದೆ. ಇಂತಹ ಮಹತ್ ಕಾರ್ಯವನ್ನು ಮಾಡಿದ ಆಚಾರ್ಯರವರಿಗೆ ಜ್ಞಾನ-ಭಕ್ತಿ-ವೈರಾಗ್ಯಾದಿಗಳನ್ನು ಕೊಟ್ಟು ನಿರಂತರ ಸುಧಾದಿಗ್ರಂಥಗಳ ಪಾಠಪ್ರವಚನದ ಕಾರ್ಯವು, ಗ್ರಂಥಲೇಖನಾದಿಗಳು ಇವರಿಂದ ನಡೆಯಲಿ ಎಂದು ನಮ್ಮ ಉಪಾಸ್ಯಮೂರ್ತಿಗಳಾದ ಶ್ರೀಮೂಲರಾಮ-ದಿಗ್ವಿಜಯ ರಾಮ ವೇದವ್ಯಾಸ ದೇವರಲ್ಲಿ ಪ್ರಾರ್ಥಿಸುತ್ತೇವೆ.

ಇತಿ ಶ್ರೀನಾರಾಯಣಸ್ಮರಣೆಗಳು

**ಐನಾಪೂರ**

೨೫.೧೦.೨೦೧೯

ಶ್ರೀಸತ್ಯಾತ್ಮತೀರ್ಥಶ್ರೀಪಾಂದಗಳವರು

ಉತ್ತರಾದಿಮಠ

# ಮುನ್ನುಡಿ

ಭಗವದ್ಭಕ್ತಿಯ ಮಹಾಪೂರದಿಂದ ಮೈದುಂಬಿ ಹರಿವ ನದಿಯೊಂದು ಇರುವುದಾದರೆ ಅದು ''ಭಾಗವತ ಮಹಾಪುರಾಣ'' ಈ ಭಾಗವತ ನದಿ ಅಪಾರವಾದ ಸಂಸಾರ ಸಾಗರಕ್ಕೆ ಸೇರಿತೆಂದರೆ ಈ ಸಾಗರ ಒಣಗುವುದು ಖಂಡಿತ. ಭೋರ್ಗರೆಯುವ ಈ ಭಾಗವತನದಿ ನಮ್ಮ ಜೀವನದಲ್ಲಿ ಒಮ್ಮೆಯಾದರೂ ನಮ್ಮ ಅಂತರಂಗವನ್ನು ಬಾಚಿ, ಬಳಸಿ, ಉಬ್ಬಿ ತಬ್ಬಿ ಹರಿಯಿತೆಂದರೆ, ತನು-ಮನಗಳಲ್ಲಿ ಆನಂದೋತ್ಸಾಹಗಳ ಫಸಲು ಬರುವುದರಲ್ಲಿ ಇನಿತೂ ಸಂದೇಹವಿಲ್ಲ.

ಪರಿಶುದ್ಧ ಜೀವನಕ್ಕೆ ಅತ್ಯವಶ್ಯಕವಾದ ಬೆಳಕಿನ ಹೊನಲು, ಬದುಕಿನ ಬೇಸಿಗೆಯಲ್ಲಿ ಬರುವ ವಸಂತ, ಬರಡು ಬದುಕಿಗೊಂದು ಚೈತನ್ಯದ ಚಿಲುಮೆ ಈ ಭಾಗವತ. ನಮ್ಮ ಮನಸ್ಸಿನ ಕೊಳೆಯೆಂಬ ಕಳೆಯನ್ನು ಕಿತ್ತಿ ಭಗವದ್ಭಕ್ತಿಯ ಬೀಜವನ್ನು ಬಿತ್ತಲು ಅನಿವಾರ್ಯವಾದದ್ದು ಭಾಗವತ ಕೃಷಿ. ಆತ್ಮಸಂದೇಶವನ್ನು ಹೊತ್ತ ಓಲೆಯ ವಿಸ್ತೃತ ರೂಪ.

ಇಂತಹ ಭಾಗವತದ ವ್ಯಾಖ್ಯಾನವನ್ನು ಮಾಡುವುದರಲ್ಲಿಯೇ ಸಾರ್ಥ-ಕತೆಯನ್ನು ಕಂಡವರು ಶ್ರೀಯಾದವಾರ್ಯರು, ಶ್ರೀ ಸತ್ಯಧರ್ಮತೀರ್ಥರು, ಶ್ರೀಶ್ರೀನಿವಾಸತೀರ್ಥರು ಮುಂತಾದ ಮಹನೀಯರು. ಮಹಾ-ಮೇಧಾವಿಗಳಾದ ಇವರ ಪ್ರತಿಭೆಯೂ ಪ್ರಕಾಶಕ್ಕೆ ಬಂದದ್ದು ಈ ಭಾಗವತ ವ್ಯಾಖ್ಯಾನವೆಂಬ ಕಾಯಕವನ್ನು ಕೈಗೊಂಡದ್ದರಿಂದಲೇ ಎಂದರೆ ತಪ್ಪಾಗಲಾರದು. ಇಂತಹ ಭಾಗವತವನ್ನು ಕನ್ನಡದಲ್ಲಿ ಅನುವಾದಿಸಲು ಅವಕಾಶವನ್ನು ಕರುಣಿಸಿದ ಆ ಭಗವಂತನಿಗೆ ನನ್ನ ಅನಂತ ನಮನಗಳು. ನನ್ನ ಪಾಲಿಗೆ ಇದರ ಅನುವಾದವೆಂಬುದು ಬಹು ಜನ್ಮದ ತಪಸ್ಸಿನ ಫಲ. ಬಾಳಿನಲ್ಲಿ ದೊರಕಬಹುದಾದಂತಹ ಅಪರೂಪದ ಸುಯೋಗ. ಈ ಸುಯೋಗ ನನಗೆ ಒದಗಿ ಬಂದದ್ದು ನನ್ನ ಅದೃಷ್ಟದ ಪರಿಪಾಕವೇ ಸರಿ ಎಂಬುದಾಗಿ ಭಾವಿಸುವೆ.

ಪ್ರಕೃತ ಭಾಗವತ ಏಕಾದಶಸ್ಕಂಧದ ಮೂರನೆಯ ಸಂಪುಟವನ್ನು ಜನರ ಮುಂದಿರಿಸಲು ಮನಸ್ಸು ಮುದಗೊಳ್ಳುತ್ತಿದೆ. ಇಲ್ಲಿಗೆ ಶ್ರೀಮದ್ಭಾಗವತದ ಸಮಗ್ರ ಅನುವಾದ ಹಾಗೂ ಮುದ್ರಣವು ಸುಸಂಪನ್ನವಾಯಿತು.

ಈ ಗ್ರಂಥದ ಸಂಪಾದನಾಕಾರ್ಯದಲ್ಲಿ ವಿಶೇಷಪರಿಶ್ರಮ ವಹಿಸಿದ ಶ್ರೀಪಾದಂಗಳವರ ಪ್ರಿಯಶಿಷ್ಯರಾದ ಪಂ ಕೃಷ್ಣಾಚಾರ್ಯ ಉಪಾಧ್ಯಾಯ, ಪಂ ವಾದಿರಾಜಾಚಾರ್ಯ ಕರಣಂ ಇವರಿಗೆ ಕುಲಸ್ವಾಮಿ ತೊರವೆಯ ನಾರಸಿಂಹನು ಆಯುರಾರೋಗ್ಯಗಳನ್ನು ಕೊಟ್ಟು ಅನುಗ್ರಹಿಸಲೆಂದು ಪ್ರಾರ್ಥಿಸುವೆ.

ಅದರಂತೆ ಈ ಪುಸ್ತಕಕ್ಕೆ ಸುಂದರ ರೂಪವನ್ನು ಕೊಟ್ಟ ಪಂ. ಮಹಿದಾಸಾಚಾರ್ಯ ಜೋಶಿ ಇವರಿಗೆ, ಸುಂದರಮುಖಪುಟದ ವಿನ್ಯಾಸವನ್ನು ಮಾಡಿದ ಶ್ರೀಯುತ ಗೋಪಾಲಕೃಷ್ಣ ದಾವಣಗೆರೆ, ಸಕಾಲಕ್ಕೆ ಮುದ್ರಿಸಿಕೊಟ್ಟ ವಾಗರ್ಥದವರಿಗೂ ಭಗವಂತ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಕೊನೆಯದಾಗಿ, ಯಾವ ಗುರುಗಳ ಅನುಗ್ರಹದಿಂದ ನನಗೆ ಈ ಅನುವಾದ ಸಾಮರ್ಥ್ಯವು ಬಂದಿತೋ ಅಂತಹ ಶ್ರೀ ಶ್ರೀ ಸತ್ಯಪ್ರಮೋದ-ತೀರ್ಥ ಶ್ರೀಪಾದಂಗಳವರ ಅಡಿದಾವರೆಯಲ್ಲಿ ಅನಂತ ಪ್ರಣಾಮಗಳನ್ನು ಸಲ್ಲಿಸುವೆ. ಹಾಗೆಯೇ ಯಾವ ಗುರುಗಳ ಆಶೀರ್ವಾದ ಬಲದಿಂದಾಗಿ ಈ ನನ್ನ ಅನುವಾದ ಕಾರ್ಯವು ಸಾಂಗವಾಗಿ ನೆರವೇರಿತೋ ಅಂತಹ ಉತ್ತರಾದಿಮಠಾಧೀಶರಾದ ಶ್ರೀ ಶ್ರೀ ಸತ್ಯಾತ್ಮತೀರ್ಥರ ಪಾದಾರವಿಂದಗಳಿಗೂ ಸಭಕ್ತಿ ಅನಂತ ನಮನಗಳನ್ನು ಸಲ್ಲಿಸಿ ಇನ್ನು ಮುಂದೆ ನನ್ನಿಂದ ಹೀಗೆಯೇ ಸತ್ಕರ್ಮಗಳನ್ನು ಮಾಡಿಸಲೆಂದು ಮದ್ಗುರ್ವಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಲಕ್ಷ್ಮೀನರಸಿಂಹನಲ್ಲಿ ಪ್ರಾರ್ಥಿಸುವೆ.

ವಿಕಾರಿನಾಮ ಸಂವತ್ಸರ
೦೬-೧೧-೨೦೧೯

ಭಾಗವತ ಜನಪ್ರಿಯ
**ಪಂ. ರಂಗಾಚಾರ್ಯ ಗುತ್ತಲ**

## ಪ್ರಕಾಶಕರ ನುಡಿ

ಶ್ರೀ ೧೦೦೮ ಶ್ರೀಸತ್ಯಪ್ರಮೋದತೀರ್ಥಶ್ರೀಪಾದಂಗಳವರ ಮಹದಪೇಕ್ಷೆಯಂತೆ, ಪ್ರಾಚೀನ ಗ್ರಂಥಗಳ ಸಂರಕ್ಷಣೆ ಹಾಗೂ ಅವುಗಳ ಸಂಶೋಧನ, ಪ್ರಕಾಶನ ಮೊದಲಾದ ಅನೇಕ ಉನ್ನತಮಟ್ಟದ ಉದ್ದೇಶಗಳಿಂದ ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರಿಂದ ಸಂಸ್ಥಾಪಿತವಾದ ಸಂಸ್ಥೆ **''ವಿಶ್ವಮಧ್ವಮಹಾಪರಿಷತ್''**

ಸಂಸ್ಥೆಯ ಉದ್ದೇಶದಂತೆಯೇ ವಿಸ್ತೃತ ಗ್ರಂಥಾಲಯದ ಯೋಜನೆ ನಡೆಯುತ್ತಿದ್ದು, ಪ್ರಾಚೀನ ತಾಳೆಗರಿ ಗ್ರಂಥಗಳ, ಹಸ್ತಪ್ರತಿಗಳ ಸಂಗ್ರಹ-ಸಂರಕ್ಷಣಾ ಕಾರ್ಯಗಳು ಪ್ರಗತಿಯಲ್ಲಿವೆ. ಮತ್ತು ಗ್ರಂಥಗಳ ಪ್ರಕಾಶನಕಾರ್ಯವೂ ಹೆಚ್ಚು ಕ್ರಿಯಾಶೀಲವಾಗಿದ್ದು, ಈಗಾಗಲೇ ಸಂಸ್ಕೃತ-ಕನ್ನಡ-ತೆಲುಗು-ಹಿಂದಿ-ಮರಾಠಿ-ತಮಿಳು-ಆಂಗ್ಲ ಭಾಷೆಗಳಲ್ಲಿ ಅನೇಕ ಪುಸ್ತಕಗಳು ಪ್ರಕಾಶನಗೊಂಡಿವೆ.

ಈಗಾಗಲೇ ಶ್ರೀಪಾದಂಗಳವರ ೨೨ಕ್ಕೂ ಹೆಚ್ಚು ಉಪನ್ಯಾಸಗಳ ಕೃತಿಗಳನ್ನು ಪ್ರಕಾಶನಮಾಡಿ ಜನತೆಯಲ್ಲಿ ಧರ್ಮಜಾಗೃತಿ ಮೂಡಿಸಲಾಗಿದೆ.

ಪ್ರಕೃತ **''ಶ್ರೀಮದ್ಭಾಗವತ ಏಕಾದಶಸ್ಕಂಧದ''** ಮೂರನೇ ಭಾಗವು ಪ್ರಕಾಶಿಸಲಾಗುತ್ತಿದೆ.

ಈ ಕೃತಿಯನ್ನು ಸಂಪಾದಿಸಿ ಕನ್ನಡದಲ್ಲಿ ಅನುವಾದ ಮಾಡಿಕೊಟ್ಟ ಪರಮಪೂಜ್ಯ ಗುತ್ತಲ ಆಚಾರ್ಯರವರಿಗೆ ಅನೇಕ ಶಿರಸಾಷ್ಟಾಂಗ ಪ್ರಣಾಮಗಳು

**ಪ್ರಧಾನ ಕಾರ್ಯದರ್ಶಿಗಳು**

**ವಿಶ್ವಮಧ್ವಮಹಾಪರಿಷತ್ ಬೆಂಗಳೂರು 4**

# ವಿಷಯಾನುಕ್ರಮಣಿಕಾ

## ಅಧ್ಯಾಯ 21



## ಅಧ್ಯಾಯ 22



## ಅಧ್ಯಾಯ 23

★★★

# ಶ್ರೀಮದ್ಭಾಗವತೇ ಏಕಾದಶಸ್ಕಂಧೇ

## ಅಥ ಏಕವಿಂಶೋಽಧ್ಯಾಯಃ

ಭಗವಂತನಿಗೆ ಪ್ರಿಯವಾಗುವಂತೆ ದ್ರವ್ಯ,ದೇಶಾದಿಗಳ ಶುದ್ಧಿಯನ್ನು ಹೇಳುತ್ತ ಕರ್ಮಯೋಗಿಗಳಿಗೆ ಕರ್ಮ ಮಾಡುವ ರೀತಿಯನ್ನು ಹೇಳುವರು -

ಹಿಂದಿನ ಅಧ್ಯಾಯದ ಕೊನೆಗೆ ಮೋಕ್ಷಮಾರ್ಗಾನುಷ್ಠಾನದ ಫಲವನ್ನು ಹೇಳಿರುವರು. ಅವುಗಳಲ್ಲಿ ಒಂದನ್ನೂ ಮಾಡದಿರುವವರ ಅವಸ್ಥೆಯನ್ನು ಮೊದಲಿಗೆ ತಿಳಿಸುವರು. (ಮುಕ್ತಿಗೆ ಯೋಗ್ಯರಲ್ಲದವರಿಗೆ ಶ್ರವಣಾದಿಗಳನ್ನು ಮಾಡದಿರುವ ಅಪರಾಧದಿಂದ ಬಂಧ ಬರುವುದು ಎಂದು ಹೇಳುವರು.)

**ಯ ಏತಾಂ ಮತ್ಕಥಾಂ ಹಿತ್ವಾ ಭಕ್ತಿಜ್ಞಾನಕ್ರಿಯಾತ್ಮಿಕಾಮ್ ।**
**ಕ್ಷುದ್ರಾನ್ ಕಾಮಾನ್ ಖ(ಚ)ಲೈಃ ಪ್ರಾಣೈರ್ಜುಷಂತಃ ಸಂಸರಂತಿ ತೇ॥೧॥**

**ಯೇ** ಯಾರು **ಭಕ್ತಿಜ್ಞಾನಕ್ರಿಯಾತ್ಮಿಕಾಂ** ಭಕ್ತಿಯೋಗ, ಕರ್ಮಯೋಗ ವಿಷಯಕವಾದ **ಮತ್ಕಥಾಂ** ನನ್ನ ಸಂಬಂಧಿ ಎಂದು ಶಾಸ್ತ್ರದಲ್ಲಿ ಹೇಳಲ್ಪಡುವ ಅಂದರೆ ಶಾಸ್ತ್ರೋಕ್ತವಾದ ಎಂದರ್ಥ **ಏತಾಂ** ಹಿಂದೆ ಹೇಳಿದ ಮೂರು ಉಪಾಯಗಳನ್ನು **ಹಿತ್ವಾ** ಬಿಟ್ಟು **ಖಲೈಃ** ವಿಷಯಾಸಕ್ತಿಯುಳ್ಳ (**ಚಲೈಃ** ನಶ್ವರವಾದ) **ಪ್ರಾಣೈಃ** ಇಂದ್ರಿಯಗಳಿಂದ **ಕ್ಷುದ್ರಾನ್** ಕ್ಷುಲ್ಲಕವಾದ **ಕಾಮಾನ್** ವಿಷಯಗಳನ್ನು **ಜುಷಂತಃ** ಸೇವಿಸುವವರು **ಸಂಸರಂತಿ** ಸಂಸಾರದಲ್ಲಿ ಉಳಿಯುವರು.॥೧॥

**ಅವತರಣಿಕಾ-** ಕರ್ಮ ಮಾಡಬೇಕಾದರೆ ದ್ರವ್ಯಾದಿಗಳ ಶುದ್ಧಿ ಹಾಗು ಅಶುದ್ಧಿಗಳನ್ನು ತಿಳಿಯಬೇಕು. ಹೇಗೆ ಭಗವತ್ಪ್ರಿಯವಾದುದು ಗುಣ,

ಅಪ್ರಿಯವಾದುದು ದೋಷ ಎಂದು, ಗುಣದೋಷಗಳ ಸ್ವರೂಪ ಶ್ರೀಹರಿಯ ಪ್ರೀತಿ, ಮತ್ತು ಅಪ್ರೀತಿಯನ್ನು ಅವಲಂಬಿಸಿದೆಯೋ ಹಾಗೆಯೇ ಭಗವತ್ಸನ್ನಿಧಾನ ವಿಶೇಷಯುಕ್ತವಾದುದು ಶುದ್ಧ ವಸ್ತು. ಸನ್ನಿಧಾನರಹಿತವಾದುದು ಅಶುದ್ಧ-ವೆಂದು ಹೇಳಲು ಹಿಂದೆ ಹೇಳಿದ್ದನ್ನೇ ಸ್ಮರಿಸುವರು-

**ಸ್ವೇ ಸ್ವೇऽಧಿಕಾರೇ ಯಾ ನಿಷ್ಠಾ ಸ ಗುಣಃ ಪರಿಕೀರ್ತಿತಃ ।**
**ವಿಪರ್ಯಯಸ್ತು ದೋಷಃ ಸ್ಯಾದುಭಯೋರೇಷ ನಿಶ್ಚಯಃ ॥೨॥**

ಹಿಂದೆಯೇ ವ್ಯಾಖ್ಯಾನ ಮಾಡಿಯಾಗಿದೆ. ಹರಿಪ್ರೀತಿಕರವಾದುದು ಶುದ್ಧ. ಅಪ್ರೀತಿಕರವಾದುದು ಅಶುದ್ಧವೆಂದು ಭಾವ.॥೨॥

ಯಾವುದಕ್ಕಾಗಿ ಗುಣದೋಷಗಳ ಸ್ವರೂಪವನ್ನು ಹೇಳಿದರೋ ಅದನ್ನು ಈಗ ಹೇಳುವರು -

**ಶುದ್ಧ್ಯಶುದ್ಧೀ ವಿಧೀಯೇತೇ ಸಮಾನೇಷ್ವಪಿ ವಸ್ತುಷು ।**
**ದ್ರವ್ಯಸ್ಯ ವಿಚಿಕಿತ್ಸಾರ್ಥಂ ಗುಣದೋಷೌ ಶುಭಾಶುಭೌ ॥೩॥**

**ಸಮಾನೇಷು** ಪಂಚಭೂತಾತ್ಮಕಗಳಾದ್ದರಿಂದ ಸಮಾನವಾದ **ವಸ್ತುಷು** ಪದಾರ್ಥಗಳಲ್ಲಿ **ದ್ರವ್ಯಸ್ಯ** ದ್ರವ್ಯಕ್ಕೆ **ಶುದ್ಧ್ಯಶುದ್ಧೀ** ಶುದ್ಧಿ ಹಾಗು ಅಶುದ್ಧಿಗಳು **ವಿಧೀಯೇತೇ** ಹೇಳಲ್ಪಡುತ್ತವೋ **ಗುಣದೋಷೌ** ಗುಣದೋಷಗಳನ್ನು **ಶುಭಾಶುಭೌ** ಇದು ಶುಭ, ಇದು ಅಶುಭವೆಂದು **ವಿಚಿಕಿತ್ಸಾರ್ಥಂ** ವಿಚಾರಕ್ಕಾಗಿ, ವಿವೇಕಕ್ಕಾಗಿ ಹೇಳಲ್ಪಡುತ್ತವೋ ಇವೆಲ್ಲವೂ ನನ್ನ ಸನ್ನಿಧಾನದಿಂದ ಶುಭ, ಸನ್ನಿಧಾನ ಇಲ್ಲದಿರುವದರಿಂದ ಅಶುಭ.

ವಿಚಿಕಿತ್ಸಾ ಶಬ್ದದ ಅರ್ಥವನ್ನು ನಿರೂಪಿಸುತ್ತಾರೆ ತಾತ್ಪರ್ಯಕಾರರು -

ತಾತ್ಪರ್ಯ- ವಿವೇಕೇನ ಪುಣ್ಯಾಧಿಕ್ಯಂ ಭವತೀತಿ ವಿಚಿಕಿತ್ಸಾರ್ಥಂ ಗುಣದೋಷೌ ವಿಧೀಯೇತೇ ॥

ಪಂಚಭೂತಾತ್ಮಕತ್ವೇನ ಸಮತಾ ಸರ್ವವಸ್ತುಷು ।
ಹರಿಸನ್ನಿಧಿವೈಶೇಷ್ಯಾತ್ ವಿಶೇಷಶ್ಚ ಮಹಾನ್ ಸದಾ ॥ -ಇತಿ ವೈಶೇಷ್ಯೇ ।

ಪಂಚಭೂತಗಳಿಂದ ಕೂಡಿದ ಎಲ್ಲ ವಸ್ತುಗಳೂ ಸಮಾನವಾಗಿದ್ದರೂ ವಿಶೇಷ ಹರಿ ಸನ್ನಿಧಾನದಿಂದ ವಿಶೇಷವೂ ಬರುವುದು ಎಂದು ವೈಶೇಷ್ಯದಲ್ಲಿ ಹೇಳಿದೆ.

ಊರಿಗೆ ಹೋಗುವಾಗ ತುಂಬಿದ ಕೊಡ ನೋಡಿದರೆ ಶುಭವಾಗುವುದು. ಒಂಟಿ ಬ್ರಾಹ್ಮಣ ಬಂದರೆ ಅಶುಭವಾಗುವುದು. ಅದರಂತೆ ಹರಿಗೆ ಪ್ರೀತಿಕರವಾದ ಕರ್ಮ ಗುಣ, ಅಪ್ರೀತಿಕರವಾದುದು ದೋಷ ಎಂದು ಹೇಳಿದಂತೆ ಹರಿಸನ್ನಿಧಾನದಿಂದ ಶುದ್ಧಿ, ಅಸನ್ನಿಧಾನದಿಂದ ಅಶುದ್ಧಿ ಎಂದು ವೈಶೇಷ್ಯ ಎಂಬ ಗ್ರಂಥದಲ್ಲಿ ಹೇಳಿದೆ.

ಭಗವಂತನ ಪೂಜಾಸಾಧನವಾದ ದ್ರವ್ಯಗಳಲ್ಲಿ ಶುದ್ಧಿ ಹಾಗು ಅಶುದ್ಧಿಗಳನ್ನು ತಿಳಿಯುವುದರಿಂದ ಹೆಚ್ಚು ಪುಣ್ಯ ಬರುವುದು.।।೩।।

ಇದನ್ನೇ ವಿವರಿಸುವರು -

**ಧರ್ಮಾರ್ಥಂ ವ್ಯವಹಾರಾರ್ಥಂ ಯಾತ್ರಾರ್ಥಮಿತಿ ಚಾನಘ ।**
**ದರ್ಶಿತೋಽಯಂ ಮಯಾಽಽಚಾರೋ ಧರ್ಮ್ಯಮುದ್ವಹತಾ ಧುರಮ್।।೪**

**ಹೇ ಅನಘ** ಪಾಪರಹಿತನಾದ ಉದ್ಧವನೇ! **ಧರ್ಮ್ಯಂ** ಧರ್ಮಸಂಸ್ಥಾಪನ ರೂಪವಾದ **ಧುರಂ ಉದ್ವಹತಾ** ಭಾರವನ್ನು ಹೊತ್ತಿರುವ **ಮಯಾ** ನನ್ನಿಂದ **ಅಯಂ ಆಚಾರಃ** ಧರ್ಮಶಾಸ್ತ್ರರೂಪವಾದ ಈ ಆಚಾರವು **ಧರ್ಮಾರ್ಥಂ** ವಿಶೇಷ ಪುಣ್ಯ ಬರುವುದಕ್ಕಾಗಿಯೂ **ವ್ಯವಹಾರಾರ್ಥಂ** ಇದು ಶುದ್ಧ, ಇದು ಅಶುದ್ಧ ಎಂಬ ವ್ಯವಹಾರಕ್ಕಾಗಿಯೂ **ಯಾತ್ರಾರ್ಥಂ** ಶುದ್ಧವಾದ ದ್ರವ್ಯದಿಂದ, ಸಾತ್ವಿಕವಾದ ಅನ್ನಾದಿ ಭೋಜನದಿಂದ ಶರೀರಯಾತ್ರೆಗಾಗಿ (ಸಂರಕ್ಷಣೆಗಾಗಿ) **ದರ್ಶಿತಃ** ತೋರಿಸಲ್ಪಟ್ಟಿದೆ. ಅಂದರೆ ಹರಿಯ ಸನ್ನಿಧಿ ಪ್ರಯುಕ್ತ ಶುದ್ಧಿಯನ್ನು ವೇದ ಮಾತ್ರ ವಿಧಿಸಿಲ್ಲ. ಸ್ಮೃತಿಗಳಲ್ಲಿಯೂ ವಿಹಿತ ಆಗಿದೆ ಎಂದರ್ಥ.।।೪।।

ಶುದ್ಧಿ ಅಶುದ್ಧಿಗಳನ್ನೇ ವಿವರಿಸುವರು -

**ಭೂಮ್ಯಂಬ್ವಗ್ನ್ಯನಿಲಾಕಾಶಾ ಭೂತಾನಾಂ ಪಂಚ ಧಾತವಃ ।**
**ಆಬ್ರಹ್ಮಸ್ಥಾವರಾದೀನಾಂ ಶಾರೀರಾ ಆತ್ಮಸಂಯುತಾಃ ।।೫।।**

**ಭೇದೇನ ನಾಮರೂಪಾಣಿ ವಿಷಮಾಣಿ ಸಮೇಷ್ವಪಿ ।**
**ಧಾತುಶುದ್ಧ್ಯೈ ವಿಕಲ್ಪ್ಯಂತ ಏತೇಷಾಂ ಸ್ವಾರ್ಥಸಿದ್ಧಯೇ ।।೬।।**

**ಆಬ್ರಹ್ಮಸ್ಥಾವರಾದೀನಾಂ ಭೂತಾನಾಂ** ಬ್ರಹ್ಮದೇವರಿಂದ ಆರಂಭಿಸಿ ತೃಣಜೀವರ ಪರ್ಯಂತ ಎಲ್ಲ ಪ್ರಾಣಿಗಳ **ಶಾರೀರಾಃ** ಶರೀರದಲ್ಲಿರುವ **ಭೂಮ್ಯಂಬ್ವಗ್ನ್ಯನಿಲಾಕಾಶಾಃ** ಭೂಮಿ, ನೀರು, ಅಗ್ನಿ, ವಾಯು, ಆಕಾಶಗಳೆಂಬ **ಪಂಚಧಾತವಃ** ಐದು ಮಹಾಭೂತಗಳು (ಕಾರ್ಯಭಾಗಗಳು) ಶರೀರೋ-ಪಾದಾನಗಳು **ಆತ್ಮಸಂಯುತಾಃ** ಭಗವಂತನಿಂದ ಕೂಡಿವೆ. ಆದರೂ **ಸಮೇಷು ಅಪಿ** ಸಮಾನಗಳಾದರೂ **ತೇಷು** ಆಯಾ ಪದಾರ್ಥಗಳಲ್ಲಿ **ಭೇದೇನ** ಹರಿಯ ಸನ್ನಿಧಾನತಾರತಮ್ಯದಿಂದ **ವಿಷಮಾಣಿ** ವಿರುದ್ಧವಾದ **ನಾಮರೂಪಾಣಿ** ಬಾಳೆಹಣ್ಣು ಶುದ್ಧ, ಬದನೇಕಾಯಿ ಅಶುದ್ಧ, ವರ್ತುಲ, ಉದ್ದ, ಹೀಗೆ ನಾಮ ರೂಪಗಳ ಬೇಧವು **ಧಾತುಶುದ್ಧ್ಯೈ** ಪರಮಾತ್ಮನ ಶುಚಿತಮತ್ವ ಜ್ಞಾನಕ್ಕಾಗಿ ಅದರಿಂದ **ಏತೇಷಾಂ** ಅಧಿಕಾರಿಗಳ **ಸ್ವಾರ್ಥಸಿದ್ಧ್ಯೈ** ಮೋಕ್ಷಾದಿಗಳ ಪ್ರಾಪ್ತಿಗಾಗಿ **ವಿಕಲ್ಪ್ಯಂತೇ** ವಿವಿಧವಾಗಿ ಮಾಡಲ್ಪಡುತ್ತವೆ. ವಿದ್ವಾಂಸರಿಂದ ವ್ಯವಹಾರಕ್ಕೆ ಯೋಗ್ಯ ಅಯೋಗ್ಯವೆಂದು ಮಾಡಲ್ಪಡುತ್ತವೆ ಎಂದರ್ಥ.।।೫- ೬।।

ಧಾತುಶುದ್ಧ್ಯೈ ಎಂಬಲ್ಲಿ ಶರೀರಧಾತುಗಳ ಶುದ್ಧಿಗಾಗಿ ಎಂಬ ವಿಪರೀತ ಅರ್ಥವಾಗದಿರಲೆಂದು ಅರ್ಥ ಹೇಳುವರು -

**ತಾತ್ಪರ್ಯ- ಧಾತುಃ ಪರಮೇಶ್ವರಃ ।**

ಧಾರಕನಾದ್ದರಿಂದ ಧಾತುವು ಶ್ರೀಹರಿಯು, ಅವನ ಶುದ್ಧಿಯೆಂದರೆ ಶುಚಿತಮತ್ವ ಜ್ಞಾನವು. ಅದು ಹೇಗೆ ಎಂದರೆ ಹೇಳುವರು-

**ತಾತ್ಪರ್ಯ- ಯದ್ಯದ್ ಹರೇಃ ಸನ್ನಿಹಿತಂ ತತ್ತಚ್ಛುದ್ಧತರಂ ಮತಮ್ ।**
**ಸ್ವತಃ ಶುಚಿತಮೋ ವಿಷ್ಣುಃ ಸಾನ್ನಿಧ್ಯಂ ಚ ಸ್ವಭಾವತಃ ।। ಇತಿ ಚ ।।**

ಭಗವಂತನ ಸನ್ನಿಧಿಗೆ ಪಾತ್ರವಾದುದೆಲ್ಲ ಶುದ್ಧವಾಗಿದೆ. ಶ್ರೀಹರಿಯು ಮಾತ್ರ ಸ್ವಯಂ ಶುದ್ಧನು. ಈ ಪದಾರ್ಥಗಳಲ್ಲಿ ಭಗವಂತನ ಸನ್ನಿಧಾನವು ಸ್ವಾಭಾವಿಕವಾಗಿದೆ.

''**ಏತೇಷಾಂ**'' ಎಂಬುದಕ್ಕೆ ಭೂಮ್ಯಾದಿಗಳೆಂದು ಅರ್ಥ ತೋರುವುದು, ಕಾರಣ ಅರ್ಥ ಬರೆಯುವರು -

**ತಾತ್ಪರ್ಯ- ಏತೇಷಾಂ ಜೀವಾನಾಮ್ ।**

''ಆಬ್ರಹ್ಮಸ್ಥಾವರಾದೀನಾಂ'' ಎಂದು ಬ್ರಹ್ಮಾದಿಜೀವರೂ ಸಹ ಪ್ರಕೃತ-

ರಾದ್ದರಿಂದ ಅವರನ್ನೇ ಪರಾಮರ್ಶ ಮಾಡಬೇಕೆಂಬ ಅಭಿಪ್ರಾಯದಿಂದ ''ಜೀವಾನಾಂ'' ಎಂದು ವ್ಯಾಖ್ಯಾನಿಸಿದ್ದಾರೆ.।।೫-೬।।

**ದೇಶಕಾಲಾದಿಭಾವಾನಾಂ ವಚನಾನ್ಮಮ ಸತ್ತಮ ।**
**ಗುಣದೋಷೌ ವಿಧೀಯೇತೇ ನಿಯಮಾರ್ಥಂ ಹಿ ಕರ್ಮಣಾಮ್ ।।೭।।**

**ಕರ್ಮಣಾಂ ನಿಯಮಾರ್ಥಂ** ಈ ದೇಶದಲ್ಲಿ, ಈ ಕಾಲದಲ್ಲಿ ಕರ್ಮ ಮಾಡಿದರೆ ಫಲ ಬರುವುದು ಇಲ್ಲವಾದರೆ ಇಲ್ಲ, ಎಂದು ನಿಯಮಿಸಲು **ದೇಶಕಾಲಾದಿಭಾವಾನಾಂ** ದೇಶ,ಕಾಲ, ಮುಂತಾದ ಪದಾರ್ಥಗಳಿಗೆ **ಮಮ ವಚನಾತ್** ಶ್ರುತಿ, ಸ್ಮೃತಿರೂಪವಾದ ನನ್ನ ಮಾತುಗಳಿಂದ **ಗುಣದೋಷೌ** ಈ ದೇಶಕಾಲದ್ರವ್ಯಗಳು ಭಗವತ್ಪ್ರೀತಿಕರ, ಇವು ಪ್ರೀತಿಕರವಲ್ಲವೆಂದು **ವಿಧೀಯೇತೇ** ಹೇಳಲ್ಪಡುವವು.।।೭।।

**ಕೃಷ್ಣಸಾರೋಽಥ ದೇಶಾನಾಂ ಬ್ರಾಹ್ಮಣಾನಾಂ ಶುಚಿರ್ಭವೇತ್ ।**
**ಕೃಷ್ಣಸಾರೋಽಪ್ಯಸೌವೀರಕೀಕಟಾಸಂಸ್ಕೃತೇರಿಣಃ ।।೮।।**

**ಬ್ರಾಹ್ಮಣಾನಾಂ** ಬ್ರಾಹ್ಮಣರು ಕರ್ಮ ಮಾಡಲು **ಕೃಷ್ಣಸಾರಃ** ಜಿಂಕೆಯು (ಸಾರಂಗವು) **ದೇಶಾನಾಂ ಶುಚಿಃ** ದೇಶಗಳಿಗೆ ಶುದ್ಧಿಕರವು. ಅಂದರೆ ದೇಶಕಾಲಗಳ ಮಧ್ಯದಲ್ಲಿ ಯಾವ ದೇಶದಲ್ಲಿ ಜಿಂಕೆಯು ವಾಸಿಸುವುದೋ ಆ ದೇಶವು ಶುದ್ಧವೆಂದು ತಿಳಿಯಬೇಕು. **ಕೃಷ್ಣಸಾರೋಽಪಿ** ಜಿಂಕೆ ವಾಸಿಸುವುದಾದರೂ **ಅಸೌವೀರಕೀಕಟಾಸಂಸ್ಕೃತೇರಿಣಃ, ಸೌವೀರ,** ಸೌವೀರ ಎಂಬ ಒಂದು ದೇಶ **ಕೀಕಟ** ಬಿಹಾರ, **ಅಸಂಸ್ಕೃತ** ದುಷ್ಟರು ವಾಸಮಾಡಿರುವ ದೇಶಗಳು ಅಸಂಸ್ಕೃತವಾದ ದೇಶಗಳು, **ಈರಿಣ** ಮರುಭೂಮಿ ಜವಳುಭೂಮಿ ಇವುಗಳು ಕೃಷ್ಣಸಾರವಿದ್ದರೂ ಶುದ್ಧವಲ್ಲ. ಉಳಿದವುಗಳು ಶುದ್ಧ.

ಮೇಲಿನ ಶ್ಲೋಕದಲ್ಲಿ ಬಂದಿರುವ ಕೀಕಟ ಶಬ್ದದ ಅರ್ಥವನ್ನು ಹೇಳುವರು.

ನದೀಸಮುದ್ರಗಿರಯ ಆಶ್ರಮಾಶ್ಚ ವನಾನಿ ಚ ।
ನಗರಾಣಿ ಚ ದಿವ್ಯಾನಿ ಶಾಲಗ್ರಾಮಾದಯಸ್ತಥಾ ।।

ತೇಷಾಂ ಸಮೀಪಗಾಶ್ಚೈವ ದೇಶಾ ಯೋಜನಮಾತ್ರತಃ ।
ಕರ್ಮಣ್ಯಾಸ್ತು ಸಮಾಖ್ಯಾತಾಸ್ತದನ್ಯೇ ಕೀಕಟಾಃ ಸ್ಮೃತಾಃ ।।

ತದನ್ಯೇಽಪಿ ತು ಯೇ ದೇಶಾಃ ಕೃಷ್ಣಸಾರೋಷಿತಾಃ ಸ್ವತಃ ।
ಕರ್ಮಣ್ಯಾ ಏವ ವಿಜ್ಞೇಯಾ ಯದಿ ನಾಧ್ಯುಷಿತಾಃ ಖಲೈಃ ॥

ಖಲೈರಧ್ಯುಷಿತಾಶ್ಚಾಪಿ ಯದಿ ಸದ್ಭಿರಧಿಷ್ಠಿತಾಃ ।
ಕರ್ಮಣ್ಯಾ ಇತಿ ವಿಜ್ಞೇಯಾ ವಿಷ್ಣುಲಿಂಗಾನಿ ಯತ್ರ ಚ ॥ ಇತಿ ಸ್ಕಾಂದೇ ।

ಆಂತರಃ ಸನ್ನಿಧಿರ್ವಿಷ್ಣೋರ್ಬಾಹ್ಯಸನ್ನಿಧಿರೇವ ಚ ।
ದ್ವಿವಿಧಃ ಸನ್ನಿಧಿಃ ಪ್ರೋಕ್ತಃ ಕೃತ್ರಿಮೋ ಬಾಹ್ಯ ಉಚ್ಯತೇ ॥
ಸ್ವಾಭಾವಿಕಸ್ತ್ವಾಂತರಃ ಸ್ಯಾತ್ ಪ್ರತಿಮಾಜೀವಗೋ ಯಥಾ ॥

ನದಿಗಳು, ಸಮುದ್ರಗಳು, ಪರ್ವತಗಳು, ಋಷಿಗಳ ಆಶ್ರಮಗಳು, ವನಗಳು, ದಿವ್ಯವಾದ ಮಥುರಾ ಮುಂತಾದ ನಗರಗಳು, ಶಾಲಗ್ರಾಮ ಮುಂತಾದ ಸ್ವಯಂ ವ್ಯಕ್ತಸ್ಥಳಗಳು, ಮತ್ತು ಇವುಗಳಿಗೆ ಸಮೀಪದಲ್ಲಿರುವ ಒಂದು ಯೋಜನ ಪರ್ಯಂತ ದೇಶಗಳು ಕರ್ಮಾಚರಣೆಗೆ ಯೋಗ್ಯವಾದವು. ಇವುಗಳಿಂದ ಭಿನ್ನವಾದ ದೇಶವು ಕೀಕಟವು. ಈ ಕೀಕಟದಿಂದ ಭಿನ್ನವಾದ ಸ್ವಾಭಾವಿಕವಾಗಿ ಜಿಂಕೆಗಳು ವಾಸಿಸುವ ದೇಶವು ವಿಷ್ಣುದ್ರೋಹಿಗಳಿಲ್ಲದಿದ್ದರೆ ಯೋಗ್ಯವು. ದುಷ್ಟರಿದ್ದರೂ ಸಜ್ಜನರು ಇದ್ದು ವಿಷ್ಣುಪ್ರತಿಮೆಗಳಿದ್ದರೆ ಅವೂ ಯೋಗ್ಯವೇ ಆಗಿವೆ.

ವಿಷ್ಣುಸನ್ನಿಧಿಯು ಅಂತರ, ಬಾಹ್ಯ ಹೀಗೆ ಎರಡು ವಿಧವಾಗಿದೆ. ಸ್ವಾಭಾವಿಕವಾದುದು ಅಂತರ. ಕೃತ್ರಿಮವಾದುದು ಬಾಹ್ಯ. ಶಿಲಾ ಮೊದಲಾದ ಜಡಪ್ರತಿಮೆಗಳಲ್ಲಿ ಪ್ರತಿಷ್ಠಾದಿಗಳಿಂದ ಬರುವ ಸನ್ನಿಧಾನ ಬಾಹ್ಯ. ಚೇತನರಲ್ಲಿರುವ ಭಗವತ್ಸನ್ನಿಧಾನ ಸ್ವಾಭಾವಿಕವಾದುದು.

ಈ ಶ್ಲೋಕದಲ್ಲಿ ''ಅಥ'' ಶಬ್ದವು ಮಾಂಗಲಿಕಾರ್ಥವು, ವಿಷಯಾಂತರಾ-ಬಾಧಾರ್ಥಕವೂ ಆಗಿದೆ. ''ಕೃಷ್ಣಸಾರಃ ಅಥ'' ಸ್ವಾಭಾವಿಕ ಕೃಷ್ಣಸಾರವುಳ್ಳ ದೇಶವು ಮಾಂಗಲಿಕವು ಎಂದರ್ಥ.

ನದೀಸಮುದ್ರಾದಿಗಳ ಯೋಜನ ಪರ್ಯಂತ ಭೂಮಿಯು ಶುಚಿಯೆಂಬುದು ಸಿದ್ಧ. ''ಅಥ'' ಶುಚಿಯಾದ ದೇಶಾಂತರ ಹೇಳಲು ಪ್ರಾರಂಭಿಸುವರು. ''ಕೃಷ್ಣಸಾರಃ ಅಥ'' ನದೀಸಮುದ್ರಾದಿ ಭಿನ್ನವಾದರೂ ಕೃಷ್ಣಸಾರವಿದ್ದರೆ ಶುಚಿ ಎಂದರ್ಥ.

ಸಜ್ಜನರಿಲ್ಲದಿರುವ ಅಧರ್ಮಬಹುಲವಾದ ಪ್ರದೇಶವು ಸತ್ಕರ್ಮಗಳನ್ನು ಆಚರಿಸಲು, ಸಾಧನೆಯನ್ನು ಮಾಡಲು ಅನರ್ಹವಾಗಿದೆ. ಯಜ್ಞೋಪಯೋಗಿಯಾದ ಪದಾರ್ಥ ಬೆಳೆಯದಿರುವ ಬಂಜರು ಭೂಮಿಯಲ್ಲಿ ಬ್ರಹ್ಮಹತ್ಯೆ ಇರುವುದು. ಆದ್ದರಿಂದ ಅದು ಅಶುದ್ಧವಾಗಿದೆ.।।೮।।

ಕರ್ಮ ಮಾಡಲು ಯೋಗ್ಯವಾದ ಕಾಲವನ್ನು ತಿಳಿಸುವರು

**ಕರ್ಮಣ್ಯೋ ಗುಣವಾನ್ ಕಾಲೋ ದ್ರವ್ಯತಃ ಸ್ವತ ಏವ ವಾ ।**
**ಯತೋ ನಿವರ್ತತೇ ಕರ್ಮ ಸದೋಷೋಽಕರ್ಮಕಃ ಸ್ಮೃತಃ ।।೯।।**

**ದ್ರವ್ಯತಃ** ಪುಷ್ಪಫಲಾದಿಗಳಿಂದ **ಗುಣವಾನ್** ಸಮೃದ್ಧವಾದ ಅಥವಾ **ಸ್ವತಃ** ಸ್ವಾಭಾವಿಕವಾಗಿಯೇ **ಗುಣವಾನ್** ಪ್ರಶಸ್ತವಾದ ಕಾಲವು **ಕರ್ಮಣ್ಯಃ** ಸಂಧ್ಯಾವಂದನಾದಿ ಕರ್ಮಾಚರಣೆಗೆ ಯೋಗ್ಯವಾದುದು. **ಯತಃ** ಯಾವ ಕಾಲದಲ್ಲಿ ಯಾವ ದೋಷದಿಂದ **ಕರ್ಮ ನಿವರ್ತತೇ** ನಿಶೀಥತ್ವ ಮುಂತಾದ ದೋಷದಿಂದ ಕರ್ಮ ಮಾಡುವುದಿಲ್ಲವೋ **ಸ ದೋಷಃ** ಆ ವಿಧವಾದ ದೋಷಯುಕ್ತವಾದ ಕಾಲವು **ಅಕರ್ಮಕಃ** ಕರ್ಮ ಮಾಡಲು ಯೋಗ್ಯವಲ್ಲ ಎಂದರ್ಥ.।।೯।।

ದ್ರವ್ಯದ ಶುದ್ಧಿ, ಅಶುದ್ಧಿಯ ರೀತಿಯೂ ಅನೇಕ ವಿಧವೆಂದು ಹೇಳುವರು-

**ದ್ರವ್ಯಸ್ಯ ಶುದ್ಧ್ಯಶುದ್ಧೀ ಚ ದ್ರವ್ಯೇಣ ವಚನೇನ ವಾ ।**
**ಸಂಸ್ಕಾರೇಣಾಥ ಕಾಲೇನ ಮಹತ್ವಾಲ್ಪತಯಾಽಥವಾ ।।೧೦।।**

**ದ್ರವ್ಯಸ್ಯ** ತಾಮ್ರ ಮುಂತಾದ ಪಾತ್ರೆಗಳು **ದ್ರವ್ಯೇಣ** ಹುಣಸೆಹಣ್ಣಿನಿಂದ ಶುದ್ಧವಾಗುವವು. ಪಾತ್ರೆಗಳು ಅಮೇಧ್ಯದ್ರವ್ಯಸಂಬಂಧದಿಂದ ಅಶುದ್ಧವಾಗುವವು. ಬಿಡಲಸಾಧ್ಯವಾದ ಆ ಅಶುದ್ಧವಾದ ಪಾತ್ರೆಗಳು **ವಚನೇನ** ದೊಡ್ಡವರ ಮಾತಿನಿಂದ ಶುದ್ಧವಾಗುವವು, ಯತಿಗಳು ಸೋರೆಗಿಡದ ಕಾಯಿಯನ್ನು ಭಿಕ್ಷಾಪಾತ್ರೆಯನ್ನಾಗಿ ಮಾಡಿಕೊಳ್ಳುವದು ಅಶುದ್ಧವು. ಆಗ ದೊಡ್ಡವರ ಮಾತಿನಿಂದ ಶುದ್ಧವಾಗುವದು. **ಸಂಸ್ಕಾರೇಣ** ಸಂಸ್ಕಾರದಿಂದ ಲೋಹಕ್ಕೆ ಅಗ್ನಿಸಂಸ್ಕಾರದಿಂದ ಶುದ್ಧಿಯು. ವ್ರೀಹಿಗೆ ಪ್ರೋಕ್ಷಣದಿಂದ ಶುದ್ಧಿಯು. ಕಟ್ಟಿಗೆ ಮುಂತಾದ ಪದಾರ್ಥಗಳಿಗೆ ಗೋಮೂತ್ರ ಪ್ರೋಕ್ಷಣದಿಂದ ಶುದ್ಧಿಯು. ಬಟ್ಟೆಗಳಿಗೆ ಒಗೆಯುವುದರಿಂದ ಶುದ್ಧಿ. ಭಗವದರ್ಪಣದಿಂದ,

ವೈಶ್ವದೇವದಿಂದ ಅನ್ನಕ್ಕೆ ಶುದ್ಧಿಯು. ಇಲ್ಲವಾದರೆ ಅಶುದ್ಧಿಯು. **ಕಾಲೇನ** ಕಾಲದಿಂದ ಕೆಲವು ಪದಾರ್ಥಗಳಿಗೆ ಶುದ್ಧಿಯು. ಮ್ಲೇಚ್ಛರು ವಾಸ ಮಾಡಿರುವ ಮನೆಯು ಅವರು ಆ ಮನೆಯನ್ನು ತೊರೆದ ಮೇಲೂ ಬಹಳ ದಿವಸಗಳು ಕಳೆದ ಮೇಲೆ ಶುದ್ಧಿಯು, ಪ್ರಸೂತಿ, ಮರಣಗಳಿಗೆ ಉಪಯೋಗಿಸಿದ ಮನೆಗಳಿಗೆ ಹತ್ತುದಿನ ಕಳೆದ ಮೇಲೆ ಶುದ್ಧಿಯು, ಇದು ಕಾಲಶುದ್ಧಿ. ಮ್ಲೇಂಛರು ವಾಸಿಸಿದ ಮನೆಗಳಿಗೆ ಕೆಲವು ಕಾಲವು ಕಳೆದ ಮೇಲೆ ಶುದ್ಧಿಯು. ಹೊರತು ಕೂಡಲೇ ಶುದ್ಧವಾಗುವುದಿಲ್ಲ. ಅನ್ನಕ್ಕೆ ಮೂರು ತಾಸಿನ ನಂತರ ಅಶುದ್ಧಿ. ಶ್ರಾದ್ಧಕಾಲದಲ್ಲಿ ಉದ್ದಿನಬೇಳೆ ಶುದ್ಧವು. ಆದರೆ ಕಾರ್ತಿಕಮಾಸದಲ್ಲಿ ಅಶುದ್ಧವು. **ಮಹತ್ವಾಲ್ಪತಯಾ** ಅನ್ನದ ರಾಶಿ ದೊಡ್ಡದಿರುವಾಗ ನಾಯಿ ಮುಟ್ಟಿದ ಭಾಗ ತೆಗೆದು ಹಾಕಿದರೆ ಮಿಕ್ಕದ್ದಕ್ಕೆ ಶುದ್ಧಿಯು. ಸ್ವಲ್ಪವಿದ್ದಾಗ ನಾಯಿ ಮುಟ್ಟಿದರೆ ಪೂರ್ಣ ಅನ್ನ ಅಶುದ್ಧವು. ಚಿಕ್ಕದಾದ ಇರುವೆ ಕೊಂದ ಪಾಪಕ್ಕೆ ಅಶುಚಿತ್ವವಿಲ್ಲ. ದೊಡ್ಡ ವಸ್ತುವಿನ ವಧ ಮಾಡಿದರೆ ಅಶುಚಿತ್ವವುಂಟು. ಈ ರೀತಿ ಶುದ್ಧಿ ಹಾಗು ಅಶುದ್ಧಿಗಳನ್ನು ತಿಳಿಯಬೇಕು.॥೧೦॥

**ಶಕ್ತ್ಯಾಽಶಕ್ತ್ಯಾ ಚ ವಾಗ್ಬುದ್ಧ್ಯಾ ಸಮೃದ್ಧ್ಯಾ ಚ ತಥಾಽಽತ್ಮನಃ ।**
**ಅನ್ಯೇ ಶುದ್ಧ್ಯಂತಿ ಹಿ ತಥಾ ದೇಶಾವಸ್ಥಾನುಸಾರತಃ ॥೧೧॥**

**ಶಕ್ತ್ಯಾ** ದೇಹಶಕ್ತಿ ಇದ್ದವನಿಗೆ ತೀರ್ಥಯಾತ್ರಾದಿಗಳಿಂದ ಶುದ್ಧಿ. ದ್ರವ್ಯ ಶಕ್ತಿಯಿದ್ದವನಿಗೆ ಪ್ರಾಯಶ್ಚಿತ್ತ ಮಾಡಿಕೊಳ್ಳುವುದರಿಂದ ಶುದ್ಧಿ. **ಅಶಕ್ತ್ಯಾ** ಅಶಕ್ತನಾದವನಿಗೆ ನಿತ್ಯಕರ್ಮಾನುಷ್ಠಾನದಿಂದ, ಮತ್ತು ಹರಿಕಥಾಶ್ರವಣದಿಂದ ಶುದ್ಧಿ. **ವಾಗ್ಬುದ್ಧ್ಯಾ** ಅಶುದ್ಧನಾದವನಿಗೆ ದೊಡ್ಡವರ ಮಾತಿನಿಂದ ಶುದ್ಧಿಯು. ಅದರಂತೆ ಹರಿಕಥಾ ಶ್ರವಣ ಮಾಡಲು ನಿಶ್ಚಯಿಸಿದರೂ ಶುದ್ಧಿಯು. ಸುರಾಪಾನಾದಿಗಳಲ್ಲಿ ಮನಸ್ಸು ಮಾಡಿದರೆ ಅಶುದ್ಧಿಯು. **ಆತ್ಮನಃ ಸಮೃದ್ಧ್ಯಾ** ತನಗೆ ಸಂಪತ್ತು ಬಂದಾಗ ಸತ್ಪಾತ್ರದಲ್ಲಿ ದಾನ ಮಾಡಿದರೆ ಶುದ್ಧಿಯು. ಅಪಾತ್ರರಲ್ಲಿ ದಾನ ಮಾಡಿದರೆ ಅಶುದ್ಧಿಯು. **ಅನ್ಯೇ** ಮಿಕ್ಕ ಪದಾರ್ಥಗಳು **ದೇಶಾವಸ್ಥಾನುಸಾರತಃ ಶುದ್ಧ್ಯಂತಿ** ದೇಶಾವಸ್ಥಾಗಳಿಗೆ ಅನುಸಾರವಾಗಿ ಶುದ್ಧಿ ಪಡೆಯುವವು. ಮಾಂಸವು ವಿಂಧ್ಯದ ಉತ್ತರ ಭಾಗದಲ್ಲಿ ಶುದ್ಧವು. ದಕ್ಷಿಣದಲ್ಲಿ ಅಶುದ್ಧವು. ಆರ್ಯಾವರ್ತದಲ್ಲಿ ತನ್ನ ತಂಗಿಯ ಮಗನಿಗೆ ಕನ್ಯೆಯನ್ನು ಕೊಡುವುದು ಆ ಕನ್ಯೆಗೆ ಅಶುದ್ಧಿಯು. ದಕ್ಷಿಣದಲ್ಲಿ ಶುದ್ಧಿಯು.

ಯೌವನದಲ್ಲಿ ಅಶುಚಿಯಾದುದನ್ನು ಮುಟ್ಟಿದರೆ ಅಶುದ್ಧಿ. ಬಾಲ್ಯದಲ್ಲಿ ಶುದ್ಧಿ. ಸೋಮರಸವು ಯಜ್ಞದೀಕ್ಷಿತನಿಗೆ ಶುದ್ಧವು. ಬೇರೆ ಕಾಲದಲ್ಲಿ ಅಶುದ್ಧವು.॥೧೧॥

**ಧಾನ್ಯದಾರ್ವಸ್ಥಿತಂತೂನಾಂ ರಸತೈಜಸಚರ್ಮಣಾಮ್ ।**
**ಕಾಲವಾಯ್ವಗ್ನಿಮೃತ್ತೋಯೈಃ ಪಾರ್ಥಿವಾನಾಂ ಯುತಾಯುತೈಃ ॥೧೨॥**

**ಪಾರ್ಥಿವಾನಾಂ** ಪೃಥಿವೀವಿಕಾರವಾದ **ಧಾನ್ಯದಾರ್ವಸ್ಥಿತಂತೂನಾಂ** ಧಾನ್ಯ, ಕಟ್ಟಿಗೆ, ಎಲುಬು, ದಾರಗಳಿಗೆ, **ರಸತೈಜಸಚರ್ಮಣಾಂ** ತುಪ್ಪ, ಕಂಚು, ಚರ್ಮಗಳಿಗೆ **ಯುತಾಯುತೈಃ** ಮಿಲಿತವಾದ ಮಿಲಿತವಾಗದ **ಕಾಲ-ವಾಯ್ವಗ್ನಿಮೃತ್ತೋಯೈಃ** ಕಾಲ,ಗಾಳಿ,ಬೆಂಕಿ,ಮಣ್ಣು,ನೀರುಗಳಿಂದ ಶುದ್ಧಿಯು. ಧಾನ್ಯಕ್ಕೆ ಕೇವಲ ಕಾಲದಿಂದ, (ಕಾಲವಾಯುಗಳಿಂದ) ಕಟ್ಟಿಗೆಗೆ ಅಸ್ಥಿಗಳಾದ ಶಂಖಕ್ಕೆ ಮಿಲಿತವಾದ ಮಣ್ಣು ನೀರಿನಿಂದ, **ಆಯುತೇನ ತೋಯೇನ** ದಾರಕ್ಕೆ ಕೇವಲ ನೀರೊಂದರಿಂದಲೆ, ತುಪ್ಪ ಮೊದಲಾದ ರಸಗಳಿಗೆ, ಕಂಚು ಮುಂತಾದ ತೈಜಸಗಳಿಗೆ ಕೇವಲ ಅಗ್ನಿಯಿಂದ, ಚರ್ಮಕ್ಕೆ ಮಣ್ಣು ನೀರುಗಳಿಂದ ಶುದ್ಧಿಯು.

ಕರ್ಮಾಚರಣೆಗಾಗಿ ದೇಹಾದಿಶುದ್ಧಿಯನ್ನು ಹೇಳುವರು-

**ಅಮೇಧ್ಯಲಿಪ್ತಂ ಯದ್ ಯೇನ ಗಂಧಲೇಪಂ ವ್ಯಪೋಹತಿ ।**
**ಭಜತೇ ಪ್ರಕೃತಿಂ ತಸ್ಯ (ಸ್ವಸ್ಯ) ತಚ್ಛೌಚಮುಪದಿಶ್ಯತೇ ॥೧೩॥**

**ಯತ್** ಯಾವ ವಸ್ತುವು **ಅಮೇಧ್ಯಲಿಪ್ತಂ** ಅಶುದ್ಧವಾದ, ಯಾಗ ಅನರ್ಹವಾದ ಪದಾರ್ಥದ ಸಂಬಂಧವಾದುದೋ **ಯೇನ** ಯಾವುದರಿಂದ ತೊಳೆಯುವುದರಿಂದ **ಗಂಧಲೇಪಂ** ದುರ್ಗಂಧದ ಸಂಬಂಧವನ್ನು (ದುರ್ವಾಸನೆಯನ್ನು) **ವ್ಯಪೋಹತಿ** ಕಳೆದು ಕೊಳ್ಳುವುದೋ **ಸ್ವಸ್ಯ ಪ್ರಕೃತಿಂ ಭಜತೇ** ತನ್ನ ಸ್ವಾಭಾವಿಕತೆಯನ್ನು ಪಡೆಯುವುದೋ **ತಸ್ಯ** ಆ ವಸ್ತುವಿಗೆ **ತತ್ ಶೌಚಂ** ಅದು ಶುದ್ಧಿಕರವೆಂದು **ಉಪದಿಶ್ಯತೇ** ಹೇಳಲ್ಪಡುವುದು.॥೧೩॥

ಕರ್ಮಾಂಗ ಶುದ್ಧಿ ಹೇಳುವರು-

**ಸ್ನಾನದಾನತಪೋಽವಸ್ಥಾವೀರ್ಯಸಂಸ್ಕಾರಕರ್ಮಭಿಃ ।**
**ಮದಭ್ಯಾಸಾನ್ಮನಃಶೌಚಂ ಕೃತ್ವಾ ಕರ್ಮಾಚರೇದ್ಬುಧಃ ॥೧೪॥**

**ಸ್ನಾನ** ಸ್ನಾನವನ್ನು ಮಾಡಿ **ದಾನ** ಯಥಾಶಕ್ತಿ ದ್ರವ್ಯದಾನ ಮಾಡಿ **ತಪಃ** ತಾನು ತನ್ನವರು ಪರಮಾತ್ಮನ ಅಧೀನವೆಂದು ತಿಳಿದು, ಅಥವಾ ಅನ್ನಾದಿನಿಯಮಗಳು (ಒಪ್ಪತ್ತು ಊಟ ಮುಂತಾದವು) **ಅವಸ್ಥಾ** ಯೌವನಾವಸ್ಥೆ, ಕುಮಾರಾವಸ್ಥೆಯಲ್ಲಿಯೇ ಧರ್ಮಗಳನ್ನು ಆಚರಿಸುವುದು (ಕೌಮಾರ ಆಚರೇತ್ ಪ್ರಾಜ್ಞಃ ಧರ್ಮಾನ್ ಭಾಗವತಾನಿಹ) ಅಥವಾ ದುರ್ಜನರ ಸಂಗವಿಲ್ಲದೇ ಇರುವುದು **ವೀರ್ಯಂ** ಆಲಸ್ಯ ಪರಿಹರಿಸುವ ಶಕ್ತಿ, ವಿಷಯಧ್ಯಾನಮಾಡದಂತೆಮನೋನಿಗ್ರಹಶಕ್ತಿಯು**ಸಂಸ್ಕಾರ**ಊರ್ಧ್ವಪುಂಡ್ರ-ಧಾರಣಾದಿಸಂಸ್ಕಾರವನ್ನು ಪಡೆದು **ಕರ್ಮಭಿಃ** ಸಂಧ್ಯಾವಂದನ ಪೂಜಾದಿ ನಿತ್ಯಕರ್ಮಗಳನ್ನು ಮುಗಿಸಿ **ಮದಭ್ಯಾಸಾತ್** ನನ್ನ ಸ್ಮರಣದಿಂದಲೂ **ಮನಃ ಶೌಚಂ ಕೃತ್ವಾ** ಮನಸಿನ ಶುದ್ಧಿಯನ್ನು ಮಾಡಿಕೊಂಡು **ಕರ್ಮ ಆಚರೇತ್** ಯಜ್ಞವ್ಯಾಖ್ಯಾನ ಮುಂತಾದ ಕರ್ಮಗಳನ್ನು ಮಾಡಬೇಕು.।।೧೪।।

**ಮಂತ್ರಸ್ಯ ಚ ಪರಿಜ್ಞಾನಂ ಕರ್ಮಶುದ್ಧಿರ್ಮದರ್ಪಣಮ್ ।**
**ಧರ್ಮಃ ಸಂಪಾದ್ಯತೇ ಸದ್ಭಿರಧರ್ಮಸ್ತು ವಿಪರ್ಯಯೈಃ ।।೧೫।।**

**ಮಂತ್ರಸ್ಯ ಪರಿಜ್ಞಾನಂ** ಮಂತ್ರವನ್ನು ಛಂದಸ್ಸುದೇವತಾ,ಋಷಿಗಳ ಸಮೇತವಾಗಿ ತಿಳಿಯುವುದು. **ಮದರ್ಪಣಂ** ನನಗೆ ಸಮರ್ಪಣ ಮಾಡುವುದು ಇದರಿಂದ ಕರ್ಮಶುದ್ಧಿಯು. **ಸದ್ಭಿಃ** ಸಜ್ಜನರಿಂದ **ಧರ್ಮಃ ಸಂಪಾದ್ಯತೇ** ಪುಣ್ಯವು ಸಂಪಾದಿಸಲ್ಪಡುವುದು. **ವಿಪರ್ಯಯೈಃ** ಅಸಜ್ಜನರಿಂದ, ನನಗೆ ಅರ್ಪಣ ಮಾಡದಿದ್ದರೆ **ಅಧರ್ಮಃ ಸಂಪಾದ್ಯತೇ** ಪಾಪವು ಸಂಪಾದಿತ-ವಾಗುವುದು.

ಶ್ರೀಹರಿಪ್ರೀತಿಯೇ ಪ್ರಧಾನವಾದುದರಿಂದ ಅದಕ್ಕೆ ಸಾಧನವಾದ ಭಗವದರ್ಪಣಾದಿಗಳನ್ನು ಅವಶ್ಯ ಮಾಡಬೇಕು ಎಂದು ಹೇಳುವರು.

**ಕ್ವಚಿದ್ ಗುಣೋಽಪಿ ದೋಷಃ ಸ್ಯಾದ್ ದೋಷೋಽಪಿ ವಿಧಿನಾ ಗುಣಃ ।**
**ಗುಣದೋಷಾರ್ಥನಿಯಮಸ್ತದ್ಭಿದಾಮೇವ ಬಾಧತೇ ।।೧೬।।**

**ಕ್ವಚಿತ್** ಕೆಲವು ಸಲ **ಗುಣೋಽಪಿ** ವಿಹಿತವಾದ್ದರಿಂದ ಗುಣವಾದರೂ ಅಭಕ್ತನು ಭಗವದರ್ಪಣ ಮಾಡದ ಕರ್ಮ **ದೋಷಃ ಸ್ಯಾತ್** ಕೊನೆಗೆ ಪಾಪ ಜನಕವಾಗುವುದು. **ವಿಧಿನಾ** 'ಬ್ರಾಹ್ಮಣೋ ನ ಹಂತವ್ಯಃ' ಎಂಬ ನಿಷೇಧ-

ದಿಂದ **ದೋಷೋಽಪಿ** ದೋಷವಾದ ಬ್ರಾಹ್ಮಣನಾದ ವೃತ್ರಾಸುರನ ಹತ್ಯೆಯು **ಕ್ವಚಿತ್** ಇಂದ್ರನಿಗೆ **ಗುಣ ಏವ ಸ್ಯಾತ್** ಪುಣ್ಯಜನಕವೇ ಆಯಿತು. ಶ್ರೀಹರಿಗೆ ಪ್ರೀತಿಕರವಾದ್ದರಿಂದ **ಗುಣದೋಷಾರ್ಥನಿಯಮಃ** ಗುಣದೋಷ-ಗಳಿಂದಾಗುವ ಫಲಗಳಾದ ಸ್ವರ್ಗ, ನರಕಾದಿಗಳ ನಿಯಮವು **ತದ್ವಿದಾಂ ಏವ** ಗುಣದೋಷಗಳನ್ನು ತಿಳಿಯಲು ಶಕ್ತರಾದ ಮನುಷ್ಯರಿಗೆ ಮಾತ್ರವೇ **ಬಾಧತೇ** ಕ್ಲೇಶಕೊಡುವವು, ಹೊರತು ಜ್ಞಾನವಿಲ್ಲದ ಪಶುಪಕ್ಷಿಗಳಿಗಲ್ಲ.

ಈ ಶ್ಲೋಕದಲ್ಲಿ ''ತದ್ವಿದಾಮೇವ'' ಎಂದು ಹೇಳಿದ್ದರಿಂದ ಗುಣ-ದೋಷಗಳನ್ನು ತಿಳಿಯದಿರುವ ಮೂರ್ಖರಿಗೆ ದೋಷವಿಲ್ಲವೆಂದು ಅರ್ಥ ತೋರುವುದು, ಅದು ಸರಿಯಲ್ಲ. ಕಾರಣ ತಾತ್ಪರ್ಯ ಹೇಳುವರು -

**ತಾತ್ಪರ್ಯ**-ತದ್ವಿದಾಮೇವ ನ ತಿರ್ಯಗಾದೀನಾಮ್ ।
ವರ್ಷಾಚ್ಚತುರ್ದಶಾದೂರ್ಧ್ವಂ ಯೇ ನ ವಿದ್ಯುಃ ಶುಭಾಶುಭಮ್ ।

ತೇಷಾಮಜ್ಞಾನಜೋ ದೋಷಃ ಸುಮಹಾನ್ ಕರ್ಮಜಾದಪಿ ॥
ತಿರಶ್ಚಾಮಿಂದ್ರಿಯಾಸಕ್ತೇರ್ನ ದೋಷೋಽಜ್ಞಾನಜೋ ಭವೇತ್ ।
ಗುಣೋಽಪಿ ನೈವ ಕಶ್ಚಿತ್ ಸ್ಯಾದ್ಯತೋ ಜ್ಞಾನಬಹಿಷ್ಕೃತಾಃ ॥ ಇತಿ ಚ ।

ಅತೋ ಮೂರ್ಖಾಣಾಮದೋಷ ಇತಿ ನ ॥ ೧೬ ॥

ಗುಣದೋಷಗಳಿಂದಾಗುವ ಫಲಗಳಾದ ಸ್ವರ್ಗ, ನರಕಾದಿಗಳ ನಿಯಮ-ಗಳು ಗುಣದೋಷಗಳನ್ನು ತಿಳಿಯಲು ಸಮರ್ಥರಾದ ಮನುಷ್ಯರಿಗೆ ಮಾತ್ರವೇ ಕ್ಲೇಶ ಕೊಡುವವು. ಜ್ಞಾನಶಕ್ತಿ ಇಲ್ಲದ ಪಶು ಪಕ್ಷಿ ಮುಂತಾದವುಗಳಿಗಲ್ಲ.

೧೪ ವರ್ಷಗಳ ನಂತರ ಯಾರು ಇದು ಹರಿಯ ಸನ್ನಿಧಿ ಇದ್ದ ಪ್ರಯುಕ್ತ ಶುಭ, ಹರಿಯಸನ್ನಿಧಿಇಲ್ಲದಿರುವದರಿಂದಅಶುಭವೆಂದುತಿಳಿಯುವುದಿಲ್ಲವೋ, ಅಂಥವರಿಗೆ ತಿಳಿಯುವ ಕಾಲ, ಯೋಗ್ಯತೆ, ಇದ್ದರೂ ತಿಳಿಯದಿರುವುದರಿಂದ ಬರುವ ಪಾಪ, ದುಷ್ಕರ್ಮ ಮಾಡುವುದರಿಂದ ಬಂದ ಪಾಪಕ್ಕಿಂತಲೂ ಹೆಚ್ಚು ದೋಷಕರ. ತಿರ್ಯಕ್‌ಪ್ರಾಣಿಗಳಿಗೆ ಮಾತ್ರ ಜ್ಞಾನಾಧಿಕಾರವಿಲ್ಲದ್ದರಿಂದ ಅಜ್ಞಾನಪ್ರಯುಕ್ತ ದೋಷವಾಗಲಿ ಗುಣವಾಗಲಿ ಇಲ್ಲ ಎಂದು ಹೇಳಿದೆ. ಕಾರಣ ಮೂರ್ಖರಿಗೆ ದೋಷವಿಲ್ಲವೆಂದಲ್ಲ.॥೧೬॥

**ಸಮಾನಕರ್ಮಾಚರಣೇಽಪತಿತಾನಾಂ ನ ಪಾತಕಮ್ ।**
**ಔತ್ಪತ್ತಿಕೋ ಗುಣೈಃ ಸಂಗೋ ನ ಶಯಾನಃ ಪತತ್ಯಧಃ ॥೧೭॥**

**ಅಪತಿತಾನಾಂ** ಸಮೀಚೀನರಾದ (ನಿರ್ದುಷ್ಟರಾದ) ಬ್ರಾಹ್ಮಣಾದಿಗಳಿಗೆ (ತ್ರೈವರ್ಣಿಕರಿಗೆ) **ಸಮಾನಕರ್ಮಾಚರಣೇ** ತಮತಮಗೆ ವಿಹಿತವಾದ ಕರ್ಮಗಳನ್ನು ಭಗವದರ್ಪಣಬುದ್ಧಿಯಿಂದ ಮಾಡಿದರೆ **ನ ಪಾತಕಂ** ಪಾಪ ಬರುವುದಿಲ್ಲ. ಮತ್ತು **ಪತಿತಾನಾಂ** ಪತಿತರಾದವರಿಗೆ **ಸಮಾನಕರ್ಮಾಚರಣೇ** ಮೊದಲು ಪತಿತರಾಗದಿರುವವರು ಯಾವ ಸುರಾಪಾನ, ಪರಸ್ತ್ರೀಗಮನಾದಿ-ಗಳಿಂದ ಪತಿತರಾಗುವರೋ ಅವರು ಅದಕ್ಕೆ ಸದೃಶವಾದ ಕಾಯಿಸಿದ ಕಬ್ಬಿಣದ ರಸರೂಪವಾದ ಸುರಾಪಾನ, ಕಾಯಿಸಿದ ಸ್ತ್ರೀಪ್ರತಿಮೆಯ ಆಲಿಂಗನ, ಮುಂತಾದ ಕರ್ಮವನ್ನು ಪ್ರಾಯಶ್ಚಿತ್ತರೂಪವಾಗಿ ಮಾಡಿ ದೇಹತ್ಯಾಗ ಮಾಡಿದಾಗ ಅದು ಪಾತಕವಾಗಲಾರದು. ಮತ್ತು **ಶಯಾನಃ** ಶೂದ್ರನು **ಅಧಃ ನ ಪತತಿ** ಬ್ರಾಹ್ಮಣನಿಗೆ ಪಾಪಜನಕವಾದ ಈರುಳ್ಳಿ, ಬೆಳ್ಳುಳ್ಳಿ ತಿನ್ನುವುದೇ ಮುಂತಾದವುಗಳಿಂದ ಪತಿತನಾಗಲಾರ. ಏಕೆಂದರೆ **ಗುಣೈಃ ಸಂಗಃ ಔತ್ಪತ್ತಿಕಃ** ಶೂದ್ರನಿಗೆ ಈರುಳ್ಳಿ, ಬೆಳ್ಳುಳ್ಳಿ ತಿನ್ನುವುದೇ ಮುಂತಾದ ಅಮುಖ್ಯ ಕರ್ಮಗಳಲ್ಲಿ ಆಸಕ್ತಿಯು ಸ್ವಾಭಾವಿಕವಾಗಿದೆ.

ಈ ಶ್ಲೋಕ ಸರಿಯಾಗಿ ಅರ್ಥವಾಗದಿರುವುದರಿಂದ ಆಚಾರ್ಯರು ವ್ಯಾಖ್ಯಾನಿಸುವರು-

**ತಾತ್ಪರ್ಯ-** ಸಮಾನಕರ್ಮಾಚರಣೇ ಆತ್ಮಯೋಗ್ಯಕರ್ಮಾಚರಣೇ । ಪೂರ್ವಂ ಅಪತಿತೋ ಯೇನ ಪತತಿ ಪ್ರಾಯಶ್ಚಿತ್ತತ್ವೇನ ತತ್ಸಮಾನಕರ್ಮಾಚರಣೇಽಪಿ ನ ದೋಷಃ ತಪ್ತಸುರಾಪಾನವದ್ದೇಹತ್ಯಾಗಿನಃ । ತಥಾ ಶಯಾನಃ ಶೂದ್ರೋಽಪಿ ನ ಪತತಿ । ಲಶುನಭಕ್ಷಣಾದಿಭಿಃ ಬ್ರಾಹ್ಮಣಪಾತಕೈಃ । ಔತ್ಪತ್ತಿಕೋ ಯತಸ್ತಸ್ಯ ತಾದೃಶೋ ಗುಣಸಂಗಃ । ಅತಃ ಸ್ವಾಯೋಗ್ಯೇ ಏವ ಕರ್ಮಣಿ ಪತತಿ ॥

ತ್ರೈವರ್ಣಿಕಾಃ ಸಂಚರಂತೋ ವೇದಕರ್ಮಪ್ರವರ್ತನಾತ್ ।
ಶಯಾನಃ ಶೂದ್ರ ಉದ್ದಿಷ್ಟೋ ವೇದಕರ್ಮಾ ಪ್ರವರ್ತ(ಪ್ರವೇಶ)ನಾತ್ ॥

ನ ತಸ್ಯಾಭಕ್ಷ್ಯಜೋ ದೋಷಃ ಶುಶ್ರೂಷಾಯಾಂ ಪ್ರವರ್ತತಃ ।
ಯಥಾ ಸುವರ್ಣಸ್ಯ ಮಲಂ ಶುಕ್ಲಂ ತಾಮ್ರಸ್ಯ ನೈವ ತತ್ ॥

ಏವಂ ವಿಪ್ರಾದಿದೋಷೈಸ್ತು ನ ಶೂದ್ರೋ ದೋಷಿತಾಮಿಯಾತ್ ।
ಮಲಂ ತು ತಸ್ಯಾಪಿ ಮಲಂ ಯಥೈವಂ ಶೂದ್ರಜನ್ಮನಃ ॥
ಸ್ವಧರ್ಮಪ್ರತಿರೂಪಸ್ಯಾಚರಣಂ ದೋಷದಂ ಮತಮ್ ॥ ಇತಿ ಸಮಾಚಾರೇ

ಶೂದ್ರಸ್ಯಾಪಿ ಹರೇರ್ದೀಕ್ಷಾಂ ಪ್ರವಿಷ್ಟಸ್ಯ ತು ವಿಪ್ರವತ್ ।
ಅಭಕ್ಷ್ಯಾದಿಕೃತೋ ದೋಷಃ ಸ ಹಿ ಶೂದ್ರೋ ಹಿ ಮುಖ್ಯತಃ ॥
-ಇತಿವಿಷ್ಣುತಂತ್ರೇ

ತಮಗೆ ಯೋಗ್ಯವಾದ ಕರ್ಮಾಚರಣೆಯಿಂದ ಪತಿತನಾಗುವುದಿಲ್ಲ. ಮೊದಲು ಪತಿತನಾಗದವನು ಯಾವ ಸುರಾಪಾನಾದಿಗಳಿಂದ ಪತಿತ-ನಾಗುತ್ತಾನೊ ಆ ಪಾಪ ಪರಿಹಾರಕ್ಕಾಗಿ ಸುರಾಪಾನ ಸಮಾನ ಕರ್ಮಾಚರಣೆ ಮಾಡಿದರೂ ಸುರಾಪಾನ ಮಾಡಿದ ಪಾಪ ಬರುವುದಿಲ್ಲ. ಸಮಾನ ಪ್ರಾಯಶ್ಚಿತ್ತವೆಂದರೆ ಸೀಸವನ್ನು ಕರಗಿಸಿ ಮದ್ಯವನ್ನು ಮಾಡಿ ಬಿಸಿಯಾದ ಅದನ್ನು ಕುಡಿದು ದೇಹತ್ಯಾಗ ಮಾಡುವುದು, ಸುರಾಪಾನಕ್ಕೆ ಪ್ರಾಯಶ್ಚಿತ್ತವು. ಅದರಂತೆ ಕಾಯಿಸಿದ ಕಬ್ಬಿಣದ ಸ್ತ್ರೀಪ್ರತಿಮೆಯನ್ನು ಆಲಿಂಗಿಸುವುದು ಪರಸ್ತ್ರೀಗಮನಕ್ಕೆ ಪ್ರಾಯಶ್ಚಿತ್ತವು.

ಹಾಗೆಯೇ ಶೂದ್ರನೂ ಸಹ ಬ್ರಾಹ್ಮಣರಿಗೆ ಪಾತಿತ್ಯಕ್ಕೆ ಕಾರಣವಾದ ಬೆಳ್ಳುಳ್ಳಿ ತಿನ್ನುವುದರಿಂದ ಪತಿತನಾಗಲಾರನು. ಏಕೆಂದರೆ ಶೂದ್ರನಿಗೆ ಬೆಳ್ಳುಳ್ಳಿ ತಿನ್ನುವುದೇ ಮುಂತಾದವು ಜಾತಿಯ ಸ್ವಭಾವವಾಗಿವೆ. ಕಾರಣ ತ್ರೈವರ್ಣಿಕರ ಶುಶ್ರೂಷಾ ಮುಂತಾದವು ತಮಗೆ ಯೋಗ್ಯವಾದ ಕರ್ಮ ಬಿಟ್ಟು ಅಯೋಗ್ಯ ಕರ್ಮ ಮಾಡಿದರೆ ನರಕಾದ್ಯನರ್ಥವನ್ನು ಹೊಂದುವನು. ಲಶುನ(ಬೆಳ್ಳುಳ್ಳಿ) ಭಕ್ಷಣದಿಂದ ದೋಷವಿಲ್ಲ.

ವೇದವಿಹಿತ ಕರ್ಮಗಳಲ್ಲಿ ಪ್ರವರ್ತಿಸುವುದರಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ಸಂಚರಿಸುವವರು ಎನಿಸಿಕೊಳ್ಳುವರು. ಪ್ರವೃತ್ತಿ ಇಲ್ಲದಿರುವುದರಿಂದ ಶೂದ್ರನು ಶಯಾನ ಎನಿಸಿಕೊಳ್ಳುವನು.

ತ್ರೈವರ್ಣಿಕರ ಸೇವೆಯಲ್ಲಿಯೇ ಪ್ರವರ್ತಿಸುವ ಶೂದ್ರನಿಗೆ ಬ್ರಾಹ್ಮಣಾದಿ-ಗಳಿಗೆ ನಿಷಿದ್ಧವಾದ ಬೆಳ್ಳುಳ್ಳಿ ಮುಂತಾದವನ್ನು ತಿನ್ನುವುದರಿಂದ ದೋಷ ಬರುವುದಿಲ್ಲ. ಸೀಸವು ಚಿನ್ನಕ್ಕೆ ದೋಷವು, ಸೀಸವು ಚಿನ್ನಕ್ಕೆ ಸೇರಿದರೆ ಚಿನ್ನ

ಹಾಳಾಗುವುದು ಅದೇ ತಾಮ್ರಕ್ಕೆ ಸೇರಿದರೆ ದೋಷವಲ್ಲ. ತವರಕ್ಕೆ ಶುಕ್ಲ ಎನ್ನುವರು. ತಾಮ್ರಪಾತ್ರೆಗೆ ತವರದಿಂದ ಕಲಾಯಿ ಮಾಡಿದರೆ ಪಾಕಕ್ಕೆ ವರ್ಣಾಧಿಕ್ಯ ಬರುವುದು. ಅಡಿಗೆಗೆ ಉಪಯೋಗವಾಗುವದು. ಪಾಕವು ಕಿಲುಬುವುದಿಲ್ಲ. ಆದ್ದರಿಂದ ಒಂದಕ್ಕೆ ದೋಷವಾದುದು ಎಲ್ಲಕ್ಕೂ ದೋಷವಾಗಬೇಕೆಂಬ ನಿಯಮವಿಲ್ಲ.

ಅದರಂತೆ ಬ್ರಾಹ್ಮಣಾದಿಗಳಿಗೆ ದೋಷದಾಯಕವಾದ ಲಶುನಭಕ್ಷಣವು ಶೂದ್ರರಿಗೆ ದೋಷವಲ್ಲ. ಬ್ರಾಹ್ಮಣನಿಗೆ ಅಶುಚಿಗೆ ಕಾರಣವಾದ ಮೂತ್ರ, ಪೂರೀಷ (ಮಲ) ಮುಂತಾದವು ಇಬ್ಬರಿಗೂ ಮಲವೇ. ಅದರಂತೆ ಶೂದ್ರನಿಗೆ ವಿಹಿತವಾದುದರ ವಿರುದ್ಧವಾದ ಆಚರಣವು ದೋಷದಾಯಕವು ಎಂದು ಸಮಾಚಾರ ಎನ್ನುವ ಗ್ರಂಥದಲ್ಲಿ ಹೇಳಿದೆ. ಆದರೆ ವೈಷ್ಣವದೀಕ್ಷೆ ಪಡೆದ ಶೂದ್ರನಿಗೂ ಬ್ರಾಹ್ಮಣನಂತೆ ಬೆಳ್ಳುಳ್ಳಿ ತಿನ್ನುವುದು ದೋಷವೇ. ವೈಷ್ಣವದೀಕ್ಷೆ ಪಡೆದ ಶೂದ್ರನೇ ನಿಜವಾಗಿ ಶೂದ್ರನು, ಎಂದು ವಿಷ್ಣುತಂತ್ರದಲ್ಲಿ ಹೇಳಿದೆ. ಇದಿಷ್ಟು ತಾತ್ಪರ್ಯದ ಭಾವವು.।।೧೭।।

ಹೆಚ್ಚಿಗೆ ಹೇಳುವುದೇನು? ಅಭಿಮಾನ ತ್ಯಾಗ ಮಾಡಿ ಶ್ರೀಹರಿಗೆ ಸಮರ್ಪಿಸುವುದೇ ಎಲ್ಲ ದೋಷ ಪರಿಹಾರಕವು ಎಂದು ಹೇಳುವರು-

**ಯತೋ ಯತೋ ನಿವರ್ತೇತ ವಿಮುಚ್ಯೇತ ತತಸ್ತತಃ ।**
**ಏಷ ಧರ್ಮೋ ನೃಣಾಂ ಕ್ಷೇಮಃ ಶೋಕಮೋಹಭಯಾಪಹಃ ।।೧೮।।**

**ಯತಃ ಯತಃ** ಯಾವ ಯಾವ ಕರ್ಮದಿಂದ **ನಿವರ್ತೇತ** ನಾಹಂ ಕರ್ತಾ ಹರಿಃ ಕರ್ತಾ ಎಂದು ತಿಳಿದು ಸ್ವತಂತ್ರಕರ್ತೃತ್ವಾಭಿಮಾನ ಬಿಡುವನೋ ಹರ್ಯರ್ಪಣ ಬುದ್ಧಿಯಿಂದ ಯಾವ ಕರ್ಮ ಮಾಡುವನೋ **ತತಃ ತತಃ** ಆ ಆ ಕರ್ಮದಿಂದ **ವಿಮುಚ್ಯೇತ** ಮುಕ್ತನಾಗುವನು ಅಂದರೇ ಆ ಕರ್ಮವು ಬಂಧಕವಾಗಲಾರದು ಎಂದರ್ಥ. **ಏಷಃ ಧರ್ಮಃ** ಪರಮಾತ್ಮ ಸಮರ್ಪಣ ರೂಪವಾದ ಧರ್ಮವು **ನೃಣಾಂ** ಜನರಿಗೆ **ಕ್ಷೇಮಃ** ಸಂಸಾರಮುಕ್ತಿಗೆ ಕಾರಣವು ಸುಖಸಂತತಿದಾಯಕವು **ಶೋಕಮೋಹಭಯಾಪಹಃ** ದುಃಖ-ಮೋಹ-ಭಯಗಳನ್ನು ಕಳೆಯುವುದು.।।೧೮।।

ಈ ಶ್ಲೋಕಕ್ಕೆ ಅಸಂಗತಿ ಪರಿಹರಿಸಲು ಆಚಾರ್ಯರು ವ್ಯಾಖ್ಯಾನಿಸುವರು-

**ತಾತ್ಪರ್ಯ**–''ಸರ್ವತೋಽಪ್ಯಭಿಮಾನವಿಮೋಕೇನ ಪರಮಾತ್ಮಸಮರ್ಪಣ-ಮೇವ ದೋಷ ಹಾನಿದಮಿತ್ಯಾಹ ಯತೋ ಯತ ಇತ್ಯಾದಿನಾ । ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯ ಇತ್ಯಾದೇಶ್ಚ ।

ಎಲ್ಲ ಕಡೆಯಲ್ಲಿ ಅಭಿಮಾನವನ್ನು ಬಿಟ್ಟು ಎಲ್ಲವನ್ನೂ ಭಗವಂತನಿಗೆ ಅರ್ಪಿಸುವುದೇ ಎಲ್ಲ ಪಾಪಗಳನ್ನು ಪರಿಹರಿಸಿ ಮೋಕ್ಷಪ್ರದವಾಗುತ್ತದೆ ಎಂದು ಯತೋ ಯತಃ ಎಂಬಲ್ಲಿ ಹೇಳುವರು. ಶ್ರೀಹರಿಯಲ್ಲಿಯೇ ಆಸಕ್ತವಾದ ಮನಸ್ಸಿನಿಂದ ಎಲ್ಲ ಕರ್ಮಗಳನ್ನು ನನ್ನಲ್ಲಿಯೇ ಅರ್ಪಿಸಿ ಮುಕ್ತರಾಗುತ್ತಾರೆ, ಎಂದು ಗೀತೆಯಲ್ಲಿಯೂ ಹೇಳಿದೆ. ಈ ಗೀತೆಯು ಉಕ್ತಾರ್ಥಸಾಧಕವೆಂದು ತಿಳಿಯಬೇಕು.।।೧೮।।

ಈ ರೀತಿ ಮಾಡದಿದ್ದಲ್ಲಿ ಅನರ್ಥವಾಗುವುದು ಎಂದು ಹೇಳುವರು-

**ವಿಷಯೇಷು ಗುಣಧ್ಯಾನಾತ್ ಪುಂಸಃ ಸಂಗಸ್ತತೋ ಭವೇತ್ ।**
**ಸಂಗಾದೇವ ಭವೇತ್ಕಾಮಃ ಕಾಮಾದೇವ ಕಲಿರ್ನೃಣಾಮ್ ।।೧೯।।**

ಭಗವದರ್ಪಣ ಮಾಡದ ಕರ್ಮಗಳು ವಿಷಯಗಳಲ್ಲಿ ಸುಖಸಾಧನವೆಂಬ ಗುಣಬುದ್ಧಿಯನ್ನು ಹುಟ್ಟಿಸುವವು. **ವಿಷಯೇಷು** ಶಬ್ದಾದಿವಿಷಯಗಳಲ್ಲಿ **ಗುಣಧ್ಯಾನಾತ್** ಸುಖಸಾಧನತ್ವ ಜ್ಞಾನದಿಂದ **ಪುಂಸಃ** ಮನುಷ್ಯನಿಗೆ **ಸಂಗಃ** ಆಸಕ್ತಿ ಉಂಟಾಗುವುದು **ತತಃ** ನಂತರ **ಸಂಗಾದೇವ** ಸ್ನೇಹದಿಂದ **ಕಾಮಃ ಭವೇತ್** ವಿಷಯೇಚ್ಛೆ ಉಂಟಾಗುವುದು. **ಕಾಮಾದೇವ** ಕಾಮದಿಂದಲೇ **ಕಲಿಃ** 'ಕಲದ್ರಾವಣೇ' ಎಂದು ಧಾತು ಇರುವುದರಿಂದ ಮನುಷ್ಯನಲ್ಲಿರುವ ಧರ್ಮದ ಜ್ಞಾನವನ್ನು ಓಡಿಸುವ ಅಧರ್ಮದ ಜ್ಞಾನವು ಉಂಟಾಗುವುದು. ಅಥವಾ ತನ್ನ ಇಚ್ಛೆಯಂತೆ ವಿಷಯ ದೊರೆಯದಿರುವಾಗ ಕಲಹ ಉಂಟಾಗುವುದು.।।೧೯।।

**ಕಲೇರ್ದುರ್ವಿಷಹಃ ಕ್ರೋಧಸ್ತಮಸ್ತದನುವರ್ತತೇ ।**
**ತಮಸಾ ಗ್ರಸ್ಯತೇ ಪುಂಸಶ್ಚೇತನಾ ವ್ಯಾಪಿನೀ ತತಃ ।।೨೦।।**

**ಕಲೇಃ** ಕಲಿಯ ಆವೇಶದಿಂದ **ದುರ್ವಿಷಹಃ ಕ್ರೋಧಃ** ತನ್ನ ಇಚ್ಛೆಗೆ ಅಡ್ಡ ಬರುವ ಸಜ್ಜನರಲ್ಲಿ ನಿವಾರಿಸಲಾಗದ ಸಿಟ್ಟು ಬರುವುದು. **ತದನು** ದ್ವೇಷಾನಂತರ **ತಮಃ ಅನುವರ್ತತೇ** ವಿಷಯ ದೊರೆಯದಿರುವದರಿಂದ

ತಮಃಕಾರ್ಯವಾದ ದುಃಖವು ಆಗುವುದು. **ತತಃ** ತಮಸ್ಸಿನಲ್ಲಿ ಮಗ್ನನಾದ **ಪುಂಸಃ** ಮನುಷ್ಯನಿಗೆ **ವ್ಯಾಪಿನೀ** ಇಂದ್ರಿಯದಿಂದ ವ್ಯಾಪಿಸಿದ **ಚೇತನಾ** ಸುಖಾನುಭವಶಕ್ತಿಯು **ತಮಸಾ** ಅತಿಯಾದ ದುಃಖದಿಂದ **ಗ್ರಸ್ಯತೇ** ನಾಶವಾಗುವುದು.॥೨೦॥

**ತಯಾ ಚ ರಹಿತಃ ಸಾಧೋ ಜಂತುಃ ಶೂನ್ಯಾಯ ಕಲ್ಪತೇ ।**
**ತತೋಽಸ್ಯ ಸ್ವಾರ್ಥವಿಭ್ರಂಶೋ ಮೂರ್ಚ್ಛಿತಸ್ಯ ಮೃತಸ್ಯ ಚ ॥೨೧॥**

**ತಯಾ** ಅನುಭವಶಕ್ತಿಯಿಂದ **ರಹಿತಃ** ರಹಿತನಾದಾಗ **ಜಂತುಃ** ಆಸುರ-ಜೀವನು **ಶೂನ್ಯಾಯ ಕಲ್ಪತೇ** (ಶಂ ಊನಾಯ) ಸುಖರಹಿತನಾಗುವನು. **ತತಃ** ಚೇತನಾರಾಹಿತ್ಯದಿಂದ **ಅಸ್ಯ** ಸಂಸಾರಿಗೆ **ಸ್ವಾರ್ಥವಿಭ್ರಂಶಃ** ಹರಿಧ್ಯಾನಾದಿಗಳ ನಾಶವಾಗುವುದು **ತತಃ ಮೃತಸ್ಯ** ನಂತರ ಮೃತನಾದವನಿಗೆ **ಮೂರ್ಚ್ಛಿತಸ್ಯ** ನರಕದಲ್ಲಿ ಯಮದೂತರ ಪೀಡೆಯಿಂದ ಎಚ್ಚರ ತಪ್ಪಿದ ಇವನಿಗೆ **ಸ್ವಾರ್ಥವಿಭ್ರಂಶಃ** ಸುಖವು ಸಂಪೂರ್ಣ ನಾಶವಾಗುವುದು. ಕಾರಣ ವಿವೇಕಿಯು ವಿಷಯವೈರಾಗ್ಯವನ್ನು ಸಂಪಾದಿಸಬೇಕು.॥೨೧॥

ವೈರಾಗ್ಯ ಇಲ್ಲದವನಿಗೆ ಸುಖ ನಾಶವಾಗುವುದಷ್ಟೇ ಅಲ್ಲ. ನಿತ್ಯದಲ್ಲಿಯೂ ನಿರತಿಶಯ ದುಃಖವೂ ಆಗುವುದು ಎಂದು ಹೇಳುವರು -

**ವಿಷಯಾಭಿನಿವೇಶೇನ ನಾತ್ಮಾನಂ ವೇದ ನಾಪರಮ್ ।**
**ವೃಕ್ಷಜೀವಿಕಯಾ ಜೀವನ್ ವ್ಯರ್ಥಂ ಗ್ರಸ್ತವಯಾಃ ಶ್ವಸನ್ ॥೨೨॥**

**ವಿಷಯಾಭಿನಿವೇಶೇನ** ವಿಷಯಗಳಲ್ಲಿಯ ಅತ್ಯಾಸಕ್ತಿಯಿಂದ ಅಥವಾ ''ವಿಷಸಾಮ್ಯಂ ಯಾತೀತಿ ವಿಷಯಃ'' ಅಂದರೆ ದುಃಖವು ಅದರ ಅಭಿನಿವೇಶ ಉದ್ರೇಕದಿಂದ **ಆತ್ಮಾನಂ** ತನ್ನನ್ನು ಇತರರನ್ನೂ **ನ ವೇತ್ತಿ** ತಿಳಿಯಲಾರನು. ದುಃಖಾನುಭವದ ಹೊರತು ಬೇರೆ ಏನನ್ನೂ ತಿಳಿಯಲಾರನೆಂದರ್ಥ. ತಮಸ್ಸಿನಲ್ಲಿ ಬಿದ್ದವನು ದುಃಖವನ್ನೇ ಅನುಭವಿಸಿದವನು ತನ್ನನ್ನು ಪರಮಾತ್ಮನನ್ನೂ ತಿಳಿಯಲಾರನು. ಹಾಗಾದರೆ ಹೇಗಿರುವನು ಇವನು? ಎಂದರೆ ಹೇಳುವರು- **ವೃಕ್ಷಜೀವಿಕಯಾ ಜೀವನ್** ಮನುಷ್ಯರಿಂದ ಕತ್ತರಿಸಲ್ಪಡುವ ವೃಕ್ಷವು ಹೇಗೆ ದುಃಖದಿಂದ ಜೀವಿಸುವುದೋ ಹಾಗೆ ಭಗವಂತನಲ್ಲಿ ಅತಿಶಯ ದ್ವೇಷ ಮಾಡಿ ತಮಸ್ಸಿನಲ್ಲಿ ಬಿದ್ದ ಜೀವನು ದುಃಖವನ್ನೇ ಅನುಭವಿಸುತ್ತ

ಯಮಕಿಂಕರರಿಂದ ಯಾವಾಗಲೂ ಕತ್ತರಿಸಲ್ಪಡುವುದರಿಂದ ವೃಕ್ಷದಂತೆ **ವ್ಯರ್ಥಂ ಜೀವನ್** ಪ್ರಯೋಜನವಿಲ್ಲದೇ ಜೀವಿಸುತ್ತ **ಗ್ರಸ್ತವಯಾಃ** ದುಃಖದಿಂದ ಆಯುಷ್ಯವನ್ನು ಕಳೆಯುತ್ತ **ಶ್ವಸನ್ ಆಸ್ತೇ** ತಿದಿಯಂತೆ ಕೇವಲ ಉಸಿರಾಡುವನು.

ಅನ್ಯಥಾಪ್ರತೀತಿಯನ್ನು ನಿವಾರಿಸಲು ''ವಿಷಯೇಷು'' ಎಂದಾರಂಭಿಸಿ ''ಶ್ವಸನ್'' ಎಂಬಲ್ಲಿಯ ವರೆಗೆ ನಾಲ್ಕು ಶ್ಲೋಕಗಳನ್ನು ಪ್ರಮಾಣದಿಂದ ವ್ಯಾಖ್ಯಾನಿಸುವರು -

**ತಾತ್ಪರ್ಯ-ದೋಷಿಣೋ ಗುಣವತ್ತ್ವೇನ ಶ್ರೂಯಂತೇ ವಿಷಯಾಃ ಸದಾ ।**
**ಅಸತಾಂ ಸಂಗತೇಸ್ತೇಷು ದೋಷಾಃ ಶ್ರೋತುಂ ಸುದುರ್ಲಭಾಃ ॥**

**ಅತೋ ನಿತ್ಯಗುಣಧ್ಯಾನಾತ್ ತದ್ಗುಣೇ ಪ್ರೀತಿಮಾನ್ ಭವೇತ್ ।**
**ಅತಸ್ತತ್ರ ಭವೇತ್ ಕಾಮಃ ಕಾಮಿನಂ ಕಲಿರಾವಿಶೇತ್ ॥**

**ಅಧರ್ಮಾಜ್ಞಾನರೂಪೇಣ ಕಲಿನಾಽಽವಿಷ್ಟದೇಹಿನಃ ।**
**ಸತ್ಸು ಕ್ರೋಧೋ ದುರ್ವಿಷಹಸ್ತತಸ್ತಮಸಿ ಪಾತ್ಯತೇ ॥**

**ಅಂಧೇ ತಮಸಿ ಮಗ್ನಸ್ಯ ಚೇತನೇಂದ್ರಿಯಸಂತತಾ ।**
**ಸುಖಾನುಭವಶಕ್ತಿರ್ಯಾ ಸಾ ವಿನಶ್ಯತಿ ಸರ್ವದಾ ॥**

**ತದಾ ಶಮೂನಭಾವೇನ ಶೂನ್ಯ ಇತ್ಯುಚ್ಯತೇ ನರಃ ।**
**ಸರ್ವಾತ್ಮನಾ ತು ಶಂಭ್ರಂಶಸ್ತಸ್ಯ ದುಃಖವಿವರ್ಧನಃ ॥**

**ಅಮೂರ್ಚ್ಛಿತಸ್ಯೈವ ಭವೇತ್ ಮೃತ್ಯನಂತರಮೇವ ಚ ।**
**ದುಃಖಾಖ್ಯವಿಷಯಾವೇಶಾನ್ನಾತ್ಮಾನಂ ಪರಮೇವ ಚ ॥**

**ಯಥಾವದ್ ವೇತ್ತಿ ಪತಿತಃ ತಮಸ್ಯಂಧೇ ಕದಾಚನ ।**
**ವೃಕ್ಷವದ್ ವೃಶ್ಚ್ಯತೇ ನಿತ್ಯಂ ನಿಷ್ಪ್ರಯೋಜನಜೀವನಃ ॥**
**ನಿತ್ಯದುಃಖಪರೀತಾಯುರ್ದೃತಿವತ್ ಪ್ರಶ್ವಸಿತ್ಯಪಿ ॥ ಇತಿ ತಂತ್ರಭಾಗವತೇ ।**

ಸ್ವಾರ್ಥಸ್ಯ ಸುಖಸ್ಯ ಭ್ರಂಶೋ ವಿಪರೀತಂ ಅತಿಶಯೇನ ಜನಯತೀತಿ ಸ್ವಾರ್ಥ-ವಿಭ್ರಂಶಃ । ತಸ್ಮಾತ್ ಸ್ವರ್ಗಾದಿವಿಷಯೇಷ್ವಪಿ ನೇಚ್ಛೇತ ॥

ಸ್ವಾಭಾವಿಕವಾಗಿ ದುಷ್ಟವಾದ ವಿಷಯಗಳು ಅಸಜ್ಜನರ ಸಂಗದಿಂದ ಗುಣವುಳ್ಳವೆಂದು ಯಾವಾಗಲೂ ಕೇಳಲ್ಪಡುತ್ತವೆ. ಕಾರಣ ಅವುಗಳಲ್ಲಿ ದೋಷಗಳು ಸುಲಭವಾಗಿ ಕೇಳಿಸಲಾರವು. ಗುಣವನ್ನು ಧ್ಯಾನ

ಮಾಡುವುದರಿಂದ ಅವುಗಳಲ್ಲಿ ಪ್ರೀತಿಯುಂಟಾಗುವುದು. ನಂತರ ಅವುಗಳ ಇಚ್ಛೆಯಾಗುವುದು. ಕಾಮಿಯಾದ ಮನುಷ್ಯನನ್ನು ಕಲಿಯು ಅಜ್ಞಾನ, ಅಧರ್ಮಗಳ ರೂಪದಿಂದ ಪ್ರವೇಶ ಮಾಡುವನು. ಕಲಿಯಿಂದ ಪ್ರವಿಷ್ಟ-ನಾದವನಿಗೆ ಸಜ್ಜನರಲ್ಲಿ ಅಸಹ್ಯವಾದ ಕ್ರೋಧ (ಸಿಟ್ಟು) ಉಂಟಾಗಿ ಅಂಧಂತಮಸ್ಸಿನಲ್ಲಿ ಬೀಳುವನು. ತಮಸ್ಸಿನಲ್ಲಿ ಬಿದ್ದವನಿಗೆ ಇಂದ್ರಿಯಗಳಲ್ಲಿ ವ್ಯಾಪಿಸಿರುವ ಸುಖಾನುಭವಶಕ್ತಿಯು ನಾಶವಾಗುವುದು. ಸುಖಾನುಭವ-ಶಕ್ತಿಯು ನಾಶವಾದಾಗ ಸುಖವಿಲ್ಲದವನಾಗಿ ಶೂನ್ಯನೆನಿಸುತ್ತಾನೆ.

ಮರಣಾನಂತರದಲ್ಲಿಯೇ ಎಚ್ಚರವಿದ್ದಾಗಲೇ ಎಳ್ಳಷ್ಟೂ ಸುಖವಿಲ್ಲದೇ ವಿಶೇಷ ದುಃಖವೇ ಆಗುವುದು. ದುಃಖವೆಂಬ ವಿಷಯದಲ್ಲಿ ಮುಳುಗಿದ ಇವನು ತನ್ನನ್ನೂ ಪರಮಾತ್ಮನನ್ನೂ ತಿಳಿಯದೇ ಕೊನೆಗೊಮ್ಮೆ ಅಂಧಂ-ತಮಸ್ಸಿನಲ್ಲಿ ಬೀಳುವನು. ಪ್ರಯೋಜನವಿಲ್ಲದೇ ಜೀವಿಸುತ್ತ ಮರದಂತೆ ಯಮಕಿಂಕರರಿಂದ ಭೇದಿಸಲ್ಪಡುವನು. ನಿತ್ಯದಲ್ಲಿ ದುಃಖಪಡುತ್ತ ತಿದಿಯಂತೆ ಶ್ವಾಶ ಬಿಡುತ್ತಿರುತ್ತಾನೆ. ಎಂದು ತಂತ್ರಭಾಗವತದಲ್ಲಿದೆ.

ಸ್ವಾರ್ಥವಾದ ಸುಖನಾಶವು ಅತಿಶಯದುಃಖಜನಕವಾದ್ದರಿಂದ ''ಸ್ವಾರ್ಥವಿಭ್ರಂಶ'' ಎನಿಸುತ್ತದೆ. ಹೀಗೆ ವಿಷಯಧ್ಯಾನವು ಅನರ್ಥಕ್ಕೆ ಕಾರಣವಾದ್ದರಿಂದ ಸ್ವರ್ಗಾದಿ ವಿಷಯೇಚ್ಛೆಯನ್ನು ಮಾಡಬಾರದು. ಎಂದು ತಾತ್ಪರ್ಯದ ಭಾವ.॥೧೯-೨೨॥

ಸ್ವರ್ಗಾದಿಗಳನ್ನು ಇಚ್ಛಿಸಬಾರದು, ಎಂದಾದರೆ ''ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ'' ಮುಂತಾಗಿ ಸ್ವರ್ಗ ಕಾಮನೆ ಹೇಳಿರುವುದು ಅಯುಕ್ತ ಎಂದರೆ ಉತ್ತರಿಸುವರು -

**ಫಲಶ್ರುತಿರಿಯಂ ನೃಣಾಂ ನಃ ಶ್ರೇಯೋರೋಚನಂ ಪರಮ್ ।**
**ಶ್ರೋತುರ್ವಿವಕ್ಷಯಾ ಪ್ರೋಕ್ತಂ ಯಥಾ ಭೈಷಜ್ಯರೋಚನಮ್ ॥೨೩॥**

**ಇಯಂ ಫಲಶ್ರುತಿಃ** ''ಸ್ವರ್ಗಕಾಮೋ ಯಜೇತ'' ಎಂಬ ಫಲಶ್ರುತಿಯು ಮೋಕ್ಷವೆಂಬ ಮಹಾಫಲವನ್ನು ತಿಳಿಸುವುದರಿಂದ ಚರಿತಾರ್ಥವಾದುದರಿಂದ **ಕಾಮಕುಸುಮಶ್ರುತಿಃ** ನ ಸ್ವರ್ಗ ಮುಂತಾದ ಹೂವಿನ ಸ್ಥಾನದಲ್ಲಿರುವ ಅಲ್ಪಫಲ ಭೋಧಕವಲ್ಲ. ಇಲ್ಲಿ ''ಫಲಶ್ರುತಿಃ'' ಎಂಬುದಕ್ಕೆ ''**ಫಲಸ್ಯ ಶ್ರುತಿರೇವೇಯಂ**

**ನ ಕಾಮಕುಸುಮಶ್ರುತಿಃ**'' ಎಂದು ತಾತ್ಪರ್ಯವನ್ನು ಹೇಳಿರುವರು.

**ನಃ** ನಮಗೆ **ಶ್ರೇಯೋರೋಚನಂ ಪರಂ** ಮುಖ್ಯಉದ್ದೇಶವಾಗಿದೆ. ಸ್ವರ್ಗಾದಿಗಳು ಅನಿತ್ಯತ್ವ ಮುಂತಾದ ದೋಷವುಳ್ಳವು. ಮೋಕ್ಷವು ದೋಷರಹಿತವಾದುದು. **ಯಥಾ ಭೈಷಜ್ಯರೋಚನಂ** ಮಕ್ಕಳಿಗೆ ಔಷಧಿ ಕೊಡುವಾಗ ಸಿಹಿಯಾದ ಕಬ್ಬಿನ ತುಂಡು ಕೊಟ್ಟಂತೆ **ಶ್ರೋತುಃ ವಿವಕ್ಷಯಾ ಪ್ರೋಕ್ತಂ** ಮಂದಾಧಿಕಾರಿಗಳ ವಿವಕ್ಷೆಯಿಂದ ಹೇಳಿದ್ದು, ಅಂದರೆ ಅವರಿಗೆ ಸ್ವರ್ಗಾದಿಫಲಗಳನ್ನು ಹೇಳಿ ವೇದಮಾರ್ಗದಲ್ಲಿ ಪ್ರವರ್ತನೆ ಮಾಡಿಸಿ ನಂತರ ಅದು ಅನಿತ್ಯವೆಂದು ತಿಳಿಸಿ ಮೋಕ್ಷವನ್ನು ಹೇಳುವಲ್ಲೇ ತಾತ್ಪರ್ಯ ಹೊರತು ಸ್ವರ್ಗದಲ್ಲಿ ತಾತ್ಪರ್ಯ ಅಲ್ಲ.

ಏಕೆಂದರೆ ಸ್ವರ್ಗಕಾಮನೆಯಿಂದಲೂ ಅನರ್ಥವಿದೆ ಎಂದು ತಿಳಿಸುವರು-

**ತಾತ್ಪರ್ಯ- ಸ್ವರ್ಗಾದಿಕಾಮನಾಯುಕ್ತ ಸ್ತ್ವೈಹಿಕೇಷ್ವ ಪಿ ಸಜ್ಜತೇ ।**
**ತತ್ರಾಪಿ ದೇವಕಾಮೇಭ್ಯೋ ವಿಶೇಷಂ ಚಾಪಿ ವಾಂಛತಿ ॥**

**ತತಸ್ತಮಸಿ ಪಾತಃ ಸ್ಯಾದತೋ ವೇದಃ ಕಥಂ ಹಿ ತಾನ್ ।**
**ಕಾಮ್ಯತ್ವೇನಾಭಿಚಕ್ಷೀತ ಸರ್ವಂ ಜಾನನ್ ಸ್ವಯಂ ಸದಾ ॥ ಇತಿ ಚ ।**

**ನಃ ಶ್ರೇಯೋರೋಚನಮ್ । ಅಸ್ಮತ್ಸಕಾಶಾತ್ ಯತ್ ಶ್ರೇಯಃ ಮೋಕ್ಷಾಖ್ಯಂ ತದೇವ ರೋಚಯತಿ ಫಲಶ್ರುತಿಃ । ಕುಸುಮಸ್ಯ ಅನಿತ್ಯತಾದಿದೋಷಜ್ಞಾನಾತ್ ಮೋಕ್ಷಸ್ಯ ಅದೋಷತಾಜ್ಞಾನಾತ್ ಚ । ಈಷದುತ್ತಮಸ್ಯ ಶ್ರೋತುಃ ವಿವಕ್ಷಯಾ ॥೨೩॥**

''ಸ್ವರ್ಗಕಾಮೋ ಯಜೇತ'' ಮುಂತಾದ ಶ್ರುತಿಯು ಮೋಕ್ಷವೆಂಬ ಮುಖ್ಯ ಫಲ(ಹಣ್ಣನ್ನೇ)ವನ್ನೇ ಹೇಳುವುದು. ಹೊರತು ಹೂವಿನಂತೆ ಅನಿತ್ಯವಾದ ಸ್ವರ್ಗಾದಿಗಳನ್ನು ಹೇಳುವುದಿಲ್ಲ.

ಸ್ವರ್ಗಾದಿಗಳಲ್ಲಿ ಕಾಮನೆ ಮಾಡುವವನು ಎಲ್ಲ ಐಹಿಕಪದಾರ್ಥಗಳನ್ನೂ ಕಾಮಿಸುವನು. ಸ್ವರ್ಗದಲ್ಲಿಯೂ ದೇವತೆಗಳ ಭೋಗ್ಯವಸ್ತುಗಳಿಗಿಂತ ಹೆಚ್ಚಿನ ಉಪಭೋಗವನ್ನು ಇಚ್ಛಿಸುವನು. ಅದರಿಂದ ತಮಸ್ಸಿನಲ್ಲಿ ಬೀಳುವನು. ಆದ ಕಾರಣ ವೇದಾಭಿಮಾನಿಯು ಈ ರೀತಿ ಅನರ್ಥವನ್ನು ತಿಳಿದೂ ತಿಳಿದು ಸ್ವರ್ಗಾದಿ ಕಾಮನೆಗಳನ್ನು ನಮಗೆ ಹೇಗೆ ವಿಧಿಸೀತು?

''**ನಃ ಶ್ರೇಯೋರೋಚನಂ**'' ಎಂದರೆ ಫಲಶ್ರುತಿಯು ನಮ್ಮಿಂದ ಅಪೇಕ್ಷಣೀಯವಾದ ಮೋಕ್ಷವೆಂಬ ಶ್ರೇಯಸ್ಸಿನಲ್ಲಿಯೇ ಅಭಿರುಚಿಯನ್ನು ಹುಟ್ಟಿಸುತ್ತದೆ.

ಕುಸುಮದಂತಿರುವ ಸ್ವರ್ಗದಲ್ಲಿ ಅನಿತ್ಯತೆ ಮೊದಲಾದ ದೋಷದ ಜ್ಞಾನವಿದೆ. ಮೋಕ್ಷದಲ್ಲಿ ಕಿಂಚಿತ್ತು ದೋಷವೂ ಇಲ್ಲವೆಂಬ ಜ್ಞಾನವೂ ಇದೆ. ಆದರೂ ಮಂದಾಧಿಕಾರಿಯಾದ ಶ್ರೋತೃವಿಗೆ ವೇದಮಾರ್ಗದಲ್ಲಿ ಅಭಿರುಚಿ ಹುಟ್ಟಿಸಲು ''ಸ್ವರ್ಗಕಾಮೋ ಯಜೇತ'' ಎಂದು ಹೇಳಿದೆ, ಎಂದು ಭಾವ.॥೨೩॥

**ಉತ್ಪತ್ತ್ಯೈವ ಹಿ ಕಾಮೇಷು ಪ್ರಾಣೇಷು ಸ್ವಜನೇಷು ಚ ।**
**ಆಸಕ್ತಮನಸೋ ಮರ್ತ್ಯಾ ಆತ್ಮನೋಽನರ್ಥಹೇತುಷು ॥೨೪॥**

**ನ ತಾನವಿದುಷಃ ಸ್ವಾರ್ಥಂ ಭ್ರಾಮ್ಯತೋ (ಆತ್ಮನೋ) ವೃಜಿನಾಧ್ವನಿ ॥**
**ಕಥಂ ಯುಂಜ್ಯಾತ್ ಪುನಸ್ತೇಷು ತಾಂಸ್ತಮೋ ವಿಶತೋ ಬುಧಃ ॥೨೫॥**

**ಉತ್ಪತ್ತ್ಯಾ ಏವ** ಸ್ವಾಭಾವಿಕವಾಗಿಯೇ **ಆತ್ಮನಃ ಅನರ್ಥಹೇತುಷು** ತನ್ನ ಅನರ್ಥಕ್ಕೆ ಕಾರಣವಾದ **ಕಾಮೇಷು** ವಿಷಯಗಳಲ್ಲಿ **ಪ್ರಾಣೇಷು** ಇಂದ್ರಿಯಗಳಲ್ಲಿ **ಸ್ವಜನೇಷು ಚ** ಅಯೋಗ್ಯರಾದ ಹೆಂಡತಿ ಮಕ್ಕಳು ಮುಂತಾದವರಲ್ಲಿ **ಆಸಕ್ತಮನಸಃ** ಬಹಳವಾಗಿ ಅನುರಕ್ತವಾದ ಮನಸ್ಸುಳ್ಳ **ವೃಜಿನಾಧ್ವನಿ** ಸಂಸಾರದಲ್ಲಿ **ಭ್ರಾಮ್ಯತಃ** ಸುತ್ತುತ್ತಿರುವ **ಅತ ಏವ** ಆದ್ದರಿಂದಲೇ **ಸ್ವಾರ್ಥಂ** ಮೋಕ್ಷವನ್ನು **ಅವಿದುಷಃ** ತಿಳಿಯದಿರುವ **ತಮಃ ವಿಶತಃ** ಅಂಧಂತಮಸ್ಸಿಗೆ ಹೋಗುವ **ಯೇ ಮರ್ತ್ಯಾಃ** ಯಾವ ಜನರಿದ್ದಾರೋ **ತಾನ್** ಅವರನ್ನು **ಬುಧಃ** ಉಪಾಯವನ್ನು ತಿಳಿದ ವೇದಾಭಿಮಾನಿಗಳು ಇಲ್ಲಿ ''ಬುಧೋ ವೇದಃ ಕಥಂ ಯುಂಜ್ಯಾತ್ ।'' ಎಂದು ಬುಧಶಬ್ದಕ್ಕೆ ಆಚಾರ್ಯರು ಅರ್ಥ ಹೇಳಿರುವರು. **ತೇಷು** ಕಾಮಾದಿಗಳಲ್ಲಿ **ನ ಯುಂಜ್ಯಾತ್** ಪ್ರೇರಿಸಲಾರದು. ಅಥವಾ **ವೃಜಿನಾಧ್ವನಿ ನತಾನ್** ಸಂಸಾರಮಾರ್ಗದಲ್ಲಿ ಮುಳುಗಿದವರನ್ನು **ಕಥಂ ತೇಷು ಪುನಃ ಯುಂಜ್ಯಾತ್** ಮತ್ತೆ ವಿಷಯಗಳಲ್ಲಿಯೇ ಹೇಗೆ ಪ್ರೇರಿಸೀತು? ಹೀಗೂ ಅನ್ವಯಿಸಬಹುದು.

ಶ್ರೇಯಸ್ಸಿನಲ್ಲಿ ಅಭಿರುಚಿ ಹುಟ್ಟಿಸುವ ರೀತಿಯನ್ನು ತಿಳಿಸುವರು -

**ತಾತ್ಪರ್ಯ- ಅಂತರಾಲಾಗತೋಽಪಿ ಸ್ವರ್ಗಃ ಏವಂವಿಧಃ। ಕಿಮು ಸಾಕ್ಷಾತ್ ಫಲರೂಪೋ ಮೋಕ್ಷಃ ಇತಿ ರೋಚಕಃ।**

ಮಧ್ಯದಲ್ಲಿ ಬಂದಿರುವ ಪ್ರಸಿದ್ಧ ಸ್ವರ್ಗವೇ ಹೀಗಿರುವಾಗ ಮುಖ್ಯ ಫಲವಾದ ಮೋಕ್ಷ ಹೇಗಿದ್ದೀತು, ಎಂದು ತಿಳಿಸುವುದು. ಪ್ರಸಿದ್ಧ ಸ್ವರ್ಗದಲ್ಲೇ ಸಾಕಷ್ಟು ಸುಖವಿದೆ. ಮೋಕ್ಷದಲ್ಲಿ ನಿತ್ಯವಾದ ಸ್ವರೂಪಸುಖವಿದೆ, ಎಂದು ಭಾವ. ಇದನ್ನೇ ವಿವರಿಸುವರು -

**ತಾತ್ಪರ್ಯ- ಅನೇಕಬ್ರಹ್ಮಕಾಲಪ್ರಾಪ್ಯತ್ವಾನ್ಮೋಕ್ಷಸ್ಯ ತಾವಂತಂ ಕಾಲಂ ತಪ ಏವ ಕರ್ತುಂ ನ ಶಕ್ಯತೇ ಇತಿ ಮಂದಾಧಿಕಾರಿಣಾಂ ಸ್ವರ್ಗಾದಿಷ್ವಪ್ಯಭಿರುಚಿರ್ಭವತಿ ತಾನ್ ಪ್ರತಿ ಅಂತೇ ಮೋಕ್ಷ ಏವ ಭವತಿ। ಅಂತರಾಲೇಽಪ್ಯೇವಂವಿಧಂ ಸ್ವರ್ಗಾದಿಕಂ ಸುಖಂ ಭವತಿ। ತಸ್ಮಾದ್ವಿಹಿತಂ ಕರ್ತವ್ಯಂ ಇತಿ ರೋಚಯತಿ।**

ಶ್ರುತಿಯು ಮೋಕ್ಷಕ್ಕಾಗಿ ಜ್ಯೋತಿಷ್ಟೋಮವನ್ನು ಹೇಳುತ್ತದೆ. ಆದರೆ ಅನೇಕ ಬ್ರಹ್ಮರ ಕಾಲದಲ್ಲಿ ಕಠಿಣವಾದ ತಪಸ್ಸನ್ನೂ ಮಾಡಿ ಮೋಕ್ಷ ಪಡೆಯಬೇಕು. ಅಲ್ಲಿಯ ವರೆಗೆ ಶ್ರುತಿಯಲ್ಲಿ ಹೇಳಿದ ಕರ್ಮದಲ್ಲಿ ವಿಶ್ವಾಸ ಬರುವುದಕ್ಕಾಗಿ ಮಧ್ಯದಲ್ಲಿ ಪ್ರಸಿದ್ಧಸ್ವರ್ಗವೂ ಆಗುವುದು ಎಂದು ಮಂದಾಧಿ ಕಾರಿಗಳಿಗೆ ತಿಳಿಸುತ್ತದೆ. ಸ್ವರ್ಗದಲ್ಲಿ ಅಭಿರುಚಿಯನ್ನುಂಟುಮಾಡುತ್ತಾ ವಿಹಿತಕರ್ಮಗಳನ್ನು ವಿಧಾನಮಾಡಿ ಕೊನೆಗೆ ಮಹಾಫಲ ಮೋಕ್ಷವೇ ಆಗುತ್ತದೆ ಎಂದು ಶ್ರುತಿಯು ಹೇಳುತ್ತದೆ. ಆದ್ದರಿಂದ ವಿಹಿತ ಕರ್ಮ ಮಾಡಬೇಕು, ಎಂಬ ಅಭಿರುಚಿಯನ್ನು ವೇದವು ಹುಟ್ಟಿಸುತ್ತದೆ.

**ತಾತ್ಪರ್ಯ- ಉತ್ತಮಾನಾಂ ತು ಯಸ್ಮಾದೇತಾದೃಶಮಪಿ ಅನಿತ್ಯತ್ವಾದಿದೋಷವತ್ ಸ್ವರ್ಗಾದಿಕಂ ತಸ್ಮಾತ್ ಮೋಕ್ಷಫಲ ಏವ ವೇದಃ ಇತಿ ದರ್ಶಯತಿ। ನಹಿ ಸರ್ವಪ್ರಮಾಣೋತ್ತಮಃ ವೇದಃ ಅಲ್ಪ ಫಲೇ ಪರ್ಯವಸಿತಃ।**

ಸ್ವರ್ಗಾದಿಗಳು ಸಾಂಸಾರಿಕ ಸುಖ ವಿಲಕ್ಷಣವಾಗಿದ್ದರೂ ಅನಿತ್ಯವಾಗಿವೆ, ಎಂದು ಕೆಲವು ವೇದಭಾಗದಲ್ಲಿ ದೋಷ ಹೇಳಿರುವುದರಿಂದ ಅಂತಹ ಲೋಕಗಳನ್ನು ಬಿಟ್ಟು ಅನೇಕ ಕಠಿಣ ತಪಃಸಾಧ್ಯವಾದರೂ ಮೋಕ್ಷವನ್ನೇ ಫಲವಾಗಿ ಉತ್ತಮರಿಗೆ ಮಾತ್ರ ಹೇಳುತ್ತದೆ. ಹೀಗೆ ಎಲ್ಲ ಪ್ರಮಾಣಗಳಿಗಿಂತ ಉತ್ತಮವಾದ ವೇದವು ಅಲ್ಪಫಲದಲ್ಲಿ ಪರ್ಯವಸಿತವಾಗಲಾರದು. ಈ ವಿಷಯದಲ್ಲಿ ಪ್ರಮಾಣ ಹೇಳುವರು.

**ತಾತ್ಪರ್ಯ-** ಮಂದಾಧಿಕಾರಿಣಾಂ ನಿತ್ಯಂ ತಪಸ್ಯೈವ ಪ್ರತೀಕ್ಷಿತುಮ್ ।
ಮೋಕ್ಷೋ ನ ಶಕ್ಯತೇಽಧೈರ್ಯಾತ್ತತಃ ಸ್ವರ್ಗಾದಿಕಂ ವದೇತ್ ॥

ಸ್ವರ್ಗಾದಿಷ್ವಲ್ಪಫಲತಾಂ ಜ್ಞಾಪಯಿತ್ವಾ ವಿಮೋಕ್ಷದಮ್ ।
ಏವಂ ವಕ್ತುಂ ಉತ್ತಮಾನಾಂ ನಿತ್ಯೋ ವೇದಃ ಪ್ರವರ್ತತೇ ॥

ಇಕ್ಷುದಂಡಂ ದದಾನೀತಿ ಯಥಾ ಭೈಷಜ್ಯರೋಚನಮ್ ।
ಏವಂ ಮಂದೇಷೂತ್ತಮೇಷು ಮೋಕ್ಷಮಾಹಾತ್ಮ್ಯಮುಚ್ಯತೇ ॥
ನ ಹ್ಯಲ್ಪಫಲಭಾಗ್ವೇದೋ ವಾಸುದೇವೈಕಸಂಶ್ರಯಃ ॥ ಇತಿ ವಿಚಾರೇ ।

ಮಂದಾಧಿಕಾರಿಗಳಿಗೆ ತಪಸ್ಸನ್ನು ಮಾಡಿಯೇ ಮೋಕ್ಷವನ್ನು ಪಡೆಯುವ ಧೈರ್ಯ ಇಲ್ಲ. ಹೀಗಾಗಿ ಮೋಕ್ಷ ಸಂಪಾದಿಸಲಾಗುವುದಿಲ್ಲ. ಕಾರಣ ಇಂತಹವರಿಗೆ ಮೋಕ್ಷದಲ್ಲಿ ಅಭಿರುಚಿ ಹುಟ್ಟಿಸುವುದಕ್ಕಾಗಿ ಪ್ರಸಿದ್ಧ ಸ್ವರ್ಗವನ್ನೇ ವೇದವು ಹೇಳುವುದು. ಉತ್ತಮರಿಗೆ ಪ್ರಸಿದ್ಧ ಸ್ವರ್ಗಾದಿಗಳು ಅಲ್ಪವೆಂದು ತಿಳಿಸಿ ಮೋಕ್ಷವನ್ನೇ ಫಲವೆಂದು ತಿಳಿಸುತ್ತದೆ. ಕಬ್ಬನ್ನು ಕೊಟ್ಟು ಔಷಧದಲ್ಲಿ ರುಚಿ ಹುಟ್ಟಿಸುವಂತೆ ಸ್ವರ್ಗಪದದಿಂದ ಸ್ವರ್ಗವನ್ನು ಹೇಳಿ ವೇದವು ಮೋಕ್ಷಫಲದಲ್ಲಿ ಅಭಿರುಚಿಯನ್ನು ಹುಟ್ಟಿಸಿ ಕೊನೆಗೆ ಮೋಕ್ಷವನ್ನೇ ಕೊಡುತ್ತದೆ. ಈ ರೀತಿ ಎರಡು ಅಧಿಕಾರಿಗಳಿಗೆ ಎರಡು ರೀತಿಯಾಗಿ ತಿಳಿಸುತ್ತದೆ. ಶ್ರೀಹರಿಯನ್ನೇ ಆಶ್ರಯಿಸಿರುವ ವೇದವು ಅಲ್ಪಫಲವನ್ನು ವಿಧಾನಮಾಡಲಾರದು.

**ತಾತ್ಪರ್ಯ-** ''ಸರ್ವೇ ದೇವಾಃ ಸಭಾರ್ಯಾಶ್ಚ ತಂ ಪ್ರಾಪ್ಯ ಪುರುಷೋತ್ತಮಮ್ ।
ಏಕೀಭಾವಂ ಸ್ವಭಾರ್ಯಾಭಿರರ್ಧನಾರೀನರಾತ್ಮನಾ ।

ಪ್ರಾಪ್ಯೈವೋಪಾಸತೇ ನಿತ್ಯಂ ಮುಕ್ತಾಃ ಸಂಸಾರಸಾಗರಾತ್ ।
ಮೋದಂತೇ ಚ ರಮಂತೇ ಚ ವಿಭಾಗಂ ಚೇಚ್ಛಯಾಽಽಪ್ನುಯುಃ ॥

ಮುಂತಾದ ಐತರೇಯಭಾಷ್ಯೋದಾಹೃತ ಪ್ರಮಾಣದಿಂದ ಭಾರ್ಯಾ ಸಹಿತರಾಗಿ ಅನುಷ್ಠಾನ ಮಾಡುವುದು, ಮತ್ತು ಮೋಕ್ಷದಲ್ಲಿ ಭಾರ್ಯಾದಿಗಳಿರುವುದೂ ಸಿದ್ಧವಾಗಿದೆ. ಕಾರಣ ''ಅನರ್ಥಹೇತುಷು'' ಎಂದು ಸ್ವಜನಶಬ್ದಿತರಾದ ಭಾರ್ಯಾದಿಗಳಿಗೆ ಅನರ್ಥಹೇತುತ್ವ ಹೇಳುವುದು ಸರಿಯಲ್ಲ. ಎಂಬ ಶಂಕೆಗೆ ಉತ್ತರಿಸುವರು-

**ತಾತ್ಪರ್ಯ-ಅಯೋಗ್ಯಭಾರ್ಯಾಪುತ್ರಾದಿಕಾಮಿತಾಽನರ್ಥಸಾಧಿನೀ ।**
**ಯೋಗ್ಯಕಾಮಾದ್ಧರೇಃ ಪ್ರೀತಿರತೋ ಬ್ರಹ್ಮಾದಯೋಽಮಲಾಃ ॥**
**ಭಾರ್ಯಾಪುತ್ರಾದಿಸಂಯುಕ್ತಾ ವಾಸುದೇವಮುಪಾಸತೇ ॥ ಇತಿ ಚ ।**

ಅಯೋಗ್ಯರಾದ ಪತ್ನೀ-ಪುತ್ರರನ್ನು ಕಾಮಿಸುವುದು ಅನರ್ಥ. ಯೋಗ್ಯರಾದ ಪತ್ನೀ-ಪುತ್ರರನ್ನು ಕಾಮಿಸುವುದು ಶ್ರೀಹರಿಗೆ ಪ್ರೀತಿಯಾಗುವುದು. ಆ ಕಾರಣವೇ ದೋಷರಹಿತರಾದ ಬ್ರಹ್ಮಾದಿಗಳು ಹೆಂಡತಿಮಕ್ಕಳಿಂದ ಸೇರಿಯೇ ಶ್ರೀಹರಿಯ ಉಪಾಸನೆ ಮಾಡುವರು.

ಸನ್ಯಾಸಿಗಳಿಗೆ ಸ್ತ್ರೀಕಾಮನೆ ಸರ್ವಥಾ ಅಯೋಗ್ಯವು. ದೇವತೆಗಳಿಗೂ ತಮಗೆ ಯೋಗ್ಯರಲ್ಲದ ಸ್ತ್ರೀಯರ ಕಾಮನೆ ಅಯೋಗ್ಯವೇ.

ಇಲ್ಲಿ ''ಅಯೋಗ್ಯಾ ಚ ಸಾ ಭಾರ್ಯಾ ಚ ಪುತ್ರಾದಿಕಾಮಿತಾ ಚ'' ಎಂದು ಅಯೋಗ್ಯಾ ಚ ಭಾರ್ಯಾಪುತ್ರಾದಿಕಾಮಿತಾ ಚ ಎಂದು ಎರಡುರೀತಿಯಾಗಿ ವಿಗ್ರಹ ಮಾಡಬೇಕು.

''ಸ್ವಾಧಿಕಾರಾಭಿಕಾಮನಂ ಭವತಿ ಪ್ರೀತಯೇ ವಿಷ್ಣೋಃ'' ಎಂದಿರುವುದ-ರಿಂದ, ಯೋಗ್ಯಭಾರ್ಯಾ ಪುತ್ರ ಕಾಮನೆಯಿಂದ ಹರಿ ಪ್ರೀತಿಯಾಗುವುದು.

ಯೋಗ್ಯಕಾಮನೆ ಹರಿಪ್ರಿಯವಾದ್ದರಿಂದಲೇ ಬ್ರಹ್ಮಾದಿಗಳು, ಯಾಜ್ಞ್ಯ-ವಲ್ಕ್ಯಾದಿಗಳು, ಕೆಲವು ಮನುಷ್ಯರು, ರಾಗವು ದೋಷಕ್ಕೆ ಕಾರಣವೆಂದು ಹೇಳಿರುವುದರಿಂದ ರಾಗಾದಿಗಳಿಲ್ಲದೇ ಪತ್ನೀಪುತ್ರಾದಿಗಳೊಡನೆ ಹರಿ-ಯನ್ನಾರಾಧಿಸುವರು. ಅಯೋಗ್ಯಕಾಮವಾದರೆ ಚಂದ್ರಸುಗ್ರೀವರಂತೆ ಪ್ರಾಪ್ತವ್ಯಹಾನಿರೂಪ ಅನರ್ಥಕ್ಕೆ ಕಾರಣವಾಗುವುದು ಎಂದು ಭಾವ. ॥೨೪-೨೫॥

ತಮ್ಮ ಅಭಿಪ್ರಾಯವನ್ನು ಹೇಳಿ ಅಸುರರ ಅಭಿಪ್ರಾಯ ಹೇಳುವರು-

**ಏವಂ ವ್ಯವಸ್ಥಿತಂ ಕೇಚಿದವಿಜ್ಞಾಯ ಕುಬುದ್ಧಯಃ ।**
**ಫಲಶ್ರುತಿಂ ಕುಸುಮಿತಾಮವೇದಜ್ಞಾ ವದಂತಿ ಹಿ ॥೨೬॥**

**ಅವೇದಜ್ಞಾಃ** ವೇದಾಭಿಪ್ರಾಯ ತಿಳಿಯದ **ಕುಬುದ್ಧಯಃ** ದುಷ್ಟಬುದ್ಧಿಯುಳ್ಳ **ಕೇಚಿತ್** ಕೆಲವರು **ಏವಂ** ಈ ರೀತಿಯಾದ **ವ್ಯವಸ್ಥಿತಂ** ವೇದದ ನಿಶ್ಚಯವನ್ನು

**ಅವಿಜ್ಞಾಯ** ತಿಳಿಯದಲೇ **ಫಲಶ್ರುತಿಂ** ಮೋಕ್ಷರೂಪಫಲವನ್ನು ಹೇಳುವ ಶ್ರುತಿಯನ್ನು (ಸ್ವರ್ಗಕಾಮಃ ಯಜೇತ ಎಂಬ) **ಕುಸುಮಿತಾಂ** ಪುಷ್ಪಸ್ಥಾನೀಯ-ವಾದ ಪ್ರಸಿದ್ಧವಾದ ಸ್ವರ್ಗಪ್ರತಿಪಾದಕವೆಂದು **ವದಂತಿ** ಹೇಳುವರು.॥೨೬॥

ಮೇಲಿನ ಶ್ಲೋಕದಲ್ಲಿ ವ್ಯವಸ್ಥಿತಂ ಎಂಬುದಕ್ಕೆ ತನ್ನಿಂದ ನಿಶ್ಚಯಿಸಿದ ಎಂದರ್ಥ ತೋರುವುದು ಕಾರಣ ತಾತ್ಪರ್ಯ ಹೇಳುವರು -

**ತಾತ್ಪರ್ಯ- ಏವಂ ವೇದವ್ಯವಸ್ಥಿತಮ್ ।**

ವೇದದ ನಿಶ್ಚಯವೆಂದರ್ಥ. ಅರ್ಥವಾಗದಿರುವುರಿಂದ ವ್ಯಾಖ್ಯಾನಿಸುವರು.

**ತಾತ್ಪರ್ಯ- ಫಲಶ್ರುತಿಂ ಕುಸುಮಿತಾಮ್ । ಫಲಂ ಮೋಕ್ಷಃ ತದ್ವಿಷಯಾಂ ಶ್ರುತಿಂ ಸ್ವರ್ಗಾದಿಕುಸುಮವಿಷಯಾಂ ವದಂತಿ ।**

ವಸ್ತುತಃ ಮೋಕ್ಷರೂಪ ಮಹಾಫಲವನ್ನು ತಿಳಿಸುವ ''ಸ್ವರ್ಗಕಾಮೋ ಯಜೇತ'' ಎಂಬ ಶ್ರುತಿಯನ್ನು ಅನಿತ್ಯವಾದ, ಅಸಾರವಾದ, ಸ್ವರ್ಗರೂಪ ಫಲವನ್ನು ಪ್ರತಿಪಾದಿಸುವುದೆಂದು ಹೇಳುವರು ಎಂದು ಭಾವ.

''ಸ್ವರ್ಗಕಾಮಃ'' ಎಂಬ ಶ್ರುತಿಯಲ್ಲಿ ಸ್ವರ್ಗಪದವು ಉತ್ತಮರಿಗೆ (ಏಕಾಂತಭಕ್ತರಿಗೆ) ಮುಖ್ಯಫಲವೆಂದು ಸ್ವರಸಸುಂದರವಾದ್ದರಿಂದ ಆನಂದ-ರೂಪನಾದ ಶ್ರೀಹರಿವಿಷಯಕ ಭಕ್ತಿ, ಜ್ಞಾನಾದಿಗಳನ್ನು ಪ್ರತಿಪಾದಿಸುವುದು. ಇತರರಿಗೆ (ಅನೇಕಾಂತರಿಗೆ) ಮೋಕ್ಷದಲ್ಲಿರುವ ಪುತ್ರಾದಿರೂಪ ಫಲ ಪ್ರತಿಪಾದಕವು ಹೊರತು ಪ್ರಸಿದ್ಧ ಸ್ವರ್ಗಪ್ರತಿಪಾದಕವಲ್ಲ. ಎಂದು ತಾವು ಹೇಳಿದ ವಿಷಯದಲ್ಲಿ ಪ್ರಮಾಣ ಹೇಳುವರು -

**ತಾತ್ಪರ್ಯ- ನಿತ್ಯಾನಂದಹರೇರ್ಭಕ್ತಿಜ್ಞಾನಾದ್ಯಾಃ ಸ್ವರ್ಗಶಬ್ದಿತಾಃ ।**
**ಪುತ್ರಭಾರ್ಯಾಪ್ತವಿತ್ತಾದ್ಯಂ ಸರ್ವಂ ಮೋಕ್ಷಗತಂ ಫಲಮ್ ॥**

**ಉದ್ದಿಶ್ಯ ಸ್ವರ್ಗಕಾಮಸ್ಯ ಯಜನಂ ಶ್ರುತಿಚೋದಿತಮ್।**
**ತದವಿಜ್ಞಾಯ ಪುಷ್ಪಾಖ್ಯಮನಿತ್ಯಂ ಸ್ವರ್ಗಮಿಚ್ಛವಃ ॥**
**ಯಜಂತಿ ಮಂದಮತಯೋ ವೇದವಾದಪರಾಯಣಾಃ ॥ ಇತಿ ಚ ।**

ಸ್ವರೂಪಭೂತವಾದ ಕಾರಣ ನಿತ್ಯವಾದ ಆನಂದ ''ಸ್ವರ್'' ಎನಿಸಿಕೊಳ್ಳುತ್ತದೆ. ''ಗಮ್ಯತೇ ಮುಕ್ತಿಃ ಅನಯಾ ಇತಿ ಗಃ'' ಎಂದರೆ ಮುಕ್ತಿಸಾಧನವಾದ ಭಕ್ತಿಯು, ಮತ್ತು ಗತ್ಯರ್ಥಕಧಾತುಗಳಿಗೆ ಜ್ಞಾನವೆಂಬರ್ಥವಿರುವುದರಿಂದ

ಜ್ಞಾನವೂ ''ಗ'' ಎನಿಸಿಕೊಳ್ಳುತ್ತದೆ. ಆದಿಪದದಿಂದ ವೈರಾಗ್ಯವು, ಅಥವಾ ವೈರಾಗ್ಯವೂ ಮುಕ್ತಿ ಕಾರಣವಾದ್ದರಿಂದ ''ಗಮ್ಯತೇ ಅನೇನ ಇತಿ ಗಃ'' ಎಂದು ಮಾಡಬಹುದು, ಇವುಗಳು ಸ್ವರ್ಗಶಬ್ದದಿಂದ ಹೇಳಲ್ಪಡುವವು. ಮತ್ತು ಮಕ್ಕಳು, ಹೆಂಡತಿ, ಆಪ್ತ, ತನ್ನ ಜೊತೆಗೆ ಮುಕ್ತರಾದವರು, (ಜ್ಞಾತಿಗಳು) ಭೋಗಸಾಧನದ್ರವ್ಯಗಳು ಇವೇ ಮೊದಲಾದವನ್ನು ಉದ್ದೇಶಿಸಿ ''ಸ್ವರ್ಗಕಾಮೋ ಯಜೇತ'' ಎಂದು ಶ್ರುತಿಯು ಹೇಳಿದೆ. ಇಲ್ಲಿ ಪುತ್ರ, ಪತ್ನಿಯರನ್ನು ಹೇಳಿದ್ದರಿಂದ ''ಪುತ್ರಕಾಮೇಷ್ಟ್ಯಾ ಯಜೇತ ಪುತ್ರಕಾಮಃ'' ಎಂಬುದು ಮುಕ್ತಿಯಲ್ಲಿರುವ ಮಕ್ಕಳ ಉದ್ದೇಶದಿಂದಲೇ ಪುತ್ರ ಕಾಮೇಷ್ಟಿಯಾಗವನ್ನು ವಿಧಿಸಿದೆ ಎಂದು ಅರ್ಥ.

ಇದನ್ನು ತಿಳಿಯದೇ ಅನಿತ್ಯವಾದ, ಪ್ರಸಿದ್ಧವಾದ ಸ್ವರ್ಗದ ಇಚ್ಛೆಯಿಂದಲೇ ಮಂದಮತಿಗಳು ವೇದದ ಮೇಲ್ನೋಟಕ್ಕೆ ತೋರುವ ಅರ್ಥದಲ್ಲಿ ಆಸಕ್ತರಾಗಿ ಯಜ್ಞ ಮಾಡುವರು ಎಂದರ್ಥ.

ಪುತ್ರ, ಭಾರ್ಯಾದಿಗಳು ಸಗುಣ ಮುಕ್ತಿಯಲ್ಲಿರುವರು. ನಿರ್ಗುಣ-ಬ್ರಹ್ಮಭಾವ ರೂಪವಾದ ಮುಕ್ತಿಯಲ್ಲಿ ಇವರು ಇಲ್ಲವಲ್ಲ? ಎಂಬ ಶಂಕೆಗೆ ಉತ್ತರಿಸುವರು -

**ತಾತ್ಪರ್ಯ- ಸ್ತ್ರೀಭಿರ್ವಾ ಯಾನೈರ್ವಾ ಜ್ಞಾತಿಭಿರ್ವಾಽಜ್ಞಾತಿಭಿರ್ವಾ -ಇತ್ಯಾದಿ ಚ ।**

''ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣ ಅಭಿನಿಷ್ಪದ್ಯತೇ । ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ'' ಎಂದು ಹಿಂದಿನ ವಾಕ್ಯದಲ್ಲಿ ಪರಬ್ರಹ್ಮ ಪ್ರಾಪ್ತಿ, ಮತ್ತು ಸ್ವರೂಪದಿಂದ ಅವಸ್ಥಾನವನ್ನು ಹೇಳಿ ಸ್ತ್ರೀ, ಯಾನಾದಿಗಳನ್ನೂ ಹೇಳಿದೆ. ಕಾರಣ ಇದು ಮುಖ್ಯ ಮೋಕ್ಷವೇ. ಅಲ್ಲಿಯೂ ಪತ್ನೀ-ಪುತ್ರರಿದ್ದಾರೆ. ಎಂದು ತಿಳಿಯಬೇಕು.

ಸ್ವರ್ಗಶಬ್ದವು ಮೋಕ್ಷಾರ್ಥಕವೇ ಆಗಿದೆ, ಪ್ರಸಿದ್ಧ ಸ್ವರ್ಗಾರ್ಥಕವಲ್ಲ ಎಂಬುದಕ್ಕೆ ಪ್ರಮಾಣ ಹೇಳುವರು -

**ತಾತ್ಪರ್ಯ- ಮೋಕ್ಷಾಖ್ಯಂ ಫಲಮೇವಾಹುಃ ಸ್ವರ್ಗಾದಿವಚನಂ ತು ಯತ್ ।**
**ಪುಷ್ಪಂ ಸ್ವರ್ಗಾದಿವತ್ ತಸ್ಯ ವಚನಂ ಮಂದರೋಚನಮ್ ॥ ಇತಿ ಚ ।**

**ಅಸುರಾಣಾಮಯಂ ಸ್ವರ್ಗಶಬ್ದಃ ಪುಷ್ಪಾತ್ಮಕಂ ವದೇತ್ ।**
**ದೇವಾನಾಂ ಹರಿಸಂಪ್ರಾಪ್ತಿಂ ವೇದೋ ವಿಷ್ಣು ಪರೋ ಯತಃ ॥ ಇತಿ ಚ ।**

''ಸ್ವರ್ಗಕಾಮೋ ಯಜೇತ, ಪುತ್ರಕಾಮೋ ಯಜೇತ''ಇವೆಲ್ಲ ಮುಖ್ಯವಾಗಿ ಮೋಕ್ಷರೂಪ ಫಲವನ್ನು ಮತ್ತು ಅಲ್ಲಿಯ ಪುತ್ರಾದಿಫಲವನ್ನೇ ಹೇಳುವವು. ಮೇಲೆ ಪ್ರಸಿದ್ಧವಾದ ಸ್ವರ್ಗವನ್ನು ಹೇಳುವಂತೆ ಕಾಣುವ ಮಾತುಗಳು ಅಜ್ಞಾನಿಗಳಿಗೆ ವೇದಮಾರ್ಗದಲ್ಲಿ ಅಭಿರುಚಿ ಹುಟ್ಟಿಸಲು. ಅಸುರರಿಗೆ ಸ್ವರ್ಗಶಬ್ದವು ಪ್ರಸಿದ್ಧವಾದುದನ್ನೇ ಹೇಳುವುದು. ದೇವತೆಗಳಿಗೆ ಶ್ರೀಹರಿಯಪ್ರಾಪ್ತಿಯನ್ನುಹೇಳುವುದು. ಸಕಲವೇದವೂ ವಿಷ್ಣುಪ್ರತಿಪಾದಕವೇ ಆಗಿದೆ.

ಅಂತು ಹಿಂದೆ ''ಅನೇಕಬ್ರಹ್ಮಕಾಲಪ್ರಾಪ್ಯತ್ವಾತ್'' ಎಂಬ ತಮ್ಮ ವಾಕ್ಯದಿಂದ ಮಂದಾಧಿಕಾರಿಗಳಿಗೆ, ''ನಿತ್ಯಂ ತಪಸ್ಯೈವ'' ಮುಂತಾದ ಪ್ರಮಾಣದಿಂದ ಮುಕ್ತಿಯೋಗ್ಯರಲ್ಲಿಯೇ ಅಧಿಕಾರಿಭೇದದಿಂದ ಮೋಕ್ಷ -ಪ್ರಸಿದ್ಧಸ್ವರ್ಗ ಅರ್ಥವೆಂದು ಹೇಳಿದರು.

''ಫಲಶ್ರುತಿರಿಯಂ'' ಎಂದಾರಂಭಿಸಿ ''ವಿಶತೋ ಬುಧಃ'' ಎಂಬಲ್ಲಿನ ವರೆಗಿನ ಶ್ಲೋಕಗಳು ಮೋಕ್ಷಯೋಗ್ಯರಾದ ಜೀವರ ವಿಷಯಕಗಳಾಗಿವೆ.

''ಏವಂ ವ್ಯವಸ್ಥಿತಂ ಕೇಚಿತ್'' ಎಂದಾರಂಭಿಸಿ ''ಮದ್ವಾರ್ತಾಽಪಿ ನ ರೋಚತೇ'' ಎಂಬಲ್ಲಿವರೆಗಿನ ಶ್ಲೋಕಗಳು ತಮೋಯೋಗ್ಯರಾದ ಅಸುರ-ವಿಷಯಕ ಎಂದಂತಾಯಿತು.।।೨೬।।

ಹಿಂದೆ ಹೇಳಿದ್ದನ್ನೇ ವಿವರಿಸುವರು-

**ಕಾಮಿನಃ ಕೃಪಣಾ ಲುಬ್ಧಾಃ ಪುಷ್ಪೇಷು ಫಲಬುದ್ಧಯಃ ।**
**ಅಗ್ನಿಮುಗ್ಧಾ ಧೂಮತಾಂತಾಃ ಸ್ವಲೋಕಂ ನ ವಿದಂತಿ ತೇ** ।।೨೭।।

**ಕಾಮಿನಃ** ಅಯೋಗ್ಯವಾದ ನಿಷಿದ್ಧ ಕಾಮನೆಗಳುಳ್ಳವರು ಆದ್ದರಿಂದಲೇ **ಕೃಪಣಾಃ** ದೀನರಾದವರು (ಅತ್ಯಾಗಿಗಳು) **ಲುಬ್ಧಾಃ** ಲೋಭವುಳ್ಳವರು **ಪುಷ್ಪೇಷು** ಹೂವಿಗೆ ಸಮಾನವಾದ ನಶ್ವರವಾದ ಸ್ವರ್ಗಾದಿಗಳನ್ನು **ಫಲಬುದ್ಧಯಃ** ಮಹಾಫಲವೆಂದು ತಿಳಿದವರು **ಅಗ್ನಿಮುಗ್ಧಾಃ** ಅಗ್ನಿಯ ವಿಷಯದಲ್ಲಿ ಭ್ರಾಂತರಾದವರು, ಅಂದರೆ ಅಗ್ನಿಯ ಅಂತರ್ಯಾಮಿಯಾದ

ಶ್ರೀಹರಿಯನ್ನು ತಿಳಿಯದೇ ಅಗ್ನಿಯೇ ಮುಖ್ಯಪೂಜ್ಯನು, ಅವನೇ ಸ್ವತಂತ್ರ ಫಲದಾತೃವು ಎಂದು ತಿಳಿದವರೆಂದರ್ಥ. **ಧೂಮತಾಂತಾಃ** ಅಗ್ನಿಶಾಲೆಯ ಹೊಗೆಯಿಂದ ದುಃಖಿತರಾದವರು ಯಾರಿರುವರೋ **ತೇ** ಅವರು **ಸ್ವಲೋಕಂ** ತಮಗೆ ಆಶ್ರಯನಾದ ಪರಮಾತ್ಮನನ್ನು **ನ ವಿದಂತಿ** ತಿಳಿಯಲಾರರು.

''ಸ್ವಲೋಕಂ ನ ವಿದಂತಿ'' ತನ್ನ ಲೋಕವನ್ನು ತಿಳಿದಿಲ್ಲ, ಎಂದು ಹೇಳುವುದು ಸರಿಯಲ್ಲ. ತಾವು ಹೊಂದಬೇಕಾದ ಸ್ವರ್ಗವನ್ನು ತಿಳಿದಿರುವರು. ಇಲ್ಲವಾದರೆ ಅದಕ್ಕಾಗಿ ಯಾಗ ಮಾಡಬಾರದು? ಎಂದರೆ ಹೇಳುವರು -

**ತಾತ್ಪರ್ಯ- ಸ್ವಲೋಕಂ ಸ್ವಾಶ್ರಯಮ್ ।**

ಆಶ್ರಯನಾದ್ದರಿಂದ ಪರಮಾತ್ಮನಿಗೆ ಲೋಕವೆಂದು ಕರೆಯುವರು ಎಂದು ಭಾವ.

ಆಶ್ರಯವೆಂದರೆ ಮನೆ ಮುಂತಾದವು ಅಲ್ಲ, ಎಂದು ತಿಳಿಸಲು ಮುಂದಿನ ಶ್ಲೋಕ ಹೊರಟಿದೆ ಎಂದು ಆಚಾರ್ಯರೇ ಹೇಳುವರು -

**ತಾತ್ಪರ್ಯ- ಕೋಽಸಾವಾಶ್ರಯಃ । ಮಾಂ ।**

ಇತ್ಯತ ಆಹ, ಇತಿ, ಎಂಬ ಮೂರು ಪದಗಳನ್ನು ಅಧ್ಯಾಹರಿಸಬೇಕು. ಆ ಆಶ್ರಯನಾರೆಂದರೆ ಹೇಳುವರು- ''ಮಾಂ'' ಎಂದು ॥೨೭॥

**ನ ತೇ ಮಾಮಂಗ ಜಾನಂತಿ ಹೃದಿಸ್ಥಂ ಯ ಇದಂ ಯತಃ ।**
**ಉಕ್ಥಶಾಸೋ ಹ್ಯಸುತೃಪೋ ಯಥಾ ನೀಹಾರಚಕ್ಷುಷಃ ॥೨೮॥**

**ಹೇ ಅಂಗ** ಎಲೋ ಉದ್ಧವನೇ **ಯೇ** ಯಾರು **ಇದಂ** ಈ ಜಗತ್ತು **ಯತಃ** ಯಾವನ ಅಧೀನವೋ **ಯತಃ** ಯಾವನಿಂದ ಜನಿಸಿದೆಯೋ ಅಂತಹ **ಹೃದಿಸ್ಥಂ** ತಮ್ಮ ಹೃದಯದಲ್ಲಿಯೇ ಇರುವ **ಮಾಂ** ನನ್ನನ್ನು **ನ ಜಾನಂತಿ** ತಿಳಿಯಲಾರರು. **ಅಸುತೃಪಃ** ತಮ್ಮ ಇಂದ್ರಿಯ ಪ್ರೀತಿಯಲ್ಲಿಯೇ ಆಸಕ್ತರಾದ **ತೇ** ಅಸುರರು **ಉಕ್ಥಶಾಸಃ ಭವಂತಿ** ಮುಖ್ಯಪ್ರಾಣದೇವರ ಶಾಸನಕ್ಕೆ ಗುರಿಯಾಗುವರು. **ಯಥಾ ನೀಹಾರಚಕ್ಷುಷಃ** ಮಂಜಿನಿಂದ ಆವೃತವಾದ ಕಣ್ಣುಳ್ಳವರು ಹೇಗೆ ಪದಾರ್ಥವನ್ನು ಸರಿಯಾಗಿ ತಿಳಿಯುವುದಿಲ್ಲವೋ ಹಾಗೆ ಶ್ರೀಹರಿಯನ್ನು ಸರಿಯಾಗಿ ತಿಳಿಯಲಾರರೆಂದರ್ಥ.

ಮೂಲದಲ್ಲಿ ''ತೇ'' ಎಂಬ ತಚ್ಛಬ್ದವು ಸಾಪೇಕ್ಷವಾದ್ದರಿಂದ ''ಯೇ'' ಎಂದು ಅಧ್ಯಾಹಾರ ಮಾಡಿ ಉಕ್ಥಶಾಸ ಎಂಬ ಪದದ ಅರ್ಥವನ್ನು ಹೇಳುವರು-

**ತಾತ್ಪರ್ಯ-** ತೇ ಯೇ ಉಕ್ಥೇನ ಪ್ರಾಣೇನ ಶಾಸ್ಯಾಃ ।

''ಉಕ್ಥಮುಕ್ಥಂ ಇತಿ ವೈ ಪ್ರಜಾ ವದಂತಿ'' ಎಂಬ ಶ್ರುತಿಯಲ್ಲಿ ಉಕ್ಥ ಎಂಬ ಹೆಸರು ಪ್ರಾಣದೇವರಿಗೆ ಪ್ರಸಿದ್ಧವಾಗಿದೆ.

ಅಸುರರು ಪ್ರಾಣನಿಂದ ಶಾಸ್ಯರು ಎಂಬಲ್ಲಿ ಪ್ರಮಾಣ ಹೇಳುವರು -

**ತಾತ್ಪರ್ಯ-** ವಿಷ್ಣ್ವಭಕ್ತಾನ್ ಸದಾ ವಾಯುಃ ಶಾಸಯೇತ್ ತಮಸಿ ಕ್ಷಿಪನ್ ।
ವಿಷ್ಣುಭಕ್ತಾನ್ ವಿಮೋಕ್ಷಾಯ ಪ್ರಾಪಯಿತ್ವಾ ಸುಖಂ ನಯೇತ್ ॥ ಇತಿ ಚ ।
ಪಥ ಏಕಃ ಪೀಪಾಯ ತಸ್ಕರೋ ಯಥಾ ಏಷ ವೇದನಿಧೀನಾಮ್ ॥ ಇತಿ ಚ ।

ವಾಯುದೇವರು ಶ್ರೀಹರಿಯ ಭಕ್ತರಲ್ಲದವರನ್ನು ತಮಸ್ಸಿನಲ್ಲಿ ಹಾಕಿ ಯಾವಾಗಲೂ ಶಿಕ್ಷಿಸುವರು. ವಿಷ್ಣುಭಕ್ತರನ್ನು ಸುಖಪಡಿಸುವರು ಎಂದು ಪ್ರಾಸಂಗಿಕವಾಗಿ ಹೇಳಿದೆ.

ಇವರು ಅಭಕ್ತರು ಕಾರಣ ತಮೋಯೋಗ್ಯರು, ಇವರು ಭಕ್ತರಾದ ಕಾರಣ ಮೋಕ್ಷಯೋಗ್ಯರು ಎಂಬುದು ಹೇಗೆ ತಿಳಿಯುವುದು ? ಎಂಬುದಕ್ಕೆ ಉತ್ತರ ರೂಪವಾಗಿ ವಾಯುದೇವರು ಎಲ್ಲವನ್ನೂ ತಿಳಿದಿರುವರು ಎಂಬಲ್ಲಿ ''ಪಥ ಏಕಃ'' ಎಂಬ ಪ್ರಮಾಣ ಹೇಳಿರುವರು. ಇದರ ಪೂರ್ವಾರ್ಧ ಹೀಗಿದೆ -

''ತಿಗ್ಮಮೇಕೋ ಬಿಭರ್ತಿ ಹಸ್ತ ಆಯುಧಂ ಶುಚಿರುಗ್ರೋ ಜಲಾಷಭೇಷಜಃ''

**ಶ್ರುತ್ಯರ್ಥ- ಏಕಃ** ಮುಖ್ಯನಾದ **ಏಷಃ ಶುಚಿಃ** ಈ ವಾಯುವು **ತಿಗ್ಮಂ** ತೀಕ್ಷ್ಣವಾದ **ಆಯುಧಂ** ಗದೆಯನ್ನು **ಹಸ್ತೇ ಬಿಭರ್ತಿ** ಕೈಯಲ್ಲಿ ಧರಿಸಿರುವನು. ಆ ಗದೆಯಿಂದ ಅಭಕ್ತರನ್ನು ಹೊಡೆದು ತಮಸ್ಸಿನಲ್ಲಿ ಹಾಕುವನೆಂದು ಭಾವ.

**ಶ್ರೀನಿವಾಸತೀರ್ಥರ ಪ್ರಕಾರ-**

**ಶುಚಿಃ** ಪ್ರಾಣದೇವರು (ಶುಚಿರ್ಹಿ ಪ್ರಾಣಃ ಎಂದು ನಿರುಕ್ತ) ಯಥಾ ತಸ್ಕರಃ ಹೇಗೆ ಒಬ್ಬ ಕಳ್ಳನು **ನಿಧೀನಾಂ** ನಿಕ್ಷೇಪಗಳ (ಹಣ ಸಂಗ್ರಹಿಸಿದ ಸ್ಥಳ)

**ಪಥಃ** ಮಾರ್ಗವನ್ನು **ಪೀಪಾಯ** ತಿಳಿಯುತ್ತಾನೋ (ಜಾನಾತೀತಿ ಯದಾಹ ಪೀಪಾಯೇತ್ಯೇವ ತದಾಹ ಎಂದು ನಿರುಕ್ತ) **ಏವಂ** ಅದೇ ರೀತಿಯಾಗಿ **ಏಕಃ** ಮುಖ್ಯರಾದ **ಏಷಃ** ಪ್ರಾಣದೇವರು **ಪಥಃ** ಮೋಕ್ಷಮಾರ್ಗವನ್ನು ತಮೋಮಾರ್ಗವನ್ನು ವೇದ ತಿಳಿದಿರುವರು ಎಂದರ್ಥ.

**ಶ್ರೀಸುಧೀಂದ್ರತೀರ್ಥರ ಮತ್ತು ತಾಮ್ರಪರ್ಣಿಯವರ ಅಭಿಪ್ರಾಯ -**

''ತೇ ಮಾಂ ನ ಜಾನಂತಿ'' ಎಂದು ಹೇಳಿದ್ದು ಸರಿಯಲ್ಲ. ಅಸುರರಿಗೆ ಶಬ್ದಶಕ್ತಿ ಜ್ಞಾನವಿದೆ. ಸಂಪ್ರದಾಯವೂ ಇದೆ ಕಾರಣ ಜ್ಞಾನವಾಗಬಹುದಲ್ಲ? ಎಂದು ಶಂಕಿಸಿ ಮೇಲೆ ಉದಾಹರಿಸಿದ ಶ್ರುತಿಯಿಂದ ಪರಿಹರಿಸುವರು. ಹೇಗೆ ಕಳ್ಳನು ಹಣವುಳ್ಳ ದಾರಿ ಹೋಕರನ್ನು ದಾರಿಯನ್ನು ತಪ್ಪಿಸಿ ಅವರಲ್ಲಿರುವ ಧನವನ್ನು ಅಪಹರಿಸುವನೋ ಹಾಗೆ ಸ್ವತಂತ್ರನಾದ ಶ್ರೀಹರಿಯು ಸನ್ಮಾರ್ಗವನ್ನು ತಿಳಿಯದಂತೆ ಮಾಡಿರುವನು. ಈ ಶ್ರೀಹರಿಯು ಜ್ಞಾನಾದಿಗಳ ಸ್ಥಾನವನ್ನು ತಿಳಿದಿರುವನು.

ಆಂತರಜ್ಞಾನವನ್ನೂ ನಾಶಮಾಡುವನೆಂದರ್ಥ. ''ಪೀಪಾಯ'' ಎಂಬುದು ಪಿಬ ಧಾತುವಿನ ಲಿಟ್‌ಲಕಾರದ ರೂಪ. ''ವ್ಯತ್ಯಯೋ ಬಹುಲಂ ಛಂದಸಿ'' ಎಂದಿರುವುದರಿಂದ ''ಪಪೌ'' ಎಂದು ಹೇಳಬೇಕಾದಲ್ಲಿ ಈ ರೀತಿ ಹೇಳಿದೆ. ಅಥವಾ ಪಾನಾರ್ಥಕ ಪಾಧಾತುವಿನ ವೈದಿಕರೂಪ. ಪಾನ ಅಂದರೆ ಅಂತರ್ಗಮನವೆಂದರ್ಥ. ದೈತ್ಯರಿಗೆ ಸನ್ಮಾರ್ಗ ತಿಳಿಯದಂತೆ ಮಾಡುವನೆಂದು ಭಾವ.।।೨೮।।

**ತೇ ಮೇ ಮತಮವಿಜ್ಞಾಯ ಪರೋಕ್ಷವಿಷಯಾತ್ಮಕಾಃ ।**
**ಹಿಂಸಾಯಾಂ ಯದಿ ಕಾಮಃ ಸ್ಯಾದ್ ಯಜ್ಞ ಏವ ನ ಚೋದನಾ ।।೨೯।।**

**ತೇ** ಅಸುರರು **ಮೇ** ನನ್ನ **ಮತಂ** ''ಸ್ವರ್ಗಕಾಮೋ ಯಜೇತ'' ಮುಂತಾದ ವಚನಗಳು ಮೋಕ್ಷರೂಪಫಲವನ್ನೇ ಹೇಳುವವು. ದೇವತೆಗಳಿಗೆ ಹರಿ-ಸಂಪ್ರಾಪ್ತಿಯನ್ನು ಅಸುರರಿಗೆ ಪುಷ್ಪಾತ್ಮಕವಾದ ಪ್ರಸಿದ್ಧಸ್ವರ್ಗವನ್ನು ತಿಳಿಸುವುದು, ಎಂಬ ನನ್ನ ಅಭಿಪ್ರಾಯವನ್ನು **ಅವಿಜ್ಞಾಯ** ತಿಳಿಯದೇ **ಪರೋಕ್ಷವಿಷಯಾತ್ಮಕಾಃ** ಅಂಧಂತಮಸ್ಸನ್ನು ಹೊಂದಲು ಯೋಗ್ಯವಾದ ಸ್ವರೂಪವುಳ್ಳವರಾಗುವರು.

**ಯದಿ** ಯಾವಾಗ **ಹಿಂಸಾಯಾಂ ಕಾಮಃ** ಹಿಂಸೆಯನ್ನು ಮಾಡಿ ಮಾಂಸ ತಿನ್ನುವ ಇಚ್ಛೆಯಾದಾಗ **ಯಜ್ಞ ಏವ ಸ್ಯಾತ್** ವ್ಯರ್ಥ ಏಕೆ ಪಶುಹಿಂಸೆ ಮಾಡುವಿರಿ? ಎಂದಾಗ ಇದು ಯಜ್ಞವೆಂದು ಕುತರ್ಕಗಳಿಂದ ಹೇಳುವರು. ಹೊರತು **ನ ಚೋದನಾ** ವಿಹಿತವಲ್ಲ . ವಿಹಿತಯಜ್ಞದಲ್ಲಿ ವಧ ಮಾಡದೇ ಸ್ವೇಚ್ಛೆಯಿಂದ ವಧ ಮಾಡುವುದು ಸರಿಯಲ್ಲವೆಂದರ್ಥ.

ಮೇಲಿನ ಶ್ಲೋಕದಲ್ಲಿ ಅಸಂಗತ ಏನೋ ಹೇಳಿದಂತೆ ತೋರುವುದು, ಕಾರಣ ಯೋಜಿಸುವರು-

**ತಾತ್ಪರ್ಯ-** ಮೇ ಮತಾವಿಜ್ಞಾನಾತ್ ಪರೋಕ್ಷವಿಷಯಾತ್ಮಕಾಃ । ಪರೋಕ್ಷಂ ಅಂಧಂತಮಃ ತದ್ವಿಷಯಸ್ವರೂಪಾಃ । ತದ್ಗಮನಾರ್ಥಸ್ವರೂಪಾಃ ।

ಅಂಧಂತಮಃ ಪರೋಕ್ಷಂ ಚ ಪಂಚಕಷ್ಟಂ ತಥೋಚ್ಯತೇ । ಇತಿ ಸುವ್ಯಕ್ತೇ ।

ತೇಷಾಮಾಸುರಾಣಾಂ ಯದಾ ಹಿಂಸಾಯಾಂ ಕಾಮಃ ತದಾ ಯಜ್ಞ ಏವ ನ ಚೋದನಾ । ಯದ್ಯದಾತ್ಮನೋ ಹಿಂಸಿತುಂ ಇಷ್ಟಂ ತತ್ತದ್ವಿಹಿತಮಿತಿ ಪ್ರಾಪಯಂತಿ ಕುತರ್ಕೈಃ ।

ಆಸುರೋಽವಿಹಿತಾಂ ಹಿಂಸಾಂ ವಿಹಿತತ್ವೇನ ವರ್ಣಯೇತ್ ।
ಆಸುರಾ ಯಾಜ್ಞಿಕಾಃ ಸರ್ವೇ ನಾರಾಯಣಪರಾಙ್ಮುಖಾಃ ॥ ಇತಿ ಚ ।

ನನ್ನ ಸರ್ವಯಜ್ಞಭೋಕ್ತೃತ್ವರೂಪಸಾಮರ್ಥ್ಯವನ್ನು ತಿಳಿಯದ ಕಾರಣ ಅಂಧಂತಮಸ್ಸನ್ನು ಹೊಂದತಕ್ಕ ಸ್ವರೂಪವುಳ್ಳವರು. ಅಂಧಂತಮಸ್ಸನ್ನು ಪರೋಕ್ಷವೆಂದು ಪಂಚಕಷ್ಟವೆಂದು ಕರೆಯುತ್ತಾರೆ, ಎಂದು ಸುವ್ಯಕ್ತ ಎಂಬ ಗ್ರಂಥದಲ್ಲಿ ಹೇಳಿದೆ. ಆ ಅಸುರರಿಗೆ ಯಾವಾಗ ಹಿಂಸೆ ಮಾಡಿ ಮಾಂಸವನ್ನು ತಿನ್ನಲು ಇಚ್ಛೆ ಬರುವುದೋ ಆಗ ಸುಮ್ಮನೇ ಹಿಂಸೆ ಮಾಡುತ್ತಾರೆ. ವಾಸ್ತವಿಕವಾಗಿ ಆ ಹಿಂಸೆಯಲ್ಲಿ ವಿಧಿಯಿಲ್ಲ. ಅಂದರೆ ತಮಗೆ ಬೇಕಾದ ಪ್ರಾಣಿಗಳ ಹಿಂಸೆಯನ್ನು ಮಾಡಿ ಇದು ವಿಹಿತಯಜ್ಞವೇ ಎಂದು ಕುತರ್ಕಗಳಿಂದ ಉಪಪಾದಿಸುವರು. ವಸ್ತುತಃ ವಿಧಿ ಇಲ್ಲ. ಅಸುರರು ಅವಿಹಿತವಾದ ಹಿಂಸೆಯನ್ನು ವಿಹಿತವೆನ್ನುತ್ತಾರೆ. ನಾರಾಯಣದ್ವೇಷಿಗಳಾದ ಯಾಜ್ಞಿಕರೆಲ್ಲರೂ ಅಸುರರು ಎಂದಿದೆ.॥೨೯॥

ಇವರ ಪ್ರವೃತ್ತಿಯಿಂದಲೇ ಅಸುರರು ಎಂಬುದು ಸ್ಪಷ್ಟವಾಗುವುದು ಎಂದು ಹೇಳುವರು -

**ಹಿಂಸಾವಿಹಾರಾ ಹ್ಯಾಲಬ್ಧೈಃ ಪಶುಭಿಃ ಸ್ವಸುಖೇಚ್ಛಯಾ ।**
**ಯಜಂತೇ ದೇವತಾ ಯಜ್ಞೈಃ ಪಿತೄನ್ ಭೂತಪತೀನ್ ಖಲಾಃ ।।೩೦।।**

**ಹಿಂಸಾವಿಹಾರಾಃ** ಹಿಂಸೆಯೇ ಕ್ರೀಡೆಯಾಗಿವುಳ್ಳ **ಖಲಾಃ** ದುಷ್ಟರು **ಸ್ವಸುಖೇಚ್ಛಯಾ** ತಮ್ಮ ಸುಖಕ್ಕಾಗಿ **ಆಲಬ್ಧೈಃ** ಹಿಂಸಿಸಲ್ಪಟ್ಟ **ಪಶುಭಿಃ** ಪಶುಗಳಿಂದ **ದೇವತಾಃ** ದೇವತೆಗಳನ್ನು **ಭೂತಪತೀನ್** ರುದ್ರಾದಿಗಳನ್ನು **ಪಿತೄನ್** ಪಿತೃಗಳನ್ನು **ಯಜ್ಞೈಃ** ಯಾಗಗಳಿಂದ **ಯಜಂತೇ** ಪೂಜಿಸುವರು.

ಇತರ ದೇವತೆಗಳನ್ನು ಪೂಜಿಸುವರು ಅಸುರರು ಎಂದು ಹೇಳಿದ್ದು ಸರಿಯಲ್ಲ. ವಿಷ್ಣುವನ್ನು ಪೂಜಿಸುವ ಶುದ್ಧಸಾತ್ವಿಕರೂ ಸಹ ಕಾಮನೆಯಿಂದ ಇತರ ದೇವತಾದಿಗಳ ಪೂಜೆ ಮಾಡುವುದುಂಟಲ್ಲ? ಎಂಬ ಶಂಕೆಗೆ ಉತ್ತರಿಸುವರು -

**ತಾತ್ಪರ್ಯ- ವಿಷ್ಣುಂ ವಿಹಾಯ ಯೇ ದೇವಾನ್ ಪಿತೄನ್ ಭೂತೇಶಮೇವ ವಾ ।**
**ಸಾಮ್ಯೇನ ವಾ ಪೂಜಯಂತಿ ತೇ ಜ್ಞೇಯಾ ಆಸುರಾ ಗಣಾಃ ।। ಇತಿ ಚ ।**

ವಿಷ್ಣುವಿನನ್ನು ಬಿಟ್ಟು ಪ್ರಧಾನವಾಗಿಯಾಗಲಿ ಸಮವಾಗಿ (ವಿಷ್ಣುವಿಗೆ) ಯಾಗಲಿ ಇತರದೇವತೆಗಳನ್ನು ಪೂಜಿಸುವವರು ಅಸುರರೆಂದು ಭಾವ. ಪ್ರವೃತ್ತಕರ್ಮ ಮಾಡುವ ಸಾತ್ವಿಕರು ಅಸುರರಲ್ಲ.।।೩೦।।

**ಸ್ವಪ್ನೋಪಮಮಮುಂ ಲೋಕಮಸಂತಂ ಶ್ರವಣಪ್ರಿಯಮ್ ।**
**ಆಶಿಷೋ ಹೃದಿ ಸಂಕಲ್ಪ್ಯ ತ್ಯಜಂತ್ಯರ್ಥಾನ್ ಯಥಾ ವಣಿಕ್ ।।೩೧।।**

**ಯಥಾ ವಣಿಕ್** ವ್ಯಾಪಾರಿಯು ಹೇಗೆ ಧಾನ್ಯ ಮೊದಲಾದ ದೃಷ್ಟಫಲಕ್ಕಾಗಿ ಹಣವನ್ನು ಖರ್ಚುಮಾಡುವನೋ **ತಥಾ** ಹಾಗೆಯೇ **ಸ್ವಪ್ನೋಪಮಂ** ಅನಿತ್ಯವಾದುದರಿಂದ ಕನಸ್ಸಿನಲ್ಲಿ ಕಂಡ ಪದಾರ್ಥದಂತಿರುವ **ಅಮುಂ ಲೋಕಂ** ಸ್ವರ್ಗಲೋಕವನ್ನಾಗಲಿ **ಅಸಂತಂ** ಅಮಂಗಲವಾದ **ಶ್ರವಣಪ್ರಿಯಂ** ಕೇಳುವಾಗ ಮಾತ್ರ ಮನೋಹರವಾದ **ಆಶಿಷಃ** ಐಶ್ವರ್ಯ ಮುಂತಾದ ಅಪೇಕ್ಷೆಗಳನ್ನು **ಹೃದಿ ಸಂಕಲ್ಪ್ಯ** ಮನಸ್ಸಿನಲ್ಲಿ ಉದ್ದೇಶಿಸಿ **ಅರ್ಥಾನ್ ತ್ಯಜಂತಿ** ದ್ರವ್ಯವನ್ನು ವೆಚ್ಚಮಾಡಿ ಯಜ್ಞಾದಿಗಳನ್ನು ಮಾಡುವರು ಎಂದರ್ಥ.

ಇವರಿಗೆ ಅರ್ಥ ಹಾನಿಯಾಗುವುದೇ ಹೊರತು ತಮ್ಮ ಅಭೀಷ್ಟ ಸಿದ್ಧಿಸಲಾರದು ಎಂದು ಭಾವ.।।೩೧।।

ತಾಮಸರಲ್ಲಿಯೂ ವಿಭಾಗವಿದೆ ಎಂದು ಹೇಳುವರು-

**ರಜಃಸತ್ವತಮೋನಿಷ್ಠಾ ರಜಃಸತ್ವತಮೋಜುಷಃ ।**
**ಉಪಾಸತೇ ಇಂದ್ರಮುಖ್ಯಾನ್ ದೇವಾದೀನ್ನ ತಥೈವ ಮಾಮ್ ।।೩೨।।**

**ರಜಃಸತ್ವತಮೋನಿಷ್ಠಾಃ** ರಜಃಸತ್ವತಮಸ್ವಭಾವರಾದ (ತಾಮಸರೇ) ವರು **ರಜಃಸತ್ವತಮೋಜುಷಃ** ರಾಜಸಸಾತ್ವಿಕತಾಮಸ ವಿಷಯಗಳನ್ನು ಸೇವಿಸುವರು. **ಇಂದ್ರಮುಖ್ಯಾನ್** ಇಂದ್ರನೇ ಮೊದಲಾದ **ದೇವಾದೀನ್** ದೇವತೆಗಳನ್ನು **ಮಾಂ** ನನ್ನನ್ನೂ **ನ ತಥೈವ ಉಪಾಸತೇ** ಯಥಾರ್ಥವಾಗಿ ಉಪಾಸಿಸುವುದಿಲ್ಲ.

ಈ ಶ್ಲೋಕದಲ್ಲಿ ಸಾತ್ವಿಕರೇ ಅಯಥಾಯಜನ ಮಾಡುವರು, ಎಂದು ಹೇಳಿದಂತೆ ಕಾಣುವುದು. ಕಾರಣ ತಾತ್ಪರ್ಯ ಹೇಳುವರು -

**ತಾತ್ಪರ್ಯ-** ತಾಮಸೇಷ್ವೇವ ರಜಃಸತ್ವತಮೋವಿಶೇಷಾಃ(ನಿಷ್ಠಾಃ) ।

ತಾಮಸೇಷು ತು ಯೇ ಸತ್ವಾ ನಿರಯಪ್ರಚುರಾಸ್ತು ತೇ ।
ಈಷತ್‌ಸ್ವರ್ಗಾದಿಸಂಯುಕ್ತಾ ಏವಂ ನಿಷ್ಠಾ ಶ್ಚ ಯೇ ಸ್ಮೃತಾಃ ।।

ಕೇವಲಂ ನಿರಯೇ ನಿಷ್ಠಾ ಯೇ ತೇ ತಾಮಸರಾಜಸಾಃ ।।
ಅಂಧೇತಮಸಿ ಯೇ ನಿಷ್ಠಾ ಸ್ತೇ ವೈ ತಾಮಸತಾಮಸಾಃ ।
ಏವಂ ವಿಭೇದಯುಕ್ತಾಸ್ತು ಯಾಜ್ಞಿಕಾ ವಿಷ್ಣುವರ್ಜಿತಾಃ । ಇತಿ ಹರಿವಂಶೇಷು

ತಾಮಸರೇ ಮೂರುವಿಧವಾದವರು. ತಾಮಸಸಾತ್ವಿಕರು, ತಾಮಸ-ರಾಜಸರು ತಾಮಸತಾಮಸರು ಹೀಗೆ ಹೇಳಿದ್ದಾರೆ. ಇವರು ತಾಮಸರಾಜಸ, ತಾಮಸಸಾತ್ವಿಕ, ತಾಮಸತಾಮಸ ಪದಾರ್ಥಗಳನ್ನು ಸೇವಿಸುವರಾಗಿ ತಾಮಸರಾಜಸ, ತಾಮಸಸಾತ್ವಿಕ, ತಾಮಸತಾಮಸ ವ್ರತಗಳಲ್ಲಿ ಆಸಕ್ತ-ರಾದವರು. ಇವರಲ್ಲಿ ತಾಮಸಸಾತ್ವಿಕವ್ರತದಲ್ಲಿ ಆಸಕ್ತರಾದವರು ಬಹಳವಾಗಿ ನರಕದಲ್ಲಿಯೂ ಸ್ವಲ್ಪ ಸ್ವರ್ಗದಲ್ಲಿಯೂ ಇರುತ್ತಾರೆ. ತಾಮಸರಾಜಸ-ವ್ರತಾಸಕ್ತರು ಕೇವಲ ನರಕದಲ್ಲಿರುವರು. ತಾಮಸತಾಮಸವ್ರತಾಸಕ್ತರು ಅಂಧಂತಮಸ್ಸಿನಲ್ಲಿರುವರು.

ಈ ಮೂರುವಿಧರಾದ ತಾಮಸರು ವಿಷ್ಣುವನ್ನು ಬಿಟ್ಟು ಯಜ್ಞ ಮಾಡುವವರು. ಕೊನೆಗೆ ಇವರೆಲ್ಲರಿಗೂ ಅಂಧಂತಮಸ್ಸೇ ಫಲ. ಆದರೂ ತಾತ್ಕಾಲಿಕ ಆ ವ್ರತನಿಷ್ಠೆಯ ಫಲವಾಗಿ ಹೇಳಿದ್ದು ಎಂದು ತಿಳಿಯಬೇಕು. ಮನುಷ್ಯಾಧಮರು ತಾಮಸಸಾತ್ವಿಕರು, ದೈತ್ಯಭೃತ್ಯರು ತಾಮಸರಾಜಸರು, ಕಲ್ಯಾದಿಗಳು ತಾಮಸತಾಮಸರು ಎಂಬ ವಿವೇಕವನ್ನು ಗೀತಾತಾತ್ಪರ್ಯಾನು-ಸಾರ ತಿಳಿಯಬೇಕು.।।೩೨।।

ಅವರ ಆಕಾಂಕ್ಷೆಯನ್ನು ತಿಳಿಸುವರು. -

**ಇಷ್ಟ್ವೇಹ ದೇವತಾ ಯಜ್ಞೈರ್ಗತ್ವಾ ರಂಸ್ಯಾಮಹೇ ದಿವಿ ।**
**ತಸ್ಯಾಂತೇ ಇಹ ಭೂಯಾಸ್ಮ ಮಹಾಶಾಲಾ ಮಹಾಕುಲಾಃ ।।೩೩।।**

**ಇಹ** ಈ ಜನ್ಮದಲ್ಲಿ **ಯಜ್ಞೈಃ** ಯಾಗಗಳಿಂದ **ದೇವತಾಃ** ದೇವತೆಗಳನ್ನು **ಇಷ್ಟ್ವಾ** ಪೂಜಿಸಿ **ದಿವಿ ಗತ್ವಾ** ಸ್ವರ್ಗದಲ್ಲಿ ಹೋಗಿ **ರಂಸ್ಯಾಮಹೇ** ಕ್ರೀಡಿಸಲು ಇಚ್ಛಿಸುವೆವು. **ತಸ್ಯ ಅಂತೇ** ಸ್ವರ್ಗದಲ್ಲಿ ಸುಖ ಅನುಭವಿಸಿದ ನಂತರ **ಮಹಾಶಾಲಾಃ** ಪ್ರತಿ ವರುಷ ಯಜ್ಞ ಮಾಡುವವರು **ಮಹಾಕುಲಾಃ** ಒಳ್ಳೇ ಕುಲೀನರು ಆಗಿ **ಇಹ** ಭೂಮಿಯಲ್ಲಿ **ಭೂಯಾಸ್ಮ** ಜನಿಸುವೆವು ಎಂದು ಆಶಿಸುವರು.

''ಪ್ರತ್ಯಬ್ದಯಜ್ಞಕೃತ್ ಸಮ್ಯಙ್ಮಹಾಶಾಲಃ ಪ್ರಕೀರ್ತಿತಃ'' ಎಂದಿದೆ।।೩೩।।

**ಏವಂ ಪುಷ್ಪಿತಯಾ ವಾಚಾ ವ್ಯಾಕ್ಷಿಪ್ತಮನಸಾಂ ನೃಣಾಮ್ ।।**
**ಮಾನಿನಾಂ ಚಾತಿಸ್ತಬ್ಧಾನಾಂ ಮದ್ವಾರ್ತಾಪಿ ನ ರೋಚತೇ ।।೩೪।।**

**ಏವಂ** ಈ ರೀತಿಯಾಗಿ **ಪುಷ್ಪಿತಯಾ ವಾಚಾ** ಸ್ವರ್ಗ ಮುಂತಾದ ಹೂವಿಗೆ ಸಮಾನವಾದ ಫಲಬೋಧಕವಾಕ್ಯಗಳಿಂದ **ವ್ಯಾಕ್ಷಿಪ್ತಮನಸಾಂ** ವಿಶೇಷವಾಗಿ ವ್ಯಾಕುಲಮನಸ್ಸುಳ್ಳ **ಮಾನಿನಾಂ** ನಾವೇ ಚೆನ್ನಾಗಿ ವೇದಾರ್ಥ ಬಲ್ಲವರು, ಮಹಾತ್ಮರಿಂದ ಕೇಳುವುದೇನಿದೆ ನಮಗೆ? ಎಂಬ ಅಹಂಕಾರವುಳ್ಳವರಿಗೆ **ಅತಿಸ್ತಬ್ಧಾನಾಂ** ಅತ್ಯಂತ ಗರ್ವಿಷ್ಠರಾದವರಿಗೆ **ಮದ್ವಾರ್ತಾ ಅಪಿ ನ ರೋಚತೇ** ನನ್ನ ಸಮಾಚಾರವೇ ರುಚಿಸುವುದಿಲ್ಲ, ನನ್ನ ವಿಚಾರವಂತೂ ದೂರವೇ. ಸ್ತಬ್ಧರು, ಅಹಂಕಾರಿಗಳೂ ಆದ್ದರಿಂದ ತತ್ವಜ್ಞರಾದ ಗುರುಗಳ ಉಪದೇಶವಿಲ್ಲದೇ ಸರಿಯಾದ ಅರ್ಥ ತಿಳಿಯಲಾರರು ಎಂದು ಭಾವ.।।೩೪।।

ಸ್ವರ್ಗಾದಿಗಳನ್ನು ಪ್ರತಿಪಾದಿಸುವಂತೆ ಕಾಣುವ ವೇದಗಳು ಭಗವತ್ಪರವಾಗಿ ಮುಕ್ತಿ ಫಲವನ್ನು ಹೇಗೆ ಕೊಡುವವು ಎಂದರೆ ಹೇಳುವರು -

**ವೇದಾ ಬ್ರಹ್ಮಾತ್ಮವಿಷಯಾಸ್ತ್ರಿಕಾಂಡವಿಷಯಾ ಅಪಿ ।**
**ಪರೋಕ್ಷವಾದೋ ವೇದೋಽಯಂ ಪರೋಕ್ಷಂ ಮಮ ಚ ಪ್ರಿಯಮ್॥೩೫॥**

**ಅಪಿ** ಯದ್ಯಪಿ **ತ್ರಿಕಾಂಡವಿಷಯಾಃ ವೇದಾಃ** ಬ್ರಹ್ಮಕಾಂಡ, ದೇವತಾಕಾಂಡ, ಕರ್ಮಕಾಂಡ ಹೀಗೆ ಮೂರು ಕಾಂಡ ಭಾಗವುಳ್ಳದ್ದಾಗಿವೆ ವೇದಗಳು. ಆದರೂ **ಬ್ರಹ್ಮಾತ್ಮವಿಷಯಾಃ** ಮುಖ್ಯವಾಗಿ ಸ್ವತಃಪೂರ್ಣನಾದ ಹರಿಯ ಪ್ರತಿಪಾದಕವಾಗಿವೆ. ಆದರೆ **ಅಯಂ ವೇದಃ ಪರೋಕ್ಷವಾದಃ** ಗೂಢವಾಗಿ ಹೇಳುವುದು. **ಪರೋಕ್ಷಂ ಮಮ ಪ್ರಿಯಂ ಚ** ಗೂಢವಾಗಿ ಹೇಳುವುದು ನನಗೂ ಪ್ರಿಯವಾಗಿದೆ. ''ಪರೋಕ್ಷಪ್ರಿಯಾ ಇವ ಹಿ ದೇವಾಃ ಪ್ರತ್ಯಕ್ಷದ್ವಿಷಃ'' ಎಂದು ಶ್ರುತಿ ಇದೆ.

ಇಲ್ಲಿ ''ಬ್ರಹ್ಮಾತ್ಮ'' ಶಬ್ದವನ್ನು ಅನ್ಯಥಾಪ್ರತೀತಿ ನಿವಾರಣೆಗಾಗಿ ವ್ಯಾಖ್ಯಾನಿಸುವರು -

ಬ್ರಹ್ಮತ್ವಂ ಪೂರ್ಣತಾ ಪ್ರೋಕ್ತಾ ತದ್ ಯಸ್ಯ ಸ್ವತ ಏವ ತು ।
ಸ ಬ್ರಹ್ಮಾತ್ಮಾ ಸಮುದ್ದಿಷ್ಟೋ ವಾಸುದೇವಃ ಸನಾತನಃ ॥ ಇತಿ ಚ ।

ಬ್ರಹ್ಮತ್ವ ಎಂದರೆ ಪೂರ್ಣತೆಯು. ಅದು ಯಾರಿಗೆ ಮುಖ್ಯವಾಗಿದೆಯೋ ಅವನು ಬ್ರಹ್ಮಾತ್ಮಾ ಎನಿಸುವನು. ಅಂತಹ ಪೂರ್ಣನಾದವನು ವೇದ-ಪ್ರತಿಪಾದ್ಯನಾದ ವಾಸುದೇವನೇ ಎಂದು ಹೇಳಿದೆ.॥೩೫॥

ಸಮಗ್ರ ವೇದಗಳು ಅಪರಿಚ್ಛಿನ್ನವಾದ್ದರಿಂದ ಅವುಗಳ ಸ್ವರೂಪವೇ ಎಲ್ಲರಿಂದ ತಿಳಿಯಲು ಅಸಾಧ್ಯ. ಅಂದಮೇಲೆ ಅನಂತವೇದವಾಚ್ಯನಾದ ಅತಿಪರಿಪೂರ್ಣನಾದ ಭಗವಂತನು ತಿಳಿಯಲಾರನೆಂದು ಹೇಳುವದೇನು? ಎಂದು ಇಲ್ಲಿ ತಿಳಿಸುವರು-

**ಶಬ್ದಬ್ರಹ್ಮ ಸುದುರ್ಬೋಧಂ ಪ್ರಾಣೇಂದ್ರಿಯಮನೋಮಯಮ್ ।**
**ಅನಂತಪಾರಂ ಗಂಭೀರಂ ದುರ್ವಿಗಾಹ್ಯಂ ಸಮುದ್ರವತ್ ॥೩೬॥**

**ಪ್ರಾಣೇಂದ್ರಿಯಮನೋಮಯಂ** ಮುಖ್ಯಪ್ರಾಣಾದಿದೇವತೆಗಳಿಂದ ತಿಳಿಯಲ್ಪಡುವ **ಅನಂತಪಾರಂ** ವಿನಾಶ, ಮತ್ತು ಪರಿಮಿತಿಗಳಿಲ್ಲದ

**ಸುದುರ್ಬೋಧಂ** ಸುಲಭವಾಗಿ ಸತ್ಸಂಪ್ರದಾಯ, ಹಾಗೂ ಗುರೂಪದೇಶ-ವಿಲ್ಲದೇ ತಿಳಿಯಲಿಕ್ಕಾಗದ **ಶಬ್ದಬ್ರಹ್ಮ** ವೇದರಾಶಿಯು **ಸಮುದ್ರವತ್** ಸಮುದ್ರದಂತೆ **ಗಂಭೀರಂ** ಗಹನಾರ್ಥವು. **ದುರ್ವಿಗಾಹ್ಯಂ** ದಾಟಲಶಕ್ಯವು.

ವೇದವು ಸುದುರ್ಬೋಧ ಮುಂತಾಗಿ ಹೇಳಿದ್ದರಿಂದ ನಿರಧಿಕಾರಿಕ-ವಾದ್ದರಿಂದ ಹೇಯ, ಎಂಬ ಶಂಕೆಗೆ ''ಪ್ರಾಣೇಂದ್ರಿಯಮನೋಮಯಂ'' ಎಂದು ಉತ್ತರಿಸಿರುವರು. ಅದು ಉತ್ತರ ಹೇಗಾಯಿತು? ಮತ್ತು ಪ್ರಾಣಾತ್ಮಕತ್ವ ವೇದಕ್ಕಿಲ್ಲವಲ್ಲ ಎಂಬ ಶಂಕೆಗೆ ಉತ್ತರಿಸುವರು-

**ತಾತ್ಪರ್ಯ- ಪ್ರಾಣೇಂದ್ರಿಯಮನೋಭಿರ್ಮೀಯತೇ ।**
**ಮೇಯತ್ವಾನ್ಮಯ ಉದ್ದಿಷ್ಟೋ ವೇದಃ ಪ್ರಾಣಾದಿಭಿಃ ಸದಾ ॥ಇತಿ ವಾರಾಹೇ**

**ಅಂತೋ ವಿನಾಶ ಉದ್ದಿಷ್ಟಃ ಪಾರಃ ಪರಿಮಿತಿಸ್ತಥಾ ॥**
**ಅನಂತಪಾರೋ ವೇದೋಽಯಂ ತಾಭ್ಯಾಂ ಸ ರಹಿತೋ ಯತಃ ।**
**-ಇತಿ ವ್ಯಾಸಸ್ಮೃತೌ ।**

ಮುಖ್ಯಪ್ರಾಣಾದಿದೇವತೆಗಳಿಂದ ತಿಳಿಯಲ್ಪಡುತ್ತದೆ. ಮುಖ್ಯ ಪ್ರಾಣಾದಿ ದೇವತೆಗಳಿಂದ ಸರ್ವದಾ ತಿಳಿಯಲ್ಪಡುವುದರಿಂದ ವೇದವು ಪ್ರಾಣೇಂದ್ರಿಯ ಮನೋಮಯ ಎನಿಸಿಕೊಳ್ಳುತ್ತದೆ. ಎಂದು ವರಾಹ ಪುರಾಣದಲ್ಲಿದೆ.

ಅಂತ ಎಂದರೆ ವಿನಾಶವು. ಪಾರ ಎಂದರೆ ಪರಿಮಿತಿಯು. ಅವುಗಳಿಲ್ಲ-ದಿರುವದರಿಂದ ವೇದವು ಅನಂತಪಾರ ಎನಿಸಿಕೊಳ್ಳುತ್ತದೆ, ಎಂದು ವ್ಯಾಸಸ್ಮೃತಿಯಲ್ಲಿ ಹೇಳಿದೆ.॥೩೬॥

ವೇದಕ್ಕೆ ತೋರುವ ಅರ್ಥವಲ್ಲವಾದರೆ ಅರ್ಥವೇ ಇಲ್ಲವೇ? ಎಂದರೆ ಹೇಳುವರು-

**ಮಯೋಪಬೃಂಹಿತಂ ಭೂಮ್ನಾ ಬ್ರಹ್ಮಣಾಽನಂತಶಕ್ತಿನಾ ।**
**ಭೂತೇಷು ಘೋಷರೂಪೇಣ ಬಿಸೇಷೂರ್ಣೇವ ಲಕ್ಷ್ಯತೇ ॥೩೭॥**

**ಭೂಮ್ನಾ ಬ್ರಹ್ಮಣಾ** ಅತಿಮಹಾಪರಿಪೂರ್ಣನಾದ, **ಅನಂತಶಕ್ತಿನಾ** ಅಪರಿಮಿತ ಶಕ್ತಿಯುಳ್ಳ **ಮಯಾ ಉಪಬೃಂಹಿತಂ** ನನ್ನನ್ನು ಪ್ರತಿಪಾದಿಸುವುದ-ರಿಂದ ಅರ್ಥಪೂರ್ಣವಾದ **ಬಿಸೇಷು** ಕಮಲದ ದೇಟಿನಲ್ಲಿ **ಊರ್ಣಾ ಇವ** ಅತಿಸೂಕ್ಷ್ಮ ಎಸಳುಗಳಂತೆ **ಭೂತೇಷು** ಅಧ್ಯಾಪಕರಲ್ಲಿ **ಘೋಷರೂಪೇಣ**

ಧ್ವನಿರೂಪವಾಗಿ **ಲಕ್ಷ್ಯತೇ** ವ್ಯಕ್ತವಾಗುವುದು. ಎಲ್ಲ ಅಧ್ಯಾಪಕರು ವೇದಗಳ ಅಷ್ಟಕವನ್ನು ಓದಿ ಮುಗಿಸುವುದರಿಂದ ಅಪಾರವೆಂಬುವುದು ಸರಿಯಲ್ಲ? ಎಂಬ ಶಂಕೆಗೆ ಉತ್ತರ- ನಿಜ! ಎಲ್ಲರೂ ವೇದಾಧ್ಯಯನ ಮಾಡುವರು, ಆದರೆ ಅದು ಏಕದೇಶ ಮಾತ್ರ. ಕಾರಣ ವೇದವೂ ಅನಂತವೇ. ಇವರು ತಿಳಿಯುವುದು ಸ್ವಲ್ಪವೆಂದ ಮಾತ್ರಕ್ಕೆ ವೇದವೇ ಸ್ವಲ್ಪವೆಂದು ತಿಳಿಯಬಾರದು. ಅನಂತವೇ ಎಂದು ತಿಳಿಯಬೇಕು.।।೩೭।।

**ಯಥೋರ್ಣನಾಭಿರ್ಹೃದಯಾದೂರ್ಣಾಮುದ್ವಮತೇ ಮುಖಾತ್ ।**
**ಆಕಾಶಾದ್ ಘೋಷವಾನ್ ಪ್ರಾಣೋ ಮನಸಾಽಽಸ್ಪರ್ಶರೂಪಿಣಾ।।೩೮।।**

**ಯಥಾ** ಹೇಗೆ **ಉರ್ಣನಾಭಿಃ** ಜೇಡರ ಹುಳವು **ಹೃದಯಾತ್** ಹೃದಯದಿಂದ ಪ್ರಾರಂಭಿಸಿ **ಉರ್ಣಾಂ** ದಾರವನ್ನು **ಉದ್ಧೃತ್ಯ** ತೆಗೆದು **ಮುಖಾತ್** ಮುಖದಿಂದ **ಉದ್ವಮತೇ** ಹೊರಗೆಡಹುವುದೋ **ತಥಾ** ಹಾಗೆ **ವಾಯುಃ** ಕೋಷ್ಠವಾಯುವು ಆ ಸ್ಥಾನಗಳನ್ನು ಬಡಿದು **ಆಕಾಶಾತ್** ಆಕಾಶದಿಂದ ಉಂಟಾದ ಅಥವಾ ಲಕ್ಷ್ಮೀ ಸಹಾಯದಿಂದ **ಘೋಷವಾನ್** ಶಬ್ದವುಳ್ಳದ್ದು. ವ್ಯಂಜಕವಾದ ವಿವಿಧ ಧ್ವನಿಗಳಿಂದ ಕೂಡಿದ **ಪ್ರಾಣಃ** ಪ್ರಾಣವು **ಆಸ್ಪರ್ಶರೂಪಿಣಾ** ಸಮಸ್ತ ಭೋಗಗಳುಳ್ಳ ಶ್ರೀಹರಿಯನ್ನು ಪ್ರಕಾಶಿಸುವ **ಪ್ರಾಣಸ್ಯ ಮನಸಃ** ಪ್ರಾಣದೇವರ ಮನಸ್ಸಿನಿಂದ, (೪೦ನೇ ಶ್ಲೋಕದಲ್ಲಿಯ) 'ಸೃಜತಿ' ಸೃಷ್ಟಿಸುತ್ತಾನೆ ಎಂಬುದರಿಂದ ಅನ್ವಯ.

ಈ ಶ್ಲೋಕದಲ್ಲಿ ಮನಸಾ ಸ್ಪರ್ಶರೂಪಿಣಾ ಎಂದು ಪದವಿಭಾಗವು ಪ್ರತೀತವಾಗುತ್ತದೆ. ಅದು ಸರಿಯಲ್ಲ. ಹಾಗಾದರೇ ಪದವಿಭಾಗ ಏನು? ಅರ್ಥವೇನು ಎಂಬುದನ್ನು ತಿಳಿಸುತ್ತಿದ್ದಾರೆ.

**ತಾತ್ಪರ್ಯ-** ಆಸ್ಪರ್ಶರೂಪಿಣಾ, ಆಸ್ಪರ್ಶೋ ವಿಷ್ಣುಃ ತಂ ರೂಪಯತಿ ಪ್ರಕಾಶಯತಿ ಇತಿ ಆಸ್ಪರ್ಶರೂಪಿ ಪ್ರಾಣಸ್ಯ ಮನಃ । ಆ ಸಮಂತಾತ್ ಸ್ಪರ್ಶಾಃ ಭೋಗಾಃ ಅಸ್ಯೈವ ಇತ್ಯಾಸ್ಪರ್ಶಃ ।

ಭುಂಕ್ತೇ ಯದಖಿಲಾನ್ ಸ್ಪರ್ಶಾನ್ ಆಸ್ಪರ್ಶೋ ವಿಷ್ಣುರುಚ್ಯತೇ ।
ತಸ್ಯ ಪ್ರಕಾಶಕಂ ನಿತ್ಯಂ ನಮಸ್ಯೇ ಪ್ರಾಣನಾಯಕಮ್ ।
ಪ್ರಾಣಸ್ಯೈವ ಮನೋ ನಿತ್ಯಂ ವಾಸುದೇವಂ ಪ್ರಕಾಶಯೇತ್ ।।
-ಇತಿ ವಾಯುಪ್ರೋಕ್ತೇ ।

ಎಲ್ಲರಿಗಿಂತ ಚೆನ್ನಾಗಿ ಎಲ್ಲ ಭೋಗಗಳು ವಿಷ್ಣುವಿಗೆ ಇರುವುದರಿಂದ ಆಸ್ಪರ್ಶ ಎಂದರೆ ವಿಷ್ಣುವು. ಆ ವಿಷ್ಣುವನ್ನು ಧ್ಯಾನಿಸುವುದರಿಂದ ಮುಖ್ಯ-ಪ್ರಾಣನ ಮನಸ್ಸು ಆಸ್ಪರ್ಶರೂಪಿ ಎಂದು ತಿಳಿಯಬೇಕು.

ಸಮಸ್ತ ವಿಷಯಗಳನ್ನು ಭೋಗಿಸುವುದರಿಂದ ಆಸ್ಪರ್ಶನು ವಿಷ್ಣುವು. ಆ ವಿಷ್ಣುವನ್ನು ನಿತ್ಯದಲ್ಲಿ ಪ್ರಕಾಶಗೊಳಿಸುವ ಮುಖ್ಯಪ್ರಾಣನನ್ನು ನಮಸ್ಕರಿಸುವೆನು. ಮುಖ್ಯಪ್ರಾಣನ ಮನಸ್ಸೇ ಯಾವಾಗಲೂ ವಾಸುದೇವನನ್ನು ಪ್ರಕಾಶಿಸುವುದು ಎಂದು ವಾಯುಪ್ರೋಕ್ತದಲ್ಲಿದೆ.॥೩೮॥

**ಛಂದೋಮಯೋಽಮೃತಮಯಃ ಸಹಸ್ರಪದವೀಂ ಪ್ರಭುಃ ।**
**ಓಂಕಾರೇಷ್ವಂಜಿತಾಂ ಸ್ಪರ್ಶಸ್ವರೋಷ್ಮಾಂತಸ್ಥಭೂಷಿತಾಮ್ ॥೩೯॥**

**ಛಂದೋಮಯಃ** ಛಂದಸ್ಸುಗಳನ್ನು ತಿಳಿದಿರುವ **ಅಮೃತಮಯಃ** ಶ್ರೀಹರಿಯ ಅನುಗ್ರಹ ಮತ್ತು ಆಜ್ಞೆಯಿಂದ ಮೋಕ್ಷಪ್ರದನೂ ಮುಕ್ತಾಶ್ರಯನೂ ಆದ ಪ್ರಲಯಕಾಲದಲ್ಲಿಯೂ ತಿರೋಹಿತವಾಗದ ಜ್ಞಾನ ಉಳ್ಳವನೂ ಆದ **ಪ್ರಭುಃ** ಸಮರ್ಥರಾದ ಪ್ರಾಣದೇವರು **ಸಹಸ್ರಪದವೀಂ** ಅನಂತಶಾಖೆಗಳುಳ್ಳ **ಓಂಕಾರೇಷ್ವಂಜಿತಾಂ** ತ್ರಿಮಾತ್ರ ಮೊದಲು ಮಾಡಿ ಅನಂತ ಮಾತ್ರಾಗಳುಳ್ಳ ಓಂಕಾರದಲ್ಲಿ ಸ್ಪಷ್ಟವಾಗಿ ವ್ಯಕ್ತವಾದ **ಸ್ಪರ್ಶಾಃ** ಕಕಾರದಿಂದ ಪ್ರಾರಂಭಮಾಡಿ ಮಕಾರದವರೆಗಿನ ವರ್ಗೀಯವ್ಯಂಜನಗಳು **ಸ್ವರಾಃ** ಅಚ್‌ಗಳು ಅಕಾರದಿಂದ ಅಃ ವರೆಗೆ, **ಊಷ್ಮಾಣಃ** ಶ,ಷ,ಸ,ಹ,ಗಳು **ಅಂತಸ್ಥಾಃ** ಯ,ರ,ಲ,ವ,ಗಳು ಈ ಎಲ್ಲ ವರ್ಣಗಳಿಂದ **ಭೂಷಿತಾಂ** ಯುಕ್ತವಾದ, ಶ್ರುತಿಯನ್ನು ಸೃಜಿಸುವರು ಎಂದು ಅನ್ವಯ.

ಮೇಲಿನ ಶ್ಲೋಕದಲ್ಲಿ ''ಛಂಧೋಮಯ'' ಎಂದು ಪ್ರಾಣದೇವರಿಗೆ ವಿಶೇಷಣವಿತ್ತಿರುವರು. ಅದರಿಂದ ಛಂದಸ್ಸಿನಿಂದ ಅಭೇದ, ಛಂದೋವಿಕಾರ ಎಂದಾಗಲೀ, ಸರ್ವವೇದಪ್ರತಿಪಾದ್ಯರೆಂದಾಗಲಿ ಅರ್ಥ ತೋರುವುದು. ಕಾರಣ ಪ್ರಮಾಣದಿಂದಲೇ ಛಂದೋಮಯಶಬ್ದಾರ್ಥ ಹೇಳುವರು-

**ತಾತ್ಪರ್ಯ-ಮೀಯಂತೇಽನೇನ ಛಂದಾಸಿ ಪ್ರಾಣಶ್ಛಂದೋಮಯಸ್ತತಃ ॥ ಇತಿ ಚ ।**

''ಛಂದೋಮಯಃ'' ಎಂಬುದು ಪ್ರಾಣನಿಗೆ ವಿಶೇಷಣವಾದಾಗ ಮಯ ಎಂಬುದು ಪ್ರಾಚುರ್ಯಾರ್ಥಕ, ಮಯಡ್ ರೂಪವಲ್ಲ. 'ಮಾಜ್ ಮಾನೇ'

ಎಂಬ ಧಾತುವಿನಿಂದ ನಿಷ್ಪನ್ನವಾದುದು. ಮೇಲೆ ತೋರಿಸಿದ ಕರಣವ್ಯುತ್ಪತ್ತಿ-ಯಿಂದ ಛಂದಸ್ಸನ್ನು ತಿಳಿದ ಎಂಬರ್ಥವನ್ನು ತಿಳಿಸುವುದು. ಪರಮಾತ್ಮನಿಗೆ ವಿಶೇಷಣವಾದಾಗ ಮಯಡ್ ರೂಪವು. ಆಗ ಪ್ರಾಚುರ್ಯಾರ್ಥಕವಾದ ಮಯಟ್‌ಪ್ರತ್ಯಯವು ಅನಂತವೇದಪ್ರತಿಪಾದ್ಯತ್ವವನ್ನು ಹೇಳುವದು ಎಂದು ತಿಳಿಯಬೇಕು. ಇವನಿಂದ ವೇದಗಳು ತಿಳಿಯಲ್ಪಡುವುದರಿಂದ ಇವನು ಛಂದೋಮಯನು, ಅಂದರೆ ವೇದ ತಿಳಿದವನೆಂದರ್ಥ.

'ಓಂಕಾರೇಷ್ವಂಜಿತಾಂ' ಎಂಬಲ್ಲಿ ಓಂಕಾರಕ್ಕೆ ಬಹುತ್ವ ಹೇಳಿದುದು ಹೇಗೆ? ವೇದಾರಂಭದಲ್ಲಿ ಒಂದೇ ಓಂಕಾರ ಉಚ್ಚರಿಸಿರುವರಲ್ಲ? ಮತ್ತು ಸಕಲ ವೇದವೂ ಓಂಕಾರದಿಂದ ವ್ಯಕ್ತ ಹೇಗೆ? ಎಂಬುದನ್ನು ಪ್ರಮಾಣದಿಂದ ತಿಳಿಸುವರು -

**ತಾತ್ಪರ್ಯ-** ತ್ರಿಮಾತ್ರಮಾದಿತಃ ಕೃತ್ವಾ ಯಾವಚ್ಚಾನಂತಮಾತ್ರಕಾಃ ।
ಪ್ರಣವಾಸ್ತೇ ವಿಭೇಧೇನ ಹ್ಯನಂತಾಃ ಪರಿಕೀರ್ತಿತಾಃ ॥

ಏಕಮಾತ್ರೋತ್ತರಾಃ ಸರ್ವೇ ವಾಸುದೇವಾಭಿಧಾಯಕಾಃ ।
ತೇಷಾಂ ವ್ಯಾಖ್ಯಾನರೂಪಾ ಹಿ ಸರ್ವೇ ವೇದಾಃ ಪ್ರಕೀರ್ತಿತಾಃ ।
ಓಂಕಾರೇಣಾನ್ವಿತಾಸ್ತಸ್ಮಾತ್ ಸದೋಚ್ಚಾರ್ಯಾ ಹರೇಃ ಪ್ರಿಯೈಃ ॥
-ಇತಿ ಪ್ರಣವಮಾಹಾತ್ಮ್ಯೇ ।

**ಸುಧೀಂದ್ರತೀರ್ಥರ ಪ್ರಕಾರ -**

ಒಂದು ಹ್ರಸ್ವ ವರ್ಣದ ಕಾಲಕ್ಕೆ ಮಾತ್ರಾ ಎನ್ನುವರು. ಆ ಕಾಲದಲ್ಲಿ ಉಚ್ಚರಿಸಿದ ಹ್ರಸ್ವಕ್ಕೂ ಮಾತ್ರಾ ಎನ್ನುವರು.

''ಏಕಮಾತ್ರೋ ಭವೇದ್ ಹ್ರಸ್ವೋ ದ್ವಿಮಾತ್ರೋ ದೀರ್ಘ ಉಚ್ಯತೇ ।
ತ್ರಿಮಾತ್ರಸ್ತು ಪ್ಲುತೋ ಜ್ಞೇಯೋ ವ್ಯಂಜನಂ ತ್ವರ್ಧಮಾತ್ರಕಮ್ ॥''

ಎಂದು ವೈಯಾಕರಣರ ವಚನವಿರುವುದರಿಂದ ಪ್ಲುತವು ತ್ರಿಮಾತ್ರವು. ''ಪ್ಲುತಂ ಪ್ರಣವಮುಚ್ಚಾರ್ಯ ಕರಾಭ್ಯಾಂ ಪಾದಯೋಃ ಸ್ಪೃಶೇತ್'' ಎಂದು ದೇವತಾಪ್ರತಿಷ್ಠಾವಿಧಾನದಲ್ಲಿ ಪ್ರಣವಕ್ಕೆ ಪ್ಲುತೋಚ್ಚಾರಣವು ಪ್ರಸಕ್ತವಾಗಿದೆ.

ಈ ರೀತಿಯಾಗಿ ವೇದಾರಂಭದಲ್ಲಿ ಪ್ಲುತವಾಗಿ ಉಚ್ಚಾರಿಸಿ ಯಾವ ಕಾರಣ ಅನಂತಹ್ರಸ್ವೋಪೇತ ವೇದವು ಉಚ್ಚರಿಸಲ್ಪಡುವುದೋ ಆ ಕಾರಣದಿಂದ ಅನಂತ ವೇದಗಳು ಅವಯವರೂಪವಾಗಿ ಪ್ರಣವ ಎನ್ನಿಸಿಕೊಳ್ಳುವವು.

'ಸ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ' ಎಂಬ ಶ್ರುತಿಯಿಂದ ಆದ್ಯಂತಗಳಲ್ಲಿ ಓಂಕಾರದ ಉಚ್ಚಾರಣವು ಪ್ರಸಕ್ತವಾಗಿದೆ. ಅದನ್ನು ಅಧ್ಯಯನದ ಪ್ರಾರಂಭ ವಿರಾಮಗಳ ಬದಲಾವಣೆಯ ಪ್ರಕಾರ ಅಲ್ಲಲ್ಲಿ ಉಚ್ಚಾರ ಮಾಡುವ ಓಂಕಾರಕ್ಕೆ ವಾಕ್ಯಾವಯವತ್ವವನ್ನೂ ಶ್ರೀಮನ್ನ್ಯಾಯ-ಸುಧೆಯಲ್ಲಿ ಹೇಳಿರುವರು. ಅವಯವ ಎಂದರೆ ಏಕಕಾರ್ಯಕಾರಿತ್ವವು. ಅದು ಪ್ರಥಮಸೂತ್ರದಲ್ಲಿ ದೃಷ್ಟ ಅದೃಷ್ಟ ಎರಡೂ ಇದೆ. ಬೇರೆಡೆಯಲ್ಲಿ ಅದೃಷ್ಟಮಾತ್ರ ಎಂದು ಚಂದ್ರಿಕೆಯಲ್ಲಿ ಹೇಳಿದೆ. ಈ ರೀತಿ ಅದೃಷ್ಟಾಪೇಕ್ಷಯಾ ತದೇಕಕಾರ್ಯಕಾರಿತ್ವರೂಪ ಅವಯವತ್ವವಿದೆ ಎಂಬ ಅಭಿಪ್ರಾಯದಿಂದ ಪ್ರಣವಾವಯವವಾದ್ದರಿಂದ ವೇದಗಳು ಪ್ರಣವ ಎಂದಿದ್ದಾರೆ.

ಮತ್ತೊಂದು ರೀತಿಯಲ್ಲಿ ಪ್ರಣವಾವಯವತ್ವ ಹೇಳುವರು, 'ಏಕಮಾತ್ರೋತ್ತರಾಃ' ಎಂದು. ಪ್ರಣವದಲ್ಲಿ ಅಕಾರ, ಉಕಾರ, ಮಕಾರ ಹೀಗೆ ಮೂರು ವರ್ಣಗಳು. ಅದರಲ್ಲಿ ಅಕಾರವು ಪ್ರಥಮಮಾತ್ರೆಯು. ವಾಸುದೇವಾಭಿಧಾಯಕಗಳಾದ ಎಲ್ಲ ವೇದಗಳು 'ಏಕಮಾತ್ರೋತ್ತರಾಃ' ಎಂದರೆ ಅಕಾರವು 'ಉತ್ತರಃ' ಸರ್ವಾಧಿಕವು ಯಾವುಗಳಿಗೆ ಇದೆಯೋ ಅವು ಏಕಮಾತ್ರಾ ಎಂದರ್ಥ. 'ಅಕಾರೋ ವೈ ಸರ್ವಾ ವಾಕ್' ಎಂದು ಶ್ರುತಿ ಇದೆ. ಆದ್ದರಿಂದ ಪ್ರಣವಾವಯವ ಎನ್ನುವರು. ಅಂದರೆ ಪ್ರಣವದ ಏಕದೇಶವಾದ ಅಕಾರದ ವ್ಯಾಖ್ಯಾನವೇ ವೇದವಾದ್ದರಿಂದ ಆ ವೇದಗಳಿಗೆ ಪ್ರಣವಾವಯವತ್ವವು ಎಂದು ಭಾವ.

'ಬ್ರಹ್ಮ' ಎಂಬ ಶ್ರುತಿಯಿರುವುದರಿಂದ ಬ್ರಹ್ಮಪ್ರತಿಪಾದಕವಾದ್ದರಿಂದ ಎಂದು ಹೇಳಬೇಕಾದಲ್ಲಿ ಪದ್ಮಪುರಾಣ ಉತ್ತರಕಾಂಡದ ಇಪ್ಪತ್ತೆರಡನೇ ಅಧ್ಯಾಯದಲ್ಲಿಮಂತ್ರರತ್ನವ್ಯಾಖ್ಯಾನಮಾಡುವಾಗ, 'ವಾಸುದೇವಸ್ವರೂಪಂ ತದಕಾರೇಣೋಚ್ಯತೇ ಬುಧೈಃ' ಎಂದು ಹೇಳಿರುವುದರಿಂದ 'ವಾಸುದೇವಾಭಿಧಾಯಕಾಃ' ಎಂದಿರುವರು.

ಮತ್ತೊಂದು ರೀತಿಯಿಂದ ಪ್ರಣವಾವಯವತ್ವ ಹೇಳುವರು, 'ತೇಷಾಂ ವ್ಯಾಖ್ಯಾನರೂಪಾಃ' ಎಂದು. ಸುಮಧ್ವವಿಜಯದ ಹದಿನಾಲ್ಕನೇ ಸರ್ಗದಲ್ಲಿ

ತ್ರಿಭುವನವರತೇಜೋವ್ಯಕ್ತವೇದಾರ್ಥಶುಕ್ಲ-
ತ್ರಿತಯರಸತಯಾ ಯೇ ವರ್ಣಿತಾ ವರ್ಣವರ್ಯಾಃ।
ಪೃಥುಮತಿರಥ ತೇಷಾಮೈಕ್ಯಮಾಪಾದ್ಯ ಸಮ್ಯಕ್
ಪ್ರವಚನಪರಿಶುದ್ಧ್ಯೈ ಸ್ಮ ಪ್ರಣೌತಿ ಪ್ರವೀಣಃ॥

ಇದರ ವ್ಯಾಖ್ಯಾನದಲ್ಲಿ ''ಸ ಇಮಾನ್ ಲೋಕಾನಸೃಜತ್ ಪೃಥವೀ-ಮಂತರಿಕ್ಷಂ ದಿವಂ ತಾನ್ ಲೋಕಾನತಪತ್ ತೇಭ್ಯೋಽಭಿತಪ್ತೇಭ್ಯೋ ತ್ರೀಣೀ ಜ್ಯೋತಿಂಷಿ ಅಜಾಯಂತ ಅಗ್ನಿರೇವ ಪೃಥಿವ್ಯಾ ಅಜಾಯತ ವಾಯುರಂತರಿಕ್ಷಾತ್ ಆದಿತ್ಯೋ ದಿವಃ ತಾನಿ ಜ್ಯೋತಿಂಷಿ ಅಭ್ಯತಪತ್ ತೇಭ್ಯೋಽಭಿತಪ್ತೇಭ್ಯೋ ತ್ರಯೋ ವೇದಾ ಅಜಾಯಂತ ಋಗ್ವೇದ ಏವ ಅಗ್ನೇರಜಾಯತ ಯಜುರ್ವೇದೋ ವಾಯೋಃ ಸಾಮವೇದ ಆದಿತ್ಯಾತ್ ತಾನ್ ವೇದಾನಭ್ಯತಪತ್ ತೇಭ್ಯೋ ಅಭಿತಪ್ತೇಭ್ಯೋ ತ್ರೀಣಿ ಶುಕ್ಲಾನ್ಯಜಾಯಂತ ಭೂರಿತ್ಯೇವ ಋಗ್ವೇದಾದಜಾಯತ ಭುವ ಇತಿ ಯಜುರ್ವೇದಾತ್ ಸ್ವರಿತಿ ಸಾಮವೇದಾತ್ ತಾನಿ ಶುಕ್ಲಾನ್ಯಭ್ಯತಪತ್ ತೇಭ್ಯೋ ಅಭಿತಪ್ತೇಭ್ಯೋ ತ್ರಯೋ ವರ್ಣಾ ಅಜಾಯಂತ ಅಕಾರ ಉಕಾರೋ ಮಕಾರ ಇತಿ ತಾನೇಕಧಾ ಸಮಭವತ್ ತದೇತದೋಮ್'' ಎಂದು ಶ್ರುತಿ ಇರುವುದರಿಂದಲೂ ''ಪ್ರಣವಾರ್ಥಾ ವ್ಯಾಹೃತಯಃ ವಾಹೃತ್ಯರ್ಥಾ ಋಗಾದಯಃ'' ಎಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದರಿಂದಲೂ ಎಲ್ಲ ವೇದಗಳು ಪ್ರಣವಾವಯವವಾದ ಅ ಕಾರದ ವ್ಯಾಖ್ಯಾನರೂಪವಾಗಿವೆ. ಆದ್ದರಿಂದ ವೇದಗಳು ಪ್ರಣವವೆನಿಸುವವು. ಪ್ರಣವ ವ್ಯಾಖ್ಯಾನರೂಪವಾದ್ದರಿಂದ ಪ್ರಣವತ್ವ ಹೇಳಿದಂತಾಯಿತು. ಆದ್ದರಿಂದ ಓಂಕಾರಸಂಬಂಧವಾಗಿಯೇ ಶ್ರೀಹರಿಪ್ರಿಯರು ಉಚ್ಚರಿಸಬೇಕು ಎಂದರ್ಥ.

ಅಕಾರ, ಉಕಾರ, ಮಕಾರ, ಎಂಬ ಮೂರು ಮಾತ್ರೆಗಳಿಂದ ಕೂಡಿದ ಒಂದು ಪ್ರಣವವನ್ನು ಆರಂಭಿಸಿ ಆ ಒಂದು ಓಂಕಾರದ ವ್ಯಾಖ್ಯಾನ ರೂಪವಾಗಿ ಸಕಲ ವೇದಗಳು ಇರುವವು. ಕಾರಣ ವೇದಗತ ಸಕಲ ಪದಗಳೂ

ಓಂಕಾರಗಳೆನಿಸುತ್ತವೆ. ಆದ ಕಾರಣ ವೇದಗತ ಪದಗಳು ಅನಂತಗಳಾದ ಪ್ರಯುಕ್ತ ಓಂಕಾರವೂ ಅನಂತವೆನಿಸುತ್ತದೆ. ಹೀಗೆ ಅನಂತ ಮಾತ್ರೆಗಳುಳ್ಳ ಆ ಪ್ರಣವಗಳು ವಿಭೇದಗಳಿಂದ ಅನಂತಗಳಿವೆ. ಮೂರು ಮಾತ್ರೆಗಳುಳ್ಳ ಪ್ರಥಮ ಓಂಕಾರಾಪೇಕ್ಷಯಾ ದ್ವಿತೀಯಾದಿ ಓಂಕಾರಗಳು ಒಂದೊಂದು ವರ್ಣ ಜಾಸ್ತಿ ಇರತಕ್ಕವು. ಪ್ರಥಮ ಓಂಕಾರವು ೩ ಮಾತ್ರೆ ಉಳ್ಳದ್ದು. ೨ನೇಯದು ನಾಲ್ಕು ಮಾತ್ರೆ ಉಳ್ಳದ್ದು ಮುಂತಾಗಿ ಅನಂತಮಾತ್ರೆ ಉಳ್ಳದ್ದು. ಹೀಗೆ ಅನಂತ ಪ್ರಣವಗಳು. ಅವುಗಳೆಲ್ಲ ಶ್ರೀಹರಿಯನ್ನು ಪ್ರತಿಪಾದಿಸುತ್ತವೆ. ಸಮಸ್ತ ವೇದಗಳು ಅನಂತಪ್ರಣವಗಳಿಗೆ ವ್ಯಾಖ್ಯಾನರೂಪಗಳು ಓಂಕಾರದಿಂದ ಅಭಿವ್ಯಕ್ತಗಳು. ಆದಕಾರಣ ಭಗವದ್ಭಕ್ತರು ಸದಾ ಅಧ್ಯಯನ ಮಾಡುತ್ತಿರಬೇಕು. ಎಂದು ಪ್ರಣವಮಾಹಾತ್ಮ್ಯದಲ್ಲಿ ಹೇಳಿದೆ.॥೩೯॥

**ವಿಚಿತ್ರಭಾಷಾವಿತತಾಂ ಛಂದೋಭಿಶ್ಚತುರುತ್ತರೈಃ ।**
**ಅನಂತಪಾರಾಂ ಬೃಹತೀಂ ಸೃಜತ್ಯಾಕ್ಷಿಪತೇ ಸ್ವಯಮ್ ॥೪೦॥**

**ವಿಚಿತ್ರಭಾಷಾವಿತತಾಂ** ಗುಹ್ಯ, ದರ್ಶನ, ಸಮಾಧಿ ಮುಂತಾದ ನಾನಾ ರೀತಿಯಾದ ಎಂಭತ್ತೊಂದು ಭಾಷೆಗಳಿಂದ ವಿಶೇಷವಾಗಿ ಕೂಡಿದ **ಚತುರುತ್ತರೈಃ** ಮೊದಲಿನ ಛಂದಸ್ಸಿಗಿಂತ ಮುಂದಿನ ಛಂದಸ್ಸು ನಾಲ್ಕು ಅಕ್ಷರದಿಂದ ಹೆಚ್ಚಾದ **ಛಂದೋಭಿಃ** ಛಂದಸ್ಸುಗಳಿಂದ ಸಹಿತವಾದ **ಅನಂತಪಾರಾಂ** ವಿನಾಶ, ಪರಿಮಿತಿ ರಹಿತವಾದ **ಬೃಹತೀಂ** ದೇಶಕಾಲಗಳಿಂದ ವ್ಯಾಪ್ತವಾದ ಶ್ರುತಿಯನ್ನು **ಸೃಜತಿ** ರುದ್ರಾದಿಗಳಿಗೆ ಉಪದೇಶಿಸುವನು. ಸೃಷ್ಟಿಕಾಲದಲ್ಲಿ ಕಲ್ಪಾಂತದಲ್ಲಿ **ಸ್ವಯಂ ಕ್ಷಿಪತೇ** ತನ್ನಲ್ಲಿ ಇಟ್ಟುಕೊಳ್ಳುವನು.

ಮೇಲಿನ ಶ್ಲೋಕದಲ್ಲಿ ವಿಚಿತ್ರಭಾಷಾ ಎಂದರೆ ಲೌಕಿಕವಾದ ತೆಲುಗು, ತಮಿಳು, ಮರಾಠಿ ಮುಂತಾಗಿ ಅರ್ಥವಾಗಬಾರದೆಂದು ವ್ಯಾಖ್ಯಾನಿಸುವರು-

**ತಾತ್ಪರ್ಯ- ಗುಹ್ಯದರ್ಶನಭಾಷೇ ಚ ಭಾಷಾ ಚೈವ ಸಮಾಧಿಕಾ ।**
**ತಿಸ್ರಸ್ತು ಮೂಲಭಾಷಾಃ ಸ್ಯುರೇಕೈಕಾ ಚ ತ್ರಿಧಾ ಪುನಃ ॥**

**ಗುಹ್ಯದರ್ಶನಸಂಜ್ಞಾ ಚ ಗುಹ್ಯಗುಹ್ಯಾ ತಥಾಽಪರಾ ।**
**ಏವಮಾದಿಕ್ರಮೇಣೈವ ತ್ವೇಕಾಶೀತಿವಿಭೇದಿತಾಃ ॥**

ಭಾಷಾಸ್ತತ್ರ ಚ ಗುಹ್ಯಾ ಚ ಪ್ರಸಿದ್ಧಾರ್ಥೇಷ್ವನನ್ವಿತಾ ।
ಗುಹ್ಯಾರ್ಥತತ್ಪರೈವಾಂಧೋ ಮಣಿಮಿತ್ಯಾದಿಕಾ ಚ ಸಾ ॥

ದರ್ಶನಾನ್ಯವಲಂಬ್ಯೈವ ಪಶುಪತ್ಯಾದಿನಾಂ ತು ಯಾ ।
ಬಹುಶ್ರುತಿವಿರುದ್ಧಂ ತು ವದೇತ್ ಸಾ ದರ್ಶನಾತ್ಮಿಕಾ ॥

ಅಂತೇ ನಿಷೇಧಸಂಯುಕ್ತಾ ಭಸ್ಮಸ್ನಾನಾದಿಕಾ ಚ ಸಾ ।
ಯಥಾ ಪ್ರದೃಶ್ಯಮಾನಾರ್ಥಾ ಸಮಾಧಿಃ ಪರಿಕೀರ್ತಿತಾ ।
ವಿಷ್ಣುಃ ಪರಮ ಇತ್ಯಾದ್ಯಾ ಸಾ ಚ ವಿದ್ವದ್ಭಿರೀರಿತಾ ॥ ಇತ್ಯಾದಿ ಭಾಷಾವಿವೇಕೇ

ಭಸ್ಮಸ್ನಾನವಿಧಾನಂ ತು ಶ್ರುತ್ಯುಕ್ತಂ ದರ್ಶನಾನುಗಮ್ ।
ಭಸ್ಮಸ್ನಾನಂ ತತೋಽಗ್ರಾಹ್ಯಂ ವಿಧಾನಂ ತು ನೃಸಿಂಹಗಮ್ ॥ ಇತಿ ಸ್ಕಾಂದೇ

**ಗುಹ್ಯಭಾಷಾ, ದರ್ಶನಭಾಷಾ, ಸಮಾಧಿಭಾಷಾ,** ಹೀಗೆ ಮೂರು ಭಾಷೆಗಳು. ಇವು ಪುನಃ ಮೂರುವಿಧ-

| **ಗುಹ್ಯಭಾಷಾ** | **ದರ್ಶನಭಾಷಾ** | **ಸಮಾಧಿಭಾಷಾ** |
|---|---|---|
| ಗುಹ್ಯದರ್ಶನ | ದರ್ಶನಗುಹ್ಯ | ಸಮಾಧಿಗುಹ್ಯ |
| ಗುಹ್ಯಗುಹ್ಯ | ದರ್ಶನದರ್ಶನ | ಸಮಾಧಿಸಮಾಧಿ |
| ಗುಹ್ಯಸಮಾಧಿ | ದರ್ಶನಸಮಾಧಿ | ಸಮಾಧಿದರ್ಶನ |

ಹೀಗೆ ಇವು ಒಂಭತ್ತು. ಈ ಒಂಭತ್ತು ಭಾಷೆಗಳು ಪುನಃ ಪ್ರತಿಯೊಂದು ಮೂರು ಮೂರು ವಿಧವಾದರೆ, ಇಪ್ಪತ್ತೇಳು ಭಾಷೆಗಳಾದವು. ಆ ಇಪ್ಪತ್ತೇಳು ಪುನಃ ಪ್ರತಿಯೊಂದು ಮೂರಾದರೆ ಎಂಭತ್ತೊಂದು ವಿಧಗಳಾದವು.

ತೋರುವ ಅರ್ಥದಲ್ಲಿ ಅನ್ವಯವಿಲ್ಲದೇ ಗೌಪ್ಯವಾದ ಅರ್ಥದಲ್ಲಿ ಮಾತ್ರ ತಾತ್ಪರ್ಯವಿರುವ ಭಾಷೆಯು ಗುಹ್ಯಭಾಷೆಯೆನಿಸುತ್ತದೆ.

ಉದಾ:- 'ಅಂಧೋ ಮಣಿಮವಿಂದತ' ಎಂಬ ಶ್ರುತಿಯು ಕುರುಡನಿಗೆ ಮಣಿಯ ಪ್ರಾಪ್ತಿಯನ್ನು ಹೇಳುತ್ತಿದೆ. ಕುರುಡನಿಗೆ ಮಣಿ ನೋಡುವ ಯೋಗ್ಯತೆಯು ಇಲ್ಲದಿರುವುದರಿಂದ ತೋರುವ ಅರ್ಥವು ಇಲ್ಲಿ ಸರಿಯಲ್ಲ. ಕಿಂತು ಶ್ರೀಹರಿಯ ಜ್ಞಾನವಿಲ್ಲದಿರುವವನು ಕುರುಡನಂತಿರುವನು. ಗುರುಗಳ ಉಪದೇಶದಿಂದ ಮಣಿಯಂತೆ ಶ್ರೇಷ್ಠನಾದ ಶ್ರೀಹರಿಯ ಜ್ಞಾನವನ್ನು ಸಂಪಾದಿಸಿದನು. ಎಂಬ ಗೌಪ್ಯಾರ್ಥವು ಈ ಶ್ರುತಿಗೆ ಹೇಳಬೇಕು.

ಯಾವ ಭಾಷೆಯು ಪಾಶುಪತಾದಿಶಾಸ್ತ್ರಗಳನ್ನು ಅವಲಂಬಿಸಿ ಬಹುಶ್ರುತಿ-ವಿರುದ್ಧವಾದುದನ್ನು ಹೇಳುತ್ತದೆಯೋ ಹಾಗೆಯೇ ಕೊನೆಗೆ ನಿಷೇಧವೂ ಇದೆಯೋ ಅದು ದರ್ಶನಭಾಷೆ. ಉದಾ:- ಭಸ್ಮಸ್ನಾನ ಮುಂತಾದುದು.

ಎಲ್ಲರಿಗೂ ತಿಳಿಯುವಂತೆ ಇದ್ದುದನ್ನು ಇದ್ದ ಹಾಗೆಯೇ ಸ್ಪಷ್ಟವಾಗಿ ಹೇಳುವುದು ಸಮಾಧಿಭಾಷೆಯು. ಉದಾ:- ಶ್ರೀಹರಿಸರ್ವೋತ್ತಮನು ಮುಂತಾದವು ಎಂದು ಭಾಷಾವಿವೇಕದಲ್ಲಿ ಇದೆ.

ಭಸ್ಮಸ್ನಾನಮಾಡಬೇಕೆಂದು ಶ್ರುತಿಯಲ್ಲಿ ಹೇಳಿದ್ದರೂ ದರ್ಶನಭಾಷೆಯಿಂದ ಹೇಳಿದ್ದರಿಂದ ಗ್ರಾಹ್ಯವಲ್ಲ. ಈ ಭಸ್ಮಸ್ನಾನ ಕೇವಲ ಅನುವಾದವಷ್ಟೇ. ಶ್ರುತಿಯು ಪ್ರಮಾಣವೇ. ಆದರೂ ತಾಮಸವಾದ ನೃಸಿಂಹಪುರಾಣದಲ್ಲಿ ಹೇಳಿದ್ದರೂ ಆ ಪುರಾಣವು ಅಪ್ರಮಾಣವಾದ ಕಾರಣ ಅಗ್ರಾಹ್ಯವೇ ಎಂದು ಸ್ಕಾಂದ ಪುರಾಣದಲ್ಲಿದೆ.

**ಪ್ರಬೋಧಿನೀಕಾರರ ಅಭಿಪ್ರಾಯ –**

ಭಸ್ಮಸ್ನಾನ ಸರ್ವಥಾ ನಿಷಿದ್ಧವಾದರೆ,

**ಬೃಹತ್ಸಾಮೇತಿ ಮಂತ್ರೇಣ ಹೋಮಾಂತೇ ಹೋಮಭಸ್ಮನಾ ।**
**ಅಂಗಾನಿ ಲೇಪಯೇದ್ವಿಪ್ರೋ ವೇದವೇದಾಂಗಪಾರಗಃ ॥''**

**ವಿಷ್ಣೋರಂಗಾರಶೇಷೇಣ ಯೋಽಂಗಾನಿ ಪರಿಮಾರ್ಜಯೇತ್ ।**
**ದುರಿತಾನಿ ವಿನಶ್ಯಂತಿ ವ್ಯಾಧಯೋ ಯಾಂತಿ ಖಂಡಶಃ ॥**

ಎಂಬ ಪುರಾಣ ವಿರೋಧ ಬರುವುದಲ್ಲ ? ಎಂದರೆ ತಾತ್ಪರ್ಯದಲ್ಲಿರುವ 'ತು' ಶಬ್ದವು ವಿಶೇಷಾರ್ಥಕವು. ಅಂದರೆ ನೃಸಿಂಹಪುರಾಣದಲ್ಲಿ ಹೇಳಿದ ಭಸ್ಮಸ್ನಾನವಿಧಾನವು ಪಾಶುಪತದರ್ಶನದಲ್ಲಿ ಹೇಳಿದ್ದಕ್ಕಿಂತ ವಿಶಿಷ್ಟವಾದುದು, ಭಿನ್ನವಾದುದು. ಆದ್ದರಿಂದ ಗ್ರಾಹ್ಯವು.

ಪಾಶುಪತದರ್ಶನದಲ್ಲಿ ಗೋಪಿಚಂದನವಿಲ್ಲದೇ ಕೇವಲ ಭಸ್ಮದಿಂದ ತ್ರಿಪುಂಡ್ರ ಪ್ರಕಾರ (ಮೂರು ಅಡ್ಡಪಟ್ಟಿ) ಸ್ನಾನ ಹೇಳಿದೆ.

**ತ್ರಿಪುಂಡ್ರಂ ಭಸ್ಮನಾ ಕುರ್ಯಾತ್ ಕೇವಲೇನ ದ್ವಿಜೋಽಪಿ ಯಃ ।**
**ಸ ಜೀವನ್ನೇವ ಚಂಡಾಲ ಇಹ ಪ್ರೇತ್ಯ ತು ನಾರಕೀ ॥**

ಈ ಭಸ್ಮಸ್ನಾನ ಪದ್ಮಪುರಾಣಕ್ಕೆ ವಿರುದ್ಧವಾದುದು. ನೃಸಿಂಹಪುರಾಣ-ಗತವಾದುದು ಬಾಧಿತವಲ್ಲ ಕಾರಣ ಗ್ರಾಹ್ಯ ಎಂದಿರುವರು.

ನರಸಿಂಹ ಪುರಾಣದ ವಿಧಾನ (ಬರೆದಿಲ್ಲ/ಉಲ್ಲೇಖಿಸಿಲ್ಲ.) ಪ್ರಾಯಃ ಲಲಾಟ, ಕಂಠ, ಭುಜ, ಶಿರಸ್ಸುಗಳಲ್ಲಿ ಹಚ್ಚುವಂತೆ ಉಲ್ಲೇಖವಿರಬೇಕು ಎನಿಸುತ್ತದೆ. ತಿರ್ಯಕ್ ತ್ರಿಪುಂಡ್ರ ನಿಷಿದ್ಧ. ಗೋಪೀಚಂದನ ಊರ್ಧ್ವಪುಂಡ್ರ-ವಿದ್ದು ಅದರ ಮೇಲೆ ಭಸ್ಮವನ್ನು ಕುಂಕುಮದಂತೆ ಹಚ್ಚಬಹುದು ಎನಿಸುತ್ತದೆ.

ವಿಷ್ಣುತೀರ್ಥರು ಊರ್ಧ್ವಪುಂಡ್ರವಿಧಾನ ಮೂರನೇ ಅಧ್ಯಾಯದಲ್ಲಿ ಉದಾಹರಿಸಿದ ನರಸಿಂಹಪುರಾಣವಚನವನ್ನು ಸುಧೀಂದ್ರತೀರ್ಥರು ಉದಾಹರಿಸಿರುವರು.

ತದ್ ಬ್ರಹ್ಮಚಾರಿಣೋ ನಿತ್ಯಮೂರ್ಧ್ವಪುಂಡ್ರಂ ತು ಭಸ್ಮನಾ ।
ಕುರ್ಯುರಿತ್ಯೇವ ಚಾಚಾರ್ಯಮತಂ ಸದ್ಭಿಃ ಪುರಾ ಕೃತಮ್ ॥

ಕೈರಲಂ ತೌಲವಂ ದೇಶಂ ವಿನಾಽನ್ಯತ್ರಾಧುನಾಪಿ ಹಿ ।
ಕ್ರಿಯತೇ ಮಧ್ಯಭೂಮೌ ತು ಬ್ರಾಹ್ಮಣಾ ವೇದಪಾರಗಾಃ ॥

ವಿಶಿಷ್ಟಾಶ್ಚ ತತೋ ಯೇ ಯೇ ಪಶ್ಚಾತ್ ಪಶ್ಚಾದಿಹಾಗತಾಃ ।
ತೇಷಾಂ ತೇಷಾಂ ವಿಶಿಷ್ಟತ್ವಮೇತದೀಯಾ ಹಿ ಕುತ್ಸಿತಾಃ ॥

ಗೋಪಿಕಾಂ ಚೈವ ಲಿಂಪಂತಿ ನ ತತ್ರಾಪಿ ಹಿ ಚಂದನಮ್ ।
ಆಗ್ರಹಾದೇವ ದೇಶೇಽಸ್ಮಿನ್ ವಿನಾ ಮಾನಂ ಭಣಂತಿ ಹಿ ॥

ನೈವೋಚ್ಯತೇ ವಿಶೇಷಸ್ತು ಬ್ರಹ್ಮಚಾರಿಣ ಏವ ಹಿ ।
ಕುತ್ರಾಪಿ ಚೋಚ್ಯತೇ ಸಾಮ್ಯಾತ್ ತ್ರಿಪುಂಡ್ರಂ ಯತ್ರ ಕುತ್ರಚಿತ್ ॥

ತದಾಸುರವಿಮೋಹಾಯ ಗ್ರಂಥೇಽನ್ಯತ್ರ ನಿಗದ್ಯತೇ ।
ಅಸುರಾಣಾಂ ಮೋಹನಾರ್ಥಂ ತ್ರಿಪುಂಡ್ರಂ ವಿಹಿತಂ ಪುರಾ ॥

ತತ್ ತ್ರಿಪುಂಡ್ರಂ ನ ಕುರ್ವಂತಿ ಸಂಪ್ರಾಪ್ತೇ ಮರಣೇಽಪಿ ಚ ।
ತದ್ ಬ್ರಹ್ಮಚಾರಿಣೋ ನಿತ್ಯಮೂರ್ಧ್ವಪುಂಡ್ರೋ ವಿಧೀಯತೇ ॥

ಎಂದಿದ್ದಾರೆ.

**ಗಾಯತ್ರ್ಯುಷ್ಣಿಗನುಷ್ಟುಪ್ ಚ ಬೃಹತೀ ಪಂಕ್ತಿರೇವ ಚ ।**
**ತ್ರಿಷ್ಟುಪ್ ಜಗತ್ಯತಿಚ್ಛಂದೋ ಹ್ಯಷ್ಟ್ಯತ್ಯಷ್ಟೀ ಜಗದ್ ವಿರಾಟ್ ॥೪೧॥**

ಗಾಯತ್ರೀ, ಉಷ್ಣಿಕ್, ಅನುಷ್ಟುಪ್, ಬೃಹತೀ, ಪಂಕ್ತಿ, ತ್ರಿಷ್ಟುಪ್, ಜಗತಿ, ಇವು ಏಳು ಛಂದಸ್ಸುಗಳು. ಅವುಗಳಲ್ಲಿ ಗಾಯತ್ರೀಛಂದಸ್ಸಿಗೆ ಇಪ್ಪತ್ನಾಲ್ಕು ಅಕ್ಷರಗಳು. ಉಷ್ಣಿಕ್‌ಛಂದಸ್ಸಿಗೆ ಇಪ್ಪತ್ತೆಂಟು ವರ್ಣಗಳು. ಅನುಷ್ಟುಪ್ ಛಂದಸ್ಸಿಗೆ ಮೂವತ್ತೆರಡು ವರ್ಣಗಳು. ಬೃಹತಿಗೆ ಮೂವತ್ತಾರು ಅಕ್ಷರಗಳು. ಪಂಕ್ತಿಛಂದಸ್ಸಿಗೆ ನಲವತ್ತು ಅಕ್ಷರಗಳು. ತ್ರಿಷ್ಟುಪ್‌ಛಂದಸ್ಸಿಗೆ ನಲವತ್ನಾಲ್ಕು ವರ್ಣಗಳು. ಹೀಗೆ ನಾಲ್ಕು ನಾಲ್ಕು ಅಕ್ಷರಗಳು ಹೆಚ್ಚಾಗುತ್ತ ಹೋಗುವವು. ನಾಲ್ಕು ವರ್ಣ ಹೆಚ್ಚಾಗುವುದು ಜಗತೀಛಂದಸ್ಸಿನ ವರೆಗೆ ಮಾತ್ರ . ಜಗತೀ ಛಂದಸ್ಸಿಗೆ ಒಂಬತ್ತು ಪಾದಗಳು ಎಂದು ಛಂದೋವಿಧಾನದಲ್ಲಿ ಇದೆ ಎಂದು ತಾತ್ಪರ್ಯದಲ್ಲಿದೆ -

**ತಾತ್ಪರ್ಯ– ಗಾಯತ್ರ್ಯುಷ್ಣಿಕ್ ಚತುರ್ವರ್ಣಾಧಿಕಾ ಇತ್ಯಾದಿ ಚತುರುತ್ತರೈಃ । ಜಗತ್ಯಂತಾನಾಮೇವ ಚತುರುತ್ತರತ್ವನಿಯಮಃ ।**

**ಛಂದಸ್ಸು ನವಪಾದಂ ಯಜ್ಜಗದಿತ್ಯುಚ್ಯತೇ ಬುಧೈಃ ।–ಇತಿ ಛಂದೋವಿಧಾನೇ**

ಜಗತೀ, ಅತಿಜಗತೀ, ಅಷ್ಟೀ, ಅತ್ಯಷ್ಟೀ , ಜಗದ್, ವಿರಾಟ್ ಇವು ಈ ನಿಯಮಕ್ಕೆ ಒಳಪಡದ ಛಂದಸ್ಸುಗಳು.

'ಪಾದಃ ಚತುರ್ಥೋऽಂಶಃ' ಎಂದು ವಚನವಿರುವುದರಿಂದ ಒಂದು ಛಂದಸ್ಸಿನಲ್ಲಿ ಸೇರಿದ ವರ್ಣಗಳನ್ನು ನಾಲ್ಕು ವಿಭಾಗ ಮಾಡಿದಾಗ ಒಂದಂಶವು ಪಾದವು. ಒಂದೊಂದು ಪಾದಕ್ಕೆ ಒಂದೊಂದು ಅಕ್ಷರ ಹೆಚ್ಚಾದರೆ ನಾಲ್ಕು ಪಾದಗಳು ಸೇರಿ ನಾಲ್ಕು ಅಕ್ಷರ ಹೆಚ್ಚಾಗುವವು. ಇದನ್ನೇ ವೃತ್ತರತ್ನಾಕರದಲ್ಲಿ-

**ಆರಭ್ಯೈಕಾಕ್ಷರಾತ್ ಪಾದಾದೇಕೈಕಾಕ್ಷರವರ್ಧಿತೈಃ ।**
**ಪೃಥಕ್ ಛಂದೋ ಭವೇತ್ ಪಾದೈರ್ಯಾವತ್ ಷಡ್ವಿಂಶತಿಂ ಗತೈಃ ॥**

**ತದೂರ್ಧ್ವಂ ಚಂಡವೃಷ್ಟ್ಯಾದಿದಂಡಕಾಃ ಪರಿಕೀರ್ತಿತಾಃ ।**
**ಶೇಷಂ ಗಾಥಾಸ್ತ್ರಿಭಿಃ ಷಡ್ಭಿಶ್ಚರಣೈಶ್ಚೋಪಲಕ್ಷಿತಾಃ ॥**

**ಉಕ್ತಾऽತ್ಯುಕ್ತಾ ತಥಾ ಮಧ್ಯಾ ಪ್ರತಿಷ್ಠಾऽನ್ಯಾ ಸುಪೂರ್ವಿಕಾ ।**
**ಗಾಯತ್ರ್ಯುಷ್ಣಿಗನುಷ್ಟುಪ್ ಚ ಬೃಹತೀ ಪಂಕ್ತಿರೇವ ಚ ॥**

**ತ್ರಿಷ್ಟುಪ್ ಚ ಜಗತೀ ಚೈವ ತಥಾಽತಿಜಗತೀರಿತಾ ।**
**ಶಕ್ವರೀ ಸಾಽತಿಪೂರ್ವಾ ಸ್ಯಾದಷ್ಟ್ಯತ್ಯಷ್ಟೀ ತಥಾ ಸ್ಮೃತೇ ॥**

**ಧೃತಿಶ್ಚಾತಿಧೃತಿಶ್ಚೈವ ಕೃತಿಃ ಪ್ರಕೃತಿರಾಕೃತಿಃ ।**
**ವಿಕೃತಿಃ ಸಂಕೃತಿಶ್ಚೈವ ತಥಾಽತಿಕೃತಿರುತ್ಕೃತಿಃ ॥**

ಎಂದುಹೇಳಿದೆ. ಅದರಂತೆಅನುಕ್ರಮಣಿಕೆಯಲ್ಲಿ 'ಗಾಯತ್ರ್ಯುಷ್ಣಿಗನುಷ್ಟುಬ್ಬೃಹತೀಪಂಕ್ತಿತ್ರಿಷ್ಟುಬ್ಜಗತ್ಯತಿಜಗತೀಶಕ್ವರ್ಯ್ಯತಿಶಕ್ವರ್ಯಷ್ಟ್ಯತ್ಯಷ್ಟಿಧೃತ್ಯತಿಧೃತಯಃ' ಎಂದು ಹೇಳಿದ್ದಾರೆ.

ಇಪ್ಪತ್ತನಾಲ್ಕು ಅಕ್ಷರ ಗಾಯತ್ರೀ. ನಾಲ್ಕು ನಾಲ್ಕು ಅಕ್ಷರ ಹೆಚ್ಚಾದಾಗ ಅನುಷ್ಟುಪ್ ಮೊದಲಾದವುಗಳು. ಒಂದಕ್ಷರ ಕಡಿಮೆ ಆದರೆ ನಿಚೃದ್. ಎರಡಕ್ಷರ ಕಡಿಮೆ ಆದರೆ ವಿರಾಟ್. ಒಂದಕ್ಷರ ಹೆಚ್ಚಾದರೆ ಭುರಿಕ್. ಎರಡಕ್ಷರ ಹೆಚ್ಚಾದರೆ ಸ್ವರಾಟ್. ನಾಲ್ಕು ಅಕ್ಷರಗಳು ಹೆಚ್ಚಾಗುವುದು ಎಂಬ ನಿಯಮ ಎಲ್ಲ ಕಡೆಯೆಂದು ತಿಳಿಯಬಾರದು ಎಂದು ಆಚಾರ್ಯರು 'ಜಗತ್ಯಂತಾನಾಮೇವ ಚತುರುತ್ತರತ್ವನಿಯಮಃ' ಎಂದಿದ್ದಾರೆ. ಹೀಗೇಕೆ? ಎಂದರೆ ಜಗತ್‌ಛಂದಸ್ಸಿಗೆ ಒಂಬತ್ತು ಪಾದಗಳಿರುವವು. ಕಾರಣ ಒಂಬತ್ತಕ್ಷರ ಹೆಚ್ಚಾಗಬೇಕಾದ್ದರಿಂದ ಚತುರುತ್ತರತ್ವ ನಿಯಮವಿಲ್ಲ ಎಂದು ಭಾವ.

ವೃತ್ತರತ್ನಾಕರ ಹಾಗೂ ಅನುಕ್ರಮಣಿಕಾವಚನಗಳು ನಾಲ್ಕು ಹೆಚ್ಚಾಗುವ ಸಂಭವವಿರುವುದರಿಂದ ಪ್ರಮಾಣವು. ನಿಯಮಾಭಿಪ್ರಾಯವೆಂದರೆ ಅಪ್ರಾಮಾಣವೇ.

**ಕಿಂ ವಿಧತ್ತೇ ಕಿಮಾಚಷ್ಟೇ ಕಿಮನೂದ್ಯ ವಿಕಲ್ಪಯೇತ್**
**ಮಾಂ ವಿಧತ್ತೇಽಭಿಧತ್ತೇ ಮಾಂ ವಿಕಲ್ಪ್ಯಾಽಪೋಹ್ಯ ಇತ್ಯಹಮ್ ।**
**ಇತ್ಯಸ್ಯಾ ಹೃದಯಂ ಸಾಕ್ಷಾತ್ ನಾನ್ಯೋ ಮದ್ ವೇದ ಕಶ್ಚನ ॥೪೨॥**

**ಕಿಂ ವಿಧತ್ತೇ** ಏನನ್ನು ವಿಧಾನಮಾಡುವುದು. **ಕಿಂ ಅನೂದ್ಯ** ಯಾರನ್ನು ಅನುವಾದ ಮಾಡಿ **ವಿಕಲ್ಪಯೇತ್** ವಿವಿಧವಾಗಿ ಹೇಳುವುದು. **ಕಿಂ ಅಪೋಹೇತ್** ಯಾರನ್ನು ನಿಕಾಕರಿಸುವುದು ಇದೇ ಮೊದಲಾದ **ಇತಿ** ಈ ಪ್ರಕಾರವಾಗಿ **ಅಸ್ಯಾಃ** ಶ್ರುತಿಯ **ಹೃದಯಂ** ಅಭಿಪ್ರಾಯವನ್ನು (ಜಗತ್ತಿನಲ್ಲಿ) **ಮದನ್ಯಃ ಕಃ ವೇದ** ನನ್ನ ಹೊರತು ಯಾರು ತಿಳಿದಿರುವರು? ಯಾರೂ ತಿಳಿದಿಲ್ಲವೆಂದರ್ಥ.

ಕರ್ಮ ವಿಧಾನ ಮಾಡುವುದು ಸ್ಪಷ್ಟವಿರುವಾಗ ಈ ಅರ್ಥವನ್ನು ಬಿಟ್ಟು ಬೇರೆ ಅರ್ಥವನ್ನು ಶ್ರೀಹರಿ ಏನು ತಿಳಿಯುವನು? ಎಂದರೆ ಹೇಳುವರು -

'ಮಾಂ ವಿಧತ್ತೇ, ಸಂಧ್ಯಾಮುಪಾಸೀತ' ಮುಂತಾದ ವಿಧಿಪರವೇದಗಳು ಕರ್ಮಗಳನ್ನು ನನ್ನನ್ನು ಉದ್ದೇಶಿಸಿಯೇ ಹೇಳುವವು. ಸಂಧ್ಯಾವಂದನಾದಿಗಳಿಗೆ ನಾನೇ ವಿಷಯ. ''ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ ನಾರಾಯಣಃ' ಎಂದಿದೆಯಷ್ಟೇ!

ಅಲ್ಲದೇ 'ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಂ, ತತ್ತೇಜೋ ವಿದ್ಧಿ ಮಾಮಕಂ' ಎಂದಿದೆಯಷ್ಟೇ. 'ಸತ್ಯಂಜ್ಞಾನಮನಂತಂ' ಎಂಬ ವಾಕ್ಯಗಳು ಜ್ಞಾನಾದಿಗುಣವಿಶಿಷ್ಟನಾದ ನನ್ನನ್ನು ಪ್ರತಿಪಾದಿಸುವವು.

'ಚತ್ವಾರಿ ವಾಕ್' ಎಂಬಲ್ಲಿ ವೇದಾದಿವಾಚ್ಯನಾದ್ದರಿಂದ ವಾಕ್ ಎಂದು ಹೆಸರಿರುವ ನನ್ನನ್ನು 'ವಾಕ್' ಎಂದು ಅನುವಾದ ಮಾಡಿ 'ಚತ್ವಾರಿ' ಎಂದು 'ವಿಕಲ್ಪ್ಯಃ' ವಿವಿಧವಾಗಿ ವಾಸುದೇವ, ಸಂಕರ್ಷಣ, ಅನಿರುದ್ಧ, ಪ್ರದ್ಯುಮ್ನ ಮುಂತಾದ ರೂಪವನ್ನು ಕಲ್ಪಿಸಿ ಧ್ಯೇಯನೆಂದು ಹೇಳುವವು. 'ಅಪೋಹ್ಯಃ ನ ಸುರಾಂ ಪಿಬೇತ್, ಬ್ರಾಹ್ಮಣೋ ನ ಹಂತವ್ಯಃ' ಮುಂತಾದ ನಿಷೇಧಕವಾಕ್ಯಗಳು 'ಸುರ ಐಶ್ವರ್ಯೇ' ಎಂದು ಧಾತು ಇರುವುದರಿಂದ ಐಶ್ವರ್ಯ ಮುಂತಾದ ನನ್ನ ಗುಣಗಳ ಪಾನ ಮಾಡಬಾರದು. ಅಂದರೆ ವಿಷ್ಣುವಿನ ಗುಣಗಳು ನನಗೆ ಬರಲಿ ಎಂದು ಚಿಂತಿಸಬಾರದು. 'ಬ್ರಾಹ್ಮಣ' ಎಂದರೆ ವಿಷ್ಣು ಎಂದರ್ಥ. ವಿಷ್ಣು ಇಲ್ಲವೆಂದು ತಿಳಿಯುವುದೇ ಹನನ, ಹಾಗೆ ತಿಳಿಯಬಾರದು. ನನಗೆ ಅಪ್ರಿಯವಾದುದನ್ನು ನಿಷೇಧಿಸಿ 'ಆತ್ಮಾನಮೇವ ಲೋಕಮುಪಾಸೀತ' ಮುಂತಾಗಿ ನನ್ನ ಉಪಾಸನೆಯು ವೇದ ತಾತ್ಪರ್ಯಾರ್ಥ ಎಂಬುದನ್ನು ನಾನೇ ತಿಳಿದಿರುವೆನು.

**ತಾತ್ಪರ್ಯ- ವಿವಿಧತ್ವೇನ ಕಲ್ಪನಾ ವಿಕಲ್ಪಃ। ಚತ್ವಾರಿ ವಾಕ್ ಇತ್ಯಾದಿ। ತತ್ರ ವಾಗಿತ್ಯನುವಾದಃ।**

**ವಿಧಿಭಾಗೇ ಹರೇಃ ಪೂಜ್ಯೈವಾಭಿಧಾನೇ ಚ ತುದ್ಗುಣಾಃ।**
**ವಿಕಲ್ಪೇ ತದ್ಬಹುತ್ವಂ ಚಾಪ್ಯಪೋಹೇ ಚ ತದಪ್ರಿಯಮ್ ॥**
**ಉಚ್ಯತೇ ಸರ್ವವೇದೇಷು ತಚ್ಚ ವೇದ ಸ ಏವ ಹಿ ॥ಇತಿ ಆಗಮತಾತ್ಪರ್ಯೇ**

ಸುರಾ ಹರೇರ್ಗುಣಾಃ ಪ್ರೋಕ್ತಾಸ್ತೇ ಮೇ ಸ್ಯುರಿತಿ ಚಿಂತನಮ್ ।
ಸುರಾಪಾನಮಿತಿ ಪ್ರೋಕ್ತಂ ತನ್ನ ಕುರ್ಯಾತ್ ಕಥಂಚನ ॥

ಬ್ರಾಹ್ಮಣೋ ವಿಷ್ಣುರುದ್ದಿಷ್ಟಃ ಸ ನಾಸ್ತೀತ್ಯಭಿಚಿಂತನಮ್ ।
ಬ್ರಹ್ಮಹತ್ಯಾ ಸಮುದ್ದಿಷ್ಟಾ ತಾಂ ನ ಕುರ್ಯಾತ್ ಕಥಂಚನ ।
ಇತ್ಯಾದ್ಯಪೋಹವಾಕ್ಯಾರ್ಥಶ್ಚಿಂತ್ಯೋ ವಿಷ್ಣುರ್ಬುಧೈರ್ಜನೈಃ ॥
ಇತ್ಯಾದಿ ಚ । ಮದನ್ಯಃ ಕಶ್ಚನ ಕೋಽಪಿ ನ ವೇದ ॥

ಬಹುರೀತಿಯಾಗಿ ನಿರೂಪಿಸುವುದು ವಿಕಲ್ಪವು, ಹೊರತು ಸಂದೇಹಾದಿ-ಗಳಲ್ಲ. ಉದಾ: 'ಚತ್ವಾರಿ ವಾಕ್ ಪರಿಮಿತಾ ಪದಾನಿ ತಾನಿ ವಿದುರ್ಬ್ರಾಹ್ಮಣಾ ಯೇ ಮನೀಷಿಣಃ' ಈ ಶ್ರುತಿಯಲ್ಲಿ ವಾಕ್‌ಶಬ್ದವಾಚ್ಯ ಭಗವದ್ರೂಪವನ್ನು ಅನುವಾದ ಮಾಡಿ ಅನೇಕರೂಪವುಳ್ಳವನೆಂದು ಶ್ರೀಹರಿಯನ್ನೇ ವಿಧಾನ ಮಾಡುತ್ತದೆ.

ವಿಧಿವಾಕ್ಯವೆಲ್ಲವೂ ನನ್ನನ್ನು ಕುರಿತೇ ವಿಧಿಸುತ್ತವೆ. ಹೀಗೆ ವಿಧಿಭಾಗದಲ್ಲಿ ಶ್ರೀಹರಿಯ ಪೂಜೆಯೇ ಹೇಳಲ್ಪಡುತ್ತದೆ. 'ಯಃ ಸರ್ವಜ್ಞಃ' ಮುಂತಾಗಿ ಶ್ರೀಹರಿಗುಣಗಳೇ ಹೇಳಲ್ಪಡುತ್ತವೆ. 'ವಿಕಲ್ಪ' ಎಂದು ಹೇಳುವ ವೇದ ಭಗವದ್ರೂಪಗಳು ಅನಂತಗಳಿವೆ ಎಂದು ಹೇಳುತ್ತದೆ. ನಿಷೇಧವಾಕ್ಯದಲ್ಲಿ ಶ್ರೀವಿಷ್ಣುವಿಗೆ ಅಪ್ರಿಯವಾದುದನ್ನು ತ್ಯಜಿಸಬೇಕು, ಎಂದು ಹೇಳುತ್ತದೆ. ಮುಂತಾದ ಶ್ರುತಿಯ ಅಭಿಪ್ರಾಯವನ್ನು ಶ್ರೀಹರಿಯೊಬ್ಬನೇ ಬಲ್ಲನೆಂದು ಆಗಮತಾತ್ಪರ್ಯದಲ್ಲಿ ಹೇಳಿದೆ. 'ಸುರಾ' ಎಂದರೆ ಭಗವಂತನ ಗುಣಗಳು, ಅವುಗಳು ನನಗಿರಲಿ ಎಂದು ಚಿಂತಿಸುವುದು ಸುರಾಪಾನವು. ಅದನ್ನು ಸರ್ವಥಾ ಮಾಡಬಾರದು. ಬ್ರಾಹ್ಮಣ ಎಂದರೆ ಶ್ರೀಹರಿಯು, ಆತನು ಇಲ್ಲವೆಂದು ತಿಳಿಯುವುದೇ ಬ್ರಹ್ಮಹತ್ಯಾ ಎನಿಸುವುದು. ಅದನ್ನು ಸರ್ವಥಾ ಮಾಡಬಾರದು. ಹೀಗೆ 'ನ ಸುರಾಂ ಪಿಬೇತ್, ಬ್ರಾಹ್ಮಣೋ ನ ಹಂತವ್ಯಃ' ಮುಂತಾದ ನಿಷೇಧವಾಕ್ಯಗಳಿಗೆ ಈ ರೀತಿ ಅರ್ಥ ಮಾಡಬೇಕೆಂದು ನನ್ನ ಹೊರತು ಬೇರೆ ಯಾರೂ ಅರಿಯರು ಎಂದು ಭಾವ.।।೪೨।।

ಕೇವಲ ಕೆಲವು ವಾಕ್ಯಗಳಿಗೆ ಮಾತ್ರ ಶ್ರೀಹರಿ ಅರ್ಥವಲ್ಲ, ಎಲ್ಲ ವೇದಗಳಿಗೂ ಅವನೇ ಅರ್ಥ ಎಂದು ಉಪಸಂಹರಿಸುವರು -

**ಏತಾವಾನ್ ಸರ್ವವೇದಾರ್ಥಃ ಶಬ್ದ ಆಸ್ಥಾಯ ಮಾಽಭಿದಾಮ್ ।**
**ಮಾಯಾಮಾತ್ರಮನೂದ್ಯಾಂತೇ ಪ್ರತಿಷಿಧ್ಯ ಪ್ರಶಾಮ್ಯತಿ ॥೪೩॥**

**ಶಬ್ದಃ** ವೇದವು **ಅಭಿದಾಂ** ಎಲ್ಲ ಅವತಾರಗಳಲ್ಲಿ ಭೇದರಹಿತನಾದ **ಮಾ** ನನ್ನನ್ನು **ಆಸ್ಥಾಯ** ಪ್ರತಿಪಾದಿಸಿ **ಮಾಯಾಮಾತ್ರಂ** ನನ್ನ ಇಚ್ಛೆಯಿಂದ ಉಪೋದ್ಬಲಿತ ಅದೃಷ್ಟದಿಂದ ನಿರ್ಮಿತವಾದ ಶರೀರಾದಿ ಬಂಧಗಳನ್ನು **ಅನೂದ್ಯ** ತಿಳಿಸಿ ಜ್ಞಾನೋದಯದಿಂದ ಜೀವನ ಶರೀರಾದಿಗಳನ್ನು **ಪ್ರತಿಷಿದ್ಧ್ಯ ಪ್ರಶಾಮ್ಯತಿ** ತೊಲಗಿಸಿ ಸ್ತಿಮಿತಸಮುದ್ರದಂತೆ ಸ್ವಭಾವೋಪಾಸನಾರೂಪವಾಗಿ ಇರುವವು. **ಏತಾವಾನ್** ಗುಣಪೂರ್ಣನಾದ ನನ್ನ ಉಪಾಸನೆಯಿಂದ ಮೋಕ್ಷವಾಗುವುದು ಎಂಬುದೇ **ಸರ್ವವೇದಾರ್ಥಃ** ಎಲ್ಲ ವೇದಗಳ ಸಾರಾರ್ಥ.

'ಅಭಿದಾಂ ಆಸ್ಥಾಯ' ಅಭೇದವನ್ನು ಅವಲಂಬಿಸಿ 'ಕೋಽಪಿ ಶಬ್ದಃ ಮಾ' ಒಂದು ಶಬ್ದವೂ ಇಲ್ಲ. 'ನ ಭಿದಾ ಯಸ್ಯ ಸಃ ಅಭಿದಃ ಅಭಿದಶ್ಚಾಸೌ ಅಶ್ಚ ಅಭಿದಾಃ ತಂ ಅಭಿದಾಂ' ಎಂದು ವಿಗ್ರಹ .

**ತಾತ್ಪರ್ಯ-** ಅಭಿದಶ್ಚ ಸ ಏವ ಅಶ್ಚ ಅಭಿದಾಃ । ತಂ ಅಭಿದಾಂ ಮಾಂ ಆಸ್ಥಾಯ ಮಾಯಾಮಾತ್ರಂ ಮದಿಚ್ಛಾನಿರ್ಮಿತಂ ಶರೀರಾದಿಕಂ ಅನೂದ್ಯ ಉಪಾಸನಾದಿಕಂ ವಿಧಾಯ ಮೋಕ್ಷರೂಪೇಣ ತಚ್ಛರೀರಾದಿಕಂ ಪ್ರತಿಷಿದ್ಧ್ಯ ಪ್ರಶಾಮ್ಯತಿ ॥

ಸರ್ವಾವತಾರರೂಪೇಷು ನಿರ್ಭೇದತ್ವಾದದೋಷತಃ ।
ಅಭಿದಾ ವಿಷ್ಣುರುದ್ದಿಷ್ಟಃ ತಮೇವೋಕ್ತ್ವಾ ತದಿಚ್ಛಯಾ ॥

ನಿರ್ಮಿತಂ ದೈಹಿಕಂ ಬಂಧಂ ತಸ್ಯೋಪಾಸನಯೈವ ತು ।
ಪ್ರತಿಷಿದ್ಧ್ಯ ವಿಮೋಕ್ಷೇ ತು ಸ್ವಭಾವೋಪಾಸ್ತಿರೂಪತಃ ।
ಪ್ರತಿಶಾಮ್ಯತಿ ವೇದೋಽಯಂ ವಾಸುದೇವೈಕಸಂಶ್ರಯಃ ॥

ಅಭಿದಾಮಾಸ್ಥಾಯ ಕೋಽಪಿ ಶಬ್ದೋ ಮಾ ಇತಿ ವಾ ॥

**ತಾತ್ಪರ್ಯದ ಭಾವ -**

ವೇದಗಳು ಸರ್ವಾವತಾರಗಳಲ್ಲಿ ಭೇದರಹಿತನೂ ಅಕಾರವಾಚ್ಯನೂ ಆದ ನನ್ನನ್ನು ಪ್ರತಿಪಾದಿಸಿ ನನ್ನ ಇಚ್ಛೆಯಿಂದ ನಿರ್ಮಿತವಾದ ಸ್ಥೂಲದೇಹಾದಿಗಳನ್ನು ಅನುವಾದ ಮಾಡಿ ಯಾವ ದೇಹಾದಿಗಳು ಇದ್ದವನಿಗೆ ಉಪಾಸನಾದಿಗಳು ವಿಹಿತವಾಗಿವೆಯೋ ಅಂತಹ ದೇಹತ್ಯಾಗವೇ ಮೋಕ್ಷವು.

ಮೋಕ್ಷವಾದಾಗ ದೇಹಾದಿಗಳು ನಿವೃತ್ತವಾಗುತ್ತವೆ. ದೇಹಾದಿಗಳ ನಿವೃತ್ತಿಯೇ ಮೋಕ್ಷವು. ಮೋಕ್ಷದಲ್ಲಿಯೂ ಪ್ರಲಯದಲ್ಲಿಯೂ ಮುಕ್ತರನ್ನು ಕುರಿತು ವಿಧಿನಿಷೇಧರೂಪ ವ್ಯಾಪಾರವನ್ನು ಪ್ರತಿಪಾದಿಸದೇ ಶ್ರೀಹರಿಯನ್ನೇ ಪ್ರತಿಪಾದಿಸುತ್ತ ಇರುತ್ತವೆ. ಸಮಸ್ತ ಅವತಾರಗಳಲ್ಲಿ ಭೇದರಹಿತನೂ ನಿರ್ದೋಷನೂ ಆಗಿರುವುದರಿಂದ ಶ್ರೀವಿಷ್ಣುವು ಅಭಿದಾ ಎನಿಸುವನು. ಆ ಶ್ರೀಹರಿಯ ಇಚ್ಛೆಯಿಂದುಂಟಾದ ಸ್ಥೂಲದೇಹರೂಪವಾದ ಬಂಧವನ್ನು ಶ್ರೀವಿಷ್ಣುವಿನ ಉಪಾಸನೆಗಾಗಿ ಹೇಳಿ ಮೋಕ್ಷದಲ್ಲಿ ಜೀವನಿಗೆ ಸ್ವರೂಪ-ದೇಹದಿಂದಲೇ ಉಪಾಸನಾ ಮಾಡತಕ್ಕ ಸ್ವರೂಪವಿದ್ದುದರಿಂದ ಬಾಹ್ಯವಾದ ಸ್ಥೂಲದೇಹವನ್ನು ನಿಷೇಧಿಸಿ ಕೇವಲ ಭಗವತ್ಪ್ರತಿಪಾದಕವಾದ ಈ ವೇದವು ಜೀವನಿಗೆ ವಿಧಾನಾದಿಗಳನ್ನು ಮಾಡುವುದಿಲ್ಲ ಕೇವಲ ಭಗವಂತನನ್ನು ಪ್ರತಿಪಾದಿಸುತ್ತಿರುತ್ತದೆ.

ಅಥವಾ ಯಾವುದೊಂದು ವೈದಿಕಶಬ್ದವು ಜೀವೇಶ್ವರ ಭೇದ ಹೇಳುವುದು ಇಲ್ಲವೇ ಇಲ್ಲ.।।೪೩।।

।। ಇತಿ ಶ್ರೀಮದ್ಭಾಗವತೇ ಏಕಾದಶಸ್ಕಂಧೇ ಏಕವಿಂಶೋಽಧ್ಯಾಯಃ ।।

★★★

## ಅಥ ದ್ವಾವಿಂಶೋಽಧ್ಯಾಯಃ

ಶ್ರೀಹರಿಯಿಂದ ಸೃಷ್ಟವಾದ ತತ್ವಗಳ ಸಂಖ್ಯೆಯನ್ನು ಜೀವೇಶ್ವರರ ಭೇದವನ್ನೂ ಈ ಅಧ್ಯಾಯದಲ್ಲಿ ನಿರೂಪಿಸುವರು.

ಮೊದಲಿಗೆ ಉದ್ಧವನು ಶ್ರೀಹರಿಯಿಂದ ತತ್ವಸ್ವರೂಪ ತಿಳಿದವನಾದರೂ ಋಷಿಗಳು ಅನೇಕ ರೀತಿಯಾಗಿ ಪರಿಗಣಿಸುತ್ತಿರುವುದರಿಂದ ಆ ರೀತಿ ಹೇಳಲು ಕಾರಣವನ್ನು ತಿಳಿಯಲು ಮತ್ತು ನಿನಗೆ ಅಭಿಪ್ರೇತವಾದ ಸಂಖ್ಯೆ ಯಾವುದು ಹೇಳೆಂದು ಕೇಳುವನು-

**ಕಾನಿ ತತ್ತ್ವಾನಿ ವಿಶ್ವೇಶ ಸಂಖ್ಯಾತಾನ್ಯೃಷಿಭಿಃ ಪ್ರಭೋ ।**
**ನವೈಕಾದಶ ಪಂಚ ತ್ರೀಣ್ಯಾತ್ಥ ತ್ವಮಿಹ ಶುಶ್ರುಮ ॥೧॥**

**ತ್ವಂ** ನೀನು **ನವೈಕಾದಶ ಪಂಚ ತ್ರೀಣಿ ತತ್ವಾನಿ** ಇಪ್ಪತ್ತೆಂಟು ತತ್ವಗಳೆಂದು **ಆತ್ಥ** ಹೇಳಿದಿ **ವಯಂ ಚ ಶುಶ್ರುಮ** ನಾವು ಕೇಳಿದೆವು. **ಋಷಿಭಿಃ** ಋಷಿಗಳಿಂದ **ಸಂಖ್ಯಾತಾನಿ** ಹೇಳಿದವು **ಕಾನಿ** ಯಾವುವು? **ಹೇ ಪ್ರಭೋ ವಿಶ್ವೇಶ** ಸಮರ್ಥನಾದ ಜಗದೊಡೆಯನೇ! ನೀನು ಹೇಳಿದ ತತ್ವಗಳು ಬೇರೆಯೋ ಹೇಗೆ ಅದನ್ನು ಹೇಳು. ಅಥವಾ **ಕಾನಿ** ಎಷ್ಟು ಯಾವ ಸಂಖ್ಯೆವುಳ್ಳವು ಎಂದು ತಿಳಿಯಲಿ? ಯದ್ಯಪಿ ನೀನು ಇಪ್ಪತ್ತೆಂಟು ಎಂದು ಹೇಳಿರುವಿ, ಆದರೂ ಋಷಿಗಳು ಅನೇಕ ರೀತಿ ಹೇಳಿರುವುದರಿಂದ ನಿನಗೆ ಅಭಿಮತವಾದ ಸಂಖ್ಯೆಗಳೆಷ್ಟು ? ಎಂದು ಭಾವ.॥೧॥

**ಕೇಚಿತ್ ಷಡ್ವಿಂಶತಿಂ ಪ್ರಾಹುರಪರೇ ಪಂಚವಿಂಶಂತಿಮ್ ।**
**ಸಪ್ತೈಕೇ ನವ ಷಟ್ ಕೇಚಿಚ್ಚತ್ವಾರ್ಯೇಕಾದಶಾಪರೇ ॥**
**ಕೇಚಿತ್ ಸಪ್ತದಶ ಪ್ರಾಹುಃ ಷೋಡಶೈಕೇ ತ್ರಯೋದಶ ॥೨॥**

**ಏತಾವತ್ವಂ ಹಿ ಸಂಖ್ಯಾನಾಮೃಷಯೋ ಯದ್ವಿವಕ್ಷಯಾ ॥**
**ಗಾಯಂತಿ ಪೃಥಗಾಯುಷ್ಮನ್ನಿದಂ ನೋ ವಕ್ತುಮರ್ಹಸಿ ॥೩॥**

**ಕೇಚಿತ್** ಕೆಲವರು **ಷಡ್ವಿಂಶತಿಂ ಪ್ರಾಹುಃ** ತತ್ವಗಳು ಇಪ್ಪತ್ತಾರೆಂದು ಹೇಳುವರು. **ಅಪರೇ** ಮತ್ತೆ ಕೆಲವರು **ಪಂಚವಿಂಶಂತಿಂ** ಇಪ್ಪತ್ತೈದು ಎಂದು **ಏಕೇ** ಹಲವರು **ಸಪ್ತ** ಏಳು **ನವ** ಒಂಬತ್ತು **ಷಟ್** ಆರು ಎಂದು ಕೆಲವರು

ಹೇಳುವರು. **ಅಪರೇ** ಬೇರೆಯವರು **ಚತ್ವಾರಿ** ನಾಲ್ಕು **ಏಕಾದಶ** ಹನ್ನೊಂದು ಎಂದೂ **ಸಪ್ತದಶ** ಹದಿನೇಳು, **ಷೋಡಶ** ಹದಿನಾರು **ತ್ರಯೋದಶ** ಹದಿಮೂರು ಹೀಗೆ ಒಬ್ಬೊಬ್ಬರು ಒಂದೊಂದು ರೀತಿ **ಪ್ರಾಹುಃ** ಹೇಳುವರು. **ಹೇ ಆಯುಷ್ಮನ್** ಅಪರಿಮಿತ ಆಯುಷ್ಯವುಳ್ಳ ಶ್ರೀಕೃಷ್ಣನೇ! **ಋಷಯಃ** ಋಷಿಗಳು **ಸಂಖ್ಯಾನಾಂ** ಸಂಖ್ಯೆಗಳ **ಏತಾವತ್ತ್ವಂ** ಇಷ್ಟೇ ಎಂದು **ಪೃಥಕ್** ಪ್ರತ್ಯೇಕವಾಗಿ **ಯದ್ವಿವಕ್ಷಯಾ** ಯಾವ ಅಭಿಪ್ರಾಯದಿಂದ ಯಾವ ಯುಕ್ತಿಯಿಂದ **ಗಾಯಂತಿ** ಹೇಳುವರು. **ಇದಂ** ಈ ವಿಷಯವನ್ನು **ವಕ್ತುಂ ಅರ್ಹಸಿ** ಹೇಳಲು ಸಮರ್ಥನಾಗಿರುವಿ.।।೩।।

**ಶ್ರೀಭಗವಾನುವಾಚ-**

**ಯುಕ್ತಯಃ ಸಂತಿ ಸರ್ವತ್ರ ಭಾಷಂತೇ ಬ್ರಾಹ್ಮಣಾ ಯಥಾ ।**
**ಮಾಯಾಂ ಮದೀಯಾಮುದ್ಗೃಹ್ಯ ವದತಾಂ ಕಿಂ ನು ದುರ್ಘಟಮ್।।೪।।**

**ಬ್ರಾಹ್ಮಣಾಃ** ವೇದಾರ್ಥವಿಚಾರ ಕುಶಲರಾದ ಋಷಿಗಳು **ಯಥಾ** ಯಾವ ರೀತಿಯಾಗಿ **ಭಾಷಂತೇ** ಸಂಕ್ಷೇಪ ಮತ್ತು ವಿಸ್ತಾರವಾಗಿ ಹೇಳುವರೋ **ತಥಾ** ಹಾಗೆಯೇ **ಸರ್ವತ್ರ** ಎಲ್ಲ ಪಕ್ಷಗಳಲ್ಲಿ **ಯುಕ್ತಯಃ ಸಂತಿ** ಯುಕ್ತಿಗಳಿವೆ. **ಮದೀಯಾಂ ಮಾಯಾಂ** ವಿಚಿತ್ರಕಾರ್ಯಾನುಕೂಲವಾದ ನನ್ನ ಸಾಮರ್ಥ್ಯವನ್ನು **ಉದ್ಗೃಹ್ಯ** ಅವಲಂಬಿಸಿ **ವದತಾಂ** ಅನೇಕವಿಧವಾಗಿ ತತ್ವಗಳ ಸಂಖ್ಯೆಯನ್ನು ಹೇಳುವ ಋಷಿಗಳಿಗೆ **ಕಿಂ ನು ದುರ್ಘಟಂ** ಯಾವುದು ಅನುಪಪನ್ನವು?

ಎಲ್ಲ ಪಕ್ಷಗಳೂ ಪ್ರಾಮಾಣಿಕವಾದರೆ ವಿವಾದವೇಕೆ? ಎಂದರೆ ಅಜ್ಞಾನದಿಂದ ಎಂದು ಹೇಳುವರು -

**ನೈತದೇವಂ ಯಥಾತ್ಥ ತ್ವಂ ಯದಹಂ ವಚ್ಮಿ ತತ್ ತಥಾ ।**
**ಏವಂ ವಿವದತಾಂ ಹೇತುಃ ಶಕ್ತಯೋ ಮೇ ದುರತ್ಯಯಾಃ ।।೫।।**

**ತ್ವಂ** ಎಲೋ ಉದ್ಧವನೇ! ನೀನು **ಯತ್ ಆತ್ಥ** ಋಷಿಗಳು ಅನೇಕ ರೀತಿ ಹೇಳುವರು. ಅದರಲ್ಲಿ ನಿನಗೆ ಸಮ್ಮತವಾದುದು ಯಾವುದು? ಎಂದು ನನಗೆ ಸಮ್ಮತವಾದುದು ಒಂದು, ಮಿಕ್ಕವು ನನಗೆ ಸಮ್ಮತವಲ್ಲ ಎಂಬ ಅಭಿಪ್ರಾಯದಿಂದ ಏನು ಹೇಳಿದೆಯೋ **ಏತತ್ ಏವಂ ನ** ಅದು ಹಾಗಲ್ಲ. **ಯದಹಂ ವಚ್ಮಿ** ವಿವಕ್ಷಾಭೇದದಿಂದ ಎಲ್ಲವೂ ಯುಕ್ತವೇ ನನಗೆ ಸಮ್ಮತವೇ

ಎಂದು ಏನು ಹೇಳುವೆನೋ **ತತ್ ತಥಾ** (ಜ್ಞಾತವ್ಯಂ) ಹಾಗೆಯೇ ತಿಳಿ. **ತ್ವಂ ಯಥಾ ಆತ್ಥ ನ ಏತದೇವಂ** ನೀನು ಹೇಳಿದುದು ದುಷ್ಟವಾದ್ದರಿಂದ ಸರಿಯಲ್ಲ. **ಅಹಂ ಯದ್ ವಚ್ಮಿ ತತ್ ತಥಾ** ನಿರ್ದುಷ್ಟವಾದ್ದರಿಂದ ನಾನು ಹೇಳಿದುದೇ ಸರಿ ಎಂದು ತಿಳಿ. **ವಿವದತಾಂ** ಅಜ್ಞಾನದಿಂದ ವಿವಾದ ಮಾಡುವವರಿಗೂ **ಮೇ** ನನ್ನ **ದುರತ್ಯಯಾಃ ಶಕ್ತಯಃ ಹೇತುಃ** ಮೀರಲಸಾಧ್ಯವಾದ ಶಕ್ತಿಯೇ ಕಾರಣವು.।।೫।।

**ಯಾಸಾಂ ವ್ಯತಿಕರಾದಾಸೀದ್ ವಿಕಲ್ಪೋ ವದತಾಂ ಪದಮ್ ।**
**ಪ್ರಾಪ್ತೇ ಶಮದಮೇ ವ್ಯೇತಿ ವಾದಸ್ತಮನುಶಾಮ್ಯತಿ ।।೬।।**

**ಯಾಸಾಂ** ಯಾವ ನನ್ನ ಶಕ್ತಿಯಿಂದ ಉತ್ಪನ್ನವಾದ ಅವ್ಯಕ್ತಾದಿ ತತ್ವಗಳ **ವ್ಯತಿಕರಾತ್** ವಿಕಾರದಿಂದ ಮನಸ್ಸಿನ **ವಿಕಲ್ಪಃ** ವಿರುದ್ಧಕಲ್ಪನೆಯು (ಮಿಥ್ಯಾಜ್ಞಾನವು) **ಆಸೀತ್** ಆಯಿತೋ ಅದೇ **ವದತಾಂ** ವಿವಾದ ಮಾಡುವವರಿಗೆ **ಪದಂ ಆಸೀತ್** ಆಶ್ರಯವಾಯಿತು. (ನನ್ನ ಮತಕ್ಕೆ ಅವಿರುದ್ಧವಾಗಿ ಇವರು ಹೇಳುವರು, ಎಂದು ತಿಳಿಯಲಾರರು. ಕಾರಣ ನನ್ನ ಮಾಯೆಯಿಂದ ಮೋಹಿತರಾಗಿ ಭ್ರಮದಿಂದ ವಿವಾದ ಮಾಡುವರು.) **ಶಮದಮೇ ಪ್ರಾಪ್ತೇ** ಇಂದ್ರಿಯನಿಗ್ರಹವೆಂಬ ದಮದಿಂದ ಸಹಿತವಾದ ಭಗವನ್ನಿಷ್ಠೆ ಎಂಬ ಶಮವು ಬಂದಾಗ **ವಿಕಲ್ಪಃ ವ್ಯೇತಿ** ಭ್ರಮವು ನಾಶವಾಗುವುದು. **ತಮನು** ವಿಕಲ್ಪನಾಶಾನಂತರ **ವಾದಃ ಶಾಮ್ಯತಿ** ವಿವಾದವು ನಿಲ್ಲುವುದು.।।೬।।

'ಯುಕ್ತಯಃ' ಎಂಬ ನಾಲ್ಕನೇ ಶ್ಲೋಕದಲ್ಲಿ ಮಾಯಾಶಬ್ದಕ್ಕೆ ಅನೇಕಾರ್ಥ-ಗಳಿರುವುದರಿಂದ ಪ್ರಕೃತೋಪಯುಕ್ತ ಅರ್ಥವನ್ನು ಹೇಳುವರು -

**ತಾತ್ಪರ್ಯ- ಮಾಯಾಂ ಮದೀಯಾಂ ಮತ್ಸಾಮರ್ಥ್ಯಮ್ ।**

ನನ್ನ ಸಾಮರ್ಥ್ಯವನ್ನು ಆಶ್ರಯಿಸಿ ಎಂದರ್ಥ.

ಆಚಾರ್ಯರು ತಾವು ಹೇಳಿದ ವಿಷಯದಲ್ಲಿ ಪ್ರಮಾಣ ಹೇಳುವರು -

**ತಾತ್ಪರ್ಯ-ವಿಷ್ಣೋಃ ಸಾಮರ್ಥ್ಯಮಾಲಂಬ್ಯ ತತ್ವಸಂಖ್ಯಾಂ ಮುನೀಶ್ವರಾಃ ।**
**ಚಕ್ರುರ್ಹಿ ತದವಿಜ್ಞಾಯ ವಿವದಂತ್ಯಲ್ಪಬುದ್ಧಯಃ ।।**

**ತತ್ರಾಪಿ ಕಾರಣಂ ವಿಷ್ಣೋಃ ಶಕ್ತಿರ್ಯಸ್ಯಾವಿಕಾರತಃ ।**
**ಅವ್ಯಕ್ತಾದೇರ್ವಿಕಲ್ಪೋಽಯಂ ಮನಸಃ ಸಂಪ್ರಜಾಯತೇ ॥**

**ವಿರುದ್ಧಕಲ್ಪನಂ ಯಚ್ಚ ವಾಸುದೇವೈಕನಿಷ್ಠಯಾ ।**
**ನಿರಹಂಕಾರಯಾ ನಶ್ಯೇದ್ವಿವಾದೈಕಾಶ್ರಯಂ ಹಿ ತತ್ ॥ಇತಿ ತಂತ್ರಭಾಗವತೇ**

**ಯಾಸಾಂ ಸಕಾಶಾದವ್ಯಕ್ತಾದಿವ್ಯತಿಕರಾದ್ವಿಕಲ್ಪೋ ವಿರುದ್ಧಕಲ್ಪಃ । ಸ ಹಿ ವಿವಾದಾಶ್ರಯಃ ।**

ಶ್ರೀಹರಿಯ ವಚನಸಾಮರ್ಥ್ಯವನ್ನು ಆಶ್ರಯಿಸಿ ಮುನಿಶ್ರೇಷ್ಠರು ತತ್ವಗಳ ಗಣನೆ ಮಾಡುತ್ತಾರೆ. ಅದನ್ನು ತಿಳಿಯದೇ ಅಲ್ಪಮತಿಗಳು ವಿವಾದ-ಮಾಡುವರು. ಆ ವಿವಾದದಲ್ಲಿಯೂ ಯಾವ ಶಕ್ತಿಯಿಂದುಂಟಾದ ಅವ್ಯಕ್ತಾದಿತತ್ವಗಳ ವಿಕಾರದಿಂದ ಮನಸ್ಸಿನ ವಿಕಲ್ಪ (ಸಂದೇಹ) ವು ಹುಟ್ಟುವುದೋ ಅದೇ ಕಾರಣವು. ವಿಕಲ್ಪವೆಂದರೆ ವಿರುದ್ಧಕಲ್ಪನೆಯು. ವಿವಾದಕ್ಕೆ ಆಶ್ರಯವಾದ ಅದು ಕೇವಲ ಶ್ರೀಹರಿಯಲ್ಲಿಯೇ ಆಸಕ್ತವಾದ ಅಹಂಕಾರವಿಲ್ಲದ ಜ್ಞಾನದಿಂದ ನಾಶವಾಗುವುದು, ಎಂದು ತಂತ್ರಭಾಗವತ-ದಲ್ಲಿದೆ. ಆಚಾರ್ಯರು ಅನ್ವಯ ತೋರಿಸುವರು- 'ಯಾಸಾಂ' ಎಂದು. ಯಾವ ಭಗವಚ್ಛಕ್ತಿಗಳ ದೆಸೆಯಿಂದ ಉಂಟಾದ ಅವ್ಯಕ್ತಾದಿಗಳ ವಿಕಾರದಿಂದ ವಿರುದ್ಧಕಲ್ಪನೆ ಉಂಟಾಗುತ್ತದೆಯೋ ಆ ವಿಕಲ್ಪವು ವಿವಾದಾಶ್ರಯವು. ॥೪-೫-೬॥

ಈ ರೀತಿಯಾಗಿ ತತ್ವಗಳ ಗಣನೆಯನ್ನು ಅನೇಕ ರೀತಿಯಾಗಿ ಮಾಡಲು ಯುಕ್ತಿಯನ್ನು ಹೇಳುವರು -

**ಪರಸ್ಪರಾನುಪ್ರವೇಶಾತ್ ತತ್ವಾನಾಂ ಪುರುಷರ್ಷಭ ।**
**ಪೌರ್ವಾಪರ್ಯಪ್ರಸಂಖ್ಯಾನಂ ಯಥಾ ವಕ್ತುರ್ವಿವಕ್ಷಿತಮ್ ॥೭॥**

**ತಾತ್ಪರ್ಯ-** ತತ್ವಸಂಖ್ಯಾ ವಿವಕ್ಷಾಭೇದೇನ ಬಹುಧಾ ಭವತಿ

ವಿವಕ್ಷಾಭೇದದಿಂದ ತತ್ವಗಳ ಸಂಖ್ಯೆಯು ಬಹುರೀತಿ ಆಗುವುದು.

**ತತ್ವಾನಾಂ** ಕಾರ್ಯಕಾರಣರೂಪವಾದ ತತ್ವಗಳಿಗೆ **ಪರಸ್ಪರಾನು-ಪ್ರವೇಶಾತ್** ಕಾರಣಗಳಲ್ಲಿ ಕಾರ್ಯಗಳಿಗೆ, ಕೆಲವೆಡೆ ಕಾರ್ಯಗಳಲ್ಲಿ ಕಾರಣಗಳಿಗೆ ಅಂತರ್ಭಾವವಿರುವುದರಿಂದ ಮತ್ತು ಅಂತರ್ಭಾವ ಮಾಡದೇ

ಇರುವುದರಿಂದಲೂ **ಪೌರ್ವಾಪರ್ಯಪ್ರಸಂಖ್ಯಾನಂ** ಹೆಚ್ಚು ಕಡಿಮೆಯಾಗಿ ತತ್ವಗಳ ಗಣನೆಯು **ವಕ್ತುಃ ಯಥಾ ವಿವಕ್ಷಿತಂ ತಥಾ ಕ್ರಿಯತೇ** ಹೇಳುವವರ ವಿವಕ್ಷೆಯಿಂದ ಮಾಡಲ್ಪಡುವುದು. ಪೂರ್ವಾ ಎಂದರೆ ಅಲ್ಪಸಂಖ್ಯೆಯು. ಅಪರಾ ಎಂದರೆ ಬಹುಸಂಖ್ಯೆ. ಅವುಗಳ ಸಂಬಂಧಿಯಾದುದು ಎಂದರ್ಥ. ಉದಾಹರಣೆಗೆ ಕಾರಣದಲ್ಲಿ ಕಾರ್ಯದ ಅನುಪ್ರವೇಶದಿಂದ ಕಾರ್ಯ-ಕಾರಣಗಳಿಗೆ ಅಭೇದವಿವಕ್ಷಾದಿಂದ ಏಳು ಎಂದು, ಒಂಭತ್ತು ಎಂದೂ (ಪೂರ್ವ) ಅಲ್ಪಸಂಖ್ಯೆಯು. ಕಾರ್ಯಕಾರಣಗಳು ಬೇರೆ ಎಂಬ ವಿವಕ್ಷೆಯಿಂದ ಹನ್ನೊಂದು ಮುಂತಾದ (ಅಪರಾ) ಬಹುಸಂಖ್ಯೆಯು ಎಂದು ಭಾವ.॥೭॥

ಪೌರ್ವಾಪರ್ಯವನ್ನು ವಿವರಿಸುವರು -

**ಏಕಸ್ಮಿನ್ನಪಿ ದೃಶ್ಯಂತೇ ಪ್ರವಿಷ್ಟಾನೀತರಾಣಿ ಚ ।**
**ಪೂರ್ವಸ್ಮಿನ್ ವಾಽಪರಸ್ಮಿನ್ ವಾ ತತ್ತ್ವೇ ತತ್ತ್ವಾನಿ ಸರ್ವಶಃ ॥೮॥**

**ಏಕಸ್ಮಿನ್ ಅಪಿ ಪೂರ್ವಸ್ಮಿನ್ ತತ್ತ್ವೇ** ಒಂದೇ ಆದ ಪೂರ್ವಭಾವಿಯಾದ ಕಾರಣದಲ್ಲಿಯಾಗಲಿ **ಇತರಾಣಿ ಸರ್ವಶಃ ತತ್ತ್ವಾನಿ** ಎಲ್ಲ ತತ್ವಗಳು **ಅಪರಸ್ಮಿನ್ ತತ್ತ್ವೇ ವಾ** ಕಾರ್ಯದಲ್ಲಿಯಾಗಲಿ 'ವ್ಯಾಪ್ತಂ ಕಾರ್ಯೇಷು ಕಾರಣಂ' ಎಂದು ವಚನವಿದೆ. **ಪ್ರವಿಷ್ಟಾನಿ** ಪ್ರವಿಷ್ಟವಾಗಿ **ದೃಶ್ಯಂತೇ** ತಿಳಿಯುವವು (ಕಾಣುವವು).

**ಪೌರ್ವಾಪರ್ಯಮಥೋಽಮೀಷಾಂ ಪ್ರಸಂಖ್ಯಾನಮಭೀಪ್ಸತಾಮ್ ॥೯॥**

**ಯಥಾ ವಿವಿಕ್ತಂ ಯದ್ ಯುಕ್ತಂ ಗೃಹ್ಣೀಮೋ ಯುಕ್ತಿಸಂಭವಾತ್॥೧೦॥**

**ಅಮೀಷಾಂ** ಈ ತತ್ವಗಳ **ಪ್ರಸಂಖ್ಯಾನಂ ಅಭೀಪ್ಸತಾಂ** ಗಣನೆಯನ್ನು ಇಚ್ಛಿಸುವವರಿಗೆ **ಪೌರ್ವಾಪರ್ಯಂ ಯುಜ್ಯತೇ** ಅಲ್ಪ, ಬಹು, ಎಂಬ ಸಂಖ್ಯಾ ಹೇಳುವುದು ಯುಕ್ತವಾಗುವುದು. ಈ ಋಷಿಗಳ ಮತವು ನಿನಗೆ ಸಮ್ಮತವೇ? ಅಲ್ಲವೇ? ಎಂದರೆ ಹೇಳುವರು- **ಯಥಾ** ಋಷಿಗಳು ಹೇಳಿದುದು ನಿಜವೇ ಆಗಿದೆ. **ವಿವಿಕ್ತಂ** ಪ್ರತ್ಯೇಕವಾಗಿದೆ, ಸ್ಪಷ್ಟವಾಗಿದೆ. ಆದ್ದರಿಂದಲೇ **ಯುಕ್ತಂ** ಉಪಪನ್ನವಾಗಿದೆ. **ಯತ್** ಯಾವ ಕಾರಣ **ಗೃಹ್ಣೀಮಃ** ಸ್ವೀಕರಿಸುವೆವು. **ಯುಕ್ತಿಸಂಭವಾತ್** ಯುಕ್ತಿ ಇರುವುದರಿಂದ ಗ್ರಾಹ್ಯವೆಂದು ಭಾವ.॥೯-೧೦॥

ಈ ರೀತಿ ಅನೇಕ ತತ್ತ್ವಗಳನ್ನು ಪರಿಗಣಿಸುವ ಋಷಿಗಳೂ ಸಹ ಅವಶ್ಯವಾಗಿ ಸರ್ವತಂತ್ರಸ್ವತಂತ್ರನಾದ ಭಗವಂತನನ್ನು ಅಂಗೀಕರಿಸಲೇಬೇಕು, ಎಂದು ಹೇಳುವರು -

**ಅನಾದ್ಯವಿದ್ಯಾಯುಕ್ತಸ್ಯ ಪುರುಷಸ್ಯಾತ್ಮವೇದನಮ್ ।**
**ಸ್ವತೋ ನ ಸಂಭವೇದ್ಯಸ್ಮಾತ್ ತತೋಽನ್ಯಃ ಪುರುಷೋ ಭವೇತ್॥೧೧॥**

**ಪುರುಷೇಶ್ವರಯೋರತ್ರ ನ ವೈಲಕ್ಷಣ್ಯಮಣ್ವಪಿ ।**
**ತದನ್ಯಕಲ್ಪನಾಽಪಾರ್ಥಾ ಜ್ಞಾನಂ ಚ ಪ್ರಕೃತೇರ್ಗುಣಃ ॥೧೨॥**

**ಅನಾದ್ಯವಿದ್ಯಾಯುಕ್ತಸ್ಯ** ಅನಾದಿಕಾಲದಿಂದಲೂ ಅಜ್ಞಾನದಿಂದ ಕೂಡಿದ **ಪುರುಷಸ್ಯ** ದೇಹಗಳನ್ನು ಪಡೆಯುತ್ತಲೇ ಇರುವ ಜೀವನಿಗೆ **ಆತ್ಮವೇದನಂ** ತನ್ನ ಸ್ವರೂಪಜ್ಞಾನವಾಗಲಿ ಪರಮಾತ್ಮನ ಪರೋಕ್ಷ,ಅಪರೋಕ್ಷಜ್ಞಾನಗಳಾಗಲಿ **ಸ್ವತಃ** ತನ್ನ ಶಕ್ತಿಯಿಂದ **ಯಸ್ಮಾತ್ ನ ಸಂಭವೇತ್** ಆಗಲಾರದೋ ಆದ ಕಾರಣ **ಪುರುಷಃ** ಪೂರ್ಣಷಡ್ಗುಣನಾದ **ತತಃ ಅನ್ಯಃ** ಜೀವಭಿನ್ನನಾದವನು ಜ್ಞಾನಪ್ರದನು ಎಂದು **ಭವೇತ್** ಅಂಗೀಕರಿಸಲೇಬೇಕು. **ಪುರುಷೇಶ್ವರಯೋಃ** ಹೃದಯದಲ್ಲಿದ್ದು ಜೀವನಿಗೆ ಜ್ಞಾನಪ್ರದನಾಗಿ ಪುರುಷನಾಮಕನಾದ, ಹೊರಗಿದ್ದು ಜ್ಞಾನಫಲ ನೀಡುವ ಈಶ್ವರನಾಮಕನಾದ ಶ್ರೀಹರಿಯ ರೂಪಗಳಿಗೆ **ಅಣ್ವಪಿ ವೈಲಕ್ಷಣ್ಯಂ ನ** ಸ್ವಲ್ಪವೂ ಭೇದವಿಲ್ಲ. **ತದನ್ಯಕಲ್ಪನಾ** ಪುರುಷ ಮತ್ತು ಈಶ್ವರರಿಗೆ ಭೇದವನ್ನು ತಿಳಿಯುವುದು **ಅಪಾರ್ಥಾ** ಪ್ರಯೋಜನವಿಲ್ಲದ್ದು, ಅನರ್ಥದಾಯಕವು.

ಜ್ಞಾನಸ್ವರೂಪನಾದ ಜೀವನಿಗೆ ಜ್ಞಾನವನ್ನು ಕೊಡುವುದೆಂತು ಎಂಬುದಕ್ಕೆ ಉತ್ತರ - **ಜ್ಞಾನಂ** ಹುಟ್ಟುವ ಜ್ಞಾನವು **ಪ್ರಕೃತೇಃ ಗುಣಃ** ಪ್ರಕೃತಿಕಾರ್ಯವಾದ ಸತ್ವಗುಣದಿಂದ ಜನ್ಯವು. ಅಂದರೆ ಸ್ವರೂಪಜ್ಞಾನವೂ ಜೀವನಿಗೆ ಸದಾ ವಿಷ್ಣುವಿನಿಂದ ನಿಯತವಾದುದು. ಭಕ್ತಿಯಿಂದ ಪ್ರಾಕೃತಜ್ಞಾನ ನೀಡುವನು ಎಂದು ಭಾವ.॥೧೧-೧೨॥

**ತಾತ್ಪರ್ಯ - ಸರ್ವಥಾ ಜೀವಾದನ್ಯಃ ಪರಮೇಶ್ವರಃ ಅಂಗೀಕರ್ತವ್ಯಃ ।**
**ಜೀವಸ್ಯ ಸ್ವತ ಏವ ಜ್ಞಾನಾಯೋಗಾತ್ ।**

ಜೀವನಿಗೆ ಶ್ರೀಹರಿಯ ಅನುಗ್ರಹವಿಲ್ಲದೇ ತನ್ನ ಶಕ್ತಿಯಿಂದಲೇ

ಶ್ರೀಹರಿಯ ಹಾಗೂ ತನ್ನ ಸಾಕ್ಷಾತ್ಕಾರವಾಗದಿರುವದರಿಂದ ಜೀವಭಿನ್ನನಾದ ಜ್ಞಾನಪ್ರದನಾದ ಈಶ್ವರನನ್ನು ಅಂಗೀಕರಿಸಲೇಬೇಕು.

''**ಅಜ್ಞಾನಾಂ ಜ್ಞಾನದೋ ವಿಷ್ಣುಃ**'' ಎಂದಿರುವುದರಿಂದ ಇಲ್ಲಿಯವರೆಗೆ ಜೀವ ಭಿನ್ನನಾದ ಈಶ್ವರನನ್ನು ಸಾಧಿಸಿ ಅದಕ್ಕೆ ವಿರುದ್ಧವಾಗಿ ಭೇದವಿಲ್ಲವೆಂದು ಇಲ್ಲಿ (೧೨ರಲ್ಲಿ) ಹೇಳುವುದು ಹೇಗೆ? ಎಂದರೆ ತಾತ್ಪರ್ಯ ಹೇಳುವರು-

**ತಾತ್ಪರ್ಯ-** ಸ ಚ ಪುರುಷರೂಪೇಣಾಂತಃಸ್ಥಿತ್ವಾ ಜ್ಞಾನಮುತ್ಪಾದಯತಿ। ಈಶ್ವರರೂಪೇಣ ಬಹಿಸ್ಥಃ ಫಲಂ ದದಾತಿ। ನಚ ತಯೋಃ ಸ್ವರೂಪಯೋಃ ಕಿಂಚಿದ್ ವೈಲಕ್ಷಣ್ಯಂ ತಯೋಶ್ಚಾನ್ಯತ್ವಕಲ್ಪನಾ ತತ್ಸ್ವರೂಪಾದಪಗಮನಪ್ರಯೋಜನಾ ಅನರ್ಥ-ಕಾರಿಣೀತ್ಯರ್ಥಃ। ಜ್ಞಾನಸ್ವರೂಪಸ್ಯ ಜೀವಸ್ಯ ಕಥಂ ಜ್ಞಾನೋತ್ಪಾದನಂ ಇತ್ಯತೋ ವಕ್ತಿ- ಜ್ಞಾನಂ ಚ ಪ್ರಕೃತೇರ್ಗುಣಃ ಇತಿ। ಜನ್ಯಜ್ಞಾನಂ ಪ್ರಕೃತೇರ್ಗುಣಃ।

ಸ್ವರೂಪಭೂತಂ ಜ್ಞಾನಂ ತು ಸದಾ ಜೀವಸ್ಯ ವಿಷ್ಣುನಾ।
ನಿಯತಂ ಪ್ರಾಕೃತಂ ಜ್ಞಾನಂ ಭಕ್ತ್ಯಾ ತೇನೈವ ದೀಯತೇ ॥ -ಇತಿ ಚ

ಜೀವನಿಂದ ಭಿನ್ನನಾದ ಶ್ರೀಹರಿಯು ಪುರುಷನಾಮಕನಾಗಿ ಜೀವನ ಹೃದಯದಲ್ಲಿದ್ದು ಜೀವರಿಗೆ ಜ್ಞಾನ ಹುಟ್ಟಿಸುವನು. ಈಶ್ವರನಾಮಕನಾಗಿ ಹೊರಗೆ ಇದ್ದು ಜ್ಞಾನಫಲವಾದ ಮುಕ್ತಿಯನ್ನು ನೀಡುವನು. ಹೀಗೆ ಪುರುಷ, ಈಶ್ವರ ಎಂಬ ಎರಡು ರೂಪಗಳಿಗೆ ಸ್ವಲ್ಪವೂ ಭೇದವಿಲ್ಲ. ಅವುಗಳಿಗೆ ಭೇದ ತಿಳಿಯುವುದು ಅನರ್ಥಕಾರಿಯು. ಜ್ಞಾನಸ್ವರೂಪನಾದ ಜೀವನಿಗೆ ಜ್ಞಾನ-ವನ್ನು ಹುಟ್ಟಿಸುವುದು ಹೇಗೆ ಯುಕ್ತವಾಗುವುದು ಎಂದರೆ? ಜನ್ಯಜ್ಞಾನವು ಪ್ರಕೃತಿಯ ಸತ್ವಗುಣದಿಂದ ಹುಟ್ಟಿದ್ದು. '**ಪುರುಷಸ್ಯ ಆತ್ಮವೇದನಂ**' ಎಂಬಲ್ಲಿ ಪುರುಷಶಬ್ದಕ್ಕೆ ಜೀವನೆಂದರ್ಥ. '**ಅನ್ಯಃ ಪುರುಷಃ, ಪುರುಷೇಶ್ವರಯೋಃ**' ಎಂಬಲ್ಲಿಯ ಪುರುಷಶಬ್ದಗಳಿಗೆ ಭಗವಂತ, ಹಾಗೂ ಭಗವಂತನ ರೂಪಗಳೆಂದರ್ಥ.

ಜೀವನಿಗೆ ಸ್ವರೂಪಜ್ಞಾನವು ಶ್ರೀವಿಷ್ಣುವಿನಿಂದ ನಿಯಮಿತವಾಗಿ ಸದಾಕಾಲ ಇರುವುದು. ಪ್ರಾಕೃತವಾದ ಪರೋಕ್ಷವಾದ ಜ್ಞಾನವನ್ನು ಜೀವರ ಭಕ್ತ್ಯಾದಿಗಳ ಸಾಧನಗಳನ್ನು ಅಪೇಕ್ಷಿಸಿ ಅಂತಸ್ಥವಾದ ಪುರುಷರೂಪದಿಂದ ನೀಡುವನು.

ಸ್ವರೂಪಜ್ಞಾನದ ಸತ್ತಾ, ಅಭಿವ್ಯಕ್ತಿ, ಅರ್ಥವಿಷಯಕತ್ವ ಇವೆಲ್ಲ ಭಗವದಧೀನವಾಗಿದೆ. ಆದ್ದರಿಂದ ಒಪ್ಪಲೇಬೇಕು. ಅಲ್ಲದೇ ಅವಿದ್ಯೆಯಿಂದ ಪರತತ್ವ-ಜ್ಞಾನವು ಪ್ರತಿಬದ್ಧವಾಗಿರುತ್ತದೆ. ಹರಿಯ ಅನುಗ್ರಹದಿಂದಲೇ ಆ ಪರತತ್ವ-ಜ್ಞಾನವು ಬರುತ್ತದೆ. ಅದಕ್ಕಾಗಿ ಪ್ರಸಾದ ಬೇಕು.॥೧೧-೧೨॥

ಹುಟ್ಟುವ ಜ್ಞಾನ ಪ್ರಾಕೃತವೆಂಬುದನ್ನು ಹೇಳುವರು -

**ಪ್ರಕೃತೇರ್ಗುಣಸಾಮ್ಯೇ ತು ಪ್ರಕೃತೇರ್ನಾತ್ಮನೋ ಗುಣಾಃ ।**
**ಸತ್ವಂ ರಜಸ್ತಮ ಇತಿ ಸ್ಥಿತ್ಯುತ್ಪತ್ತ್ಯಂತಹೇತವಃ ॥೧೩॥**

**ಪ್ರಕೃತೇಃ ಗುಣಸಾಮ್ಯೇ** ಪ್ರಲಯಕಾಲದಲ್ಲಿರುವ **ಆತ್ಮನಃ** ಜೀವನಿಗೆ **ಯಥಾ ಸ್ಥಿತ್ಯುತ್ಪತ್ತ್ಯಂತಹೇತವಃ** ಸ್ಥಿತಿ, ಉತ್ಪತ್ತಿ, ನಾಶಕಾರಣಗಳಾದ, **ಸತ್ವಂ ರಜಃ ತಮಃ ಇತಿ ಪ್ರಕೃತೇಃ ಗುಣಾಃ ನ** ಪ್ರಕೃತಿಗುಣಗಳಾದ ಸತ್ವ, ರಜಸ್ಸು, ತಮಸ್ಸುಗಳು (ಶ್ರೀಹರಿಯ ಇಚ್ಛಾನಿಯತವಾದ ಪ್ರವೃತ್ತಿ ಇಲ್ಲದಿರುವುದರಿಂದ, ಸ್ಥೂಲ ದೇಹವಿಲ್ಲದ್ದರಿಂದ) ಆವರಕವಾಗಲಾರವು.

ಪ್ರಕೃತಕ್ಕೆ ಏನು ಸಂಬಂಧ ಎಂದರೆ ಹೇಳುವರು -

**ಸತ್ವಂ ಜ್ಞಾನಂ ರಜಃ ಕರ್ಮ ತಮೋಽಜ್ಞಾನಮಿಹೋಚ್ಯತೇ ।**
**ಗುಣವ್ಯತಿಕರಃ ಕಾಲಃ ಸ್ವಭಾವಃ ಸೂತ್ರಮೇವ ಚ ॥೧೪॥**

ಇಹ ಸೃಷ್ಟಿಕಾಲದಲ್ಲಿ **ಜ್ಞಾನಂ ಸತ್ವಂ** ಜ್ಞಾನವು ಸತ್ವಗುಣಜನ್ಯವಾದುದು **ರಜಃ ಕರ್ಮ** ಕರ್ಮವು ರಜೋಗುಣಜನ್ಯವಾದುದು **ತಮಃ ಅಜ್ಞಾನಂ** ಅಜ್ಞಾನವು ತಮೋಗುಣಜನ್ಯವಾದುದು. ಪ್ರಲಯಕಾಲ ಮತ್ತು ಸೃಷ್ಟಿಕಾಲ-ದಲ್ಲಿ ಈ ವಿಶೇಷವಿರುವುದರಿಂದ ಬಾಹ್ಯಜ್ಞಾನವು ಪ್ರಾಕೃತವೆಂದು ಸಿದ್ಧವಾಯಿತು.

ಅಥವಾ **ಗುಣಸಾಮ್ಯೇ ತು** ಪ್ರಲಯಕಾಲದಲ್ಲಾಗಲಿ ಸೃಷ್ಟಿಕಾಲದಲ್ಲಾಗಲಿ **ಪ್ರಕೃತೇಃ ಗುಣಾಃ** ಸತ್ವಾದಿಗಳು **ಆತ್ಮನಃ** ಪರಮಾತ್ಮನಿಗೆ **ನ** ವಿಶೇಷಾಪಾದಕ-ಗಳಲ್ಲ. ಕಿಂತು ಜೀವನಿಗೇನೆ ಅದು. ಎಂದರೆ ಸತ್ವಂ, ಜ್ಞಾನಂ, ರಜಃ, ಕರ್ಮ ಮುಂತಾಗಿ ಹೇಳಿದಂತೆ ಬಾಹ್ಯಜ್ಞಾನಾದಿ ಜನಕವಾಗಿವೆ.

'**ಪ್ರಕೃತೇರ್ಗುಣಸಾಮ್ಯೇ ತು**' ಎಂಬ ಶ್ಲೋಕಕ್ಕೆ ಸಂಗತಿಯನ್ನು ತೋರಿಸುವರು-

**ತಾ**-ಜನ್ಯಜ್ಞಾನಸ್ಯ ಪ್ರಾಕೃತತ್ವಂ ಸಾಧಯತಿ ಪ್ರಕೃತೇರ್ಗುಣಸಾಮ್ಯೇತ್ಯಿತ್ಯಾದಿನಾ ।

'**ಪ್ರಕೃತೇರ್ಗುಣಸಾಮ್ಯೇ ತು**' ಎಂಬ ಶ್ಲೋಕದಿಂದ ಜನ್ಯಜ್ಞಾನವು ಪ್ರಾಕೃತವಾಗಿದೆ ಎಂಬುದನ್ನು ಹೇಳುತ್ತಾರೆ ಎಂದು ಅರ್ಥ.

ಹಿಂದಿನ ಶ್ಲೋಕದಲ್ಲಿ '**ಸ ಚ ಪುರುಷರೂಪೇಣ**' ಮುಂತಾಗಿ ಆಚಾರ್ಯರು ತಾವು ಹೇಳಿದ ವಿಷಯದಲ್ಲಿ ಪ್ರಮಾಣ ಹೇಳುವರು -

> **ತಾತ್ಪರ್ಯ**-ಅಂತಃಸ್ಥಃ ಪುರುಷೋ ನಾಮ ಜ್ಞಾನದಃ ಸರ್ವದೇಹಿನಾಮ್ ।
> ಬಹಿಸ್ಥ ಈಶ್ವರೋ ನಾಮ ಜ್ಞಾನಾದಿಫಲದೋ ಹರಿಃ ॥ ಇತಿ ಮಾತ್ಸ್ಯೇ ।
>
> ಪುರುಷಾಖ್ಯೋ ಹೃದ್ಗತಸ್ತು ವಿಷ್ಣುರ್ಜೀವವಿಬೋಧಕಃ ।
> ಫಲದಾತ್ರಾ ತು ಬಾಹ್ಯೇನ ಯ ಈಶೇನ ಭಿದಾಂ ವದೇತ್ ॥
>
> ತಥೈವಾನ್ಯಸ್ವರೂಪೇಷು ವಿಷ್ಣೋರ್ಯೋ ಭೇದದರ್ಶಕಃ ।
> ಯಶ್ಚ ಜೀವೇಶ್ವರಾಭೇದಂ ಪಶ್ಯೇತ್ತೇऽನರ್ಥಭಾಗಿನಃ ॥ ಇತಿ ಬ್ರಾಹ್ಮೇ ।

ಶ್ರೀಹರಿಯು ಪುರುಷನೆಂಬ ಹೆಸರಿನಿಂದ ಹೃದಯದಲ್ಲಿದ್ದು ಸಮಸ್ತ ಪ್ರಾಣಿಗಳಿಗೆ ಜ್ಞಾನವನ್ನೂ, ಈಶ್ವರನೆಂಬ ಹೆಸರಿನಿಂದ ಹೊರಗೆ ಇದ್ದು ಜ್ಞಾನಾದಿಗಳ ಫಲವಾದ ಮೋಕ್ಷಾದಿಗಳನ್ನು ಕೊಡುವನು. ಎಂದು ಮಾತ್ಸ್ಯಪುರಾಣದಲ್ಲಿದೆ.

ಪುರುಷನೆಂಬ ಶ್ರೀಹರಿಯು ಹೃದಯದಲ್ಲಿದ್ದು ಜೀವರಿಗೆ ಜ್ಞಾನವನ್ನು ಕೊಡುವನು. ಫಲಪ್ರದನಾದ ಹೊರಗಿರುವ ಈಶ್ವರನಿಂದ ಪುರುಷನೆಂಬ ಶ್ರೀಹರಿಗೆ ಮತ್ತು ಇತರ ರೂಪಗಳಿಗೂ ಭೇದವನ್ನು ಹೇಳುವವನೂ, ಜೀವೇಶ್ವರರಿಗೆ ಅಭೇದವನ್ನು ಹೇಳುವವನೂ ಎಲ್ಲರೂ ಅನರ್ಥವನ್ನು ಹೊಂದುವರು. ಎಂದು ಬ್ರಾಹ್ಮಪುರಾಣದಲ್ಲಿ ಹೇಳಿದೆ.॥೧೪॥

ಇನ್ನು ಮುಂದೆ ಋಷಿಗಳಿಂದ ಹೇಳಲ್ಪಟ್ಟ ತತ್ವಗಳ ಸಂಖ್ಯಾಭೇದವನ್ನು ವಿವರಿಸುತ್ತ ಸರ್ವರಿಂದಲೂ ಅವಶ್ಯ ಅಂಗಿಕರಿಸಲೇಬೇಕೆಂದು ಹೇಳಿದ ಎಲ್ಲ ತತ್ವಗಳಿಗೆ ಸ್ವತಂತ್ರ ಕಾರಣ ಸ್ವರೂಪವನ್ನು ಹೇಳುವರು.

ಕೆಲವರು ಭಗವಂತನನ್ನು ಸ್ವತಂತ್ರನೆಂದು ಅಂಗೀಕರಿಸುವುದಿಲ್ಲ. ಸೃಷ್ಟಿಕಾಲವೇ ಸ್ವತಂತ್ರವೆಂದು ಅಂಗೀಕರಿಸುತ್ತಾರೆ. ಮತ್ತೆ ಕೆಲವರು ಸ್ವಭಾವವೇ ಸ್ವತಂತ್ರವೆಂದು ಹೇಳುತ್ತಾರೆ. ಮತ್ತೆ ಕೆಲವರು ಸೂತ್ರನು ಪ್ರಧಾನ ಎಂದು ಹೇಳುತ್ತಾರೆ. ಅದು ಸರಿಯಲ್ಲ. ಭಗವಂತನೇ ಎಲ್ಲ ಶಬ್ದದಿಂದ ಕರೆಸಿಕೊಳ್ಳುವನು, ಎಂದು '**ಗುಣವ್ಯತಿಕರಃ**' ಮುಂತಾಗಿ ಹೇಳಿರುವರು-

**ಗುಣವ್ಯತಿಕರಃ** ಸತ್ವಾದಿಗುಣಗಳಿಗೆ ಮಹತ್ತತ್ವಾದಿಗಳಾಗಿ ವಿಕಾರವಾಗಲು ಕಾರಣನಾದ (ಗುಣಾನಾಂ ವ್ಯತಿಕರೋ ಯಸ್ಮಾತ್ ಸಃ) **ಕಾಲಃ** (ಕಾಲೋ ಭಗವಾನ್) ಭಗವಂತನು ಸೃಷ್ಟ್ಯಾದಿಗಳನ್ನು ಮಾಡಿ ಬ್ರಹ್ಮಾದಿಗಳಿಗೆ ಅಭೀಷ್ಟಪ್ರದನಾದವನು. (ಕಲ ಕಾಮಧೇನೌ ಎಂದು ಧಾತು ಇದೆ.) ಸರ್ವಗುಣಪೂರ್ಣನೂ ಆದ್ದರಿಂದ ಕಾಲನಾಮಕನು. **ಸ್ವಭಾವಃ** ಸ್ವತಂತ್ರನು. **ಸೂತ್ರಂ** ಸರ್ವಾಧಾರನು. '**ಅಕ್ಷರಮಂಬರಾಂತಧೃತೇಃ**' ಎಂಬ ಸೂತ್ರದಲ್ಲಿ ಸರ್ವಾಧಾರತ್ವ ವಿಷ್ಣುಲಿಂಗವೆಂದು ನಿಶ್ಚಯಿಸಿದೆ, ವಾಯುಶಬ್ದ ಸಾವಕಾಶವಾಗಿದೆ.

'**ಪುರುಷಃ ಪ್ರಕೃತಿಃ**' ಎಂಬ ಶ್ಲೋಕದಲ್ಲಿ ಏನು ಹೇಳುವರು ಎಂಬುದನ್ನು ತಿಳಿಸುವರು -

> **ತಾತ್ಪರ್ಯ**- ''ನವೈಕಾದಶ ಪಂಚ ತ್ರೀಣಿ'' ಇತ್ಯುಕ್ತಾನಿ ಪುರುಷಃ ಪ್ರಕೃತಿರಿತ್ಯಾದೀನಿ ।

ಋಷಿಗಳು ವಿವಕ್ಷಾಭೇದದಿಂದ ಒಂಬತ್ತು, ಹನ್ನೊಂದು, ಐದು, ಮೂರು, ಎಂದು ಹೇಳಿದ ತತ್ವಗಳನ್ನೇ ಪುರುಷಃ ಪ್ರಕೃತಿ ಮುಂತಾಗಿ ಹೇಳುವರು ಎಂದರ್ಥ.।।೧೪।।

ಅವುಗಳಲ್ಲಿ ಒಂಬತ್ತು ತತ್ವಗಳನ್ನು ತೋರಿಸುವರು -

**ಪುರುಷಃ ಪ್ರಕೃತಿರ್ವ್ಯಕ್ತಮಹಂಕಾರೋ ನಭೋಽನಿಲಃ ।**
**ಜ್ಯೋತಿರಾಪಃ ಕ್ಷಿತಿರಿತಿ ತತ್ತ್ವಾನ್ಯುಕ್ತಾನಿ ಮೇ ನವ ।।೧೫।।**

**ಪುರುಷಃ** ಹಿರಣ್ಯಗರ್ಭನು **ಪ್ರಕೃತಿಃ** ಗಾಯತ್ರಿಯು **ವ್ಯಕ್ತಂ** ರುದ್ರದೇವರು **ಅಹಂಕಾರಃ** ಸ್ಕಂದನು **ನಭಃ** ಆಕಾಶವು **ಅನಿಲಃ** ವಾಯುವು **ಜ್ಯೋತಿಃ** ಅಗ್ನಿಯು

**ಆಪಃ** ನೀರು, **ಕ್ಷಿತಿಃ** ಭೂಮಿಯು **ಇತಿ** ಹೀಗೆ **ಮೇ** (ಮಮ) ನನ್ನಿಂದ **ನವ ತತ್ತ್ವಾನಿ ಉಕ್ತಾನಿ** ಒಂಬತ್ತು ತತ್ತ್ವಗಳು ಹೇಳಲ್ಪಟ್ಟಿವೆ.

ಮೂಲದಲ್ಲಿ ತತ್ತ್ವಗಳನ್ನು ಹೇಳಲು ಹೊರಟು ಆ ಎಲ್ಲ ತತ್ತ್ವಗಳು ಸ್ವತಂತ್ರತತ್ತ್ವದ ಅಧೀನ ಎಂಬ ಅಭಿಪ್ರಾಯದಿಂದ '**ಅನಾದ್ಯವಿದ್ಯಾ**' ಎಂಬ (೧೧ನೇ) ಶ್ಲೋಕದಲ್ಲಿ ಸರ್ವವಿಲಕ್ಷಣವೆಂದು ಸಾಧಿತವಾದ ಸ್ವತಂತ್ರತತ್ತ್ವವು ಸರ್ವಸ್ರಷ್ಟೃವು, ಸರ್ವಾಧಾರ, ಸ್ವಭಾವ, ಸ್ವತಂತ್ರ, ಕಾಲನಾಮಕ ಮುಂತಾಗಿ ಹೇಳಿ '**ನವೈಕಾದಶ**' ಎಂದು ಪ್ರಾರಂಭಿಸಿ ಒಂಭತ್ತು ಪರತಂತ್ರತತ್ತ್ವಗಳನ್ನು ಈ ಶ್ಲೋಕದಲ್ಲಿ ಹೇಳುವರು. ಇಲ್ಲವಾದರೆ ಹದಿಮೂರು ಹೇಳಿ ಒಂಬತ್ತು ಎಂದು ಹೇಳುವುದು ಯುಕ್ತವಾಗಲಾರದು.||೧೫||

ಹನ್ನೊಂದು ತತ್ತ್ವಗಳನ್ನು ಹೇಳುವರು -

**ಶ್ರೋತ್ರಂ ತ್ವಗ್ ದರ್ಶನಂ ಘ್ರಾಣೋ ಜಿಹ್ವೇತಿ ಜ್ಞಾನಶಕ್ತಯಃ ।**
**ವಾಕ್‌ಪಾಣ್ಯುಪಸ್ಥಪಾಯ್ವಂಘ್ರಿಕರ್ಮಾಣ್ಯಂಗೋಭಯಂ ಮನಃ ||೧೬||**

**ಅಂಗ** ಉದ್ಧವನೇ **ಶ್ರೋತ್ರಂ** ಕಿವಿಯು **ತ್ವಕ್** ಸ್ಪರ್ಶನೇಂದ್ರಿಯ **ದರ್ಶನಂ** ಕಣ್ಣು **ಘ್ರಾಣಃ** ಮೂಗು **ಜಿಹ್ವಾ** ನಾಲಿಗೆ **ಇತಿ** ಈ ರೀತಿ **ಜ್ಞಾನಶಕ್ತಯಃ** ಜ್ಞಾನೇಂದ್ರಿಯಗಳು **ವಾಕ್** ವಾಗಿಂದ್ರಿಯ (ಬಾಯಿ) **ಪಾಣಿ** ಕೈಗಳು **ಪಾಯು** ಗುದವು **ಉಪಸ್ಥ** ಜನನೇಂದ್ರಿಯ **ಅಂಘ್ರಿ** ಕಾಲುಗಳು, **ಕರ್ಮಾಣಿ** ಕರ್ಮೇಂದ್ರಿಯಗಳು **ಉಭಯಂ ಮನಃ** ಸಂಕಲ್ಪ ವಿಕಲ್ಪಾತ್ಮಕ ಮನಸ್ಸು ಹೀಗೆ ಹನ್ನೊಂದು ಇಂದ್ರಿಯಗಳು. ಇದನ್ನು ಮಾಡುವೆನು ಎಂಬುದು ಸಂಕಲ್ಪ. ಇದನ್ನು ಹೀಗೆ ಮಾಡುವೆನು ಎಂಬುದು ವಿಕಲ್ಪ.||೧೬||

ಪ್ರಾಸಂಗಿಕವಾಗಿ ಇವುಗಳ ವಿಷಯಗಳನ್ನು ಹೇಳುವರು -

**ಶಬ್ದಃ ಸ್ಪರ್ಶೋ ರಸೋ ಗಂಧೋ ರೂಪಂ ಚೇತ್ಯರ್ಥಜಾತಯಃ ।**
**ಗತ್ಯುಕ್ತ್ಯುತ್ಸರ್ಗಶಿಲ್ಪಾನಿ ಕರ್ಮಾಯತನಸಿದ್ಧಯಃ ||೧೭||**

ಶಬ್ದ, ಸ್ಪರ್ಶ, ರಸ, ಗಂಧ, ರೂಪ ಇವುಗಳು **ಅರ್ಥಜಾತಯಃ** ಜ್ಞಾನೇಂದ್ರಿಯ ವಿಷಯಸಮೂಹಗಳು **ಗತಿ** ಓಡಾಡುವುದು **ಉಕ್ತಿ** ಮಾತನಾಡುವುದು **ಉತ್ಸರ್ಗ** (ಮೂತ್ರೋತ್ಸರ್ಗ) ರೇತೋತ್ಸರ್ಗ(ವಿಸರ್ಜನ)

(ಮಲೋತ್ಸರ್ಗ) ಮಲವಿಸರ್ಜನೆ **ಶಿಲ್ಪಾನಿ** ಕರಕೌಶಲ ಇವುಗಳು **ಕರ್ಮಾಯತನಸಿದ್ಧಯಃ** ಕರ್ಮ-ಸಾಧನೇಂದ್ರಿಯಗಳಕಾರ್ಯಗಳು.॥೧೬॥

**'ನವೈಕಾದಶ ಪಂಚ'** ಎಂಬಲ್ಲಿ ಹೇಳಿದ ಶಬ್ದ, ಸ್ಪರ್ಶ, ಮುಂತಾದ ಐದು ತತ್ವಗಳನ್ನು ಹೇಳಿದ ಮೇಲೆ ಗತ್ಯುಕ್ತಿ ಇತ್ಯಾದಿ ಹೇಳುವುದು ವ್ಯರ್ಥ. ಪಂಚ ಎಂಬಲ್ಲಿ ಎರಡು ಪಂಚಕವಿವಕ್ಷೆ ಇರುವುದರಿಂದ ಗತ್ಯಾದಿಗಳನ್ನು ಹೇಳಿರುವುದು ಸಾರ್ಥಕ ಎನ್ನಲು ಬರುವುದಿಲ್ಲ. ಏಕೆಂದರೆ ಇಲ್ಲಿ ನಾಲ್ಕೇ ಹೇಳಿರುವುದರಿಂದ ಎರಡು ಪಂಚಕಗಳಾಗಲಾರವು, ಎಂದು ಶಂಕಿಸಿ ಉತ್ತರಿಸುವರು -

**ತಾತ್ಪರ್ಯ- ಉತ್ಸರ್ಗಸ್ಯ ದ್ವಿವಿಧತ್ವಾತ್ ಪಂಚಕದ್ವಯಮ್ ।**

ಉತ್ಸರ್ಗ ಎಂಬುದು ಉಪಸ್ಥ, ಪಾಯು ಎಂಬ ಎರಡು ಇಂದ್ರಿಯ ವಿಷಯವಾಗಿದೆ. ಆದ್ದರಿಂದ ಎರಡು ವಿಧವಾಗುವುದರಿಂದ ಎರಡು ಪಂಚಕಗಳಾಗುವವು. ಕಾರಣ ನವೈಕಾದಶ ಪಂಚ ಎಂಬಲ್ಲಿ ಪಂಚಶಬ್ದಕ್ಕೆ ಆವೃತ್ತಿಮಾಡಿದಾಗ ಪಂಚಕದ್ವಯ ಲಾಭವಾಗುವುದು.॥೧೭॥

'ತ್ರೀನ್' ಎಂಬಲ್ಲಿ ಸತ್ವರಜಸ್ತಮ ಎಂಬ ಮೂರು ಗುಣಗಳೇ ಮೂರು ತತ್ವಗಳು ಎಂದು ಹೇಳಲು ಸತ್ವಾದಿಗುಣಗಳ ಪ್ರವೃತ್ತಿಪ್ರಕಾರವನ್ನು ಹೇಳುವರು-

**ಸರ್ಗಾದೌ ಪ್ರಕೃತಿರ್ಹ್ಯಸ್ಯ ಕಾರ್ಯಕಾರಣರೂಪಿಣೀ ।**
**ಸತ್ವಾದಿಭಿರ್ಗುಣೈರ್ಧತ್ತೇ ಪುರುಷೋಽವ್ಯಕ್ತಮೀಕ್ಷತೇ ॥೧೭॥**

**ಅಸ್ಯ** ಈ ಜಗತ್ತಿನ **ಸರ್ಗಾದೌ** ಸೃಷ್ಟಿಯ ಆದಿಯಲ್ಲಿ **ಕಾರ್ಯಕಾರಣರೂಪಿಣೀ** ಕಾರ್ಯಕಾರಣಾತ್ಮಕವಾದ ಜಡಪ್ರಕೃತಿಯ ಅಭಿಮಾನಿನಿಯಾದ **ಪ್ರಕೃತಿಃ** ಚಿತ್ಪ್ರಕೃತಿಯು **ಸತ್ವಾದಿಭಿಃ ಗುಣೈಃ** ಸತ್ವರಜಸ್ತಮೋಭಿಮಾನಿಗಳಾದ ಶ್ರೀ-ಭೂ-ದುರ್ಗಾರೂಪಗಳಿಂದ ಹಾಗೂ ಸರಸ್ವತಿದೇವಿಯು ಗಾಯತ್ರೀ-ಸಾವಿತ್ರೀ-ಸರಸ್ವತೀ ರೂಪಗಳಿಂದ **ಧತ್ತೇ** ಜಗತ್ತನ್ನು ಧರಿಸುವಳು. **ಪುರುಷಃ** ಕಾಲಾದಿನಾಮಕಹರಿಯು, ಹರಿಯಿಂದ ಅನುಗೃಹೀತನಾದ ಪುರುಷನಾಮಕ ಹಿರಣ್ಯಗರ್ಭನು **ಅವ್ಯಕ್ತಂ ಈಕ್ಷತೇ** ಅವ್ಯಕ್ತನಾಮಕ ಲಕ್ಷ್ಮೀ-ಸರಸ್ವತಿಯರನ್ನು ನೋಡುವರು, ಅಂದರೆ ಲಕ್ಷ್ಮೀಸರಸ್ವತಿಯರನ್ನು ನಿಮಿತ್ತಮಾಡಿ ವ್ಯಕ್ತಶಬ್ದ-ವಾಚ್ಯರಾದ ಬ್ರಹ್ಮರುದ್ರಾದಿಜಗತ್ತನ್ನು ಸೃಷ್ಟಿಸುವರೆಂದರ್ಥ.॥೧೭॥

ಮೇಲಿನ ಶ್ಲೋಕಕ್ಕೆ ಸಂಗತಿ ತಿಳಿಸುವರು.

**ತಾತ್ಪರ್ಯ-** ''ತ್ರೀನ್ ಇತಿ ತ್ರಿಗುಣಾನಿತಿ ವಕ್ತುಂ ಗುಣಪ್ರವೃತ್ತಿಮಾಹ ಸರ್ಗಾದಾವಿತ್ಯಾದಿನಾ ।

**ನವೈಕಾದಶಪಂಚತ್ರೀನ್**'' ಎಂಬಲ್ಲಿ ಮೂರು ತತ್ವಗಳು ಯಾವುವು ಎಂದರೆ ತ್ರೀನ್ ಎಂದು ಮೂರು ಗುಣಗಳು ವಿವಕ್ಷಿತವಾಗಿವೆ ಎಂದು ತಿಳಿಸಲು ಗುಣಗಳ ಪ್ರವೃತ್ತಿ ಪ್ರಕಾರವನ್ನು ಹೇಳುವರು. ಸರ್ಗಾದೌ ಎಂಬಲ್ಲಿ ಎಂದರ್ಥ.

**ವ್ಯಕ್ತಾದಯೋ ವಿಕುರ್ವಾಣಾ ಧಾತವೋ ಪುರುಷೇಹಯಾ ।**
**ಲಬ್ಧವೀರ್ಯಾಃ ಸೃಜಂತ್ಯಂಡಂ ಸಂಹತಾಃ ಪ್ರಕೃತೇರ್ಬಲಾತ್ ॥೧೮॥**

**ವ್ಯಕ್ತಾದಯಃ** ಅಹಂಕಾರಾದಿ ತತ್ವಗಳು ತದಭಿಮಾನಿಗಳಾದ ರುದ್ರಾದಿಗಳು **ವಿಕುರ್ವಾಣಾಃ** ವಿಕಾರ ಹೊಂದುವವರಾಗಿ ಅಂದರೆ ಕಾರ್ಯಕಾರಣ-ರೂಪದಿಂದ ಸ್ಪಷ್ಟರಾಗಿ **ಧಾತವಃ ಧಾತುನಾಮಾನಃ** ಧಾರಣಶೀಲರಾದ್ದರಿಂದ ಧಾತು ಎಂದು ಕರೆಸಿಕೊಳ್ಳುವವರು **ಪುರುಷೇಚ್ಛಯಾ** ಶ್ರೀಹರಿಯ ಇಚ್ಛೆಯಿಂದ ಪುರುಷೇಕ್ಷಯಾ ಎಂಬ ಪಾಠದಲ್ಲಿ ಶ್ರೀಹರಿಯ ಕೃಪಾಕಟಾಕ್ಷ-ದಿಂದ ಮತ್ತು **ಪ್ರಕೃತೇಃ** ಪ್ರೇರಕಳಾದ ಲಕ್ಷ್ಮೀದೇವಿಯ **ಬಲಾತ್** ಸಾಮರ್ಥ್ಯದಿಂದಲೂ **ಸಂಹತಾಃ** ಪರಸ್ಪರ ಸಂಬದ್ಧರಾಗಿ **ಲಬ್ಧವೀರ್ಯಾಃ** ಕಾರ್ಯ ಕಾರಣ ಶಕ್ತಿಯಿಂದ ಕೂಡಿದವರಾಗಿ **ಅಂಡಂ ಸೃಜಂತಿ** ಬ್ರಹ್ಮಾಂಡವನ್ನು ಸೃಷ್ಟಿಸುವರು. ಅಥವಾ **ಪ್ರಕೃತಿಃ** ಜಡಪ್ರಕೃತಿಯು **ಅಸ್ಯ** ಜಗತ್ತಿನ **ಸರ್ಗಾದೌ** ಸೃಷ್ಟಿಯ ಆದಿಭಾಗದಲ್ಲಿ **ಸತ್ವಾದಿಗುಣೈಃ** ಗುಣತ್ರಯಗಳಿಂದ **ಜಗತ್ ಧತ್ತೇ** ಜಗತ್ತನ್ನು ಧಾರಣ ಮಾಡುವುದು **ಪುರುಷಃ** ಶ್ರೀಹರಿಯು **ಅವ್ಯಕ್ತಂ** ಲಕ್ಷ್ಮೀಯನ್ನು **ಈಕ್ಷತೇ** ಪ್ರೇರಿಸುವನು. ಅವಳಿಂದ ನಿಯತರಾದ **ಧಾತವಃ** ರುದ್ರಾದಿಗಳು ಜಗತ್ತನ್ನು ಸೃಷ್ಟಿಸುವರು. ಕಾರಣಕಾರ್ಯಭಾವವಿರುವುದರಿಂದ ಪರಸ್ಪರ ಪ್ರವೇಶಯುಕ್ತವಾಗುವುದು ಎಂದು ಹೇಳಲು ಸೃಷ್ಟಿಯನ್ನು ಹೇಳಿದ್ದು. ಕಾರಣ ತತ್ವಗಳಿಗೆ ಅಲ್ಪಸಂಖ್ಯಾ ಯುಕ್ತವಾಗುವುದು.

ವ್ಯಕ್ತಾದಯೋ ವಿಕುರ್ವಾಣಾ ಎಂಬಲ್ಲಿ ಸೃಷ್ಟಿ ಹೇಳುವುದು ವ್ಯರ್ಥ ಎಂಬ ಶಂಕೆಗೆ ಉತ್ತರಿಸುವರು.

**ತಾತ್ಪರ್ಯ-** ಕಾರ್ಯಕಾರಣಭಾವಾತ್ ಅನ್ಯೋನ್ಯಾನುಪ್ರವೇಶಯುಕ್ತಃ ಇತಿ ವಕ್ತುಂ ಸೃಷ್ಟ್ಯುಕ್ತಿಃ ।

ಋಷಿಗಳು ಕೆಲವರು ಹೆಚ್ಚು ಕೆಲವರು ಕಡಿಮೆ ತತ್ವಗಳನ್ನು ಹೇಳುವರು. ನಿಜವಾಗಿ ಎಷ್ಟು ಹೇಳೆಂದು ಉದ್ಧವನು ಪ್ರಶ್ನಿಸಿದಾಗ ಪರಸ್ಪರ ಅನುಪ್ರವೇಶ-ವಿರುವುದರಿಂದ ನ್ಯೂನಾಧಿಕ ಸಂಖ್ಯೆ ಯುಕ್ತವಾಗುವುದು ಎಂದು ಉತ್ತರ ಹೇಳಿ ಒಂಭತ್ತು, ಹನ್ನೊಂದು, ಐದು, ಮೂರು ಎಂದು ತತ್ವ ಸ್ವರೂಪವನ್ನು ಹೇಳಿದ ಶ್ರೀಹರಿ ಪ್ರತ್ಯೇಕವಿರುವ ತತ್ವಗಳಿಗೆ ಪರಸ್ಪರ ಪ್ರವೇಶ ಹೇಗೆ ಸಾಧ್ಯ? ಎಂದರೆ ತತ್ವಗಳಿಗೆ ಕಾರ್ಯಕಾರಣಭಾವವಿರುವುದರಿಂದ ಸೃಷ್ಟಿಗಾಗಿ ಶ್ರೀಹರಿಯಿಂದ ಪ್ರೇರಿತವಾಗಿ ಪರಸ್ಪರ ಪ್ರವೇಶವಾಗುವುದು ಎಂದು ತಿಳಿಸಲು ಸೃಷ್ಟಿಯನ್ನು ಹೇಳಿದ್ದು ಸಾರ್ಥಕವೆಂದು ಭಾವ.

ಈ ವಿಷಯದಲ್ಲಿ ಪ್ರಮಾಣ ಹೇಳುವರು.

**ತಾತ್ಪರ್ಯ-ಸೃಜ್ಯಸ್ರಷ್ಟೃಸ್ವರೂಪತ್ವಾದನ್ಯೋನ್ಯಾನುಪ್ರವೇಶಿನಃ ।**
**ತಿಷ್ಠಂತಿ ತಾತ್ವಿಕಾ ದೇವಾ ವಿಶೇಷಪ್ರಾಪ್ತಿಕಾರಣಾತ್ ॥ ಇತಿ ನೈಸರ್ಗೇ ।**

ತತ್ವಾಭಿಮಾನಿ ದೇವತೆಗಳು ಜ್ಞಾನಾದಿ ವಿಶೇಷ ಪ್ರಾಪ್ತಿಗಾಗಿ ತತ್ವಗಳಿಗೆ ಕಾರ್ಯಕಾರಣ ಭಾವವಿದ್ದುದರಿಂದ ಅವುಗಳಲ್ಲಿ ನಿಯಾಮಕರಾಗಿ ಪರಸ್ಪರ ಪ್ರವೇಶ ಮಾಡಿ ಇರುವರು. "**ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾಃ**" ಎಂಬಲ್ಲಿ ಗೀತಾಭಾಷ್ಯದಲ್ಲಿ ತತ್ವಗಳಿಗೆ ತಮ್ಮ ಕಾರ್ಯಗಳ ಕಾರಣಗಳ ಪ್ರವೇಶವನ್ನು ಸ್ಪಷ್ಟವಾಗಿ ಹೇಳಿರುವರು.

ಅದಕ್ಕೆ ಕಾರಣ **ಪ್ರಾಪ್ತಿಕಾರಣಾತ್** ಅಂದರೆ ಅವರವರಿಗೆ ಉತ್ತಮರಲ್ಲಿ ಪ್ರವೇಶ ಮಾಡುವುದರಿಂದ ತಮ್ಮಲ್ಲಿ ಉತ್ತಮರು ಪ್ರವೇಶ ಮಾಡುವುದರಿಂದ ವಿಶೇಷ ಜ್ಞಾನಾದಿಗಳು ಬರುವ ಕಾರಣ ಎಂದರ್ಥ.

**ವಿಶೇಷಪ್ರೇಮಕಾರಣಾತ್** ಎಂದೂ ಪಾಠವಿದೆ.

ಆಗ ಉತ್ತಮರಲ್ಲಿ ಅವರರಿಗೂ ಅವರರಲ್ಲಿ ಉತ್ತಮರಿಗೂ ವಿಶೇಷ ಪ್ರೇಮವಿರುವುದರಿಂದ ಪರಸ್ಪರ ಪ್ರವೇಶ ಮಾಡುವರು. ಉತ್ತಮರಲ್ಲಿ ನೀಚರು ಸೇವಕರಾಗಿ ಇರುವರು. ಅದರಂತೆ ನೀಚರಲ್ಲಿ ಉತ್ತಮರು

ನಿಯಾಮಕರಾಗಿ ಇರುವರು. ಕಾರಣ ಉತ್ತಮರಾದ ಕಾರಣತತ್ವಗಳನ್ನು ಹೇಳಿದರೆ ಅಲ್ಲಿರುವ ನೀಚತತ್ವಗಳನ್ನು ಹೇಳಿದಂತಾಗುವುದು. ನೀಚರನ್ನು ಹೇಳಿದರೆ ಉತ್ತಮರನ್ನು ಹೇಳಿದಂತಾಗುವುದು. ಎಂಬ ಅಭಿಪ್ರಾಯದಿಂದ ಭಿನ್ನ ಸಂಖ್ಯೆ ಹೇಳುವುದು ಉಪಪನ್ನವಾಗುವುದು.

ಹತ್ತೊಂಬತ್ತನೇ ಅಧ್ಯಾಯದಲ್ಲಿ

**''ನವೈಕಾದಶ ಪಂಚ ತ್ರೀನ್ ಭಾವಾನ್ ಭೂತೇಷು ಯೇನ ವೈ ।**
**ಈಕ್ಷೇತಾನ್ವೇಕಮಪ್ಯೇಷು ತದ್‌ಜ್ಞಾನಂ ಮಮ ನಿಶ್ಚಿತಮ್'' ॥**

ಎಂದು ಜ್ಞಾನ, ವಿಜ್ಞಾನ, ಸ್ವರೂಪವನ್ನು ಹೇಳಿದರು. ಅದನ್ನೇ ಇಪ್ಪತ್ತೆರಡನೆಯ ಅಧ್ಯಾಯದಲ್ಲಿ

''**ನವೈಕಾದಶ ಪಂಚ ತ್ರೀಣ್ಯಾತ್ಥ ತ್ವಂ**'' ಎಂದು ಅನುವಾದಿಸಿ ಅದರ ವಿವರಣವನ್ನು ಪುರುಷಃ ಪ್ರಕೃತಿಃ ಎಂಬ ೧೪ನೇ ಶ್ಲೋಕದಲ್ಲಿ ಹೇಳಿದೆ. ಅಲ್ಲಿ ಪುರುಷಾದಿ ಪದಗಳ ಅರ್ಥವನ್ನು ಹೇಳಲು ಮೊದಲು ಪುರುಷಪದದ ವಿವಕ್ಷಿತ ಅರ್ಥವನ್ನು ಹೇಳುವರು.

**ತಾತ್ಪರ್ಯ– ಅನ್ವೇಕಮಪ್ಯೇಷು ಇತ್ಯುಕ್ತತ್ವಾತ್ ಪುರುಷೋ ಹಿರಣ್ಯಗರ್ಭಃ''**

ಒಂಭತ್ತು ತತ್ವಗಳನ್ನು ಹೇಳುವ 'ಪುರುಷಃ ಪ್ರಕೃತಿಃ' ಎಂಬ ಹದಿನಾಲ್ಕನೇ ಶ್ಲೋಕದಲ್ಲಿ ಪುರುಷ ಎಂದರೆ ಹಿರಣ್ಯಗರ್ಭನೆಂದು ಹೇಳಿದರೇನೇ ೧೯ನೇ ಅಧ್ಯಾಯ ೧೪ನೇ ಶ್ಲೋಕದಲ್ಲಿ ಹೇಳಿದ **ಅನು** ಅನಂತರ **ಏಷು** ಒಂಭತ್ತು ಮೊದಲಾದ ತತ್ವಗಳಲ್ಲಿ ನಿಯಾಮಕನಾಗಿರುವ **ಏಕಂ** ಹರಿಯನ್ನು **ಈಕ್ಷೇತ** ತಿಳಿಯಬೇಕು. ಎಂದು ಹೇಳಿದ ಹರಿಪ್ರವೇಶವು ಯುಕ್ತವಾಗುವುದು. ಒಂಬತ್ತರಲ್ಲಿ ಹರಿಯನ್ನು ಸೇರಿಸಿದರೆ ಹಿಂದೆ ಹೇಳಿದ ನಿಯಾಮಕನಾಗಿ ಹರಿ ಪ್ರವೇಶವು ಯುಕ್ತವಾಗುವುದಿಲ್ಲ. ತನ್ನಲ್ಲಿ ತನಗೆ ನಿಯಾಮಕನಾಗಿ ಪ್ರವೇಶವಿಲ್ಲ. ಕಾರಣ ಒಂಭತ್ತರಲ್ಲಿ ನಿಯಾಮಕನಾಗಿ ಹರಿಯನ್ನು ಪ್ರತ್ಯೇಕವಾಗಿ ಹೇಳಿರುವುದರಿಂದ ಇಲ್ಲಿ ಹಿರಣ್ಯಗರ್ಭನೇ ಪುರುಷ ಶಬ್ದಾರ್ಥವೆಂದು ತಿಳಿಯಬೇಕು.

ಈ ವಿಷಯದಲ್ಲಿ ಪ್ರಮಾಣ ಹೇಳುವರು-

**ತಾತ್ಪರ್ಯ**- ಯದಾ ಪುರುಷಶಬ್ದೇನ ವಿರಿಂಚಸ್ಯೈವ ವಾಚ್ಯತಾ ।
ಪರಸ್ಯ ಪೃಥಗುಕ್ತೌ ಚ ವ್ಯಕ್ತಸ್ತತ್ರ ತು ಶಂಕರಃ ॥
ತದಾಹಂಕಾರಶಬ್ದೇನ ಸ್ಕಂದಸ್ಯೈವ ವಚೋ ಭವೇತ್ ॥-ಇತಿ ವಿವೇಕೇ ।

ಪರಮಾತ್ಮನನ್ನು ಪ್ರತ್ಯೇಕ ಹೇಳಿರುವಾಗ ಪುರುಷ ಶಬ್ದದಿಂದ ವಿರಿಂಚನನ್ನೇ ವಾಚ್ಯನೆಂದು ಹೇಳಬೇಕು. ಯಾವಾಗ ಪುರುಷಶಬ್ದದಿಂದ ಬ್ರಹ್ಮ ವಾಚ್ಯ-ನಾಗುವನೋ ಆಗ ವ್ಯಕ್ತನೆಂದರೆ ರುದ್ರನಾಗುವನು. ಶಂಕರನು ವ್ಯಕ್ತನೆನಿ-ಸುವನು. ಆಗ ಅಹಂಕಾರನೆಂದರೆ ಸ್ಕಂದನು ಎಂದು ವಿವೇಕದಲ್ಲಿ ಹೇಳಿದೆ.

ಇಲ್ಲಿಯಾದರೂ ''**ಅನ್ವೇಕಂ**'' ಎಂದು (೧೯-೧೪) ಎಲ್ಲ ತತ್ವಗಳಲ್ಲಿ ಪ್ರಧಾನನಾಗಿ ಶ್ರೀಹರಿ ಇರುವನೆಂದು ಪ್ರತ್ಯೇಕ ಪರಮಾತ್ಮನನ್ನು ಹೇಳಿರುವುದರಿಂದ ಪುರುಷನು ಹಿರಣ್ಯಗರ್ಭನೇ ಎಂದು ಭಾವ.

ಸ್ಕಂದನೂ ಅಹಂಕಾರಾಭಿಮಾನಿಯೆಂದು ತೃತೀಯ ತಾತ್ಪರ್ಯದಲ್ಲಿ

''**ಅಹಮಃ ಶೇಷವೀಂದ್ರೌ ಚ ರುದ್ರೇಂದ್ರೌ ಕಾಮತತ್‌ಸ್ತ್ರಿಯಃ**'' ಎಂದು ಹೇಳಿದೆ.

ಇಲ್ಲಿಯಾದರೂ ''**ಅನ್ವೇಕ**'' ಎಂದು (೧೯-೧೪) ಎಲ್ಲ ತತ್ವಗಳಲ್ಲಿ ಪ್ರಧಾನನಾಗಿ ಶ್ರೀಹರಿ ಇರುವನೆಂದು ಪ್ರತ್ಯೇಕ ಪರಮಾತ್ಮನನ್ನು ಹೇಳಿರುವುದರಿಂದ ಪುರುಷನು ಹಿರಣ್ಯಗರ್ಭನೇ ಎಂದು ಭಾವ.

ಸ್ಕಂದನೂ ಅಹಂಕಾರಾಭಿಮಾನಿಯೆಂದು ತೃತೀಯತಾತ್ಪರ್ಯದಲ್ಲಿ ಮಹಾಭೂತಗಳು,''**ಅಹಮಃ ಶೇಷವೀಂದ್ರೌ ಚ ರುದ್ರೇಂದ್ರೌ ಕಾಮತತ್ ಸ್ತ್ರಿಯಃ** ಎಂದು ಹೇಳಿದೆ. ಇದು ೧೪ ನೇ ಶ್ಲೋಕದಲ್ಲಾದರೆ ೧೩ನೇ ಶ್ಲೋಕ-ದಲ್ಲಿಯೂ ಇದರಂತೆ **ಪುರುಷೋಽವ್ಯಕ್ತಮೀಕ್ಷತೇ** ಎಂದು ಅರ್ಥ ಮಾಡಬೇಕು.

ಮೂಲ ಶ್ಲೋಕದ ಅರ್ಥವನ್ನು ಹೀಗೆ ತಿಳಿಯಬೇಕು.

ಮೂಲಪ್ರಕೃತಿ-ಮಹದಹಂಕಾರಾದಿರೂಪವಾದ ಕಾರ್ಯಕಾರಣಾತ್ಮಕ-ವಾದ ತತ್ವಗಳಿಗೆ ಅಭಿಮಾನಿನಿಯಾದ ಚಿತ್‌ಪ್ರಕೃತಿಯು (ಲಕ್ಷ್ಮೀದೇವಿ), ಎಲ್ಲದಕ್ಕೂ ಉಪಾದಾನವಾದ್ದರಿಂದ ಸರ್ವಾತ್ಮಕವಾದ ಅಚಿತ್‌ಪ್ರಕೃತಿಯು,

ಸತ್ವರಜಸ್ತಮೋನಾಮಕವಾದ ಅತ್ಯಲ್ಪ ವಿಕಾರ ಉಳ್ಳ, ಸೃಷ್ಟಿಯ ಆದಿಯಲ್ಲಿ ಸೃಷ್ಟಿಗೆ ಉಪಾದಾನವಾದ ಸತ್ವಾದಿಗುಣಗಳಿಂದಲೂ, ಮುಖ್ಯವಾಗಿ ಸತ್ವಾದಿ ಶಬ್ದವಾಚ್ಯರಾದ ಶ್ರೀ-ಭೂ-ದುರ್ಗಾರೂಪಗಳಿಂದಲೂ ಹಾಗೂ ಸರಸ್ವತೀ-ದೇವಿಯು, ಗಾಯತ್ರೀ, ಸಾವಿತ್ರಿ, ಸರಸ್ವತಿ ನಾಮಕರೂಪಗಳಿಂದ ಜಗತ್ತನ್ನು ಧರಿಸುವಳು.

ಅಂದರೆ ಮಹದಾದಿ ಅಶೇಷ ಜಗತ್ಸೃಷ್ಟಿಗೆ ಉನ್ಮುಖವಾದ ಪ್ರವೃತ್ತಿ ಉಳ್ಳವಳಾಗುವಳು. ಎಂದು ಅಭಿಪ್ರಾಯ. ಯಾವಾಗ ಅವ್ಯಕ್ತಂ ಎಂದರೆ ಲಕ್ಷ್ಮೀಯೋ ಆಗ **ಪುರುಷಃ** ಹರಿಯು **ಅವ್ಯಕ್ತಂ** ಮಹಾಲಕ್ಷ್ಮೀಯನ್ನು **ಈಕ್ಷತೇ** ಪ್ರೇರಿಸುವನು ಎಂದರ್ಥ.

ಯಾವಾಗ ಅವ್ಯಕ್ತವೆಂದರೆ ಸರಸ್ವತಿಯೋ ಆಗ ಪುರುಷನೆಂದರೆ ವಿರಿಂಚನು **ಅವ್ಯಕ್ತಂ** ಪ್ರಕೃತಿ ನಾಮಕ ವಾಣಿಯನ್ನು ಪ್ರೇರಿಸುವನು ಎಂದರ್ಥ. ''ಮಹತ್ತತ್ವಾತ್ಮಕೋ ಬ್ರಹ್ಮಾ ತಜ್ಜತ್ವಾತ್ ತತ್ರ ಲೀಯತೇ'' ಎಂದಿದೆ.

ಅಂತು ಪುರುಷಶಬ್ದವಾಚ್ಯ ಹಿರಣ್ಯಗರ್ಭ, ಪ್ರಕೃತಿ ಶಬ್ದ ವಾಚ್ಯ ರಮಾ, ವ್ಯಕ್ತಶಬ್ದವಾಚ್ಯ ರುದ್ರ, ಅಹಂಕಾರಶಬ್ದವಾಚ್ಯ ಸ್ಕಂದ, ಮತ್ತು ಪಂಚ ಮಹಾಭೂತಗಳು ಹೀಗೆ ಒಂಬತ್ತು ತತ್ವಗಳು.

ಹನ್ನೊಂದು ಇಂದ್ರಿಯಗಳು ಶಬ್ದಾದಿ ಹತ್ತು ವಿಷಯಗಳು ಸತ್ವಾದಿ-ಗುಣಗಳು ಸತ್ವಾದಿಗುಣತ್ರಯಗಳು ಹೀಗೆ ಮೂವತ್ನಾಲ್ಕು ತತ್ವಗಳು ಸ್ವತಂತ್ರತತ್ವ ಹರಿಯು ಎಂದಂತಾಯಿತು.

ಮುಂದಿನ (೧೯) ಶ್ಲೋಕದಲ್ಲಿ ಸಪ್ತ ವೈ ಧಾತವಃ ಮುಂತಾಗಿ ಏಳು ತತ್ವಗಳು ಎಂದು ಹೇಳುವರು. ಅದು ಸರಿಯಲ್ಲ. ಭಗವನ್ಮತವನ್ನು ಹೇಳಿದ ನಂತರ ಕೆಲವರು ೨೬ ಎಂದು ಹಲವರು ೨೫ ಎಂದು ಹೇಳುವರು. ಎಂದು ಹೇಳಿದುದರಿಂದ ಅವುಗಳನ್ನು ಹೇಳದೇ ಏಳು ಹೇಗೆಂದು ಹೇಳಿದರೆ ನ್ಯೂನತೆ ಬರುವುದು ಎಂಬ ಶಂಕೆಯನ್ನು ೯-೧೧-೫ ಪಕ್ಷಗಳನ್ನು ಹೇಳುವುದರಿಂದಲೇ ಆ ಎರಡು ಪಕ್ಷವನ್ನೂ ಹೇಳಿದಂತಾಗುವುದು ಎಂಬ ಅಭಿಪ್ರಾಯದಿಂದ ಅವುಗಳ ಲಾಭ ಪ್ರಕಾರವನ್ನು ತಿಳಿಸುವರು.

**ತಾತ್ಪರ್ಯ**-''ಸತ್ವಾದೀನ್ ಗತ್ಯಾದೀಂಶ್ಚ ವಿನಾ ಪರಮಾತ್ಮನಾ ಸಹ ಷಡ್ವಿಂಶತಿಃ''

ನವೈಕಾದಶ ಪಂಚ ತ್ರೀನ್ (ಪಂಚಕದ್ವಯ) ಎಂದು ಹೇಳಿದ ಮೂವತ್ತು ಮೂರು ತತ್ವಗಳನ್ನೇ ಪುರುಷ ಪ್ರಕೃತಿ ಎಂದಾರಂಭಿಸಿ ''**ಸತ್ವಾದಿಭಿರ್ಗುಣೈಃ**'' ಎಂದು ಹೇಳಿರುವವಷ್ಟೇ. ಅವುಗಳಲ್ಲಿ ಸತ್ವಾದಿಗುಣಗಳು ಮೂರು ಮತ್ತು ಕರ್ಮೇಂದ್ರಿಯ ವಿಷಯಗಳಾದ ಗತ್ಯಾದಿಗಳೈದು ಹೀಗೆ ಎಂಟು ಬಿಟ್ಟು ಶ್ರೀಹರಿಯನ್ನು ಸೇರಿಸಿಕೊಂಡು ಇಪ್ಪತ್ತಾರಾಗುವವು. ಈ ಪಕ್ಷದಲ್ಲಿ ಗತಿ ಉಕ್ತಿ ಉತ್ಸರ್ಗದ್ವಯ ಶಿಲ್ಪಗಳೆಂಬ ಕಾರ್ಯಗಳಿಗೆ ಕಾರಣಗಳಾದ ಕರ್ಮೇಂದ್ರಿಯ-ದಲ್ಲಿ ಪ್ರವೇಶ ತಿಳಿಯಬೇಕು. ಸತ್ವಾದಿ ಕಾರಣಗಳಿಗೆ ಕಾರ್ಯಗಳಲ್ಲಿ ಪ್ರವೇಶ ತಿಳಿಯಬೇಕು.

೨೫ ತತ್ವಗಳನ್ನು ತಿಳಿಸುವರು.

**ತಾತ್ಪರ್ಯ**- ಮಹದಹಂಕಾರೌ ಬ್ರಹ್ಮರುದ್ರೌ ಅಂಗೀಕೃತ್ಯ ಸ್ಕಂದಂ ವಿನಾ ಪರಮಾತ್ಮನಾ ಸಹ ಪಂಚವಿಂಶತಿಃ ॥

ಈ ಪಕ್ಷದಲ್ಲಿಯೂ ಗತ್ಯಾದಿಪಂಚಕ ಸತ್ವಾದಿತ್ರಯ ಹೀಗೆ ಎಂಟು ಬಿಟ್ಟು ವ್ಯಕ್ತ ಪದದಿಂದ ಮಹತತ್ವ ಅಹಂಕಾರತತ್ವ ಅಂದರೆ ಅಭಿಮಾನಿಗಳಾದ ಬ್ರಹ್ಮ ರುದ್ರರನ್ನು ಸ್ವೀಕರಿಸಿ ಸ್ಕಂದನನ್ನು ತ್ಯಜಿಸಿ ಪುರುಷಪದದಿಂದ ಶ್ರೀಹರಿಯನ್ನು ಸ್ವೀಕರಿಸಿದರೇ **ಪುರುಷ** ಪರಮಾತ್ಮ, ಪ್ರಕೃತಿ, **ವ್ಯಕ್ತ** ಬ್ರಹ್ಮ **ಅಹಂಕಾರ** ರುದ್ರ ಪಂಚ ಭೂತ, ಏಕಾದಶ ಇಂದ್ರಿಯ, ಶಬ್ದಾದಿಗಳೈದು ಹೀಗೆ ಇಪ್ಪತ್ತೈದಾಗುವವು.

(ಇಲ್ಲಿ ಯದಾ ಪುರುಷಶಬ್ದೇನ ಎಂಬ ನ್ಯಾಯಕ್ಕೆ ಅವಕಾಶವಿಲ್ಲ. ಆದ ಕಾರಣ ಶ್ರೀಹರಿಯನ್ನು ಬೇರೆ ಹೇಳಿಲ್ಲ. ಕಾರಣ ಪುರುಷನೆಂದರೆ ವಿರಿಂಚನಲ್ಲ. ಆದ್ದರಿಂದ ವ್ಯಕ್ತ ಶಂಕರನಲ್ಲ. ಅಹಂಕಾರ ಸ್ಕಂದನಲ್ಲ ಎಂದು ತಿಳಿಯಬೇಕು.) ಈ ವಿಷಯದಲ್ಲಿ ಪ್ರಮಾಣ ಹೇಳುವರು.

**ತಾತ್ಪರ್ಯ**- ವಿಷಯೇಂದ್ರಿಯಪ್ರಕೃತಿದೇವತಾಃ ಪರಮಾತ್ಮನಾ ।
ಪಂಚವಿಂಶತಿತತ್ವಾನಿ ಸಂಖ್ಯಾತಾನಿ ವಿದೋ ವಿದುಃ । ಇತಿ ಚ''

ವಿಷಯ ಪದದಿಂದ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳು, ಪಂಚ ಭೂತಗಳು, ಹನ್ನೊಂದು ಇಂದ್ರಿಯಗಳು, **ಪ್ರಕೃತಿ** ರಮಾ, **ದೇವತಾ ಎಂದರೇ** ಬ್ರಹ್ಮ-ರುದ್ರರು, **ಪುರುಷ** ಪರಮಾತ್ಮ ಹೀಗೆ ೨೫ ತತ್ವಗಳು ಜ್ಞಾನಿಗಳು ಹೇಳುವರು ಎಂದರ್ಥ.॥೧೮॥

ಏಳು ತತ್ವಗಳು ಹೇಳುವರು-

**ಸಪ್ತೈವ ಧಾತವ ಇತಿ ಯತ್ರಾರ್ಥಾಃ ಪಂಚ ಖಾದಯಃ।**
**ಜ್ಞಾನಮಾತ್ಮೋಭಯಾಧಾರಸ್ತತೋ ದೇಹೇಂದ್ರಿಯಾಸವಃ ॥೧೯॥**

**ಯತ್ರ** ಯಾವ ಪಕ್ಷದಲ್ಲಿ **ಸಪ್ತೈವ ಧಾತವಃ** ಏಳೇ ತತ್ವಗಳು. ಆಗ ಈ ರೀತಿ ಗಣನೆ ಮಾಡಬೇಕು. **ಅರ್ಥಾಃ** ಶಬ್ದಾದಿವಿಷಯಗಳು **ಪಂಚ ಖಾದಯಃ** ಆಕಾಶ ಮೊದಲಾದ ಪಂಚಮಹಾಭೂತಗಳು, ಶಬ್ದಾದಿವಿಷಯಗಳು ಮಹಾಭೂತಗಳು, ಎರಡೂ ಸೇರಿ ಐದು **ಜ್ಞಾನಂ** ಬ್ರಹ್ಮದೇವರು **ಉಭಯಾಧಾರಃ** ಅಭಿಮನ್ಯಮಾನ ಅಭಿಮಾನಿಗಳಿಗೆ ಆಧಾರನಾದ **ಆತ್ಮಾ** ಪರಮಾತ್ಮನು ಹೀಗೆ ಏಳು ತತ್ವಗಳು ಅಥವಾ ಪಂಚವರ್ಗ ಮತ್ತು ಬ್ರಹ್ಮ ಈ ಉಭಯರಿಗೆ ಆಧಾರನಾದ ಹೀಗೂ ಅರ್ಥ ಮಾಡಬಹುದು. ಇನ್ನು ಕೆಲವರು ಇಲ್ಲಿಯೇ ಒಂಭತ್ತು ತತ್ವಗಳನ್ನು ಹೇಳುವರು. ಅದು ಹೇಗೆಂದರೆ **ತತಃ** ಲ್ಯಬ್ ಲೋಪನಿಮಿತ್ತಾ ಪಂಚಮೀ. **ಜ್ಞಾನಂ** ಜ್ಞಾನಶಬ್ದವಾಚ್ಯನಾದ ಬ್ರಹ್ಮನನ್ನು **ಪರಿತ್ಯಜ್ಯ** ಬಿಟ್ಟು **ತತಃ** ಪರಮಾತ್ಮನನ್ನು ಅಂಗೀಕರಿಸಿ **ತತಃ** ತೃತೀಯಾರ್ಥೇ ತಸಿಃ **ತೈಃ ಸಹ** ಹಿಂದೆ ಹೇಳಿದ ಏಳರಿಂದ ಸಹಿತವಾಗಿ **ದೇಹೇಂದ್ರಿಯಾಣಿ ಅಸುಶ್ಚ ದೇಹಃ** ದೇಹಾಭಿಮಾನಿ ಸೂರ್ಯ ಇಂದ್ರಿಯಗಳು (ಒಟ್ಟಾಗಿ ಒಂದು) **ಅಸವಃ** ಪಂಚಪ್ರಾಣಗಳು ಹೀಗೆ ಒಂಭತ್ತು ತತ್ವಗಳು ಎಂದು ತಿಳಿಯಬೇಕು. ಪಂಚಭೂತಗಳು (೫) ಪರಮಾತ್ಮ (೬) ದೇಹ (೭) ಇಂದ್ರಿಯ (೮) ಪಂಚಪ್ರಾಣಸಮುದಾಯ (೯).

ಜ್ಞಾನ ಶಬ್ದಾರ್ಥ ಹೇಳುವರು-

**ತಾತ್ಪರ್ಯ-** ''ಜ್ಞಾನಶಬ್ದೋದಿತೋ ಬ್ರಹ್ಮಾ ತದಾಧಾರೋ ಹರಿಃ ಸ್ಮೃತಃ''
**-ಇತಿ ಚ।**

ಜ್ಞಾನಶಬ್ದದಿಂದ ಚತುರ್ಮುಖನು ಅವನಿಗೆ ಆಧಾರನಾದ ಹರಿಯು ಆತ್ಮಶಬ್ದದಿಂದ ಹೇಳಲ್ಪಟ್ಟಿರುವನು. ''**ತತೋ ದೇಹೇಂದ್ರಿಯಾಸವಃ**'' ಎಂಬ ಕೊನೆ ಪಾದದಿಂದ ಒಂಭತ್ತು ತತ್ವ ಹೇಗೆ ಪ್ರತಿಪಾದಿತವೆಂದು ತಿಳಿಸುವರು.

**ತಾತ್ಪರ್ಯ-** ''ತತಃ ಜ್ಞಾನಂ ವಿನಾ ಪರಮಾತ್ಮಾನಂ ಅಂಗೀಕೃತ್ಯೈವ ದೇಹೇಂದ್ರಿಯಾಣಿ ಅಸುಶ್ಚ ನವತತ್ವಾನಿ'' ॥

ಜ್ಞಾನವನ್ನು (ಚತುರ್ಮುಖನನ್ನು) ಬಿಟ್ಟು ಪರಮಾತ್ಮನನ್ನು ಸೇರಿಸಿಕೊಂಡು ದೇಹಾಭಿಮಾನಿ ಸೂರ್ಯ, ಇಂದ್ರಿಯಾಭಿಮಾನಿ ಇಂದ್ರ ಮುಖ್ಯಪ್ರಾಣ, ಪಂಚಭೂತ, ಹೀಗೆ ಒಂಭತ್ತು ತತ್ವಗಳು.

ಈ ವಿಷಯದಲ್ಲಿ ಪ್ರಮಾಣ ಹೇಳುವರು.

**ತಾತ್ಪರ್ಯ**–''ಸರ್ವದೇಹಾಭಿಮಾನೀ ತು ದೇಹಿನಾಂ ತು ದಿವಾಕರಃ ।
ಇಂದ್ರಿಯಾತ್ಮೇಂದ್ರ ಏವೈಕಃ ಪ್ರಾಣೋ ನಾಮ ಪ್ರಜಾಪತಿಃ ।।-ಇತಿ ಚ ।''

ಎಲ್ಲ ಜೀವರ ಎಲ್ಲ ದೇಹಗಳಿಗೆ ಅಭಿಮಾನಿಯು ಸೂರ್ಯನು, ಇಂದ್ರಿಯಾಭಿಮಾನಿಯು ಇಂದ್ರನು, ಪ್ರಾಣ ಅಂದರೆ(ಅಸು)ಪ್ರಜಾಪತಿಯು. ಅಥವಾ ವಾಗಾದಿ ಇಂದ್ರಿಯಗಳು ಮನಸ್ಸಿನ ಅಧೀನವಾದ್ದರಿಂದ ಮನಸ್ಸು ಒಂದು, ಐದು ಜ್ಞಾನೇಂದ್ರಿಯಗಳು, ದೇಹ, ಪ್ರಾಣ, ಪರಮಾತ್ಮ, ಹೀಗೂ ಒಂಭತ್ತು ಮಾಡಬಹುದು. ಎಲ್ಲ ಇಂದ್ರಿಯಗಳಿಗೆ ಇಂದ್ರನೊಬ್ಬನೇ ನಿಯಾಮಕನೆಂದು ಹೇಳಿದ್ದರಿಂದ ಇಂದ್ರಿಯಗಳು ಒಂದು ಎಂದು ಹೇಳುವಲ್ಲಿ ಅಭಿಮಾನಿ ವಿವಕ್ಷಾದಿಂದ ಎಂದು ಹೇಳಿದಂತಾಯಿತು. (ತಾತ್ಪರ್ಯದಲ್ಲಿ ಪ್ರಜಾಪತಿ ಎಂದರೆ ಮುಖ್ಯಪ್ರಾಣ ಎಂದು ಕೆಲವರು ಶಿವ ಎಂದು ಹಲವರು ದಕ್ಷ ಎಂದು ಕೆಲವರು ಹೇಳುವರು.)।।೧೯।।

**ಷಡಿತ್ಯತ್ರಾಪಿ ಭೂತಾನಿ ಪಂಚ ಷಷ್ಠಃ ಪರಃ ಪುಮಾನ್ ।**
**ತೈರ್ಯುಕ್ತ ಆತ್ಮಸಂಭೂತೈಃ ಸೃಷ್ಟ್ವೇದಂ ಸಮುಪಾವಿಶತ್ ।।೨೦।।**

**ಷಟ್ ಇತ್ಯತ್ರಾಪಿ** ಆರು ತತ್ವಗಳು ಎಂಬ ಪಕ್ಷದಲ್ಲಿ ಮಹದಾದಿ ಕಾರಣಗಳಿಗೆ ಕಾರ್ಯಗಳಲ್ಲಿ ಅನುಪ್ರವೇಶವಿರುವುದರಿಂದ **ಪಂಚಭೂತಾನಿ** ಐದು ಭೂತಗಳು **ಷಷ್ಠಃ** ಆರನೆಯವನು **ಪರಃ ಪುಮಾನ್** ಸರ್ವೋತ್ತಮನಾದ ಶ್ರೀಹರಿಯು ಹೀಗೆ ಆರು ತತ್ವಗಳು ''**ಗಂಗಾವಾಲುಕಪರಿಸಂಖ್ಯಾನವದಿದಂ ತತ್ವಸಂಖ್ಯಾನಮನರ್ಥಕಂ ಇತ್ಯತಃ ಭಗವತಃ ಸರ್ವಸ್ರಷ್ಟೃತ್ವಜ್ಞಾನಾರ್ಥತ್ವೇನ ಸಾರ್ಥಕ್ಯಾದಿತ್ಯಾಶಯೇನ ಉಚ್ಯತೇ**'' ಸುಮ್ಮನೆ ನದಿಯ ಉಸುಕನ್ನು ಎಣಿಸಿದಂತೆ ಈ ತತ್ವಗಳ ಗಣನೆಯು ಅನರ್ಥಕ ಎಂದು ಶಂಕಿಸಿದರೇ ಭಗವಂತ ಎಲ್ಲವನ್ನು ಸೃಷ್ಟಿಸಿದವನು ಶ್ರೀಹರಿ ಎಂದು ತಿಳಿಸಲು ಉತ್ತರಾರ್ಧ ಹೊರಟಿದೆ ಎಂದರ್ಥ. **ಆತ್ಮಸಂಭೂತೈಃ** ಪರಮಾತ್ಮನಿಂದಲೇ ಜನಿಸಿದ **ತೈಃ**

ಆಕಾಶಾದಿ ಪಂಚಭೂತಗಳಿಂದ **ಯುಕ್ತಃ** ಕೂಡಿದ **ಆತ್ಮಾ** ಪರಮಾತ್ಮನು **ಇದಂ** ಈ ಜಗತ್ತನ್ನು **ಸೃಷ್ಟ್ವಾ** ಹುಟ್ಟಿಸಿ **ಸಮುಪಾವಿಶತ್** ಪ್ರವೇಶ ಮಾಡಿದನು. "**ತತ್ ಸೃಷ್ಟ್ವಾ ತದೇವಾನುಪ್ರಾವಿಶತ್**" ಎಂದು ಶ್ರುತಿಯಿದೆ. ದೇವತೆಗಳನ್ನು ಪ್ರವೇಶ ಮಾಡಿಸಿದನು ಎಂದು ಅರ್ಥ.॥೨೦॥

**ಚತ್ವಾರ್ಯೇವೇತಿ ತತ್ರಾಪಿ ತೇಜ ಆಪೋಽನ್ನಮಾತ್ಮನಃ।**
**ಜಾತಾನಿ ತೈರಿದಂ ಜಾತಂ ಜನ್ಮಾವಯವಿನಃ ಖಲು ॥೨೧॥**

**ಚತ್ವಾರ್ಯೇವ ಇತಿ** ನಾಲ್ಕೇ ತತ್ವಗಳು ಎಂಬ ಪಕ್ಷದಲ್ಲಿ **ತತ್ರಾಪಿ** ಪಂಚಭೂತಗಳಲ್ಲಿ **ಆತ್ಮನಃ** ಪರಮಾತ್ಮನಿಂದ **ಜಾತಾನಿ** ಜನಿಸಿದ **ತೇಜಃ** ಅಗ್ನಿ **ಆಪಃ** ನೀರು **ಅನ್ನಂ** ಪೃಥಿವೀ ಈ ಮೂರು ಪರಮಾತ್ಮ ಹೀಗೆ ನಾಲ್ಕು ತತ್ವಗಳು ಇಲ್ಲಿ ಪರಸ್ಪರ ಪ್ರವೇಶ ಕಾರಣವಾದ ಕಾರ್ಯಕಾರಣಭಾವ ಹೇಳುವರು. **ತೈಃ** ತೇಜೋಽಬನ್ನಗಳಿಂದ **ಇದಂ ಅವಯವಿನಃ ಜನ್ಮ ಖಲು** ಈ ಬ್ರಹ್ಮಾಂಡದ (ದೇಹದ) ಉತ್ಪತ್ತಿಯು ಆಗಿದೆಯಷ್ಟೇ

ಇಲ್ಲಿ ಪದಗಳು ದೂರದೂರವಿರುವದರಿಂದ ಅನ್ವಯ ತೋರಿಸುವರು.

**ತಾತ್ಪರ್ಯ**-"ಅವಯವಿನಃ ಜನ್ಮ ತೈಃ ಖಲು"

ಜಗತ್ತಿನ ಜನ್ಮವು ಜಲ, ಅನ್ನ, ತೇಜಸ್ಸಿನಿಂದಾಗಿದೆ ಎಂದು ಭಾವ.॥೨೧॥

ಇಲ್ಲಿ ಖಲು ಎಂಬ ಶಬ್ದದಿಂದ (ಸೇಯಂ ದೇವತಾ, ಇಮಾಃ ತಿಸ್ರೋ ದೇವತಾಃ) "ಅನೇನ ಜೀವೇನ ಆತ್ಮನಾ ಅನುಪ್ರವಿಶ್ಯ ನಾಮರೂಪೇ ವ್ಯಾಕರೋತ್" "ಸಂಜ್ಞಾಮೂರ್ತಿಕ್ಲೃಪ್ತಿಸ್ತು ತ್ರಿವೃತ್ಕುರ್ವತ ಉಪದೇಶಾತ್" ಎಂಬ ಪ್ರಮಾಣಸಿದ್ಧತ್ವವನ್ನು ತಿಳಿಸುವರು.

**ಸಂಖ್ಯಾನೇ ಸಪ್ತದಶಕೇ ಭೂತಮಾತ್ರೇಂದ್ರಿಯಾಣಿ ಚ ।**
**ಪಂಚಪಂಚೈಕಮನಸಾ ಆತ್ಮಾ ಸಪ್ತದಶಃ ಸ್ಮೃತಃ ॥೨೨॥**

**ಸಪ್ತದಶಕೇ ಸಂಖ್ಯಾನೇ** ತತ್ವಗಳು ಹದಿನೇಳು ಎಂದು ಪರಿಗಣಿಸುವಾಗ **ಭೂತಮಾತ್ರೇಂದ್ರಿಯಾಣಿ** ಭೂತಗಳು, ವಿಷಯಗಳು, ಇಂದ್ರಿಯಗಳು, ಮೂರು **ಪಂಚ ಪಂಚ** ಪ್ರತ್ಯೇಕವಾಗಿ ಐದೈದು ಐದು ಮಹಾಭೂತ, ಶಬ್ದಾದಿ ವಿಷಯಗಳೈದು, ಜ್ಞಾನೇಂದ್ರಿಯಗಳೈದು, ಹೀಗೆ ಹದಿನೈದು **ಏಕಮನಸಾ**

ಒಂದು ಮನಸ್ಸಿನಿಂದ ಸಹಿತನಾದ **ಆತ್ಮಾ** ಶ್ರೀಹರಿಯು **ಸಪ್ತದಶಃ ಸ್ಮೃತಃ** ಹದಿನೇಳನೆ ತತ್ವನು. ಮನಸ್ಸು ೧೬ನೇದ್ದು ಎಂದರ್ಥ.

ಏಕಾದಶಃ ಪರೇ ಎಂದು ಹೇಳಿದ ಪಕ್ಷವನ್ನು ಮೂಲದಲ್ಲಿ ಹೇಳದಿರುವದರಿಂದ ಸ್ವಯಂ ಪ್ರಮಾಣದಿಂದ ತಿಳಿಸುವರು.

**ತಾತ್ಪರ್ಯ- ''ಭೂತಾನಿ ಮಾತ್ರಾಶ್ಚ ಪರಸ್ತತ್ವೈಕಾದಶಕಂ ಸ್ಮೃತಮ್'' । ಇತಿ ಚ ।**

ಐದು ಭೂತಗಳು, ಐದು ತನ್ಮಾತ್ರಾಗಳು, ಪರಮಾತ್ಮ, ಹೀಗೆ ಹನ್ನೊಂದು ತತ್ವಗಳು. ಮೂಲದಲ್ಲಿ ಹನ್ನೊಂದು ತತ್ವಗಳನ್ನು ಪ್ರತ್ಯೇಕ ಹೇಳದಿರಲು ಕಾರಣ ಹೇಳುವರು.

**ತಾತ್ಪರ್ಯ- ''ಭೂತಮಾತ್ರೇತ್ಯಾರಂಭಾತ್ತತ್ಸಿದ್ಧೇರೇಕಾದಶಾನಾಂ ಪೃಥಗನುಕ್ತಿಃ''**

ಹದಿನೇಳು ತತ್ವಗಳನ್ನು ಹೇಳುವಾಗ ಭೂತಮಾತ್ರಾ ಎಂದು ಹೇಳುವುದರಿಂದಲೇ ಹತ್ತು ತತ್ವಗಳು ದೊರೆಯುವವು. ಪರಮಾತ್ಮನಂತು ಎಲ್ಲ ಪಕ್ಷದಲ್ಲಿ ಇರುವನು. ಕಾರಣ ಹನ್ನೊಂದು ತತ್ವಗಳು ಅರ್ಥತಃ ಸಿದ್ಧವಾಗುವುದರಿಂದ ಪ್ರತ್ಯೇಕ ಹೇಳಲಿಲ್ಲವೆಂದು ಭಾವ.॥೨೨॥

**ತದ್ವತ್ ಷೋಡಶಸಂಖ್ಯಾನಿ ಆತ್ಮನಾ ಮನ ಉಚ್ಯತೇ ।**
**ಭೂತೇಂದ್ರಿಯಾಣಿ ಪಂಚೈವ ಮನ ಆತ್ಮಾ ತ್ರಯೋದಶ ॥೨೩॥**

**ಷೋಡಶ ಸಂಖ್ಯಾನಿ** ಹದಿನಾರು ತತ್ವಗಳು ಎಂಬ ಪಕ್ಷದಲ್ಲಿ **ತದ್ವತ್** ಹಿಂದಿನಂತೆ (ಭೂತಮಾತ್ರೇಂದ್ರಿಯಾಣಿ ಪಂಚ ಪಂಚ ಎಂದು ಹದಿನೇಳು ತತ್ವಗಳು ಹೇಳಿದಂತೆ) ಅಲ್ಲಿಗೂ ಇಲ್ಲಿಗೂ ವ್ಯತ್ಯಾಸವೇನೆಂದರೆ **ಆತ್ಮನಾ ಮನ ಉಚ್ಯತೇ** ಪರಮಾತ್ಮ ಸಹಿತವಾದ ಮನಸ್ಸು ಆತ್ಮ ಶಬ್ದದಿಂದ ಹೇಳಲ್ಪಡುವುದು. ಅಂದರೇ ಆತ್ಮಾ ಮತ್ತು ಮನಸ್ಸು ಪ್ರತ್ಯೇಕವಾಗಿ ಅಲ್ಲ. ಅಂತು ಐದು ಭೂತಗಳು, ಐದು ಮಾತ್ರಾಗಳು, ಐದು ಇಂದ್ರಿಯಗಳು, ಮನಸ್ಸು, ಹೀಗೆ ಹದಿನಾರು ತತ್ವಗಳು. ಹಾಗಾದರೆ ಪರಮಾತ್ಮನನ್ನು ಬಿಟ್ಟಂತೆ ಆಯಿತಲ್ಲ ಎಂದರೆ ಹೇಳುವರು-

**ತಾತ್ಪರ್ಯ- ಆತ್ಮನಃ ಸನ್ನಿಧಿಸ್ಥತ್ವಾತ್ ಮನಸಸ್ತು ತದುಕ್ತಿತಃ ।**
**ಉಕ್ತೋ ಭವೇತ್ ಪರಾತ್ಮಾಪಿ ತತ್ವಷೋಡಶಕಂ ಯದಾ ॥**

ಈ ತಾತ್ಪರ್ಯಕ್ಕೆ ತಾಮ್ರಪರ್ಣಿ ವ್ಯಾಖ್ಯಾನ ಹೀಗಿದೆ- ತದ್ವತ್ ಎಂದು ಮೂಲದಲ್ಲಿ ಹದಿನೇಳರಂತೆ ಎಂದು ಅತಿದೇಶ ಮಾಡಿ ಹದಿನಾರು ಎಂದು ಹೇಳುವುದು ಸರಿಯಲ್ಲ ಎಂದು ಶಂಕಿಸಿ ನಿರಾಕರಿಸುವರು. ''**ಆತ್ಮನಾ**'' ಎಂದು. ಹೀಗೆ ಅವತಾರಿಕೆ ನೀಡಿ ಆತ್ಮನಾ ಎಂಬುದಕ್ಕೆ ''**ಉಚ್ಯತೇ**''ಎಂಬ ಪದ ಸಮಭಿವ್ಯಾಹಾರದಿಂದ ಅಭಿಧಾಯಕತ್ವ ಎಂದು ತೋರುವುದರಿಂದ ಆತ್ಮ ಶಬ್ದದಿಂದ ಮನಸ್ಸು ಹೇಳಲ್ಪಡುವುದು ಎಂದರ್ಥ ತೋರುವುದು. ಹಾಗೆ ಅರ್ಥ ಮಾಡಿದರೆ ಪರಮಾತ್ಮನನ್ನು ಹೇಳಿದಂತಾಗುವದಿಲ್ಲ ಎಂದು ಶಂಕೆಯು ಬರುತ್ತದೆ. ಈ ಶಂಕೆಯನ್ನು ಪರಿಹರಿಸಲೆಂದೇ ಈ ತಾತ್ಪರ್ಯವು ಪ್ರವೃತ್ತವಾಗಿದೆ. ''ಆತ್ಮನಾ ಸಹ ಮನಃ ಉಚ್ಯತೇ । ಆತ್ಮನಃ ಸನ್ನಿಧಿಸ್ಥತ್ವಾನ್ಮನಸಸ್ತು ತದುಕ್ತಿತಃ । ಉಕ್ತೊ ಭವೇತ್ ಪರಾತ್ಮಾಪಿ ತತ್ತ್ವಷೋಡಶಕಂ ಯದಾ'' ಅಂದರೆ ಆತ್ಮನಾ ಎಂಬುದಕ್ಕೆ ಇಲ್ಲಿ ಆತ್ಮಶಬ್ದದಿಂದ ಎಂದರ್ಥವಲ್ಲ. ಕಿಂತು ಪರಮಾತ್ಮನಿಂದ ಎಂದೇ ಅರ್ಥ. 'ಸಹಯೋಗೇ ತೃತೀಯಾ' ಜೊತೆಗೆ ಎಂಬ ಅರ್ಥದಲ್ಲಿ ತೃತೀಯಾ ವಿಭಕ್ತಿಯು ಬರುತ್ತದೆ. ಸರ್ವಂ ವಾಕ್ಯಂ ಸಾವಧಾರಣಂ ಎಂಬ ನ್ಯಾಯದಿಂದ ಅವಧಾರಣವಿಟ್ಟುಕೊಳ್ಳಬೇಕು. ಅಂತು ಆತ್ಮನಾ ಎಂದರೇ ಆತ್ಮನಾ ಏವ ಪರಮಾತ್ಮನಾ ಸಹೈವ ಅಂದರೆ ಅವನಲ್ಲಿ ಅಂತರ್ಭಾವಿತವಾಗಿಯೇ ಮನಸ್ಸು ಹೇಳಲ್ಪಡುವುದು. ಹೊರತು ಮನಸ್ಸಿಗೆ ಪ್ರತ್ಯೇಕ ಗಣನೆ ಇಲ್ಲ. ಆದ್ದರಿಂದ ಪಂಚಮಹಾಭೂತಗಳು, ಪಂಚತನ್ಮಾತ್ರಾಗಳು, ಪಂಚೇಂದ್ರಿಯಗಳು ಹೀಗೆ ಪಂಚಕತ್ರಯ ಮತ್ತು ಪರಮಾತ್ಮ. ಅಂತೂ ಹದಿನಾರು ಆಗುವುದು. ಮನಸ್ಸನ್ನು ಪರಮಾತ್ಮನಲ್ಲಿ ಅಂತರ್ಭಾವ ಮಾಡುವುದಕ್ಕೆ ನಿಮಿತ್ತ ಹೇಳುವರು ಎಂದು ಅವತರಣಿಕೆಯನ್ನು ನೀಡಿ ತತ್ವಗಳು ಹದಿನಾರು ಎಂದು ಹೇಳುವಾಗ ಮನಸ್ಸು ಪರಮಾತ್ಮನ ವಿಶೇಷವಾದ ಸನ್ನಿಧಾನಕ್ಕೆ ಪಾತ್ರವಾದ್ದರಿಂದ ತದುಕ್ತಿತಃ ಎಂದು ಪರಮಾತ್ಮನನ್ನು ಹೇಳುವುದರಿಂದಲೇ ಮನಸ್ಸನ್ನು ಹೇಳಿದಂತಾಗುವುದು. ಪ್ರತ್ಯೇಕವಲ್ಲ ಆತ್ಮಾಂತರ್ಭಾವದಿಂದಲೇ ಎಂದು ಬರೆದಿರುವರು.

ಪರಮಾತ್ಮನ ಸನ್ನಿಧಾನಯುಕ್ತವಾದ ಮನಸ್ಸನ್ನು ಹೇಳುವುದರಿಂದ ಪರಮಾತ್ಮ ಹದಿನಾರರೊಳಗೆ ಹೇಳಿದಂತೆಯೇ ಆಯಿತು.

ಹದಿಮೂರು ತತ್ವಗಳು ಎಂದು ನಿರೂಪಿಸುವ ಭೂತೇಂದ್ರಿಯಾಣಿ ಎಂಬ ಮೂಲದಲ್ಲಿ ಹನ್ನೆರಡೇ ತತ್ತ್ವಗಳು ತೋರುತ್ತವೆ. ಆದ್ದರಿಂದ ತ್ರಯೋದಶತ್ವವನ್ನು ತಿಳಿಸಲು ಈ ತಾತ್ಪರ್ಯವು ಹೊರಟಿದೆ-

**ತಾತ್ಪರ್ಯ-** ''ಆತ್ಮಶಬ್ದೇನ ಚ ಬ್ರಹ್ಮಾ ಪರಮಾತ್ಮಾ ಚ ಇತ್ಯುಭಾವುಚ್ಯೇತೇ''

ಇಲ್ಲಿ ಆತ್ಮಶಬ್ದದಿಂದ ಚತುರ್ಮುಖ ಬ್ರಹ್ಮ ಮತ್ತು ಪರಮಾತ್ಮ ಇಬ್ಬರನ್ನೂ ತೆಗೆದುಕೊಳ್ಳಬೇಕು. ಪರಮಾತ್ಮ ಚತುರ್ಮುಖ ಬ್ರಹ್ಮ ಸೇರಿ ಎರಡು, ಮನಸ್ಸು ಮೂರು, ಪಂಚಭೂತಗಳು ಐದು, ಜ್ಞಾನೇಂದ್ರಿಯಗಳು ಐದು ಒಟ್ಟಾರೆ ಹದಿಮೂರು ತತ್ತ್ವಗಳಾಗುತ್ತವೆ ಎಂಬುದಾಗಿ ತಿಳಿಯಬೇಕು.

**ತಾತ್ಪರ್ಯ-ಭೂತೇಂದ್ರಿಯಾಣಿ ಚ ಮನೋ ಬ್ರಹ್ಮಾ ವಿಷ್ಣುಸ್ತಥೈವ ಚ ।**
**ಏವಂ ತ್ರಯೋದಶೈವಾಹುಸ್ತತ್ತ್ವಾನಿ ಮುನಯೋ ವರಾಃ । ಇತಿ ಚ ।**

**ಆತ್ಮೇತಿ ಪರಮಾತ್ಮಾ ಚ ವಿರಿಂಚಶ್ಚಾಪಿ ಕಥ್ಯತೇ ।**
**ವಾಯುರ್ಮನಶ್ಚ ದೇಹಶ್ಚ ಸ್ವಯಮಿತ್ಯಪಿ ಕುತ್ರಚಿತ್ ॥ ಇತಿ ಪ್ರತ್ಯಯೇ ।**

ಆತ್ಮ ಶಬ್ದದಿಂದ ಚತುರ್ಮುಖ, ಪರಮಾತ್ಮ ಇಬ್ಬರನ್ನು ಇಟ್ಟುಕೊಳ್ಳಬೇಕು. ಪಂಚಭೂತ, ಪಂಚಜ್ಞಾನೇಂದ್ರಿಯ, ಮನಸ್ಸು, ಬ್ರಹ್ಮ, ವಿಷ್ಣು, ಹೀಗೆ ೧೩ ಆಗುವುದು. ಆತ್ಮಶಬ್ದದಿಂದ ಚತುರ್ಮುಖ, ಪರಮಾತ್ಮ, ಕೆಲವು ಸ್ಥಳಗಳಲ್ಲಿ ವಾಯು, ಮನಸ್ಸು, ದೇಹ, ತಾನು ಹೇಳಲ್ಪಡುತ್ತಾನೆ ಎಂದು ಪ್ರತ್ಯಯ ಗ್ರಂಥದಲ್ಲಿದೆ.

ಈ ರೀತಿಯಾಗಿ ಒಂಭತ್ತು ವಿಧವಾಗಿ ತತ್ವಗಳ ಗಣನೆಯನ್ನು ಹೇಳಿ ಉಪಸಂಹಾರ ಮಾಡುತ್ತ ಎಲ್ಲ ಪಕ್ಷಗಳು ಪ್ರಾಮಾಣಿಕವೆಂದು ಹೇಳುವರು-

**ಇತಿ ನಾನಾಪ್ರಸಂಖ್ಯಾನಂ ತತ್ತ್ವಾನಾಮೃಷಿಭಿಃ ಕೃತಮ್ ।**
**ಸರ್ವಂ ನ್ಯಾಯ್ಯಂ ಯುಕ್ತಿಮತ್ತ್ವಾದ್ವಿದುಷಾಂ ಕಿಮಶೋಭನಮ್ ॥೨೪॥**

**ಇತಿ** ಈ ರೀತಿಯಾಗಿ **ಋಷಿಭಿಃ** ಋಷಿಗಳಿಂದ **ಕೃತಂ** ಮಾಡಲ್ಪಟ್ಟ **ತತ್ತ್ವಾನಾಂ** ತತ್ವಗಳ **ನಾನಾಪ್ರಸಂಖ್ಯಾನಂ** ಬೇರೆ ಬೇರೆ ರೀತಿಯಾಗಿ ಗಣನೆಯು **ಯುಕ್ತಿಮತ್ತ್ವಾತ್** ಅಂತರ್ಭಾವಾದಿ ಯುಕ್ತಿ ಸಹಿತವಾದ್ದರಿಂದ **ಸರ್ವಂ** ಎಲ್ಲ ಸಂಖ್ಯೆಗಳು **ನ್ಯಾಯ್ಯಂ** ಯುಕ್ತವಾಗಿವೆ. ನ್ಯಾಯಕ್ಕೆ ಅನುಗುಣವಾಗಿವೆ.

(ನ್ಯಾಯಾದನಪೇತಂ) ಅಂಗೀಕಾರ ಮಾಡಲು ಯೋಗ್ಯವೆಂದರ್ಥ. **ವಿದುಷಾಂ** ತತ್ವಗಳ ಅಂತರ್ಭಾವ ಬಹಿರ್ಭಾವಗಳನ್ನರಿತ ಜ್ಞಾನಿಗಳಿಗೆ **ಕಿಂ ಅಶೋಭನಂ** ಅಯುಕ್ತವಾದುದು ಯಾವುದು? ಅವರ ಯಾವ ಮಾತೂ ಅಯುಕ್ತವಲ್ಲ.।।೨೪।।

ಪ್ರಾಸಂಗಿಕವಾಗಿ ಉದ್ಧವನು ಪ್ರಕೃತಿವೈಲಕ್ಷಣ್ಯವನ್ನು ತಿಳಿಯಲು ಪ್ರಶ್ನಿಸುವನು-

**ಉದ್ಧವ ಉವಾಚ-**

**ಪ್ರಕೃತಿಃ ಪುರುಷಶ್ಚೋಭೌ ಯದ್ಯಪ್ಯಾತ್ಮವಿಲಕ್ಷಣೌ ।**
**ಅನ್ಯೋನ್ಯಾಪಾಶ್ರಯಾತ್ ಕೃಷ್ಣ ದೃಶ್ಯತೇ ನ ಭಿದಾ ತಯೋಃ ।।೨೫।।**

**ಪುರುಷಃ** ಪರಮಾತ್ಮನು **ಪ್ರಕೃತಿಃ** ಜಡಪ್ರಕೃತಿಯು **ಉಭೌ ಚ** ಇವರಿಬ್ಬರೂ **ಯದ್ಯಪಿ ವಿಲಕ್ಷಣೌ** ಯದ್ಯಪಿ ಸ್ವರೂಪತಃ ಭಿನ್ನರಾಗಿದ್ದಾರೆ, ಪ್ರಕೃತಿಯು ಜಡವಾಗಿದೆ ಪುರುಷನು ಚೇತನನಾಗಿದ್ದಾನೆ. **ತಥಾಪಿ** ಆದರೂ **ತಯೋಃ** ಪ್ರಕೃತಿ ಪುರುಷರಿಗೆ **ಭಿದಾ** ವೈಲಕ್ಷಣ್ಯವು **ನ ದೃಶ್ಯತೇ** ಕಾಣಿಸಲಾರದು. (ಆ ವೈಲಕ್ಷಣ್ಯ ಏಕೆ ತಿಳಿಯಲಾರದು ಎಂದು ಪ್ರಶ್ನಾಭಿಪ್ರಾಯ) ವೈಲಕ್ಷಣ್ಯ ತಿಳಿಯುವುದಿಲ್ಲ. ಇಷ್ಟೇ ಅಲ್ಲ. ವಿಪರೀತವಾಗಿ **ಅನ್ಯೋನ್ಯಾಪಾಶ್ರಯಾತ್** ದೇಹದಲ್ಲಿ ಪುರುಷನಿರುವುದರಿಂದ ದೇಹ ಮೊದಲಾದ ಪ್ರಕೃತಿಯು ಪುರುಷನಿಗೆ ಆಧಾರವಾಗಿದೆ ಮತ್ತು ಪುರುಷನು ಪ್ರಕೃತಿಗೆ ಆಧಾರವೆಂಬುದು ಆಗಮಸಿದ್ಧವಾಗಿದೆ ಹೀಗಾಗಿ ಪುರುಷನಿಗೆ ಪ್ರಕೃತಿ ಆಶ್ರಯ, ಪ್ರಕೃತಿಗೆ ಪುರುಷನು ಆಶ್ರಯ ಎಂದು ಪ್ರಕೃತಿ-ಪುರುಷರಿಗೆ ಸಾಮ್ಯ ತಿಳಿಯುವದು. ಇದು ಭ್ರಮ. ಇದಕ್ಕೆ ಕಾರಣವೇನು? ಎಂದು ಭಾವ.।।೨೫।।

ಮೇಲಿನ ಶ್ಲೋಕದಲ್ಲಿ ಪುರುಷನೆಂದರೆ ಜೀವನೆಂಬ ಅರ್ಥ ತೋರುವುದು. ಮತ್ತು ವಿಲಕ್ಷಣೌ ಎಂದು ಅನುವಾದ ಮಾಡಿ ವೈಲಕ್ಷಣ್ಯಂ ನ ದೃಶ್ಯತೇ ಎಂದು ಹೇಳಬೇಕಿತ್ತು. **ಭಿದಾ ನ ದೃಶ್ಯತೇ ತಯೋಃ** ಎಂದು ಹೇಳಿದುದು ಸರಿಯಲ್ಲ. ಮತ್ತು ಯದ್ಯಪಿ ಆತ್ಮವಿಲಕ್ಷಣೌ ಎಂದು ವೈಲಕ್ಷಣ್ಯವಿದೆ ಎಂದು ಹೇಳಿ ನ ದೃಶ್ಯತೇ ಎಂದು ಕಾಣದಿರುವದರಿಂದ ವೈಲಕ್ಷಣ್ಯವಿಲ್ಲ ಎಂಬ ಅಭಿಪ್ರಾಯದಿಂದ ಪ್ರಶ್ನಿಸುವದು ಕಂಡುಬರುವುದು. ಇದು ವ್ಯಾಹತ ಪ್ರಶ್ನೆ. ಈ ಎಲ್ಲ ಶಂಕೆಗಳನ್ನು ಪರಿಹರಿಸುವರು.

ಹದಿಮೂರು ತತ್ವಗಳು ಎಂದು ನಿರೂಪಿಸುವ ಭೂತೇಂದ್ರಿಯಾಣಿ ಎಂಬ ಮೂಲದಲ್ಲಿ ಹನ್ನೆರಡೇ ತತ್ತ್ವಗಳು ತೋರುತ್ತವೆ. ಆದ್ದರಿಂದ ತ್ರಯೋದಶತ್ವವನ್ನು ತಿಳಿಸಲು ಈ ತಾತ್ಪರ್ಯವು ಹೊರಟಿದೆ-

**ತಾತ್ಪರ್ಯ-** ''ಆತ್ಮಶಬ್ದೇನ ಚ ಬ್ರಹ್ಮಾ ಪರಮಾತ್ಮಾ ಚ ಇತ್ಯುಭಾವುಚ್ಯೇತೇ''

ಇಲ್ಲಿ ಆತ್ಮಶಬ್ದದಿಂದ ಚತುರ್ಮುಖ ಬ್ರಹ್ಮ ಮತ್ತು ಪರಮಾತ್ಮ ಇಬ್ಬರನ್ನೂ ತೆಗೆದುಕೊಳ್ಳಬೇಕು. ಪರಮಾತ್ಮ ಚತುರ್ಮುಖ ಬ್ರಹ್ಮ ಸೇರಿ ಎರಡು, ಮನಸ್ಸು ಮೂರು, ಪಂಚಭೂತಗಳು ಐದು, ಜ್ಞಾನೇಂದ್ರಿಯಗಳು ಐದು ಒಟ್ಟಾರೆ ಹದಿಮೂರು ತತ್ತ್ವಗಳಾಗುತ್ತವೆ ಎಂಬುದಾಗಿ ತಿಳಿಯಬೇಕು.

**ತಾತ್ಪರ್ಯ-ಭೂತೇಂದ್ರಿಯಾಣಿ ಚ ಮನೋ ಬ್ರಹ್ಮಾ ವಿಷ್ಣುಸ್ತಥೈವ ಚ ।**
**ಏವಂ ತ್ರಯೋದಶೈವಾಹುಸ್ತತ್ತ್ವಾನಿ ಮುನಯೋ ವರಾಃ । ಇತಿ ಚ ।**

**ಆತ್ಮೇತಿ ಪರಮಾತ್ಮಾ ಚ ವಿರಿಂಚಶ್ಚಾಪಿ ಕಥ್ಯತೇ ।**
**ವಾಯುರ್ಮನಶ್ಚ ದೇಹಶ್ಚ ಸ್ವಯಮಿತ್ಯಪಿ ಕುತ್ರಚಿತ್ ।। ಇತಿ ಪ್ರತ್ಯಯೇ ।**

ಆತ್ಮ ಶಬ್ದದಿಂದ ಚತುರ್ಮುಖ, ಪರಮಾತ್ಮ ಇಬ್ಬರನ್ನು ಇಟ್ಟುಕೊಳ್ಳಬೇಕು. ಪಂಚಭೂತ, ಪಂಚಜ್ಞಾನೇಂದ್ರಿಯ, ಮನಸ್ಸು, ಬ್ರಹ್ಮ, ವಿಷ್ಣು, ಹೀಗೆ ೧೩ ಆಗುವುದು. ಆತ್ಮಶಬ್ದದಿಂದ ಚತುರ್ಮುಖ, ಪರಮಾತ್ಮ, ಕೆಲವು ಸ್ಥಳಗಳಲ್ಲಿ ವಾಯು, ಮನಸ್ಸು, ದೇಹ, ತಾನು ಹೇಳಲ್ಪಡುತ್ತಾನೆ ಎಂದು ಪ್ರತ್ಯಯ ಗ್ರಂಥದಲ್ಲಿದೆ.

ಈ ರೀತಿಯಾಗಿ ಒಂಭತ್ತು ವಿಧವಾಗಿ ತತ್ವಗಳ ಗಣನೆಯನ್ನು ಹೇಳಿ ಉಪಸಂಹಾರ ಮಾಡುತ್ತ ಎಲ್ಲ ಪಕ್ಷಗಳು ಪ್ರಾಮಾಣಿಕವೆಂದು ಹೇಳುವರು-

**ಇತಿ ನಾನಾಪ್ರಸಂಖ್ಯಾನಂ ತತ್ತ್ವಾನಾಮೃಷಿಭಿಃ ಕೃತಮ್ ।**
**ಸರ್ವಂ ನ್ಯಾಯ್ಯಂ ಯುಕ್ತಿಮತ್ತ್ವಾದ್ವಿದುಷಾಂ ಕಿಮಶೋಭನಮ್ ।।೨೪।।**

**ಇತಿ** ಈ ರೀತಿಯಾಗಿ **ಋಷಿಭಿಃ** ಋಷಿಗಳಿಂದ **ಕೃತಂ** ಮಾಡಲ್ಪಟ್ಟ **ತತ್ತ್ವಾನಾಂ** ತತ್ವಗಳ **ನಾನಾಪ್ರಸಂಖ್ಯಾನಂ** ಬೇರೆ ಬೇರೆ ರೀತಿಯಾಗಿ ಗಣನೆಯು **ಯುಕ್ತಿಮತ್ತ್ವಾತ್** ಅಂತರ್ಭಾವಾದಿ ಯುಕ್ತಿ ಸಹಿತವಾದ್ದರಿಂದ **ಸರ್ವಂ** ಎಲ್ಲ ಸಂಖ್ಯೆಗಳು **ನ್ಯಾಯ್ಯಂ** ಯುಕ್ತವಾಗಿವೆ. ನ್ಯಾಯಕ್ಕೆ ಅನುಗುಣವಾಗಿವೆ.

(ನ್ಯಾಯಾದನಪೇತಂ) ಅಂಗೀಕಾರ ಮಾಡಲು ಯೋಗ್ಯವೆಂದರ್ಥ. **ವಿದುಷಾಂ** ತತ್ವಗಳ ಅಂತರ್ಭಾವ ಬಹಿರ್ಭಾವಗಳನ್ನರಿತ ಜ್ಞಾನಿಗಳಿಗೆ **ಕಿಂ ಅಶೋಭನಂ** ಅಯುಕ್ತವಾದುದು ಯಾವುದು? ಅವರ ಯಾವ ಮಾತೂ ಅಯುಕ್ತವಲ್ಲ.॥೨೪॥

ಪ್ರಾಸಂಗಿಕವಾಗಿ ಉದ್ಧವನು ಪ್ರಕೃತಿವೈಲಕ್ಷಣ್ಯವನ್ನು ತಿಳಿಯಲು ಪ್ರಶ್ನಿಸುವನು-

**ಉದ್ಧವ ಉವಾಚ-**

**ಪ್ರಕೃತಿಃ ಪುರುಷಶ್ಚೋಭೌ ಯದ್ಯಪ್ಯಾತ್ಮವಿಲಕ್ಷಣೌ ।**
**ಅನ್ಯೋನ್ಯಾಪಾಶ್ರಯಾತ್ ಕೃಷ್ಣ ದೃಶ್ಯತೇ ನ ಭಿದಾ ತಯೋಃ ॥೨೫॥**

**ಪುರುಷಃ** ಪರಮಾತ್ಮನು **ಪ್ರಕೃತಿಃ** ಜಡಪ್ರಕೃತಿಯು **ಉಭೌ ಚ** ಇವರಿಬ್ಬರೂ **ಯದ್ಯಪಿ ವಿಲಕ್ಷಣೌ** ಯದ್ಯಪಿ ಸ್ವರೂಪತಃ ಭಿನ್ನರಾಗಿದ್ದಾರೆ, ಪ್ರಕೃತಿಯು ಜಡವಾಗಿದೆ ಪುರುಷನು ಚೇತನನಾಗಿದ್ದಾನೆ. **ತಥಾಪಿ** ಆದರೂ **ತಯೋಃ** ಪ್ರಕೃತಿ ಪುರುಷರಿಗೆ **ಭಿದಾ** ವೈಲಕ್ಷಣ್ಯವು **ನ ದೃಶ್ಯತೇ** ಕಾಣಿಸಲಾರದು. (ಆ ವೈಲಕ್ಷಣ್ಯ ಏಕೆ ತಿಳಿಯಲಾರದು ಎಂದು ಪ್ರಶ್ನಾಭಿಪ್ರಾಯ) ವೈಲಕ್ಷಣ್ಯ ತಿಳಿಯುವುದಿಲ್ಲ. ಇಷ್ಟೇ ಅಲ್ಲ. ವಿಪರೀತವಾಗಿ **ಅನ್ಯೋನ್ಯಾಪಾಶ್ರಯಾತ್** ದೇಹದಲ್ಲಿ ಪುರುಷನಿರುವುದರಿಂದ ದೇಹ ಮೊದಲಾದ ಪ್ರಕೃತಿಯು ಪುರುಷನಿಗೆ ಆಧಾರವಾಗಿದೆ ಮತ್ತು ಪುರುಷನು ಪ್ರಕೃತಿಗೆ ಆಧಾರವೆಂಬುದು ಆಗಮಸಿದ್ಧವಾಗಿದೆ ಹೀಗಾಗಿ ಪುರುಷನಿಗೆ ಪ್ರಕೃತಿ ಆಶ್ರಯ, ಪ್ರಕೃತಿಗೆ ಪುರುಷನು ಆಶ್ರಯ ಎಂದು ಪ್ರಕೃತಿ-ಪುರುಷರಿಗೆ ಸಾಮ್ಯ ತಿಳಿಯುವದು. ಇದು ಭ್ರಮ. ಇದಕ್ಕೆ ಕಾರಣವೇನು? ಎಂದು ಭಾವ.॥೨೫॥

ಮೇಲಿನ ಶ್ಲೋಕದಲ್ಲಿ ಪುರುಷನೆಂದರೆ ಜೀವನೆಂಬ ಅರ್ಥ ತೋರುವುದು. ಮತ್ತು ವಿಲಕ್ಷಣೌ ಎಂದು ಅನುವಾದ ಮಾಡಿ ವೈಲಕ್ಷಣ್ಯಂ ನ ದೃಶ್ಯತೇ ಎಂದು ಹೇಳಬೇಕಿತ್ತು. **ಭಿದಾ ನ ದೃಶ್ಯತೇ ತಯೋಃ** ಎಂದು ಹೇಳಿದುದು ಸರಿಯಲ್ಲ. ಮತ್ತು ಯದ್ಯಪಿ ಆತ್ಮವಿಲಕ್ಷಣೌ ಎಂದು ವೈಲಕ್ಷಣ್ಯವಿದೆ ಎಂದು ಹೇಳಿ ನ ದೃಶ್ಯತೇ ಎಂದು ಕಾಣದಿರುವದರಿಂದ ವೈಲಕ್ಷಣ್ಯವಿಲ್ಲ ಎಂಬ ಅಭಿಪ್ರಾಯದಿಂದ ಪ್ರಶ್ನಿಸುವದು ಕಂಡುಬರುವುದು. ಇದು ವ್ಯಾಹತ ಪ್ರಶ್ನೆ. ಈ ಎಲ್ಲ ಶಂಕೆಗಳನ್ನು ಪರಿಹರಿಸುವರು.

**ತಾತ್ಪರ್ಯ-** ಯದ್ಯಪಿ ಪರಮಾತ್ಮಾ ಪ್ರಕೃತಿಶ್ಚ ವಿಲಕ್ಷಣೌ ತಯೋಃ ವೈಲಕ್ಷಣ್ಯಂ ನ ಲಕ್ಷ್ಯತೇ । 'ಅಂತರಂ ಚ ಭಿದಾ ಚೇತಿ ವೈಲಕ್ಷಣ್ಯಂ ಪ್ರಕೀರ್ತಿತಮ್'। ಇತಿ ಚ । ತದ್ವೈಲಕ್ಷಣ್ಯಂ ಕುತೋ ನ ದೃಶ್ಯತೇ ಇತಿ ಪ್ರಶ್ನಾಭಿಪ್ರಾಯಃ ॥

ಪರಮಾತ್ಮಾ, ಪ್ರಕೃತಿ, ಇಬ್ಬರೂ ಸ್ವಾಭಾವಿಕ ವಿಲಕ್ಷಣರಾಗಿದ್ದರೂ ವೈಲಕ್ಷಣ್ಯ ತಿಳಿಯಲಾರದು ಎಂದರ್ಥ ಮಾಡಿದ್ದರಿಂದ ಪುರುಷ ಶಬ್ದಕ್ಕೆ ಪರಮಾತ್ಮ ಎಂದು ಭಿದಾ ಎಂದರೆ ವೈಲಕ್ಷಣ್ಯವೆಂದು ಅರ್ಥ ತಿಳಿಸಿ ಪೂರ್ವಾರ್ಧ ಉತ್ತರಾರ್ಧ ಅಸಂಗತವಲ್ಲ ಎಂದಂತಾಯಿತು. ಅಂತರ-ಭಿದಾ-ವೈಲಕ್ಷಣ್ಯ ಈ ಪದಗಳಿಗೆ ಒಂದೇ ಅರ್ಥವು. ಆ ಇರುವ ವೈಲಕ್ಷಣ್ಯ ಏಕೆ ತಿಳಿಯುವದಿಲ್ಲ ಎಂದು ಪ್ರಶ್ನಾಭಿಪ್ರಾಯ ಎಂದು ಹೇಳಿದ್ದರಿಂದ ಕಾಣದಿರುವದರಿಂದ ವೈಲಕ್ಷಣ್ಯ ಇಲ್ಲಎಂದುವ್ಯಾಹತಪ್ರಶ್ನವಿಲ್ಲಎಂದುಹೇಳಿದಂತಾಯಿತು.॥೨೫॥

ಅನ್ಯೋನ್ಯಾಪಾಶ್ರಯಾತ್ ಎಂದು ಹೇಳಿದ್ದನ್ನು ವಿವರಿಸುವರು

**ಪ್ರಕೃತೌ ಲಕ್ಷ್ಯತೇ ಹ್ಯಾತ್ಮಾ ಪ್ರಕೃತಿಶ್ಚ ತಥಾಽಽತ್ಮನಿ ।**
**ಏತನ್ಮೇ ಪುಂಡರೀಕಾಕ್ಷ ಮಹಾಂತಂ ಸಂಶಯಂ ಹೃದಿ ।**
**ಛೇತ್ತುಮರ್ಹಸಿ ಪದ್ಮೇಶ ವಚೋಭಿಸ್ತತ್ತ್ವನೈಪುಣ್ಯೈಃ ॥೨೬॥**

**ಪ್ರಕೃತೌ** ದೇಹಾದಿಗಳಲ್ಲಿ **ಆತ್ಮಾ** ಹರಿಯು **ಲಕ್ಷ್ಯತೇ** ತಿಳಿಯುವನು ಅಂದರೆ ಪ್ರಕೃತಿಯನ್ನಾಶ್ರಯಿಸಿ ಹರಿಯು ಇರುವನು ಎಂದು ತಿಳಿಯುವದು ಎಂದು ಭಾವ. **ತಥಾ** ಹಾಗೆಯೇ **ಆತ್ಮನಿ** ಹರಿಯಲ್ಲಿ ಆಶ್ರಯಿಸಿಕೊಂಡು **ಪ್ರಕೃತಿಶ್ಚ ಲಕ್ಷ್ಯತೇ** ಪ್ರಕೃತಿಯು ಇದೆ ಎಂದು ತಿಳಿಯುವದು. ಆದ್ದರಿಂದ ಇಬ್ಬರಿಗೂ ಸಾಮ್ಯವೇ ತೋರುವದು **ಏತತ್** ಈ **ಮೇ** ಮಂದಮತಿಯಾದ ನನ್ನ **ಹೃದಿ** ಮನಸ್ಸಿನಲ್ಲಿರುವ **ಮಹಾಂತಂ ಸಂಶಯಂ** ದೊಡ್ಡ ಸಂಶಯವನ್ನು **ಪುಂಡರೀಕಾಕ್ಷ** ಕಮಲನೇತ್ರನೇ **ಪದ್ಮೇಶ** ರಮಾಪತಿಯೇ **ತತ್ತ್ವನೈಪುಣ್ಯೈಃ** ಯಥಾರ್ಥವಾದ ಸಂಶಯ ಪರಿಹಾರ ಸಮರ್ಥವಾದ **ವಚೋಭಿಃ** ಮಾತುಗಳಿಂದ **ಛೇತ್ತುಂ ಅರ್ಹಸಿ** ಪರಿಹರಿಸಲು ಸಮರ್ಥನಾಗಿರುವಿ.॥೨೬॥

ವೈಲಕ್ಷಣ್ಯದ ಜ್ಞಾನವಾಗದಿರಲು ನಿಮಿತ್ತವನ್ನು ಪ್ರಶ್ನಿಸುವದು ಸರಿಯಲ್ಲ ಅನ್ಯೋನ್ಯಾಪಾಶ್ರಯಾತ್ ಎಂದು ಅನ್ಯೋನ್ಯಸಂಚಲನ (ಪರಸ್ಪರಪ್ರವೇಶ) ರೂಪ ನಿಮಿತ್ತ ಹೇಳಿದೆಯಲ್ಲ ಎಂದರೆ ಹಾಗಲ್ಲ ''ಪ್ರಕೃತೌ ಲಕ್ಷ್ಯತೇ

ಹ್ಯಾತ್ಮಾ'' ಎಂಬ ಅನ್ಯೋನ್ಯಾಪಾಶ್ರಯವನ್ನು ವಿವರಿಸುವ ಮುಂದಿನ ಮೂಲದಲ್ಲಿ ಭೂಮಿ ಮತ್ತು ಭೂಧರ (ಪರ್ವತ) ಗಳಂತೆ ಪರಸ್ಪರ ಆಧಾರತ್ವವನ್ನೇ ಪ್ರಕೃತಿ-ಪುರುಷರಿಗೆ ಹೇಳಿರುವದರಿಂದ ಆಧಾರಾಧೇಯ-ಭಾವವಾದರೂ ವೈಲಕ್ಷಣ್ಯ ಜ್ಞಾಪಕವಾದುದರಿಂದ ವೈಲಕ್ಷಣ್ಯ ತಿಳಿಯದಿರಲು ಕಾರಣವಿಲ್ಲ ಅಂದ ಮೇಲೆ ಭೂ-ಭೂಧರದಂತೆ ವೈಲಕ್ಷಣ್ಯವೇ ಸ್ಪಷ್ಟ ತಿಳಿಯುವುದರಿಂದ ಅದರ್ಶನವೇ ಇಲ್ಲದಿರುವಾಗ ಅದರ್ಶನನಿಮಿತ್ತ ಪ್ರಶ್ನ ಅನುಪಪನ್ನ ಎಂದರೆ ಅನ್ಯೋನ್ಯಾಪಾಶ್ರಯಾತ್ ಎಂಬುದರ ನಂತರ ಅಧ್ಯಾಹಾರ ಮಾಡಬೇಕಾದುದನ್ನು ಹೇಳುವರು-

**ತಾತ್ಪರ್ಯ- ಅನ್ಯೋನ್ಯಾಧಾರತ್ವಮೇವ ದೃಶ್ಯತೇ ನತು ಪರಮೇಶ್ವರಸ್ಯ ಅನನ್ಯಾಧಾರತ್ವೇನ ಪ್ರಕೃತ್ಯಾಧಾರತ್ವಂ ಮಂದಮತೀನಾಂ ಇತ್ಯರ್ಥಃ।**

**ಆಧಾರಃ ಪ್ರಕೃತೇರ್ವಿಷ್ಣುರ್ನಾಧಾರಸ್ತು ಹರೇಃ ಕ್ವಚಿತ್ ।**
**ತಥಾಪ್ಯವ್ಯಕ್ತಗೋ ಯದ್ವದ್ ದೃಶ್ಯತೇ ಮಂದಚೇತಸಾಮ್ ॥ ಇತಿ ಪಾದ್ಮೇ ।**

ಇಲ್ಲಿ ಭೂ-ಭೂಧರಾದಿಗಳಂತೆ ಭೇದಪ್ರಯೋಜಕವಾದ ಯಾವುದೊ ವೈಲಕ್ಷಣ್ಯವಲ್ಲ ಪ್ರಕೃತವಾದುದು. ಪರಮಾತ್ಮನೇ ತಾನು ಅನ್ಯಾಧಾರರಹಿತ-ನಾಗಿ ಪ್ರಕೃತಿಗೆ ಆಧಾರನಾಗಿದ್ದಾನೆ. ಪ್ರಕೃತಿಗಾದರೋ ಕೇವಲ ಪರಮೇಶ್ವರಾಶ್ರಿತತ್ವವಿದೆ ಎಂಬ ಸ್ವಾತಂತ್ರ್ಯ-ಪಾರತಂತ್ರ್ಯವನ್ನೊಳಗೊಂಡ ವೈಲಕ್ಷಣ್ಯವೇ ಪ್ರಸ್ತುತವಾದುದು.

ಅಂತು ಪ್ರಕೃತಿ-ಪುರುಷರಿಗೆ ಅನ್ಯೋನ್ಯಾಧಾರತ್ವವೇ ತಿಳಿಯುವದೇ ಹೊರತು ನಮಗೆ ಅಭೀಪ್ರೇತವಾದ, ಪರಮಾತ್ಮನು ಅನನ್ಯಾಧಾರನಾಗಿ ಪ್ರಕೃತಿಗೆ ಆಧಾರನೆಂದು ಮಂದಮತಿಗಳಿಗೆ ತಿಳಿಯಲಾರದು. ಇದಕ್ಕೆ ನಿಮಿತ್ತವೇನು ಎಂದು ಭಾವ. ವಿಷ್ಣುವು ಪ್ರಕೃತಿಗೆ ಆಧಾರನು. ಹರಿಗೆ ಆಧಾರವು ಎಲ್ಲಿಯೂ ಇಲ್ಲ. ಆದರೂ ಅವ್ಯಕ್ತಕಾರ್ಯದೇಹಾದಿಗಳಲ್ಲಿ ಇರತಕ್ಕ ಜೀವನು ಅವ್ಯಕ್ತಾಧಾರನಾಗಿ ತೋರಿದಂತೆ ಶ್ರೀಹರಿಯು ಅಜ್ಞರಿಗೆ ತೊರುವನು.

ಅಜ್ಞಾನ ಮತ್ತು ಭ್ರಾಂತಿಗಳು ಉದ್ಧವನಿಗೆ ಇಲ್ಲ ತಾನೇ ಸ್ವತಃ ವಿಲಕ್ಷಣರು ಎಂದು ಹೇಳಿದ್ದಾನೆ. ಇಲ್ಲಿ ಉದ್ಧವನು ಪದ್ಮೇಶ ಎಂದು ಪರಮಾತ್ಮನನ್ನು

ಸಂಬೋಧಿಸುತ್ತಿದ್ದಾನೆ. ಆದ್ದರಿಂದ ಪ್ರಕೃತಿಗೆ ಅಭಿಮಾನಿನಿಯಾದ ರಮೆಗಿಂತಲೂ ಪರಮಾತ್ಮ ಉತ್ತಮ ಎಂಬ ಜ್ಞಾನ ಉದ್ಧವನಿಗೆ ಇದೆ ಎಂದು ಸಿದ್ಧವಾಗುತ್ತದೆ. ಪರಮಾತ್ಮ ಅನನ್ಯಾಧಾರನಾಗಿದ್ದಾನೆ. ಪರಮಾತ್ಮನಿಗೆ ಇನ್ನೊಂದು ಆಧಾರ ಇಲ್ಲ. ಪ್ರಕೃತಿಗೆ ಆಧಾರನಾಗಿದ್ದಾನೆ. ಈ ನಿಶ್ಚಯವೂ ಉದ್ಧವನಿಗೆ ಇದೆ. ಆದರೂ ಮಂದಮತಿಗಳಿಗೆ ಬರುವ ಸಂಶಯವನ್ನು ತಾನು ತೆಗೆದುಕೊಂಡು ಲೋಕೋಪಕಾರಕ್ಕಾಗಿ ಪ್ರಶ್ನಿಸುವನೆಂದು ಭಾವ.॥೭೬॥

ನಿನಗೆ ಸಂಶಯ ನಿವಾರಿಸುವ ಸಾಮರ್ಥ್ಯವಿದೆ ಎಂದು ಸ್ತುತಿಸುವನು

**ತ್ವತ್ತೋ ಜ್ಞಾನಂ ಹಿ ಜೀವಾನಾಂ ಪ್ರಮೋಷಸ್ತನುಶಕ್ತಿತಃ ।**
**ತ್ವಮೇವ ಹ್ಯಾತ್ಮಮಾಯಾಯಾ ಗತಿಂ ವೇತ್ಥ ನ ಚಾಪರಃ ॥೨೭॥**

**ಜೀವಾನಾಂ** ಜೀವರಿಗೆ **ಜ್ಞಾನಂ** ಯಥಾರ್ಥಜ್ಞಾನವು **ತ್ವತ್ತಃ** ನಿನ್ನಿಂದಲೇ ಆಗುವುದು **ತನುಶಕ್ತಿತಃ** ಅಲ್ಪಬುದ್ಧಿಗಳಾದುದರಿಂದಲೂ ತಾಮಸ ಶರೀರ ಬಲದಿಂದಲೂ **ಪ್ರಮೋಷೋಽಪಿ** ಇರುವ ಜ್ಞಾನದ ನಾಶವು **ತ್ವತ್ತಃ** ನಿನ್ನಿಂದಲೇ ಆಗುವುದು **ತ್ವಮೇವ** ನೀನೇ **ಆತ್ಮಮಾಯಾಯಾಃ** ನಿನ್ನ ಸಾಮರ್ಥ್ಯದ, ಸ್ವಾಧೀನವಾದ ಪ್ರಕೃತಿಯ **ಗತಿಂ** ಸ್ಥಿತಿಯನ್ನು **ವೇತ್ಥ** ತಿಳಿದಿರುವಿ **ಅಪರಃ ನ ಚ** ಬೇರೆಯವರು ಸರ್ವಥಾ ತಿಳಿದಿಲ್ಲ॥೨೭॥

ಈ ರೀತಿ ಪ್ರಶ್ನಿಸಿದಾಗ ಪ್ರಕೃತಿ-ಪುರುಷರಿಗೆ ಇರುವ ವೈಲಕ್ಷಣ್ಯ ತಿಳಿಯದಿರಲು ಪರಸ್ಪರ ಆಶ್ರಯತ್ವವಿರುದರಿಂದ ಸಾಮ್ಯ ತಿಳಿಯಲು ತಮೋ ಗುಣವೇ ಕಾರಣವೆಂದು ಹೇಳಲು ಉಪೋದ್ಘಾತ ಮಾಡುವನು.

**ಶ್ರೀಭಗವಾನುವಾಚ-**

**ಪ್ರಕೃತಿಃ ಪುರುಷಶ್ಚೇತಿ ವಿಕಲ್ಪಃ ಪುರುಷರ್ಷಭ ।**
**ಏಷ ವೈಕಾರಿಕಃ ಸರ್ಗೋ ಗುಣವ್ಯತಿಕರಾತ್ಮಕಃ ॥೨೮॥**

**ಪ್ರಕೃತಿಃ ಪುರುಷಶ್ಚ ಇತಿ** ಚಶಬ್ದದಿಂದ ವೈಲಕ್ಷಣ್ಯ ಅನುಕರ್ಷ ಮಾಡಿ ಅವಧಾರಣಾರ್ಥಕ ಎಂದಿಟ್ಟುಕೊಂಡು ನೀನು, ಪ್ರಕೃತಿ-ಪುರುಷರು ಸ್ವತಃ ವಿಲಕ್ಷಣರು ಎಂದು ಹೇಳಿದಂತೆ ಪರಸ್ಪರ ವಿಲಕ್ಷಣರೇ ಆಗಿರುವಿರಿ **ಪುರುಷರ್ಷಭ** ಉದ್ಧವನೇ! **ಏಷಃ** ವೈಲಕ್ಷಣ್ಯ ತೋರದಿರುವುದು ಪರಸ್ಪರಾ-ಶ್ರಯತ್ವವಿರುವದರಿಂದ ಸಾಮ್ಯ ತೋರುವದು **ವಿಕಲ್ಪ ಏವ** ಭ್ರಾಂತಿಯೇ

**ಗುಣವ್ಯತಿಕರಾತ್ಮಕಃ ಸರ್ಗಃ** ಗುಣವೈಷಮ್ಯನಾಮಕವಾದ ಸೃಷ್ಟಿಯು **ವೈಕಾರಿಕಃ** ವಿಕಾರನಿಮಿತ್ತಕವಾದುದು ಮಹತ್ತತ್ತ್ವದ ವಿಕಾರವಾದ ಅಹಂಕಾರ ಕಾರ್ಯ-ವಾದುದು ಈ ಅಹಂಕಾರ ತತ್ವದಿಂದುಂಟಾದ ಸೃಷ್ಟಿಯಲ್ಲಿ ಯಾರು ತಮೋಗುಣಪ್ರಧಾನ ಸೃಷ್ಟಿ ಉಳ್ಳವರೋ ಇವರಿಗೆ ವೈಲಕ್ಷಣ್ಯ ತೋರದೇ ಭ್ರಮಾದಿಗಳು ಬರುವವು ಆದ್ದರಿಂದ ತಮೋಗುಣವೇ ಮೂಲಕಾರಣವೆಂದು ಭಾವ.।।೨೮।।

ಮೇಲಿನ ಶ್ಲೋಕದಲ್ಲಿ ಉದ್ಧವನ ಶಂಕಾಕ್ಕೆ ಪರಿಹಾರ ತಿಳಿಯುವದಿಲ್ಲ ಮತ್ತು ಎಲ್ಲವಾಕ್ಯವು ಸಂಗತವಾಗಿ ತೋರುವದಿಲ್ಲ ಕಾರಣ ಯೋಜಿಸುವರು-

**ತಾತ್ಪರ್ಯ- ಪ್ರಕೃತಿಃ ಪುರುಷಶ್ಚ ಇತ್ಯೇವ ಅನ್ಯೋನ್ಯವಿಲಕ್ಷಣಾವೇವ ।।**

''ಸರ್ವಂ ವಾಕ್ಯಂ ಸಾವಧಾರಣಂ ಎಂಬ ನಿಯಮದ ಪ್ರಕಾರ ಇತ್ಯೇವ ಎಂದಿದ್ದಾರೆ. ಅದರ ಅಭಿಪ್ರಾಯ ಪ್ರಕೃತಿ-ಪುರುಷರು ಭಿನ್ನರೇ ಆಗಿದ್ದಾರೆ ಇಷ್ಟು ಉತ್ತರ.

ಮುಂದಿನ ವಾಕ್ಯ ಯೋಜಿಸುವರು-

**ತಾತ್ಪರ್ಯ- ಏಷಃ ವಿಕಲ್ಪಃ । ವೈಲಕ್ಷಣ್ಯಾದರ್ಶನಂ ವಿರುದ್ಧಕಲ್ಪನಮೇವ ।**

ಭ್ರಾಂತಿಯೇ ನಿಮಿತ್ತವಾದುದು ಎಂದರ್ಥ. ಆ ಭ್ರಾಂತಿಗೆ ಕಾರಣ ಹೇಳುವರು.

**ತಾತ್ಪರ್ಯ- ಯಸ್ಮಾದ್ ಗುಣವ್ಯತಿಕರಾತ್ಮಕಃ ಸರ್ಗಃ ವಿಕಾರನಿಮಿತ್ತಃ ಸ ಚ ಗುಣವ್ಯತಿಕರಃ ತ್ರಿವಿಧಃ ಸತ್ವರಜಸ್ತಮಸಾಮೇಕೈಕಪ್ರಾಧಾನ್ಯೇನ । ತತ್ರ ತಮಃ-ಪ್ರಧಾನಾನಾಮೇವ ವಿರುದ್ಧಕಲ್ಪನಂ ತಸ್ಮಾತ್ತಮೋऽತ್ರ ಕಾರಣಮಿತ್ಯರ್ಥಃ ।।**

ಗುಣವೈಷಮ್ಯರೂಪವಾದ ಸೃಷ್ಟಿಗೆ ಮಹತ್ತತ್ತ್ವವಿಕಾರವಾದ ಅಹಂಕಾರ ನಿಮಿತ್ತವಾದುದು. ಆ ಸೃಷ್ಟಿ ಮೂರು ವಿಧ. ಸತ್ವಪ್ರಧಾನವಾದ ದೇವತಾ-ದೇಹಸರ್ಗ, ರಜಃಪ್ರಧಾನವಾದ ಇಂದ್ರಿಯಸೃಷ್ಟಿ, ತಮಃಪ್ರಧಾನವಾದ ಭೂತಸರ್ಗ ಎಂದು. ಅದರಲ್ಲಿ ತಮಃಪ್ರಧಾನರಾದವರಿಗೆ ವಿರುದ್ಧಕಲ್ಪನೆ ಬರುವುದು. ಅದಕ್ಕೆ ತಮೋಗುಣವೇ ಕಾರಣವೆಂದು ಭಾವ.।।೨೮।।

ಕೇವಲ ತಮೋಗುಣವಷ್ಟೇ ಅಲ್ಲ. ಪ್ರಕೃತಿ ಮತ್ತು ಈಶ್ವರನ ಇಚ್ಛೆಗಳು ಕೂಡಾ ಕಾರಣ ಎಂದು ಹೇಳುವನು-

**ಮಮಾಂಗ ಮಾಯಾ ಗುಣಮಯ್ಯನೇಕಧಾ ವಿಕಲ್ಪಬುದ್ಧಿಂ ಚ ಗುಣೈರ್ವಿಧತ್ತೇ ।**
**ವೈಕಾರಿಕಸ್ತ್ರಿವಿಧೋಽಧ್ಯಾತ್ಮಮೇಕಮಥಾಧಿದೈವಮಧಿಭೂತಮನ್ಯತ್ ॥೨೯॥**

**ಹೇ ಅಂಗ** ಉದ್ಧವನೇ **ಗುಣಮಯೀ** ಜ್ಞಾನಾನಂದಗುಣಾತ್ಮಕವಾದ **ಮಮ ಮಾಯಾ** ನನ್ನ ಇಚ್ಛೆಯು ಸತ್ವಾದಿಗುಣಾತ್ಮಕವಾದ ನನ್ನ ಅಧೀನವಾದ ಪ್ರಕೃತಿಯು **ಗುಣೈಃ** ಸತ್ವರಜಸ್ತಮೋಗುಣಗಳಿಂದ ಅಪ್ರಧಾನವಾದ ಸತ್ವಾದಿಗಳ ಕಾರ್ಯವಾದ ಮಹದಹಂಕಾರಾದಿಗಳಿಂದ **ವಿಕಲ್ಪಬುದ್ಧಿಂ ಅನೇಕಧಾ ವಿಧತ್ತೇ** ನಾನಾ ಬಗೆಯ ನಿರ್ಗುಣನೆಂದು, ಪ್ರಕೃತಿಸಮನೆಂದು ಭ್ರಮ ಹುಟ್ಟಿಸುವುದು **ಚ** ಸರಿಯಾದ ಜ್ಞಾನವನ್ನೂ ಹುಟ್ಟಿಸುವುದು **ವೈಕಾರಿಕಃ** ಮಹತ್ತತ್ವ ವಿಕಾರದಿಂದ ಉಂಟಾದುದರಿಂದ ವೈಕಾರಿಕವೆನಿಸಿದ ಅಹಂಕಾರವು **ಏಕಂ** ಒಂದು ತೈಜಸ ಅಹಂಕಾರವು **ಅಧ್ಯಾತ್ಮಂ** ತೈಜಸಾಹಂಕಾರಕಾರ್ಯವಾದ ಇಂದ್ರಿಯಗಳು **ಅಥ ಏಕಂ** ಮತ್ತೊಂದಾದ ವೈಕಾರಿಕ ಅಹಂಕಾರವು **ಅಧಿದೈವಂ** ದೇವತೆಗಳ ದೇಹವು **ಅನ್ಯತ್** ತಾಮಸ ಅಹಂಕಾರವು **ಅಧಿಭೂತಂ** ಪಂಚಭೂತಗಳು ಹೀಗೆ **ತ್ರಿವಿಧಃ** ಮೂರು ರೀತಿಯಾಗಿದೆ.॥೨೯॥

ಮಮಾಂಗೇ ಎಂಬ ಶ್ಲೋಕಕ್ಕೆ ಸಂಗತಿ ಏನೆಂದು ತಿಳಿಯುವದಿಲ್ಲ. ಕಾರಣ ಸಂಗತಿ ಹೇಳುವರು-

**ತಾತ್ಪರ್ಯ- ತತ್ರಾಪಿ ಪ್ರಕೃತಿರೇವ ಕಾರಣಂ ಈಶ್ವರೇಚ್ಛಾ ಚ ।**

**ತತ್ರಾಪಿ** ತಮೋಗುಣವೇ ಭ್ರಮಕಾರಣವೆಂದು ಸಿದ್ಧವಾಗಿದ್ದರೂ ಬೇರೆ ಕಾರಣವೂ ಇದೆ ಎಂದು ಹೇಳುವರು ಎಂದರ್ಥ. ತಾತ್ಪರ್ಯದಲ್ಲಿ ಏವಕಾರವು ಅಯೋಗವ್ಯವಚ್ಛೇದಾರ್ಥಕವೇ ಹೊರತು ಅನ್ಯಯೋಗ-ವ್ಯವಚ್ಛೇದಾರ್ಥಕವಲ್ಲ. ಇಲ್ಲವಾದರೆ ಈಶ್ವರೇಚ್ಛಾ ಕಾರಣವೆಂದು ಹೇಳುವುದು ತಪ್ಪಾಗುವುದು. ಅಂದರೆ ಪ್ರಕೃತಿಯು ಕಾರಣ ಆಗಿಯೇ ಆಗಿದೆ ಎಂದರ್ಥ. ಹೊರತು ಪ್ರಕೃತಿಯೇ ಕಾರಣ ಎಂದರ್ಥವಲ್ಲ. ಪ್ರಕೃತಿಯೆಂದರೆ ಇಲ್ಲಿ ಲಿಂಗದೇಹವೆಂದರ್ಥ. ಈಶ್ವರೇಚ್ಛಾ ಚ ಎಂಬುದರ ನಂತರ ''ಇತ್ಯಾಹ ಮಮೇತಿ'' ಎಂದು ಶೇಷ ಮಾಡಬೇಕು (ಶ್ರೀನಿವಾಸತೀರ್ಥರು)

**ತಾಮ್ರಪರ್ಣಿ-**

ವೈಲಕ್ಷಣ್ಯ ತಿಳಿಯದಿರಲು ಹಿಂದೆ ಹೇಳಿದ ಭ್ರಮ ಕಾರಣವು. ಭ್ರಮಕ್ಕೆ ತಮೋಗುಣ, ತಮೋಗುಣಕ್ಕೆ ಮೂಲಪ್ರಕೃತಿಯು ಉಪಾದಾನಕಾರಣ-

ವಾಗಿದೆ. ಚೇತನಪ್ರಕೃತಿಯಾದ ಲಕ್ಷ್ಮೀದೇವಿಯು ನಿಮಿತ್ತಕಾರಣ. ಈಶ್ವರೇಚ್ಛೆಯು ಪ್ರಧಾನ ಕಾರಣ ಎಂದು ಹೇಳುವರೆಂದರ್ಥ. ಇದರಿಂದ ಮಾಯಾಶಬ್ದವು ಪರಮಮುಖ್ಯವೃತ್ತಿಯಿಂದ ಚಿತ್ಪ್ರಕೃತಿಯನ್ನು, ಲಕ್ಷ್ಮೀ ಅಪೇಕ್ಷಯಾ ಅಮುಖ್ಯ ವೃತ್ತಿಯಿಂದ ಜಡಪ್ರಕೃತಿಯನ್ನು ತಿಳಿಸುವುದು ಎಂದಂತಾಯಿತು. ಮೂಲದಲ್ಲಿ ಗುಣಮಯೀ ಎಂದರೇ ಜ್ಞಾನಾನಂದಗುಣ-ರೂಪ ಎಂದು ಅರ್ಥ. ಈಶ್ವರೇಚ್ಛಾ ಮತ್ತು ಚಿತ್ಪ್ರಕೃತಿಗೆ ವಿಶೇಷಣ. ಚಿತ್ಪ್ರಕೃತಿಯು ಸತ್ವಾದಿಗುಣಾಭಿಮಾನಿ. ಅಚಿತ್ಪ್ರಕೃತಿಯು ಗುಣಾತ್ಮಕವಾಗಿದೆ. ಮೂಲದಲ್ಲಿ ಅಹಂಕಾರಕಾರ್ಯದಲ್ಲೊಂದಾದ ವೈಕಾರಿಕ ಅಹಂಕಾರವು ಮೂರು ವಿಧ. ''ವಿಕಾರಾಜ್ಜಾತತ್ವಾತ್ ವೈಕಾರಿಕ ಇತ್ಯುಚ್ಯತೇ ಅಹಂಕಾರಃ ತ್ರಿವಿಧೋऽಪಿ''

ತೈಜಸ, ತಾಮಸ, ವೈಕಾರಿಕ ಎಂಬ ಮೂರು ವಿಧವಾದ ಅಹಂಕಾರವು ಮಹತ್ತತ್ವದ ವಿಕಾರದಿಂದ ಉತ್ಪನ್ನವಾದುದರಿಂದ ವೈಕಾರಿಕವೆನಿಸುತ್ತದೆ. ಮೂಲ ಅಹಂಕಾರಕ್ಕೆ ಕೇವಲ ಯೋಗವೃತ್ತಿಯಿಂದಷ್ಟೇ ವೈಕಾರಿಕವೆನ್ನುವುದಿಲ್ಲ. ರೂಢಿಯೂ ಉಂಟು ಎಂದು ತಿಳಿಸುವರು.

**ತಾತ್ಪರ್ಯ- ವೈಕಾರಿಕೋ ಮಹಾಂಶ್ಚೈವ ತಥಾಹಂಕಾರ ಏವ ಚ ।**
**ತಥೈವ ಸಾತ್ವಿಕಶ್ಚಾಂಶೋ ವೈಕಾರಿಕ ಇತಿ ತ್ರಿಧಾ ॥ -ಇತಿ ಶಬ್ದನಿರ್ಣಯೇ ।**

**ಮಹಾಂಶ್ಚ** ಮಹತ್ತತ್ವವೂ **ವೈಕಾರಿಕಃ** ವೈಕಾರಿಕವೆನಿಸಿಕೊಳ್ಳುವುದು. **ಅಹಂಕಾರಃ ಚ** ಅಹಂಕಾರವೂ ಸಹ **ತಥಾ ಏವ** ವೈಕಾರಿಕ ಎಂದೇ ಕರೆಸಿಕೊಳ್ಳುವುದು. **ಸಾತ್ವಿಕಶ್ಚ ಅಂಶಃ ಚ** ಅಹಂಕಾರಪ್ರಭೇದವಾದ (ದೇವತೆಗಳ ದೇಹ ಮತ್ತು ಮನಸ್ಸಿಗೆ ನಿಮಿತ್ತವಾದ) ವೈಕಾರಿಕ ಅಹಂಕಾರವೂ **ತಥೈವ** ವೈಕಾರಿಕವೆನಿಸುತ್ತದೆ. **ಇತಿ** ಈ ರೀತಿ **ವೈಕಾರಿಕಃ** ವೈಕಾರಿಕಶಬ್ದದಿಂದ ಕರೆಸಿಕೊಳ್ಳುವ ವಸ್ತುಗಳು **ತ್ರಿಧಾ** ಮೂರು ರೀತಿಯಾಗಿವೆ. ಉಪಲಕ್ಷಣಯಾ ತೈಜಸ ತಾಮಸ ಅಹಂಕಾರಗಳೂ ವೈಕಾರಿಕವೆಂದು ಕರೆಸಿಕೊಳ್ಳುವವು ಎಂದು ತಿಳಿಯಬೇಕು. ಹೀಗೆಂದು ಶಬ್ದನಿರ್ಣಯದಲ್ಲಿದೆ.

ವಿಕಲ್ಪಪದದಿಂದ ಪ್ರಕೃತವಾದ ವಿಪರೀತಜ್ಞಾನವು ಜನಿಸಬೇಕಾದರೇ ಇಂದ್ರಿಯಗಳು, ಆಲೋಕಾದಿ ಸಹಕಾರಿಗಳು ಮತ್ತು ವಿಷಯಗಳು ಬೇಕಾಗುವವು. ಕಾರಣ ಈ ಮೂರನ್ನು ಹುಟ್ಟಿಸಲು ಮೂರು ವಿಧ

ಅಹಂಕಾರವು ಪ್ರವೃತ್ತವಾಗುವುದು. **ತತ್ರೈಕಂ** ಮೂರರಲ್ಲೊಂದಾದ ತೈಜಸಾಹಂಕಾರವು **ಅಧ್ಯಾತ್ಮಂ** ಅಂದರೆ ಇಂದ್ರಿಯಗಳಾಗುವುದು. **ಅಥ** ಮತ್ತೊಂದಾದ ವೈಕಾರಿಕವು **ಅಧಿದೈವಂ** ಸೂರ್ಯಪ್ರಕಾಶ ಮುಂತಾದ ಸಹಕಾರಿಯಾಗುವುದು **ಅನ್ಯತ್** ತಾಮಸ ಅಹಂಕಾರವು **ಅಧಿಭೂತಂ** ರೂಪಾದಿ ವಿಷಯಗಳಾಗುವುದು.

ಈ ಮೂರು ಪರಸ್ಪರ ಸಾಪೇಕ್ಷವಾಗಿ ಸಂಸಾರಾವಸ್ಥೆಯಲ್ಲಿ ವಿಪರೀತಜ್ಞಾನ ಹುಟ್ಟಿಸುವವು ಎಂಬುದನ್ನು ಉದಾಹರಣದಿಂದ ಉಪಪಾದಿಸುವರು.

**ದೃಗ್ರೂಪಮರ್ಕಶ್ಚ ಪರತ್ರ ರಂಧ್ರೇ ಪರಸ್ಪರಂ ಸಿದ್ಧ್ಯತಿ ನ ಸ್ವತೋಽಸೌ ।**
**ಆತ್ಮಾ ಯದೇಷಾಮುಪರಾಮ ಆದ್ಯಃ ಸ್ವಯಾನುಭೂತ್ಯಾಽಖಿಲಸಿದ್ಧ್ಯಸಿದ್ಧಿಃ॥**

**ಏವಂ ತ್ವಗಾದಿ ಶ್ರವಣಾದಿ ಚಕ್ಷುರ್ಜಿಹ್ವಾದಿ ನಾಸಾದಿ ಚ ಚಿತ್ತಯುಕ್ತಮ್॥೩೧॥**

ಮೇಲಿನ ೨೯ನೇ ಶ್ಲೋಕದಲ್ಲಿ ಹೇಳಿದ ಅಧ್ಯಾತ್ಮ ಅಧಿಭೂತ ಅಧಿದೈವಗಳಲ್ಲಿ **ರಂಧ್ರೇ** ಗೋಲಕದಲ್ಲಿ **ದೃಕ್** ಚಕ್ಷುರಿಂದ್ರಿಯವು (ಅಧ್ಯಾತ್ಮಂ) ತೈಜಸ ಅಹಂಕಾರಕಾರ್ಯವು **ರೂಪಂ** ಚಕ್ಷುರಿಂದ್ರಿಯಕ್ಕೆ ವಿಷಯವಾಗುವ ಬಣ್ಣವು (ಅಧಿಭೂತಂ) ತಾಮಸ ಅಹಂಕಾರದಿಂದ ಜನಿಸಿದ್ದು **ಪರತ್ರ** ಗೋಲಕದ ಹೊರಗೆ **ಅಧಿದೈವಂ** ಚಕ್ಷುರಿಂದ್ರಿಯಕ್ಕೆ ಸಹಕಾರಿಯಾದ **ಅರ್ಕಃ** ಪ್ರಕಾಶವು ವೈಕಾರಿಕ ಅಹಂಕಾರದಿಂದ ಜನಿಸಿದ್ದು ಈ ಮೂರು **ಪರಸ್ಪರಂ** ಒಂದನ್ನೊಂದು ಅಪೇಕ್ಷಿಸಿ **ಸಿದ್ಧ್ಯತಿ** ತಮಗೆ ಯೋಗ್ಯವಾದ ಕ್ರಿಯಾ ಜನಕವಾಗುವವು. ಪ್ರಕೃತ ಭ್ರಮರೂಪವಾದ ಜ್ಞಾನಕ್ಕೆ ಜನಕವಾಗುವವು **ಅಸೌ** ಸಿದ್ಧಿಯು **ನ ಸ್ವತಃ** ಒಂದೊಂದರಿಂದಲೇ ಆಗಲಾರದು. ಮತ್ತು ಈ ಮೂರರಿಂದಲೇ ಆಗದು. ಹೀಗೂ ಅರ್ಥ.

ಅಹಂಕಾರ ಕಾರ್ಯಗಳಾದ ಚಕ್ಷುರಿಂದ್ರಿಯ, ಆಲೋಕರೂಪ ತ್ವಗಿಂದ್ರಿಯ, ಸ್ಪರ್ಶಾಭಿಮಾನಿ ಶ್ರೋತ್ರ-ಶಬ್ದ ಅಭಿಮಾನಿ ಹೀಗೆ ಅಹಂಕಾರ ಕಾರ್ಯಗಳಾದ ಮೂರು ಮೂರರಿಂದಲೇ ರೂಪಾದಿವಿಷಯಜ್ಞಾನ, ಸ್ಪರ್ಶಾದಿ ಜ್ಞಾನಗಳು, ಬರುವುದು ಎಂದಾದರೇ ಅಹಂಕಾರಕಾರ್ಯ ಇಂದ್ರಿಯಾದಿಗಳು ಇಲ್ಲದಿರುವುದರಿಂದ ಮುಕ್ತಿಯಲ್ಲಿ ಜ್ಞಾನಾದಿಗಳು ಬರದಿರಲಿ ಎಂಬ ಶಂಕೆಗೆ ಉತ್ತರಿಸುವರು.

**ಯದಾ** ಯಾವಾಗ **ಏಷಾಂ** ಈ ಇಂದ್ರಿಯವಿಷಯ ಮುಂತಾದವುಗಳ **ಉಪರಮಃ** ನಾಶವು **ತದಾ** ಆಗ ಮುಕ್ತಿಯಲ್ಲಿ **ಆದ್ಯಃ ಆತ್ಮಾ** ಪರಮಾತ್ಮನು **ಸ್ವಯಾನುಭೂತ್ಯಾ** ಸ್ವರೂಪೇಂದ್ರಿಯ ಸಾಮರ್ಥ್ಯದಿಂದ **ಅಖಿಲಸಿದ್ಧ್ಯಸಿದ್ಧಿಃ** ಎಲ್ಲ ಮುಕ್ತರಿಗೆ ಜ್ಞಾನವೃದ್ಧಿ-ಹ್ರಾಸಜನಕನು ಎಂದರ್ಥ. ಮತ್ತು **ಆತ್ಮಾ** ಜೀವನು (ಮುಕ್ತನು) **ಸ್ವಯಾನುಭೂತ್ಯಾ** ಸ್ವರೂಪೇಂದ್ರಿಯ ಸಾಮರ್ಥ್ಯದಿಂದ **ಅಖಿಲಸಿದ್ಧ್ಯಸಿದ್ಧಿಃ** ಜ್ಞಾನವೃದ್ಧಿ-ಹ್ರಾಸ ಉಳ್ಳವನು. ಅಂದರೆ ಮುಕ್ತಿಯಲ್ಲಿ ಭಗವಂತನ ಸಾಮರ್ಥ್ಯದಿಂದ ಮುಕ್ತರಾದ ತತ್ವಾಭಿಮಾನಿದೇವತೆಗಳಿಂದ ಪ್ರೇರಿತವಾದ ಸ್ವರೂಪೇಂದ್ರಿಯಗಳಿಂದಲೇ ಎಲ್ಲ ಜ್ಞಾನವಾಗುವುದೆಂದು ಅರ್ಥ **ಅಸೌ** ಸಿದ್ಧಿಯು **ಸ್ವತಃ ನ** ಮೂರರಿಂದಲೇ ಆಗದು ಕಿಂತು **ಯದಾ ಆತ್ಮಾ** ಅಹಂಕಾರಾಖ್ಯ ಮನಸ್ಸಿರುವುದೋ ಪ್ರಯತ್ನವಿರುವುದೋ **ತದಾ ಭವತಿ** ಆಗ ಆಗುವುದು ಎಂದೂ ಯೋಜಿಸಬೇಕು.

**ಅಖಿಲಸಿದ್ಧ್ಯಸಿದ್ಧಿಃ** ಎಲ್ಲರ ಜ್ಞಾನಾಜ್ಞಾನಕಾರಣನಾದ **ಆದ್ಯಃ ಆತ್ಮಾ** ಪರಮಾತ್ಮನು **ಆತ್ಮಾ** ಜೀವನು **ಸ್ವಯಾನುಭೂತ್ಯಾ** ಜ್ಞಾಯತೇ (ಶೇಷ) ಸ್ವರೂಪೇಂದ್ರಿಯದಿಂದ ತಿಳಿಯುವನು ಎಂದರ್ಥ.

ಪರಸ್ಪರ ಸಾಪೇಕ್ಷವಾಗಿ ಜ್ಞಾನಜನಕವೆಂದು ಹೇಳಿದ ಮಾತನ್ನು ಇತರ ಸ್ಥಳದಲ್ಲಿಯೂ ತಿಳಿಸುವರು. **ಏವಂ** ಇದೇ ರೀತಿಯಾಗಿ **ಚಿತ್ತಯುಕ್ತಂ** ಮನಸ್ಸಿನಿಂದ ಕೂಡಿದ **ತ್ವಗಾದಿ** ತೈಜಸವಾದ ತ್ವಗಿಂದ್ರಿಯ, ತಾಮಸವಾದ ಸ್ಪರ್ಶ, ತ್ವಗಿಂದ್ರಿಯಾಭಿಮಾನಿಯಾದ ವೈಕಾರಿಕದಿಂದುಂಟಾದ ಪ್ರವಹನು ಹೀಗೆ ಅಧ್ಯಾತ್ಮ, ಅಧಿಭೂತ, ಅಧಿದೈವ, ಮೂರು ಶ್ರವಣಾದಿ ಶ್ರೋತ್ರೇಂದ್ರಿಯ (ಅಧ್ಯಾತ್ಮ) ಅಧಿಭೂತವು ಶಬ್ದ **ಅಧಿದೈವಂ** ದಿಗ್ದೇವತೆಗಳು **ಏವಂ ಜಿಹ್ವಾದಿ** ನಾಲಿಗೆ, ರಸ, ವರುಣ ಹೀಗೆ ಮೂರು **ಏವಂ ನಾಸಾದಿ ಘ್ರಾಣೇಂದ್ರಿಯ** ಮೂಗು, **ಗಂಧ** ಅಶ್ವಿನೀ ದೇವತೆಗಳು ಹೀಗೆ ಮೂರು ಮೂರು ಸೇರಿ ಜ್ಞಾನ ಹುಟ್ಟಿಸುವವು. ದೇವತೆಗಳು ಇಂದ್ರಿಯದಲ್ಲಿರುವವರು ದೇವತೆಗಳಲ್ಲಿರುವವರು ಒಂದೇ ಆಗಿದ್ದರೂ ಅಧ್ಯಾತ್ಮರೂಪದಿಂದ ಕಾರಣರು ಅಧಿದೈವರೂಪದಿಂದ ಅನುಗ್ರಾಹಕರೂ ಆಗುವರು. ದೃಕ್ ಪದದಿಂದ ಕಣ್ಣನ್ನು ಹೇಳಿದ್ದರೂ **ಚಕ್ಷುಃ ಏವಂ** ಎಂದು ಮತ್ತೆ ಹೇಳಿದ್ದು ''**ಸಿದ್ಧೇ ಸತ್ಯಾರಂಭಃ ನಿಯಮಾರ್ಥಃ**'' ಎಂಬ ನ್ಯಾಯದಿಂದ ಮೂರು ಸೇರಿಯೇ ಎಂಬ ನಿಯಮಕ್ಕಾಗಿ ಹೇಳಿದ್ದು.

''**ದೃಗ್ ರೂಪಂ**'' ಎಂಬ ಶ್ಲೋಕದಲ್ಲಿ ಅಸಂಗತವಾಗಿ ಏನು ಹೇಳುವರು ಎಂದರೇ ತಾತ್ಪರ್ಯ ಹೇಳುವರು.''**ಅಧ್ಯಾತ್ಮಂ ಇಂದ್ರಿಯಾಣಿ**'' ಅಂದರೆ ಹಿಂದಿನ ಶ್ಲೋಕದಲ್ಲಿ ಅಧ್ಯಾತ್ಮ, ಅಧಿದೈವ, ಅಧಿಭೂತ, ಎಂದು ಮೂರು ವಿಧ ಅಹಂಕಾರ ಹೇಳಿದೆ. ಅಧ್ಯಾತ್ಮವೆಂಬ ಅಹಂಕಾರ ಯಾವುದೆಂದು, ಇಂದ್ರಿಯಗಳು ತೈಜಸ ಅಹಂಕಾರ ಕಾರ್ಯವಾದ್ದರಿಂದ ಅಹಂಕಾರವೆನಿಸುತ್ತವೆ. ಹಿಂದೆ ಹೇಳಿದ್ದರಿಂದ ಆತ್ಮಾನಂ ಅಧಿಕೃತ್ಯ ವರ್ತಮಾನಂ ಅಧ್ಯಾತ್ಮಂ ಎಂದರೇ ಶರೀರವು ಎಂಬ ವಿಪರೀತ ಅರ್ಥವಾಗುವುದನ್ನು ನಿರಾಕರಿಸಿದಂತಾಯಿತು. ಶರೀರವನ್ನು ಬಿಟ್ಟು ಇಂದ್ರಿಯವನ್ನು ಹೇಳಲು ಕಾರಣ ಹೇಳುವರು.

''**ತೈರೇವ ವಿಪರೀತಜ್ಞಾನಂ ಜಾಯತೇ**'' ವಿಪರೀತಜ್ಞಾನ ಯಾವುದರಿಂದ ಹುಟ್ಟುವುದು ಎಂದು ಹೇಳಲು ಅಹಂಕಾರವನ್ನು ಹೇಳಿದ್ದು. ವಿಪರೀತ ಜ್ಞಾನವಾದರೂ ಇಂದ್ರಿಯದಿಂದುಂಟಾಗುವುದು. ಶರೀರದಿಂದಲ್ಲ ಕಾರಣ ಅವುಗಳನ್ನು ಹೇಳಿದ್ದು ಯುಕ್ತವೆಂದು ಭಾವ. (ತಾಮ್ರಪರ್ಣಿ) ಅಹಂಕಾರ ತ್ರೈವಿಧ್ಯ ಹೇಳಿದ್ದಕ್ಕೆ ಪ್ರಕೃತೋಪಯೋಗ ತಿಳಿಸುವರು ಎಂದವತರಿಸಿ **ತೈಃ** ಅಧ್ಯಾತ್ಮಾದಿ ಈ ಮೂರರಿಂದಲೂ ಎಂದರ್ಥ ಮಾಡಿ ದೇವತೆಗಳಿಂದ ಭೂತಗಳಿಂದ ಇಂದ್ರಿಯಗಳಿಗೆ ಉಪಚಯವಾದಾಗ ಇಂದ್ರಿಯದಿಂದ ವಿಪರೀತ ಜ್ಞಾನ ಹುಟ್ಟುವುದು ಎಂದು ಪರಸ್ಪರ ಸಾಪೇಕ್ಷತೆಯನ್ನು ಉಪಪಾದಿಸಿರುವರು.

ತ್ರಿವಿಧ ಅಹಂಕಾರಗಳು ಭ್ರಮಕ್ಕೆ ಮಾತ್ರ ಕಾರಣ ಎಂದು ಹೇಳಿದ್ದು ಸರಿಯಲ್ಲ. ಇಂದ್ರಿಯ ಉಪಚಯವಾಗದೇ ಸರಿಯಾದ ಜ್ಞಾನವೂ ಬಾರದು. ಸರಿಯಾದ ಜ್ಞಾನಕ್ಕೂ ಕಾರಣವೆಂದರೆ ಮುಕ್ತಿಯಲ್ಲಿಯೂ ಅಹಂಕಾರದಿಂದ ಉಂಟಾಗುವ ಜ್ಞಾನ ಬರಲಿ ಎಂದರೆ ಉತ್ತರಿಸುವರು.

**ತಾತ್ಪರ್ಯ-** ಅಹಂಕಾರೇ ವಿದ್ಯಮಾನೇ ಭ್ರಮೋ ಭವತಿ ನಾನ್ಯದಾ ॥

ಅಹಂಕಾರವಿದ್ದಾಗ ಭ್ರಮವಾಗಲಿ ಸಮ್ಯಗ್‌ಜ್ಞಾನವಾಗಲಿ ಜಡವಾದುದು ಹುಟ್ಟುವುದು. ಅದೇ ಇಲ್ಲದಿರುವಾಗ ಜಡಾಹಂಕಾರಜನ್ಯಜ್ಞಾನವೇ ಮುಕ್ತರಿಗೆ ಇಲ್ಲವೆಂದು ಭಾವ ವರ್ಣಿತವಾಗಿದೆ.

ಸುಧೀಂದ್ರತೀರ್ಥೀಯದಲ್ಲಿ, ತಾಮ್ರಪರ್ಣಿಯಲ್ಲಿ ಮತ್ತು ಶ್ರೀನಿವಾಸ ತೀರ್ಥೀಯದಲ್ಲಿ ಎರಡು ಶ್ಲೋಕದಲ್ಲಿ ಅಭಿಪ್ರಾಯ ಈ ವಾಕ್ಯದಿಂದ ಹೇಳುವರು ಎಂದು ಅವತರಿಸಿರುವರು ತಾಮ್ರಪರ್ಣಿಯಲ್ಲಿ ನಾನೇ ಕರ್ತಾ ಎಂಬ ಅಹಂಭಾವ (ಅಭಿಮಾನ) ರೂಪ ಅಹಂಕಾರವಿದ್ದಾಗ ಭ್ರಮ ಬರುವುದು ಇಲ್ಲವಾದರೆ ಇಂದ್ರಿಯ ವಿಷಯ ಸಹಕಾರಿಗಳಿದ್ದರೂ ಭ್ರಮ ಬರುವುದಿಲ್ಲ ಎಂದು **ಸ್ವತಃ ಅಸೌ ನ ಸಿದ್ಧಃ** ಎಂಬ ಮೂಲಾರ್ಥ ಹೇಳಿದಂತಾಯಿತೆಂದು ಅರ್ಥೈಸಿರುವರು.

ಅಹಂಕಾರವೇ ಜ್ಞಾನಜನಕವಾದರೇ ಅದಿಲ್ಲದಿರುವುದರಿಂದ ಮುಕ್ತರಿಗೆ ಜ್ಞಾನವೇ ಇಲ್ಲದೇ ಹೋಗಲಿ ಎಂಬ ಶಂಕೆಗೆ ಉತ್ತರಿಸುವ ಆತ್ಮಾ ಯದೇಷಾ ಮುಪರಮಃ ಎಂಬಲ್ಲಿಯ ಆತ್ಮಶಬ್ದಕ್ಕೆ ಪರಮಾತ್ಮಾ ಎಂದರ್ಥ ದೇವತೆಗಳ ಪ್ರೇರಣೆಯು ಬೇಕು. ಮುಂತಾಗಿ ಪ್ರಮಾಣದಿಂದ ತಿಳಿಸುವರು.

**ತಾತ್ಪರ್ಯ– ಸಮ್ಯಜ್‌ಜ್ಞಾನಂ ಹರೇಃ ಶಕ್ತ್ಯಾ ತನ್ಮುಕ್ತಸ್ಯ ವಿಶೇಷತಃ ।**
**ದೇವತಾನುಗ್ರಹೋ ನಿತ್ಯೋ ಮುಕ್ತಸ್ಯಾಪಿ ಹ್ಯಪೇಕ್ಷ್ಯತೇ ।**
**ನಿತ್ಯತತ್ಪ್ರತಿಬಿಂಬತ್ವಾತ್ ಜೀವಾನಾಮೇವ ಕೃತ್ಸ್ನಶಃ ।**
**ಬಾಹ್ಯಜ್ಞಾನಂ ಚ ಮುಕ್ತಸ್ಯ ನ ಜಡಾಹಂಕೃತೇಃ ಕ್ವಚಿತ್ ।**
**ಕಿಂತು ಸ್ವರೂಪಶಕ್ತ್ಯೈವ ದೇವೇಭ್ಯಶ್ಚಾಭಿಜಾಯತೇ ।। ಇತಿ ಬ್ರಹ್ಮತರ್ಕೇ''**

ಯಥಾರ್ಥವಾದ ಜ್ಞಾನವೂ ಸರ್ವರಿಗೂ ಶ್ರೀಹರಿಯ ಪ್ರೇರಣಾರೂಪ ಸಾಮರ್ಥ್ಯದಿಂದ ಆಗುವುದು ಮುಕ್ತರಿಗೆ ಭ್ರಮವಿಲ್ಲವೆಂಬುದು ವಿಶೇಷ ಮುಕ್ತನಿಗೆ ದೇವತೆಗಳ ಅನುಗ್ರಹವು ಅವರ ಪ್ರತಿಬಿಂಬನಾದುದರಿಂದ ಅವಶ್ಯ ಬೇಕೇ ಬೇಕು. ಮುಕ್ತನಿಗೆ ಯಾವಾಗಲೂ ಜಡಾಹಂಕಾರದಿಂದ ಜ್ಞಾನ ಹುಟ್ಟುವುದಿಲ್ಲ ದೇವತೆಗಳಿಂದ ಅನುಗ್ರಹೀತವಾದ ಸ್ವರೂಪಶಕ್ತಿಯಿಂದಲೇ ಹುಟ್ಟುತ್ತದೆ. ಎಂದು ಬ್ರಹ್ಮತರ್ಕದಲ್ಲಿದೆ.

''ಮುಕ್ತಸ್ವಕೀಯಾವರಯಂತೃತಾಸ್ತಿ ಮುಕ್ತಾವಪಿ ಬ್ರಹ್ಮಪುರಸ್ಸರಾಣಾಂ'' ಎಂದು ಅನುವ್ಯಾಖ್ಯಾನದಲ್ಲಿ ಪ್ರಸಿದ್ಧವೆಂದು ಹಿ ಶಬ್ದದಿಂದ ಸೂಚಿಸಿರುವರು. ಇನ್ನು ''ಅಕ್ಷಣ್ವಂತಃ ಕರ್ಣವಂತಃ'' ಮುಂತಾಗಿ ಮುಕ್ತರಿಗೆ ಇಂದ್ರಿಯಗಳಿವೆ ಎಂದು ಹೇಳಿರುವುದರಿಂದ ಅಹಂಕಾರಕಾರ್ಯವಾದ ಅವುಗಳಿಂದ ಬರುವ ಜ್ಞಾನ ಇರಲೇಬೇಕಲ್ಲ ಜನ್ಯಜ್ಞಾನ ಇಲ್ಲವೆಂದೇ ಹೇಳುವುದು ಹೇಗೆ?

ಎಂದರೇ ಸಾಕ್ಷಿಯೇ ಸ್ವರೂಪೇಂದ್ರಿಯವೇ ಅಕ್ಷ ಮುಂತಾಗಿ ಹೇಳಲ್ಪಡುವುದು ಎಂಬ ಅಭಿಪ್ರಾಯದಿಂದ ಪ್ರಮಾಣ ಹೇಳುವರು.

**ತಾತ್ಪರ್ಯ- ಪಶ್ಯನ್ನಪಿ ಜಗತ್ಸರ್ವಂ ಚಿದ್ಬಲೇನೈವ ಪಶ್ಯತಿ ।**
**ಕುತೋ ಮುಕ್ತಸ್ಯ ತು ಜಡಂ ಚಿದ್ರೂಪಸ್ಯ ವ್ಯಪೇಕ್ಷತೇ ॥ ಇತಿ ಚ''**

ಮುಕ್ತನು ಸಮಸ್ತ ಜಗತ್ತನ್ನು ನೋಡುತ್ತಿದ್ದರೂ ಸ್ವರೂಪಜ್ಞಾನದಿಂದಲೇ ನೋಡುತ್ತಾನೆ. ಜ್ಞಾನರೂಪನಾದ ಮುಕ್ತನಿಗೆ ಜ್ಞಾನಕ್ಕಾಗಿ ಜಡೇಂದ್ರಿಯಗಳ ಅಪೇಕ್ಷೆ ಏಕೆ ಬೇಕು? ಸರ್ವಥಾ ಇಲ್ಲವೆಂದರ್ಥ.

''**ಚಿನ್ಮಾತ್ರಾಣೀಂದ್ರಿಯಾಣ್ಯಾಹುರ್ಮುಕ್ತಾನಾಮ್**'' ''**ಚಿತಿಮಾತ್ರೇಂದ್ರಿಯಾಶ್ಚೈವ ಪ್ರವಿಷ್ಟಾ ವಿಷ್ಣುಮವ್ಯಯಮ್**'' ಮುಂತಾಗಿ ವಚನಗಳಿರುವುದರಿಂದ ಕೇವಲ ಚಿನ್ಮಾತ್ರನೆಂದರ್ಥ. ಏಷಾಂ ಉಪರಮೇ ಎಂಬಲ್ಲಿ ಇಂದ್ರಿಯಗಳ ಉಪರಮ ಕಾಲವೆಂದರೆ ಸುಷುಪ್ತಿಯಲ್ಲಿ (ನಿದ್ರೆ) ಎಂದರ್ಥವಾಗುವುದು. ಆಗ ರೂಪಾದಿಗಳ ಜ್ಞಾನ ಇಂದ್ರಿಯದಿಂದ ಆಗುವುದಿಲ್ಲ. ಕಾರಣ ವ್ಯಾಖ್ಯಾನಿಸುವರು. ''**ಏಷಾಂ ಉಪರಮೇ ಮುಕ್ತೌ**'' ಎಂದು ಅಂದರೆ ಉಪರಮ ಎಂದರೆ ತಾತ್ಕಾಲಿಕ ನಿರ್ವ್ಯಾಪರತೆಯಲ್ಲ ಆತ್ಯಂತಿಕ ನಾಶರೂಪವಾದುದು ಮುಕ್ತಿ ಎಂದರ್ಥ.

''**ಚಕ್ಷುರಿತಿ ಪುನರ್ವಚನಂ ಅವಧಾರಣಾರ್ಥಂ**'' ದೃಕ್ ಎಂದು ಮೊದಲೇ ಹೇಳಿ ಮತ್ತೆ ಚಕ್ಷು ಎಂದು ಹೇಳಿದ್ದು ಮನಸ್ಸಿನಿಂದ ಯುಕ್ತವಾದುದೇ ಜ್ಞಾನ ಜನಕವೆಂದು ನಿಶ್ಚಯಿಸಲು ಎಂದು ಭಾವ.।।೩೦-೩೧।।

ತಾಮಸ ಅಹಂಕಾರವೂ ಭ್ರಮಕಾರಣವೆಂದು ಹಿಂದೆ ಸೂಚಿಸಿದ್ದನ್ನು ಸ್ಪಷ್ಟಪಡಿಸುವರು-

**ಯೋಽಸೌ ಗುಣಕ್ಷೋಭಕೃತೋ ವಿಕಾರಃ**
**ಪ್ರಧಾನಮೂಲೋ ಜಗತಃ ಪ್ರಸೂತಿಃ ।**
**ಅಹಂ ತ್ರಿವೃನ್ಮೋಹವಿಕಲ್ಪ ಹೇತು-**
**ರ್ವೈಕಾರಿಕಃ ತಾಮಸ ಐಂದ್ರಿಯಶ್ಚ ।।೩೨।।**

ಅನ್ವಯ ತೋರಿಸುರುವರು-

**ತಾತ್ಪರ್ಯ- ''ಯೋಽಸೌ ಭ್ರಮಹೇತುವಿಕಾರಃ ಸಃ ಗುಣಕ್ಷೋಭಕೃತಃ''**

**ಯಃ** ಯಾವುದು **ಮೋಹವಿಕಲ್ಪಹೇತುಃ** ಅಜ್ಞಾನ,ಮಿಥ್ಯಾಜ್ಞಾನಗಳಿಗೆ ಕಾರಣವೋ **ಅಸೌ ಸಃ ವಿಕಾರಃ** ಈ ಅಹಂಕಾರವು **ಗುಣಕ್ಷೋಭಕೃತಃ** ಸತ್ವಾದಿ ಗುಣ ವಿಕಾರವಾದ ಮಹತ್ತತ್ವದಿಂದ ಉಂಟಾದುದು **ಪ್ರಧಾನಮೂಲಃ** ಪ್ರಕೃತಿಯೇ ಮಹತತ್ವ ದ್ವಾರಾ ಕಾರಣವಾಗಿವುಳ್ಳದ್ದು **ಜಗತ್ಪ್ರಸೂತಿಃ** ಜಗತ್ತಿನ ಸೃಷ್ಟಿಗೆ ಕಾರಣವಾದುದು ವೈಕಾರಿಕಃ, **ತಾಮಸಃ, ಐಂದ್ರಿಯಃ,** ತೈಜಸ, ಹೀಗೆ **ತ್ರಿವೃತ್** ಮೂರು ರೀತಿಯಾಗಿದೆ.।।೩೨।।

ಮಹದಾದಿಕಾರ್ಯಗಳಲ್ಲಿರುವುದರಿಂದ ಶ್ರೀಹರಿಯು ಮಹತ್ತತ್ವ ವಿಕಾರವಾದ ಅಹಂಕಾರ ಕೃತನಲ್ಲವೆಂದು ಹೇಳುವರು-

**ಆತ್ಮಾ ಪರಿಜ್ಞಾನಮಯೋ ವಿವಾದೋ**
**ಹ್ಯಸ್ತೀತಿ ನಾಸ್ತೀತಿ ಭಿದಾರ್ಥನಿಷ್ಠಃ।**
**ವ್ಯರ್ಥೋಽಪಿ ನೈವೋಪರಮೇತ ಪುಂಸಾಂ**
**ಮತ್ತಃ ಪರಾವೃತ್ತಧಿಯಾಂ ಸ್ವಲೋಕಾತ್ ।।೩೩।।**

**ಆತ್ಮಾ** ಪರಮಾತ್ಮನು ಜೀವಾತ್ಮನು **ಪರಿಜ್ಞಾನಮಯಃ ಅತಃ** ಜ್ಞಾನ-ಸ್ವರೂಪನಾದ್ದರಿಂದ **ಗುಣಕ್ಷೋಭಕೃತಃ ನ** ಮಹತ್ತತ್ವ ಜನ್ಯನಲ್ಲ **ಅರ್ಥನಿಷ್ಠಃ** ಪದಾರ್ಥದಲ್ಲಿರುವ **ವಿವಾದಃ** ವಿವಾದವು, ಅಸತ್, ಸತ್ ಅಸ್ತಿ, ನಾಸ್ತಿ, ಇತಿ ಅಂದರೇ **ಅಸತ್** ಇಲ್ಲದಿರುವ ಜೀವೇಶ್ವರಾಭೇದ, ಜಗನ್ಮಿಥ್ಯಾತ್ವ ಇದೆ ಎಂದು ಹೇಳುವುದು, ನಿಜವಾಗಿರುವ ಜೀವೇಶ್ವರಭೇದ ಪ್ರಪಂಚ ಇಲ್ಲವೆನ್ನುವುದು **ಭಿದಾ** ವಿಪರೀತವಾಗಿ ತಿಳಿಯುವುದು ಈ ವಿವಾದವು **ಸ್ವಲೋಕಾತ್** ತಮಗೆ ಆಶ್ರಯನಾದ **ಮತ್ತಃ** ನನ್ನಿಂದ **ಪರಾವೃತ್ತಧಿಯಾಂ ಪುಂಸಾಂ** ವಿಮುಖರಾದ ಜನರಿಗೆ **ವ್ಯರ್ಥೋಽಪಿ** ಪ್ರಯೋಜನವಿಲ್ಲದಿದ್ದರೂ ವಿರುದ್ಧ ಪ್ರಯೋಜನ-ವಿದ್ದರೂ **ನೈವ ಉಪರಮೇತ** ನಿಲ್ಲಲಾರದು ಯಾವಾಗಲೂ ಇರುವುದು ಎಂದರ್ಥ.

ಪರಮಾತ್ಮನಲ್ಲಿ ಮನಸಿಟ್ಟವರಿಗೆ ಮಾತ್ರ ಹೋಗುವುದು ಎಂದು ಭಾವ.

**ತಾತ್ಪರ್ಯ-** ಆತ್ಮಾ ತು ಪರಿಜ್ಞಾನಸ್ವರೂಪಃ। ನ ಗುಣಕ್ಷೋಭಕೃತಃ। ಭಿದಯಾ (ಭಿದಾ) ವಿಪರ್ಯಯೇಣ ವಿದ್ಯಮಾನಂ ನಾಸ್ತಿ ಅವಿದ್ಯಮಾನಂ ಅಸ್ತೀತಿ ವಿವಾದಃ।

**ಅಸದಸ್ತಿ ಚ ಸನ್ನಾಸ್ತೀತ್ಯೇವಂಭೇದಾದ್ ವಿವಾದನಮ್ ।**
**ಸದೈವಹರಿಪಾದಾಬ್ಜವಿಮುಖಾನಾಂ ಪ್ರವರ್ತತೇ ।। ಇತಿ ಚ**

ಆತ್ಮನು ಪರಿಪೂರ್ಣಜ್ಞಾನಸ್ವರೂಪನು ಗುಣಕ್ಷೋಭಕೃತನಲ್ಲ. ಈ ತಾತ್ಪರ್ಯ ಹಿಂದಿನ ಶ್ಲೋಕಕ್ಕೆ ಸಂಬಂಧಿಸಿದ್ದು **ಯೋಽಸೌ ವಿಕಾರಃ ಸ ಗುಣಕ್ಷೋಭಕೃತಃ ಆತ್ಮಾ ತು ಪರಿಜ್ಞಾನಮಯಃ ನ ಗುಣಕ್ಷೋಭಕೃತಃ** ಹೀಗೆ ಯೋಜನೆ. ಇದರಿಂದ ಇಲ್ಲಿರುವ ಆತ್ಮಾ ಪರಿಜ್ಞೇಯ ಎಂಬುದಕ್ಕೆ ಯೋಽಸೌ ಎಂಬ ಶ್ಲೋಕದಲ್ಲಿ ಅನ್ವಯ ಎಂದಂತಾಯಿತು. ಮಯಟ್ ತಾದಾತ್ಮ್ಯಾರ್ಥಕವು. ಭಿದಾ ಎಂದರೆ ವಿಪರೀತಜ್ಞಾನದಿಂದ ಇಲ್ಲದಿರುವುದು ಇದೆ, ಇದ್ದದ್ದು ಇಲ್ಲವೆಂದು ತಿಳಿಯುವುದೇ ವಿವಾದವು ಈ ವಿಷಯದಲ್ಲಿ ಪ್ರಮಾಣ-

ಅವಿದ್ಯಮಾನವಾದುದು (ಜೀವಾಭೇದ ಮುಂತಾದುದು) ಇದೆ, ವಿದ್ಯಮಾನ (ಜೀವಭೇದ) ಇಲ್ಲ ಎಂಬುವ ವಿವಾದವು ವಿಪರೀತಜ್ಞಾನದಿಂದ ಶ್ರೀಹರಿಯ ಪಾದಕಮಲದಲ್ಲಿ ವಿಮುಖರಾದವರಿಗೆ ಯಾವಾಗಲೂ ಮುಂದುವರೆಯುವುದು ಎಂದು ಭಾವ.।।೩೩।।

ನಿನ್ನಿಂದ ವಿಮುಖರಾದ ತಾವು ಮಾಡಿದ ಕರ್ಮವನ್ನರಿಯದ ಮೂಢರಿಗೆ ಪುನರ್ಜನ್ಮವಿದೆ ಎಂದಂತಾಯಿತು. ನಿತ್ಯರಾದ ಜೀವರಿಗೆ ಬರುವ ಜನ್ಮ ಮರಣಗಳು ಕೀದೃಶವಾಗಿವೆ? ಕರ್ಮವಲ್ಲದೇ ಬೇರೆ ಕಾರಣವೇನು? ಎಂದು ಪ್ರಶ್ನಿಸುವನು-

**ಉದ್ಧವ ಉವಾಚ –**

**ತ್ವತ್ತಃ ಪರಾವೃತ್ತಧಿಯಃ ಸ್ವಕೃತೈಃ ಕರ್ಮಭಿಃ ಪ್ರಭೋ ।**
**ಉಚ್ಚಾವಚಾನ್ ಯಥಾ ದೇಹಾನ್ ಗೃಹ್ಣಂತಿ ವಿಸೃಜಂತಿ ಚ ।।೩೪।।**

**ತನ್ಮಮಾಖ್ಯಾಹಿ ಗೋವಿಂದ ದುರ್ವಿಭಾವ್ಯಮನಾತ್ಮಭಿಃ ।**
**ನಹ್ಯೇತತ್ ಪ್ರಾಯಶೋ ಲೋಕೇ ವಿದ್ವಾಂಸೋಽಂಚಂತಿ ವಂಚಿತಾಃ ।।**

**ಹೇ ಗೋವಿಂದ** ಶ್ರೀಕೃಷ್ಣನೇ **ಅನಾತ್ಮಭಿಃ** ಮನೋಜಯ ಇಲ್ಲದವರಿಂದ ಸತ್ಸಂಪ್ರದಾಯಾಭಿಜ್ಞಗುರುಗಳಿಂದ ಶಿಕ್ಷಿತರಾಗದಿರುವುದರಿಂದ **ದುರ್ವಿಭಾವ್ಯಂ** ತಿಳಿಯಲಾಗದ **ತ್ವತ್ತಃ ಪರಾವೃತ್ತಧಿಯಃ** ನಿನ್ನಿಂದ ವಿಮುಖರಾದವರು **ಸ್ವಕೃತೈಃ** ತಾವು ಮಾಡಿದ **ಕರ್ಮಭಿಃ** ಶ್ರೇಷ್ಠವಾದ, ನೀಚವಾದ, ಕರ್ಮಗಳಿಂದ

**ಉಚ್ಚಾವಚಾನ್ ದೇಹಾನ್** ಉತ್ತಮವಾದ, ಅಧಮವಾದ, ದೇಹಗಳನ್ನು **ಯಥಾ ಗೃಹ್ಣಂತಿ ವಿಸೃಂಜಂತಿ** ಹೇಗೆ ಸ್ವೀಕರಿಸುವರು, ತ್ಯಜಿಸುವರು. **ತತ್** ಆ ಪ್ರಮೇಯವನ್ನು **ಮಮ ಆಖ್ಯಾಹಿ** ನನಗೆ ಹೇಳು (ನಾನೇ ಏಕೆ ಹೇಳಬೇಕು ಎಂದರೆ) **ಲೋಕೇ** ಪ್ರಪಂಚದಲ್ಲಿ **ಏತತ್** ಈ ಪ್ರಮೇಯವನ್ನು **ವಿದ್ವಾಂಸಃ** ಪಂಡಿತರು **ಪ್ರಾಯಶಃ** ಬಹುಶಃ(ಬಹಳವಾಗಿ) **ವಂಚಿತಾಃ** ನಿನ್ನ ಮಾಯೆಯಿಂದ ಮೋಹಿತರಾಗಿ **ನ ಅಂಚಂತಿ** ತಿಳಿದಿರಲಾರರು. ನಿನ್ನ ಅನುಗ್ರಹವಿದ್ದವರು ತಿಳಿದಿರಬಹುದು ಎಂಬ ಅಭಿಪ್ರಾಯದಿಂದ ಪ್ರಾಯಶಃ ಎಂದಿರುವನು.

ನಿತ್ಯನಾದ ಜೀವನಿಗೆ ದೇಹಸಂಬಂಧರೂಪ ಉತ್ಪತ್ತಿ ಎಂತಹದು? ದೇಹ ವಿಯೋಗ ಎಂಬ ಮರಣವೆಂತಹದು? ಜೀವನು ನಿತ್ಯ ಎಂಬುದನ್ನು ಯಾವ ಪ್ರಮಾಣದಿಂದ ತಿಳಿಯಬೇಕು? ದೇಹವನ್ನು ಸ್ವೀಕರಿಸುವರು ಎಂದರೆ ದೇಹದೊಳಗೆ ಜೀವನಿರುವನು ದೇಹ ಹೊರಗೆ ಇರುವುದು ಎಂದಂತಾಯಿತು ಅದಕ್ಕೆ ಕಾರಣವೇನು? ಎಂದು ಪ್ರಶ್ನಾಭಿಪ್ರಾಯ ತಿಳಿಯಬೇಕು.।।೩೪-೩೫।।

**ಶ್ರೀಭಗವಾನುವಾಚ-**

**ಮನಃ ಕರ್ಮಮಯಂ ನೄಣಾಮಿಂದ್ರಿಯೈಃ ಪಂಚಭಿರ್ಯುತಮ್ ।**
**ಲೋಕಾಲ್ಲೋಕಂ ಪ್ರಯಾತ್ಯನ್ಯಮಾತ್ಮಾ ತದನುವರ್ತತೇ ।।೩೬।।**

ಲಿಂಗದೇಹವೇ ಸ್ಥೂಲದೇಹವಾಗಿ ಪರಿಣಮಿಸುವುದೇ ಜನನವು. ಮರಣವೆಂದರೆ (ಲಿಂಗದೇಹಕ್ಕೇನೇ) ಸ್ಥೂಲವಾದ ಭಾಗ ಹೋಗಿ ಸೂಕ್ಷ್ಮವಾಗಿ ಇರುವ ದೇಹಾಂತರದಲ್ಲಿ ಸ್ಥೂಲವಾಗಿ ಇರುವ ವಿಕಾರವಾಗುದು ಎಂಬುದು ವಸ್ತುಸ್ಥಿತಿ.

**ನೄಣಾಂ** ಮನುಷ್ಯರಿಗೆ ಇರುವ **ಇಂದ್ರಿಯೈಃ** ಹತ್ತು ಇಂದ್ರಿಯಗಳಿಂದ **ಪಂಚಭಿಃ** ಐದು ಭೂತಗಳಿಂದ **ಯುತಂ** ಕೂಡಿದ **ಮನಃ** ಮನಸ್ಸೇ ಅಂದರೆ ಷೋಡಶಕಲಾತ್ಮಕವಾದ ಲಿಂಗಶರೀರವು **ಕರ್ಮಮಯಂ** ಕರ್ಮಪ್ರಧಾನಕ-ವಾಗಿ ಅಂದರೆ ಜೀವನ ಕರ್ಮದ ಸಹಕಾರದಿಂದ ಅಥವಾ ಕರ್ತೃವಾದುದರಿಂದ ಕರ್ಮಶಬ್ದವಾಚ್ಯ ಭಗವಂತನಿಂದ ಪ್ರೇರಿತರಾಗಿ **ಯದಾ** ಯಾವಾಗ **ಲೋಕಾತ್** ಪೂರ್ವಶರೀರವನ್ನು ಬಿಟ್ಟು (ಲ್ಯಬ್‌ಲೋಪನಿಮಿತ್ತಾ ಪಂಚಮೀ ಲೋಕಂ ಪರಿತ್ಯಜ್ಯ) **ಅನ್ಯಂ ಲೋಕಂ ಪ್ರಯಾತಿ** ಬೇರೆ ದೇಹಕ್ಕೆ ಹೋಗುವುದೊ **ತದನು** ಅದನ್ನು ಅನುಸರಿಸಿ **ಆತ್ಮಾ** ಜೀವನು **ವರ್ತತೇ** ಆ ದೇಹದಲ್ಲಿರುವನು.

ಅಂದರೆ ಲಿಂಗದೇಹಬದ್ಧನಾಗಿ ದೇಹಾಂತರ ಹೊಂದುವನು ಎಂದರ್ಥ. ನಿತ್ಯರಾದ ಜೀವರಿಗೆ ದೇಹ ಬರಲು ಕರ್ಮ ಮನಸ್ಸು ಕಾರಣವೆಂದಂತಾಯಿತು. ತಾಮ್ರಪರ್ಣಿ ಪ್ರಕಾರ ಅವತರಿಕೆ ಅರ್ಥಗಳು-

ಉದ್ಧವನ ಪ್ರಶ್ನಾಭಿಪ್ರಾಯ- ಸ್ವರೂಪತಃ ನಿತ್ಯನಾದ ಜೀವನಿಗೆ ಕರ್ಮಗಳಿಂದಲೂ ಜನ್ಮ-ಮರಣಗಳು ಅಸಂಭಾವಿತವಾಗಿವೆ. ದೇಹದ್ವಾರಾ ಎಂದೂ ಹೇಳಲಾಗದು. ಏಕೆಂದರೆ ಜೀವನಿಂದ ಅತ್ಯಂತ ಭಿನ್ನವಾದ ದೇಹಕ್ಕೆ ಜನನಾದಿಗಳಾದರೆ ದೇಹದಿಂದ ಭಿನ್ನನಾದ ಜೀವನಲ್ಲಿ ದೇಹಧರ್ಮಗಳ ಉಪಸಂಕ್ರಮಣವಾಗುವುದು ಅಸಾಧ್ಯ. ಆದ ಕಾರಣ ಜೀವನ ಮರಣಗಳ ನಿಜವಾದ ಸ್ವರೂಪ ಹೇಳೆಂದು ಪ್ರಶ್ನಾಭಿಪ್ರಾಯ.

ಇನ್ನು ಪರಿಹಾರಾಭಿಪ್ರಾಯ. ಜೀವ ಅನಾದಿ-ನಿತ್ಯನಾಗಿದ್ದರೂ ಭಗವಂತನಿಂದ ನಿಯತವಾದ ಜ್ಞಾನೇಂದ್ರಿಯಗಳಿಂದ ಉಪೋದ್ಬಲಿತ ಮನಸ್ಸಿಗೆ ಪೂರ್ವದೇಹದಲ್ಲಿ ಅಭಿಮಾನವು ಹೋಗಿ ಮುಂದಿನ ದೇಹದಲ್ಲಿ ಅಭಿಮಾನ ಉಂಟಾದಾಗ ಕೆಂಪುದಾಸವಾಳ ಹೂವಿನ ಸನ್ನಿಧಾನ ನಿಮಿತ್ತವಾಗಿ ಶುಭ್ರವಾದ ಸ್ಫಟಿಕಮಣಿಯಲ್ಲಿ ಭಿನ್ನಾಭಿನ್ನವಾದ (ಪ್ರತಿಬಿಂಬ) ಕೆಂಪು ಬಣ್ಣವು ತೋರುವಂತೆ ಜೀವಚೈತನ್ಯದಲ್ಲಿಯೂ ಅಭಿಮಾನನಿಮಿತ್ತಕವಾದ ಭಿನ್ನಾಭಿನ್ನವಾದ ವಿಕಾರ ವಿಶೇಷದ ಹಾನಿ-ಲಾಭಗಳಾಗುವುದರಿಂದ ಸ್ವರೂಪ ವಿಕಾರಲಾಭವೇ ಜನನ ಅದರ ನಿವೃತ್ತಿಯೇ ಮರಣವೆಂದು ಹೇಳುವುದು ಯುಕ್ತ ಎಂಬುದು ಪರಿಹಾರ ಶ್ಲೋಕಾಭಿಪ್ರಾಯವೆಂದಿರುವರು.

ಮನಸ್ಸು ಲಿಂಗದೇಹವೇ ಜನನ-ಮರಣಕಾರಣವೆಂಬುದನ್ನು ವಿಶದ ಪಡಿಸುವರು-

**ಧ್ಯಾಯನ್ಮನೋ ಹಿ ವಿಷಯಾನ್ ದೃಷ್ಟಾನ್ ವಾऽನುಶ್ರುತಾನಥ ।**
**ಉದ್ಯತ್ ಸೀದತ್ ಕರ್ಮತಂತ್ರಂ ಸ್ಮೃತಿಸ್ತದನುಶ್ಯಾಮತಿ ॥೩೭॥**

ಲಿಂಗದೇಹಬಂಧವೇ ಜನನ ಕಾರಣವೆಂದು ಹೇಳಿದ್ದರು. ಷೋಡಶಕಲಾ-ಗಳಲ್ಲಿ ಮನಸ್ಸು ಪ್ರಧಾನವಾದ್ದರಿಂದ ಇಲ್ಲಿ ಮನಸ್ಸನ್ನೇ ಹೇಳುವರು.

**ಮನಃ** ಮನಸ್ಸು **ದೃಷ್ಟಾನ್** ನೋಡಿದ **ಶ್ರುತಾನ್** ಕೇಳಿದ **ವಿಷಯಾನ್** ಪದಾರ್ಥಗಳನ್ನು ಧ್ಯಾನಿಸುತ್ತ (ಸ್ಮರಿಸುತ್ತ) **ಯದಾ** ಯಾವಾಗ **ಸೀದತ್**

ವಿಪತ್ತಿಗೊಳಗಾದ **ಕರ್ಮತಂತ್ರಂ** ಕರ್ಮಾಧೀನವಾದ ಮನಸ್ಸು **ಉದ್ಯತ್** ದೇಹದಿಂದ ದೇಹಾಂತರಕ್ಕೆ ಹೋಗುವುದು **ತದಾ ತದನು** ಆಗ ಮನಸ್ಸನ್ನು ಅನುಸರಿಸಿ **ಸ್ಮೃತಿಃ ಶಾಮ್ಯತಿ** (ಪೂರ್ವದೇಹದಲ್ಲಿ ಅನುಭವಿಸಿದ) ಪದಾರ್ಥ ಸ್ಮರಣ ನಾಶವಾಗುವುದು ದೇಹಾಂತರಾಭಿಮಾನ ಬರುವವರಗೆ ಎಂದು ಭಾವ.

ಮನಸ್ಸು ವಿಷಯಧ್ಯಾನ ಮಾಡುತ್ತ ಕಷ್ಟಪಟ್ಟು ದೇಹಾಂತರವನ್ನು ವಿಷಯೀಕರಿಸಲು ಉನ್ಮುಖವಾದಾಗ ಹಿಂದಿನ ದೇಹಸ್ಮರಣ ಹೋಗುವುದು ಇದೇ ಮರಣವೆಂದು ಭಾವ.

ಮರಣವನ್ನೇ ತಿಳಿಸುವರು-

**ವಿಷಯಾಭಿನಿವೇಶೇನ ನಾತ್ಮಾನಂ ಯಃ ಸ್ಮರೇನ್ಮನಃ ।**
**ಜಂತೋರ್ವೈ ಕಸ್ಯಚಿದ್ಧೇತೋರ್ಮೃತ್ಯುರತ್ಯಂತವಿಸ್ಮೃತಿಃ ॥೩೮॥**

ಮೇಲಿನ ಶ್ಲೋಕದಲ್ಲಿ ಶಬ್ದಾದಿವಿಷಯಾಸಕ್ತಿಯಿಂದ ತನ್ನನ್ನೇ ತಾನು ಮರೆಯುವುದು. ಮರಣ ಎಂಬಂತೆ ಅರ್ಥವಾಗುವುದು ಕಾರಣ ತಾತ್ಪರ್ಯ ಹೇಳುವರು-

**ತಾತ್ಪರ್ಯ- ವಿಷಯಾಭಿನಿವೇಶೇನ ಉತ್ತರದೇಹಾಭಿನಿವೇಶೇನ ।**
**ಪೂರ್ವದೇಹಾಸ್ಮರಣಂ ಯತ್ ತತ್ ಮೃತ್ಯುಃ ।**

ಮುಂದೆ ಬರುವ ದೇಹದಲ್ಲಿಯೇ ಮನಸ್ಸಿರುವುದರಿಂದ ಮೊದಲಿನ ದೇಹವನ್ನು ಮರೆಯುವುದೇ ಮರಣವೆಂದು ಭಾವ.

**ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇವರಮ್ ।**
**ತಂ ತಮೇವೇತಿ ಕೌಂತೇಯ ಸದಾ ತದ್ಭಾವಭಾವಿತಃ ॥**

**ಜ್ಞಾನಿನಾಂ ಯೋಗಯುಕ್ತನಾಂ ಕಾರ್ಯ ತ್ಯಾಗಕ್ಷಣೋ ಯದಿ ।**
**ವಿಷ್ಣುಮಾಯಾ ತದಾ ತೇಷಾಂ ಮನೋ ಬಾಹ್ಯಂ ಕರೋತಿ ಹಿ ॥(ತ್ಯಪಿ)**

ಎಂದು ಹೇಳಿದೆ.

**ಮೂಲಾರ್ಥ- ಜಂತೋಃ ಮನಃ** ಜೀವನ ಮನಸ್ಸು **ಕಸ್ಯಚಿತ್ ಹೇತೋಃ** ಕರ್ಮನಿಮಿತ್ತದಿಂದ ಮುಂದಿನ ದೇಹಕ್ಕೆ ಹೋಗುವಾಗ **ವಿಷಯಾಭಿನಿವೇಶೇನ**

ಮುಂದೆ ಬರುವ ದೇಹದಲ್ಲಿ ಅಭಿನಿವೇಶದಿಂದ **ಕಸ್ಯಚಿತ್ ಹೇತೋಃ** ಭಗವನ್ಮಾಯೆಯಿಂದ **ಆತ್ಮಾನಂ** ಪೂರ್ವದೇಹವನ್ನು **ನ ಸ್ಮರೇತ್ ಇತಿ ಯತ್** ಹಿಂದಿನ ದೇಹವನ್ನು ಸ್ಮರಿಸಲಾಗದಿರುವುದೇ (ಸಾಮರ್ಥ್ಯವಿರುವುದಿಲ್ಲ) ಎಂಬ **ಅತ್ಯಂತವಿಸ್ಮೃತಿಃ ಮೃತ್ಯುಃ** ವಿಸ್ಮರಣವೇ ಮರಣವೆಂದು ಭಾವ.

ಪೂರ್ವದೇಹಾಭಿಮಾನನಿಮಿತ್ತಕಚೈತನ್ಯಗತವಿಕಾರನಾಶಃ ಮರಣವೆಂದು ತಾಮ್ರಪರ್ಣೀ॥೩೮॥

ಜನ್ಮವನ್ನು ನಿರೂಪಿಸುವರು-

**ಜನ್ಮ ತ್ವಾತ್ಮತಯಾ ಪುಂಸಃ ಸರ್ವಭಾವೇನ ಭೂರಿದ ।**
**ವಿಷಯಸ್ವೀಕೃತಿಂ ಪ್ರಾಹುರ್ಯಥಾ ಸ್ವಪ್ನಮನೋರಥಃ ॥೩೯॥**

**ಹೇ ಭೂರಿದ** ಬಹುದಾನಶೀಲನಾದ ಉದ್ಧವನೇ **ಪುಂಸಃ** ಜೀವನಿಗೇ **ಸರ್ವಭಾವೇನ** ಎಲ್ಲ ರೀತಿಯಿಂದ **ಆತ್ಮತಯಾ** ನನ್ನದು ಎಂದು ಆತ್ಮೀಯವಾಗಿ **ವಿಷಯಸ್ವೀಕೃತಿಂ** ದೇಹಾಭಿಮಾನವನ್ನು **ಜನ್ಮ ಪ್ರಾಹುಃ** ಜನನವೆಂದು ಹೇಳುವರು ಇಲ್ಲದಿರುವ ಅಭಿಮಾನಪಡುವುದು ಎಂದರ್ಥ.

ಇದಕ್ಕೆ ದೃಷ್ಟಾಂತ. ಯಥಾ ಸ್ವಪ್ನಮನೋರಥಃ ಸ್ವಪ್ನ ಮತ್ತು ಮನೋರಥಗಳಲ್ಲಿರುವ ಅವಿದ್ಯಮಾನ ಅಭಿಮಾನದಂತೆ ತುಶಬ್ದದಿಂದ ಮನೆ ಮುಂತಾದವುಗಳಲ್ಲಿರುವ ಅಭಿಮಾನಕ್ಕಿಂತ ವಿಶೇಷವಿದೆ ಎಂದು ಸೂಚಿಸುವರು. ಕನಸು, ಮನೋರಥಗಳಲ್ಲಿ ಹೇಗೆ ಪದಾರ್ಥಗಳನ್ನು ಹೊರಗಿನವು ಎಂದು ಇಲ್ಲದಿರುವ ಬಾಹ್ಯತೆ ತಿಳಿಯುವೆವೋ ಹಾಗೆ ತನ್ನ ಸ್ವಾತಂತ್ರ್ಯವಿಲ್ಲದ ದೇಹದಲ್ಲಿ ನನ್ನದೆಂಬ ಅಭಿಮಾನವೇ ಜನ್ಮ.

ಅತ್ಯಂತವಿಸ್ಮೃತಿಯೇ ಮರಣವೆಂದು ಹೇಳಿದ್ದನು. ಉದಾಹರಣದಿಂದ ಸ್ಪಷ್ಟೀಕರಿಸುವರು.

**ಸ್ವಪ್ನಂ ಮನೋರಥಂ ಚಾರ್ಥಂ ಪ್ರಾಕ್ತನಂ ನ ಸ್ಮರತ್ಯಸೌ ।**
**ತತ್ರ ಪೂರ್ವಮಿವಾತ್ಮಾನಮಪೂರ್ವಂ ಚಾನುಪಶ್ಯತಿ ॥೪೦॥**

**ಅಸೌ** ಕನಸು ಕಂಡು ಎಚ್ಚೆತ್ತ ಮನುಷ್ಯನು **ಸ್ವಪ್ನಂ** ಕನಸಿನಲ್ಲಿ ಕಂಡ ವಸ್ತುಗಳನ್ನು **ಮನೋರಥಂ ಚ** ಮನೋರಥದಲ್ಲಿ ಕಂಡ ವಸ್ತುಗಳನ್ನಾಗಲಿ

**ಪ್ರಾಕ್ತನಂ** ಹಿಂದೆ ಕಂಡದ್ದನ್ನು **ನ ಸ್ಮರತಿ** ಸ್ಮರಿಸಲಾರನು. (ನನ್ನದೆಂದು ನೋಡಲಾರನು ಅಂದರೆ ಅಭಿಮಾನ ಮಾಡಲಾರನು) **ಯಥಾ** ಹೇಗೋ **ತಥಾ** ಅದರಂತೆ **ತತ್ರ** ದೇಹಾಂತರದಲ್ಲಿ ಅಭಿಮಾನ ಬಂದಾಗ **ಪೂರ್ವಂ ಆತ್ಮಾನಂ** ಪೂರ್ವದೇಹವನ್ನು ಸ್ಮರಿಸುವುದಿಲ್ಲ **ಯತಃ** ಯಾವ ಕಾರಣ **ಅಪೂರ್ವಂ ಚ** ಮುಂದೆ ಬರುವ ದೇಹವನ್ನು **ಅನುಪಶ್ಯತಿ** ತಿಳಿಯುತ್ತಾನೆ. (ಅಭಿಮಾನ ಮಾಡುತ್ತಾನೆ)

ಶ್ರೀನಿವಾಸತೀರ್ಥರ ಪ್ರಕಾರ ಜೀವನು ಜಾಗ್ರದವಸ್ಥೆಯಲ್ಲಿರುವಾಗ ಹಿಂದೆ ಕಂಡ ಕನಸಿನ ಅಥವಾ ಮನೋರಥದಲ್ಲಿನ ಪದಾರ್ಥಗಳನ್ನು ಅವಿದ್ಯಮಾನವಾದುದರಿಂದ (ಇಲ್ಲದಿರುವುದರಿಂದ ಸ್ಮರಿಸುವುದಿಲ್ಲ) ಏಕೆಂದರೆ **ತತ್ರ** ಸ್ವಪ್ನದಲ್ಲಿ **ಯತಃ** ಯಾವ ಕಾರಣ **ಅಪೂರ್ವಂ ಚ** ವಾಸ್ತವಿಕವಾಗಿ ಹಿಂದೆ ತಾನು ಜಾಗ್ರತ್ಕಾಲದಲ್ಲಿ ಇಲ್ಲದಿರುವ ಆನೆ ಮುಂತಾದ ತನಗೆ ಪ್ರಾಪ್ತವಾದ ದೇಹವನ್ನು **ಪೂರ್ವಮಿವ** ಹಿಂದೆ ಅನುಭವಿಸಿದವನಂತೆ ಇದು ನನಗೆ ಯಾವಾಗಲೂ ಇದ್ದದ್ದೆ ಎಂದು ಭ್ರಾಂತಿಯಿಂದ ತಿಳಿಯುತ್ತಾನೆ ಹಾಗೆ ಜೀವನ ಸ್ವರೂಪದಲ್ಲಿ ಇಲ್ಲದಿರುವ ದೇಹಸಂಬಂಧವು ಅಭಿಮಾನಪ್ರಯುಕ್ತ ಭ್ರಾಂತಿಯಿಂದ ತೋರುವುದು.

ಅಥವಾ ವಿಷಯಾಭಿನಿವೇಶವನ್ನೇ ಈ ಶ್ಲೋಕದಿಂದ ಸ್ಪಷ್ಟಪಡಿಸುವರು 'ಯಥಾ ಪ್ರಾಕ್ತನಂ ಸ್ವಪ್ನಂ ಮನೋರಥಂ ಚ ನ ಸ್ಮರತಿ, ತಥಾ ಪ್ರಾಕ್ತನ ಜನ್ಮಾನುಭೂತಾರ್ಥಂ ನ ಸ್ಮರತಿ' ಏಕೆಂದರೆ ತತ್ರ ಪೂರ್ವಂ ಆತ್ಮಾನಂ ಅಪೂರ್ವಂ ಅನುಪಶ್ಯತಿ ಎಂದನ್ವಯ. ನಿನ್ನೆ ಕಂಡ ಸ್ವಪ್ನ-ಮನೋರಥಗಳ ವಿಷಯವನ್ನು ಸ್ಮರಿಸದಿರುವಂತೇ ಬೇರೆ ದೇಹ ಬಂದಾಗ ಅನಾದಿಯಾದ ಜೀವನನ್ನು ಸಾದಿಯೆಂದು ತಿಳಿಯುತ್ತಾನೆ. ಕಾರಣ ವಿಷಯ ಅಭಿನಿವೇಶವೇ ವಿಸ್ಮರಣ ಕಾರಣ ।।೪೦।।

ಜೀವನು ಅನಾದಿ-ನಿತ್ಯನು ದೇಹವು ಸಾದಿ ಅನಿತ್ಯವು. ದೇಹದಲ್ಲಿ ಅಭಿಮಾನ ಅನಭಿಮಾನಗಳೇ ಜನ್ಮ-ಮರಣಗಳು ಎಂದು ಹೇಳಿದರು. ಜೀವರು ಅನಾದಿ-ನಿತ್ಯರಾದರೇ ಹೇಳಿದ್ದು ಸರಿ. ಅದೇ ಹೇಗೆ ಸಿದ್ಧವಾಗುವುದು ಎಂದರೆ ಹೇಳುವರು-

**ಈದೃಶಾಯಾಸ ವಿಜ್ಞಾಯ ತ್ರೈವಿಧ್ಯಂ ಭಾತಿ ವಸ್ತುನಿ ।**
**ಬಹಿರಂತರ್ಭಿದಾಹೇತುರ್ಜನೋಽಸಜ್ಜನಕೃದ್ಯಥಾ ॥೪೧॥**

**ಈದೃಶ** ಈಗಿರುವವನೇ **ಆಯಃ** (ಆಸ್ಯತೀತಿ) ಮುಂದೆ ಬರುವವನು **ಸಃ** ಇವನೇ ಹಿಂದೇ ಇದ್ದವನು ಇತಿ ಹೀಗೆ **ವಸ್ತುನಿ ವಿಜ್ಞಾಯ** ಜೀವತತ್ವವನ್ನು ವಿಚಾರ ಮಾಡಿದಾಗ **ತ್ರೈವಿಧ್ಯಂ ಭಾತಿ** ತ್ರಿಕಾಲವರ್ತಿತ್ವವು ತಿಳಿದು ಬರುವುದು ಕಾರಣ ನಿತ್ಯನು (ಹಿಂದೆ ಇದ್ದವನೇ ಇವನು ಮುಂದೆ ಬರುವವನು ಎಂದು ಪ್ರತ್ಯಭಿಜ್ಞೆಯಿಂದ ಸಿದ್ಧವಾಗುವುದೆಂದರ್ಥ. **ಬಹಿರಂತರ್ಭಿದಾಹೇತುಃ** (ಭಾವ ಪ್ರಧಾನನಿರ್ದೇಶ) ಜೀವ ಮತ್ತು ದೇಹಗಳಿಗೆ ಬಹಿಷ್ಠ ಎಂಬ (ಬಹಿಷ್ಠತ್ವ ಅಂತಸ್ಥತ್ವಗಳಿಗೆ ವೈಲಕ್ಷಣ್ಯಕಾರಣವು (ಹೊರಗಿರುವುದು ಒಳಗಿರುವುದು) ಎಂಬ ತೆಂಗಿನ ಕಾಯಿಯಲ್ಲಿ ಚಿಪ್ಪು ಕೊಬ್ಬರಿಯಂತೆ, **ಅಯಮೇವ** ನಿತ್ಯತ್ವ ಅನಿತ್ಯತ್ವಗಳೇ ಅಂದರೆ ಅನೇಕ ದೇಹ ಬಂದರೂ ನಿತ್ಯನಾದುದರಿಂದ ಜೀವ ಒಳಗಿರುವವನು ದೇಹವೂ ಸ್ವರೂಪದಲ್ಲಿ ಸೇರದಿರುವುದರಿಂದ ಅನಿತ್ಯವಾದ್ದರಿಂದ ಹೊರಗೆ ಇರುವುದು. **ಜನಃ** ಅಸಜ್ಜನನು **ಅಸಜ್ಜನಕೃತ್ ಯಥಾ** ದುಷ್ಟತಂದೆಯಿಂದ ದುಷ್ಟಮಗ ಹುಟ್ಟಿದಂತೆ ಎಂಬ ಭಾವ.

೪೧ನೇ ಮೇಲಿನ ಶ್ಲೋಕವು ಅತ್ಯಂತ ಕಠಿಣವಾಗಿರುವುದರಿಂದ ವ್ಯಾಖ್ಯಾನಿಸುವರು.

**ತಾತ್ಪರ್ಯ-** ''ಈದೃಶಂ ವರ್ತಮಾನಂ ಆಯಃ ಏಷ್ಯತ್ ಸಃ ಅತೀತಃ ಇತಿ ತ್ರೈವಿಧ್ಯಂ ಭಾತಿ । ವಿಜ್ಞಾಯ ವಸ್ತುನಿ ವಿಜ್ಞಾತೇ ಸತಿ । ದೀರ್ಘಲೋಪಃ ಯತ್ರಾ ತ ಇತಿವತ್ । 'ಕ್ಷೈಪ್ರೇ ದೀರ್ಘಲೋಪಃ' ಇತಿ ಸೂತ್ರಾತ್ । ಅಯಮೇವ ಆತ್ಮಾನಾತ್ಮನೋರ್ವಿಶೇಷಹೇತುಃ । ಯಥಾ ಪ್ರಾಯೋಽಸಜ್ಜನೋಽಸಜ್ಜನಮೇವ ಜನಯತೀತಿ ಪಿತೃಜ್ಞಾನಾತ್ ಪುತ್ರದೌರಾತ್ಮ್ಯಂ ಜ್ಞಾಯತೇ ಏವಮನಿತ್ಯತ್ವಾದನಾತ್ಮತ್ವಂ ದೇಹಾದೇರಿತ್ಯರ್ಥಃ'' ॥

**ವಸ್ತುನಿ** ಜೀವತತ್ವವು **ವಿಜ್ಞಾಯ** ವಿಚಾರದಿಂದ ತಿಳಿಯಲ್ಪಡುತ್ತಿರಲು (ಜೀವನಿಗೆ ಅನಾದಿ-ನಿತ್ಯತ್ವವು ತಿಳಿಯಲ್ಪಡುತ್ತದೆ ಹೇಗೆಂದರೆ) **ಈದೃಶಾಯಾಸಃ ಈದೃಶಂ** ವರ್ತಮಾನ ಕಾಲದಲ್ಲಿರುವುದು **ಆಯಃ** ಮುಂದಿನ ಕಾಲದಲ್ಲಿರುವುದು **ಸಃ** ಹಿಂದಿನ ಕಾಲದಲ್ಲಿ ಇದ್ದುದು ಹೀಗೆ **ತ್ರೈವಿಧ್ಯಂ ಭಾತಿ**

ಮೂರು ಕಾಲದಲ್ಲಿ ಇದ್ದಾನೆಂದು ತಿಳಿಯುತ್ತದೆ. (ಈದೃಶಶ್ಚಾಸೌ ಆಯಸಶ್ಚ ಈದೃಶಾಯಸಃ ಎಂದು ಆಗಬೇಕಿತ್ತು. ಈದೃಶಾಯಾಸ ಎಂದು ದೀರ್ಘ ಹೇಗೆಂದರೆ ವೇದದಲ್ಲಿ ಪದ ಪಾಠದಲ್ಲಿ ಯತ್ರ, ತೇ, ಆಹುಃ ಎಂದಿದ್ದರೂ (ದೀರ್ಘ ಇಲ್ಲದಿದ್ದರೂ) ಸಂಹಿತಾಕಾಲದಲ್ಲಿ ''**ಯತ್ರಾತ ಆಹುಃ ಪರಮಂ ಜನಿತ್ರಂ**'' ಎಂದು ದೀರ್ಘವು ಕೇಳಿಬರುವಂತೆ ಇಲ್ಲಿಯೂ ಸಂಹಿತಾಕಾಲದಲ್ಲಿ ಈದೃಶಾಯಾಸ ಎಂದು ಕೇಳಿ ಬರುವ ದೀರ್ಘವು ಪದಚ್ಛೇದ ಮಾಡುವಾಗ ಲೋಪ ವಾಗುವುದು. ಕ್ಷೈಪ್ರವೆಂಬ ಸ್ವರದಲ್ಲಿ ಸಂಹಿತಾಕಾಲದಲ್ಲಿದ್ದ ದೀರ್ಘಕ್ಕೆ ಪದಕಾಲದಲ್ಲಿ ಲೋಪವು ಬರುತ್ತದೆ ಎಂದು ಮಹಾವ್ಯಾಕರಣ-ಸೂತ್ರದಿಂದ ತಿಳಿಯುತ್ತದೆ. ಜೀವನು ಮೂರು ಕಾಲಗಳಲ್ಲಿಯೂ ಇರುವುದರಿಂದ ನಿತ್ಯನು ದೇಹವು ಅನಿತ್ಯವು ಎಂಬುವುದೇ ಜೀವದೇಹಗಳ ಅಂತಸ್ಥತ್ವ ಬಹಿಷ್ಠತ್ವರೂಪ ವಿಶೇಷಕ್ಕೆ ಕಾರಣವು. (ಅಂತೂ ಜೀವನು ಅನೇಕ ದೇಹಗಳನ್ನು ಪಡೆದರೂ ನಿತ್ಯನಾದುದರಿಂದ ದೇಹದೊಳಗೇನೆ ಇದ್ದಾನೆ. ದೇಹವು ಅನಿತ್ಯವಾದ ಪ್ರಯುಕ್ತ ಹೊರಗೇನೆ ಇದೆ. ಹೇಗೆಂದರೆ ಬಹಳವಾಗಿ ದುರ್ಜನರು ದುರ್ಜನರನ್ನೇ ಹುಟ್ಟಿಸುತ್ತಾರೆ. ಕಾರಣ ತಂದೆಯನ್ನು ತಿಳಿದರೆ ಮಗನ ದುರ್ಬುದ್ಧಿಯು ತಿಳಿಯುವಂತೆ, ಕಾರಣವಾದ ಲಿಂಗದೇಹವು ಜಡ ಮತ್ತು ಅನಿತ್ಯವಾದ್ದರಿಂದ ನಿತ್ಯನಾದ ಜೀವ ಭಿನ್ನವೂ ಆದ ಕಾರಣ ಲಿಂಗದೇಹದ ವಿಕಾರವಾದ ಸ್ಥೂಲದೇಹವು ಜಡವು ಅನಿತ್ಯವೂ ಜೀವಭಿನ್ನವೂ ಎಂದು ತಿಳಿಯುತ್ತದೆ. ಪ್ರಹ್ಲಾದನನ್ನು ವ್ಯಾವೃತ್ತಿ ಮಾಡಲು ಪ್ರಾಯಃ ಎಂದಿರುವರು.

**ವಿಶೇಷವಿಚಾರ-** ಶ್ರೀನಿವಾಸತೀರ್ಥರು ಕ್ಷೈಪ್ರೇ ದೀರ್ಘಲೋಪಃ ಇತಿ ಸೂತ್ರಾತ್ ಎಂಬ ತಾತ್ಪರ್ಯಕ್ಕೆ ತಾವು ಹೇಳಿದ ದೀರ್ಘಲೋಪಕ್ಕೆ ನಿಯಾಮಕ ಮಹಾವ್ಯಾಕರಣಸೂತ್ರ ಹೇಳುವರು ಎಂದು ಅವತಾರಿಕೆ ಇತ್ತು, ಕ್ಷೈಪ್ರ ಎಂಬುದು ಸ್ವರವಿಶೇಷಕ್ಕೆ ಸಂಜ್ಞೆಯಾಗಿದೆ. ಕ್ಷೈಪ್ರಸ್ವರದಲ್ಲಿ ಸಂಹಿತಾಕಾಲದಲ್ಲಿ ಪ್ರಯೋಗಿಸುವ ದೀರ್ಘಕ್ಕೆ ಪದಕಾಲದಲ್ಲಿ ಲೋಪ ಬರುವುದು ಎಂದರ್ಥ ಮಾಡಿದ್ದಾರೆ. ತಾತ್ಪರ್ಯದೀಪಿಕೆಯಲ್ಲಿಯೂ ಇದೇ ಅಭಿಪ್ರಾಯವಿದೆ. ಛಲಾರಿಯಲ್ಲಿ 'ಕ್ಷಿ ನಿವಾಸಗತ್ಯೋಃ' ಎಂಬ ಧಾತುವಿಗೆ ಕರಣೇ ರಕ್ ಪ್ರತ್ಯಯ ಮಾಡಲಾಗಿ ಪುಗಾಗಮ ಮಾಡಲಾಗಿ ಕ್ಷಿಪ್ರಂ ಎಂದಾಗುವುದು.

ಸ್ವಾರ್ಥೇ ತದ್ಧಿತಪ್ರತ್ಯಯ. ಕ್ಷಿಪ್ರಮೇವ ಕ್ಷೈಪ್ರಂ ಅಂದರೆ ಗತ್ಯರ್ಥಕ ಧಾತುಗಳಿಗೆ ಜ್ಞಾನಾರ್ಥಕತ್ವವಿರುವುದರಿಂದ ಕ್ಷೀಯತೇ ಅರ್ಥಃ ಯೇನ ಪದೇನ ಇತಿ ಕ್ಷಿಪ್ರಂ ತದೇವ ಕ್ಷೈಪ್ರಂ ಪದಂ ತಸ್ಮಿನ್ । ಹೀಗೆ ಕ್ಷೈಪ್ರೇ ಪದ ಮಾಡುವಾಗ ದೀರ್ಘ ಲೋಪವಾಗುವುದು ಎಂದು ಪದ ಪಾಠವೇ ಕ್ಷೈಪ್ರಶಬ್ದಾರ್ಥ ಎಂದು ಹೇಳಿರುವರು. ಇವರ ಪ್ರಕಾರ ಛಂದಸ್ಸಿಗನು- ಗುಣವಾಗಿ ಸಂಹಿತೆಯಲ್ಲಿ ಹೇಳಿದ ದೀರ್ಘವು ಪದಪಾಠದಲ್ಲಿ ಲೋಪವಾಗುವುದು ಎಂದು ಸೂತ್ರಾರ್ಥ ವಾಗುವುದು.

**'ತೇ ಕ್ಷೈಪ್ರಾಃ ಪ್ರಾಕೃತೋದಯಾಃ''** (೨-೨೩)

ಎಂದು ಋಕ್ ಪ್ರಾತಿಶಾಖ್ಯವಿರುವುದು. ಸಂಧಿಯನ್ನು ಮಾಡಿದಾಗ ವಿಕಾರವನ್ನು ಹೊಂದದಿರುವ ಮುಂದಿನ ಸ್ವರ ವರ್ಣಗಳು ಕ್ಷೈಪ್ರ ಎನಿಸಿಕೊಳ್ಳುತ್ತವೆ. ಎಂದು ಪ್ರಾತಿಶಾಖ್ಯದ ಅರ್ಥವು.

**ಸುಧ್ಯುಪಾಸ್ಯಃ** ಮುಂತಾದ ಯಣ್ ಸಂಧಿಯಲ್ಲಿ ಪೂರ್ವಸ್ವರಗಳು ಕೇವಲ ಯಕಾರಾದಿಗಳಾಗಿ ವಿಕಾರ ಹೊಂದುತ್ತವೆ. ಮುಂದಿರುವ ಉಕಾರಾದಿಗಳು ವಿಕೃತವಾಗುವುದಿಲ್ಲ. ಆದ್ದರಿಂದ ಕ್ಷೈಪ್ರ ಎನಿಸುವವು. ಅಂತು ಯಣ್ ಸಂಧಿ ಮಾಡಿದಾಗ ಯರಲವಗಳ ಮುಂದಿರುವ ಸ್ವರಗಳು ಕ್ಷೈಪ್ರಗಳು ಎಂದಂತಾಯಿತು.

ಕಾಲಕ್ರಮೇಣವಾಗಿ ಅರ್ಥವಿಸ್ತಾರವನ್ನು ಪಡೆದ ಕ್ಷೈಪ್ರಶಬ್ದವು ಎಲ್ಲ ಕಡೆಯಲ್ಲಿರುವ ಯರಲವಗಳಲ್ಲಿರುವ ಸ್ವರಗಳನ್ನು ಹೇಳುವುದು ಎನ್ನಬಹುದಾಗಿದೆ. ಈ ಅಭಿಪ್ರಾಯದಿಂದಲೇ ಶ್ರೀನಿವಾಸತೀರ್ಥರು ಕ್ಷೈಪ್ರ ಇತಿ ಸ್ವರವಿಶೇಷಸ್ಯ ಸಂಜ್ಞಾ ಎಂತಲೂ ಕ್ಷೈಪ್ರೇ ಸ್ವರೇ ಎಂದು ತಾತ್ಪರ್ಯ- ದೀಪಿಕೆಯಲ್ಲಿಯೂ ಹೇಳಿದ್ದು ಯುಕ್ತವಾಗುವುದು. ಅಂತು ಸಂಹಿತೆಯಲ್ಲಿ ಕ್ಷೈಪ್ರಸ್ವರದಲ್ಲಿರುವ ದೀರ್ಘತ್ವವು ಪದಪಾಠದಲ್ಲಿ ಲೋಪವಾಗುವುದು ಎಂದು ಮಹಾವ್ಯಾಕರಣ ಸೂತ್ರಾರ್ಥವಾಯಿತು. ಪ್ರಕೃತದಲ್ಲಿ ಈದೃಶಾಯಾಸಃ ಎಂಬಲ್ಲಿ ಯ ಕಾರದ ಮುಂದಿರುವ ಅಕಾರವು ಕ್ಷೈಪ್ರಸ್ವರವಾದ್ದರಿಂದ ಪದಚ್ಛೇದದಲ್ಲಿ ಕಾಣುವುದಿಲ್ಲ.

**ತಾಮ್ರಪರ್ಣೀ-** ''ಉತೇವ ಮೇ ವರುಣಶ್ಛಂತ್ಸ್ಯರ್ವನ್ಯತ್ರಾ ತ ಆಹುಃ

ಪರಮಂ ಜನಿತ್ರಮ್'' ಎಂಬ ದೃಷ್ಟಾಂತವಾಕ್ಯದ ಅರ್ಥ-ಅರ್ವನ್ - ಅರ್ವಣಿ ಸ್ಥಿತೇ ಅಶ್ವಾರೂಢನೇ 'ಇಂದ್ರಿಯಾಣಿ ಹಯಾನ್ಯಾಹುಃ' ಎಂದಿರುವುದರಿಂದ ಇಂದ್ರಿಯಸಮುದಾಯದಲ್ಲಿರುವ ಉತೇವ ಮೇ ಎಂಬಲ್ಲಿ ಉತ ಮಾ ಇವ ಎಂದು ಪದಚ್ಛೇದ **ಮಾ** ನನ್ನನ್ನು **ಉತೇವ ಪುನಃ ಪುನಃ ಛಂತ್ಸಿ** ಆಚ್ಛಾದಿಸುವಿ ಜ್ಞಾನತಿರೋಧಾನ ಮಾಡುವಿ **ತೇ** ಹಿಂದೆ ಪ್ರಕೃತರಾದ ಜ್ಞಾನಿಗಳು **ಯತ್ರ** ಶರೀರದಲ್ಲಿ **ಪರಮಂ** ಸರ್ವೋತ್ತಮನಾದ **ತ್ವಾಂ** ನಿನ್ನನ್ನು **ಜನಿತ್ರಂ** ಜ್ಞಾನ ಜನಕನೆಂದು **ಆಹುಃ** ಹೇಳುವರು ಎಂದರ್ಥ.

ಸುಧೀಂದ್ರರು 'ಕ್ಷ್ಯಿಪ್ರೇ ದೀರ್ಘಲೋಪಃ' ಎಂಬ ಸೂತ್ರಕ್ಕೆ ಹೀಗೂ ಅರ್ಥ ಬರೆದಿರುವರು. ಯಾವ ಜ್ಞಾನವಾಗದೇ ಪುರುಷಾರ್ಥವಾಗಲಾರದೋ ಅಲ್ಲಿ ಶೀಘ್ರದಲ್ಲಿ ಪ್ರವರ್ತಿಸಬೇಕು ಎಂದು ತಿಳಿಸುವುದಕ್ಕಾಗಿ ಪ್ರಯುಕ್ತವಾದ ದೀರ್ಘವು ಲೋಪವಾಗುವುದು ಎಂದು ಸೂತ್ರಾರ್ಥ. ದೇಹಾತ್ಮಭೇದಜ್ಞಾನ ಮೋಕ್ಷಸಾಧನವಾಗಿದೆ.।।೪೧।।

**ನಿತ್ಯದಾ ಹ್ಯಂಗಭೂತಾನಿ ಭವಂತಿ ನ ಭವಂತಿ ಚ ।**
**ಕಾಲೇನಾಲಕ್ಷ್ಯವೇಗೇನ ಸೂಕ್ಷ್ಮತ್ವಾತ್ತನ್ನ ದೃಶ್ಯತೇ ।।೪೨।।**

**ಹೇ ಅಂಗ** ಎಲೋ ಉದ್ಧವನೇ **ನಿತ್ಯದಾ** ಪ್ರತಿಕ್ಷಣದಲ್ಲಿಯೂ **ಭೂತಾನಿ** ಭೂತ ಕಾರ್ಯವಾದ ಜಡವಸ್ತುಗಳು ಪ್ರಕೃತ ಜೀವಾಧಿಷ್ಠಿತದೇಹವು **ಅಲಕ್ಷ್ಯವೇಗೇನ ಕಾಲೇನ** ಶ್ರೀಹರಿಯಿಂದ ಪ್ರೇರಿತವಾದ ಪರ್ಯವಸಾನರಹಿತ ಅನಂತ ಅಂಶಗಳಿರುವುದರಿಂದ ತಿಳಿಯದ ವೇಗವುಳ್ಳ ಕ್ಷಣಲವಾದಿ ಕಾಲಸಂಬಂಧದಿಂದ **ಭವಂತಿ** ಹುಟ್ಟುವವು **ನ ಭವಂತಿ** ನಾಶವಾಗುವವು ಉಪಚಯ ಅಪಚಯ ಹೊಂದುವವು ಎಂದರ್ಥ. **ಸೂಕ್ಷ್ಮತ್ವಾತ್** ಸೂಕ್ಷ್ಮ-ವಾದ್ದರಿಂದ **ತತ್** ಉಪಚಯ ಅಪಚಯರೂಪ ವಿಕಾರವಾಗುವುದು **ನ ದೃಶ್ಯತೇ** ಕಾಣಿಸುವದಿಲ್ಲ.।।೪೨।।

ಅನುಮಾನದಿಂದ ತಿಳಿಯಬಹುದು ಅದನ್ನೇ ಉದಾಹರಣೆಯಿಂದ ತಿಳಿಸುವರು -

**ಯಥಾರ್ಚಿಷಾಂ ಸ್ರೋತಸಾಂ ಚ ಫಲಾನಾಂ ವಾ ವನಸ್ಪತೇಃ ।**
**ತಥೈವ ಸರ್ವಭೂತಾನಾಂ ವಯೋಽವಸ್ಥಾ ಚ ತತ್ಕೃತಾ ।।೪೩।।**

**ಅರ್ಚಿಷಾಂ** ದೀಪಜ್ವಾಲೆಗಳ **ಸ್ರೋತಸಾಂ** ಪ್ರವಾಹಗಳ **ವನಸ್ಪತೇಃ** ಗಿಡಗಳ **ಫಲಾನಾಂ** ಹಣ್ಣುಗಳ (ಉತ್ಪತ್ತಿ ನಾಶಗಳು) **ಯಥಾ** ಕಾಲದಿಂದ ಹೇಗೆ ಮಾಡಲ್ಪಟ್ಟಿದೆಯೋ ಅದರಂತೆ **ಸರ್ವಭೂತಾನಾಂ** ಎಲ್ಲ ಜಡಪದಾರ್ಥಗಳ **ವಯೋಽವಸ್ಥಾ** ವಯೋನಿಮಿತ್ತಕವಾದ ಬಾಲ್ಯ ,ಕೌಮಾರಾದ್ಯವಸ್ಥಾಗಳು **ತತ್ಕೃತಾ** ಕಾಲದಿಂದ ಮಾಡಲ್ಪಟ್ಟವುಗಳು.।।೪೩।।

**ಸೋಽಯಂ ದೀಪೋಽರ್ಚಿಷಾಂ ಯದ್ವತ್**
**ಸ್ರೋತಸಾಂ ತದಿದಂ ಜಲಮ್ ।**
**ಸೋಽಯಂ ಪುಮಾನಿತಿ ನೃಣಾಂ**
**ಮೃಷಾ ಗೀರ್ಧೀರ್ಮೃಷಾಯುಷಾಮ್** ।।೪೪।।

ನ ಎಂಬುದನ್ನು ಇಲ್ಲಿ ಅಧ್ಯಾಹಾರ ಮಾಡಿಕೊಳ್ಳಬೇಕು.

**ಅರ್ಚಿಷಾಂ** ಅನೇಕ ದೀಪಜ್ವಾಲೆಗಳ ಬಗ್ಗೆ ಬರುವ **ಸೋಽಯಂ ದೀಪಃ ಇತಿ ಗೀಃ** ಅದು ದೀಪ ಎನ್ನುವ ವ್ಯವಹಾರವು **ಸೋಽಯಂ ದೀಪಃ ಇತಿಃ ಧೀಃ** ಅದು ದೀಪ ಎನ್ನುವ ಪ್ರತ್ಯಭಿಜ್ಞಾವು **ನ ಮೃಷಾ** ಅಯಥಾರ್ಥವಲ್ಲ. **ಯದ್ವತ್** ಯಾವ ರೀತಿಯಾಗಿ **ಸ್ರೋತಸಾಂ** ಪ್ರವಾಹಗಳ ಸಮೂಹದ ಬಗ್ಗೆ **ತದಿದಂ ಜಲಂ** ಅದು ನೀರು ಎನ್ನುವ ಪ್ರತ್ಯಭಿಜ್ಞಾ ಮತ್ತು ವ್ಯವಹಾರಗಳು **ನ ಮೃಷಾ** ಅಯತಾರ್ಥವಲ್ಲವೋ **ನೃಣಾಂ** ಮನುಷ್ಯರ ಬಗ್ಗೆ ಬಂದ ಸೋಽಯಂ ಪುಮಾನ್ ಎಂಬ ಪ್ರತ್ಯಭಿಜ್ಞಾ **ನ ಮೃಷಾ** ಅಯಥಾರ್ಥವಲ್ಲ. ಪ್ರತ್ಯುತ ಸೋಽಯಮೇವ ಎಂಬ ಸಾವಧಾರಣ ಪ್ರತ್ಯಭಿಜ್ಞಾ ಮತ್ತು ವ್ಯವಹಾರಗಳು **ಮೃಷಾ** ಅಯಥಾರ್ಥ.

**ತಾತ್ಪರ್ಯ-** **ಸೋಽಯಮೇವೇತಿ ಮೃಷಾ ।**

ಸ ಚಾಯಮಿತಿ ತು ಜ್ಞಾನಂ ನ ಮೃಷಾಽಯಂ ಸ ಏವ ತು ।
ಇತಿ ಜ್ಞಾನಂ ಮೃಷೈವ ಸ್ಯಾದ್ಭೇದಾಭೇದೌ ಯತಸ್ತನೋಃ ।

ಅಭೇದ ಏವ ಜೀವಸ್ಯ ನಿತ್ಯಂ ಪ್ರತ್ಯೇಕಶಃ ಪೃಥಕ್ ।
ದೀಪದೇಹನದೀವಾರಿಫಲಾದೀನಾಂ ಪೃಥಕ್ ಸ್ವತಃ ।

ಭೇದಾಭೇದೌ ಪರಿಜ್ಞೇಯೌ ಕಾರ್ಯಕಾರಣಯೋರಪಿ ।
ಗುಣಸ್ಯ ಗುಣಿನಶ್ಚೈವ ಜಾತಿವ್ಯಕ್ತ್ಯೋಸ್ತಥೈವ ಚ ।

> ತಥಾಽವಯವ್ಯವಯವಯೋಃ ಕ್ರಿಯಾಯಾಸ್ತದ್ವತಸ್ತಥಾ ।
> ಏವಂ ಜಡೇಷು ನಿಯಮಶ್ಚಿದ್ರೂಪೇಷ್ವಭಿದೈವ ತು ಇತಿ ಚ ।

> ಯೇ ಧರ್ಮಾ ನಿಯಮೇನೈವ ಧರ್ಮಿಣೋ ನ ವಿಯೋಗಿನಃ ।
> ಜಡಸ್ಥಾ ಅಪ್ಯಭಿನ್ನಾಸ್ತೇ ಭಿನ್ನಾಭಿನ್ನಾ ವಿಯೋಗಿನಃ ।। ಇತಿ ಚ

ಈ **ಶ್ಲೋಕ**ದಲ್ಲಿ ಸೋಽಯಂ ಎನ್ನುವ ಪ್ರತ್ಯಭಿಜ್ಞಾಕ್ಕೆ ಭ್ರಾಂತಿತ್ವವನ್ನು ಹೇಳುತ್ತಿದ್ದಾರೆ ಅದು ಸರಿಯಲ್ಲ. ಒಂದು ವೇಳೆ ಭ್ರಾಂತಿತ್ವವನ್ನು ಹೇಳಿದರೆ (ಪ್ರತಿಕ್ಷಣದಲ್ಲಿಯೂ ಉತ್ಪತ್ತಿ ವಿನಾಶವನ್ನು ಒಪ್ಪುವ) ಬೌದ್ಧ ಮತವನ್ನು ಒಪ್ಪಿದಂತೆ ಆಗಿ ಅವರನ್ನು ನಿರಾಕರಣೆ ಮಾಡುವ ಪ್ರಮಾಣ ಇಲ್ಲ ಎಂದು ಆಗಬೇಕಾಗುತ್ತದೆ. ಎನ್ನುವದಾಗಿ ಪ್ರಶ್ನೆ ಬಂದರೆ ನಿರೂಪಣೆ ಮಾಡುತ್ತಿದ್ದಾರೆ.

ಸೋಽಯಮೇವೇತಿ ಮೃಷಾ ಎರಡು ವಿಧವಾದ ಪ್ರತ್ಯಭಿಜ್ಞಾಗಳಿವೆ. ಸಾವಧಾರಣ ನಿರವಧಾರಣ ಎಂಬುದಾಗಿ. ಸಾವಧಾರಣ ಪ್ರತ್ಯಭಿಜ್ಞಾಕ್ಕೆ ಉದಾಹರಣೆ "**ಸ ಏವಾಯಂ ಗಕಾರಃ**" ನಿರವಧಾರಣ ಪ್ರತ್ಯಭಿಜ್ಞಾಕ್ಕೆ ಉದಾಹರಣೆ "**ಸೋಽಯಂ ದೀಪಃ ತದಿದಂ ಜಲಂ**" ಎಂಬುದು ಉದಾಹರಣೆ. ಇವುಗಳ ಮಧ್ಯದಲ್ಲಿ ಸಾವಧಾರಣ ಪ್ರತ್ಯಭಿಜ್ಞಾ ಅಯಥಾರ್ಥ. ಏಕೆಂದರೆ ಅತ್ಯಂತಾಭೇದ ವಿಷಯಕವಾಗಿದೆ. ಜಡಪದಾರ್ಥಗಳಲ್ಲಿ (ದೀಪಕ್ಕೂ ದೀಪಜ್ವಾಲೆಗೂ) ಭೇದಾಭೇದವಿದೆ.

ನಿರವಧಾರಣ ಪ್ರತ್ಯಭಿಜ್ಞಾ ಯಥಾರ್ಥ. ಏಕೆಂದರೆ ಭೇದಾಭೇದ ಅವಿರೋಧಿಯಾಗಿದೆ. ಈ ವಿಷಯಗಳನ್ನೆಲ್ಲಾ ಪ್ರಮಾಣದಿಂದ ನಿರೂಪಿಸುತ್ತಿದ್ದಾರೆ ಸ ಚಾಯಮ್...ಯತಸ್ತನೋಃ ಆದರೆ "ಸ ಏವಾಯಂ ಜೀವಃ" ಎನ್ನುವ ಪ್ರತ್ಯಭಿಜ್ಞಾ ಅಯಥಾರ್ಥವಲ್ಲ. (ಅಭೇದ ಏವ ಜೀವಸ್ಯ) ಎಂಬ ಪ್ರಮಾಣ ಇರುವದರಿಂದ ಅತ್ಯಂತಾಭೇದವಿದೆ. ಹಾಗಾದರೆ ಎಲ್ಲಿ ಭೇದಾಭೇದ ಹೇಳಬೇಕು ಎಲ್ಲಿ ಅತ್ಯಂತಾಭೇದ ಹೇಳಬೇಕು ಎಂದರೆ ಭೇದಾಭೇದ ಸ್ಥಳವನ್ನು ತಿಳಿಸುತ್ತಿದ್ದಾರೆ.

(ದೀಪಕ್ಕೂ ದೀಪಜ್ವಾಲೆಗೂ, ನದಿ-ಪ್ರವಾಹ, ದೇಹಕ್ಕೂ ಜೀವನಿಗೂ, ಗುಣ-ಗುಣಿ, ಕ್ರಿಯಾ-ಕ್ರಿಯಾವತ್, ಜಾತಿ-ವ್ಯಕ್ತಿ, ಅವಯವ-ಅವಯವಿ,) ಈ ರೀತಿಯಾಗಿ ಜಡಪದಾರ್ಥಗಳಲ್ಲಿ ನಿಯಮ. ಚಿದ್ರೂಪವಾದ ಗುಣ-ಗುಣ್ಯಾದಿಗಳಲ್ಲಿ ಅತ್ಯಂತಾಭೇದವಿದೆ. ಜಡವಾದ ಅವಯವ

ಅವಯವಿಗಳಲ್ಲಿ ಭೇದಾಭೇದವಿದೆ ಎಂದು ಹಿಂದೆ ಹೇಳಿದ್ದರು. ಇದಕ್ಕೆ ಅಪವಾದವು ಇದೆ. ಯಾವ ಧರ್ಮಗಳು ಧರ್ಮಿಯನ್ನು ಬಿಟ್ಟು ಇರುವದಿಲ್ಲವೋ ಜಡವಾದರೂ ಅವುಗಳಲ್ಲಿ ಅತ್ಯಂತಾಭೇದವಿರುತ್ತದೆ. ಉದಾಹರಣೆಗೆ ಗೋ ಎಂಬ ಧರ್ಮಿಯನ್ನು ಬಿಟ್ಟು ಸಾಸ್ನಾದಿಮತ್ವ ಎಂಬ ಧರ್ಮ ಇರುವದಿಲ್ಲ. ಆದ್ದರಿಂದ ಅವುಗಳಲ್ಲಿ ಅತ್ಯಂತಾಭೇದವಿದೆ.॥೪೪॥

**ಆದ್ಯಃ ಸ್ವಕರ್ಮಬೀಜೇನ ಜಾಯತೇ ಸೋಽವ್ಯಯಃ ಪುಮಾನ್ ।**
**ಮ್ರಿಯತೇ ಚಾಮರೋ ಭ್ರಾಂತ್ಯಾ ಯಥಾಽಗ್ನಿರ್ದಾರುಸಂಯುತಃ॥೪೫॥**

**ಆದ್ಯಃ** ಉತ್ಪತ್ತಿಶೂನ್ಯನಾದ **ಅಮರಃ** ಮರಣಶೂನ್ಯನಾದ **ಅವ್ಯಯಃ** ಸ್ವಾಭಾವಿಕ ವೃದ್ಧಿಹ್ರಾಸರಹಿತನಾದ **ಸಃ ಪುಮಾನ್** ಆ ಜೀವನು **ಸ್ವಕರ್ಮಬೀಜೇನ** ತನ್ನಿಂದ ಮಾಡಲ್ಪಟ್ಟ ಕರ್ಮ ಎಂಬ ಕಾರಣದಿಂದ **ಜಾಯತೇ ಮ್ರಿಯತೇ ಚ** ಹುಟ್ಟುತ್ತಾನೆ ಸಾಯುತ್ತಾನೆ. **ಇತಿ ಭ್ರಾಂತಿಃ** ಎನ್ನುವದು ಭ್ರಾಂತಿ ಅಂದರೆ ಭ್ರಾಂತಿಯಿಂದ ಆ ರೀತಿ ವ್ಯವಹಾರ ಮಾಡುತ್ತಾನೆ. ವಸ್ತುತಃ ದೇಹ- ಸಂಬಂಧವೇ ಉತ್ಪತ್ತಿ, ದೇಹವಿಯೋಗವೇ ಮರಣ. ಹೊರತು ಸ್ವಾಭಾವಿಕ- ವಾದದ್ದಲ್ಲ. ಇದಕ್ಕೆ ದೃಷ್ಟಾಂತ **ದಾರುಸಂಯುತಃ ಅಗ್ನಿಃ** ದಾರುಸಂಯೋಗದಿಂದ ಅಗ್ನಿ ಹುಟ್ಟುತ್ತದೆ ದಾರುಸಂಬಂಧ ನಾಶವಾದರೆ ಅಗ್ನಿ ನಾಶವಾಗುತ್ತದೆ ಎಂಬ ವ್ಯವಹಾರವಿದೆ.॥೪೫॥

**ನಿಷೇಕಗರ್ಭಜನ್ಮಾನಿ ಬಾಲ್ಯಕೌಮಾರಯೌವನಮ್ ।**
**ವಯೋ ಮಧ್ಯಂ ಜರಾ ಮೃತ್ಯುರಿತ್ಯವಸ್ಥಾಸ್ತನೋರ್ನವ ॥೪೬॥**

ವಯೋವಸ್ಥಾ ಚ ತತ್ಕೃತಾ ಎಂದು ೪೩ ನೇ ಶ್ಲೋಕದಲ್ಲಿ ವಯೋವಸ್ಥಾಗಳನ್ನು ನಿರೂಪಿಸಿದ್ದಾರೆ. ಆ ಅವಸ್ಥಾಗಳು ಯಾವವು ಎಂದರೆ ನಿರೂಪಿಸುತ್ತಿದ್ದಾರೆ-

**ನಿಷೇಕಃ** ಯೋನಿಯಲ್ಲಿ ರೇತಸ್ಸಿನ ಸೇಚನೆ ಮಾಡುವದು **ಗರ್ಭ** ಗರ್ಭದಲ್ಲಿ ಇರುವದು **ಜನ್ಮ** ಹುಟ್ಟುವಿಕೆ **ಬಾಲ್ಯಕೌಮಾರಯೌವನಂ** ಬಾಲ್ಯ ,ಕೌಮಾರ, ಯೌವನ **ಮಧ್ಯಂ ವಯಃ** ಮಧ್ಯ ವಯಸ್ಸು **ಜರಾ** ಮುಪ್ಪು **ಮೃತ್ಯುಃ** ಮರಣ **ಇತಿ** ಎಂಬುದಾಗಿ **ತನೋಃ ನವ ಅವಸ್ಥಾಃ** ದೇಹದ ಒಂಭತ್ತು ಅವಸ್ಥಾಗಳಾಗಿವೆ.

ದೇಹಕ್ಕೆ ಜನ್ಮಾದಿಗಳು ಪ್ರಾಪ್ತವಾದರೆ ಜೀವನಿಗೇನು ಉಪಯೋಗ ಎನ್ನುವುದನ್ನು ತಿಳಿಸುತ್ತಿದ್ದಾರೆ -

**ಏತಾ ಮನೋರಥಮಯೀರ್ಹ್ಯನ್ಯಸ್ಯೋಚ್ಚಾವಚಾಸ್ತನೂಃ ।**
**ಗುಣಸಂಗಾದುಪಾದತ್ತೇ ಕ್ವಚಿತ್ ಕಾಶ್ಚಿಜ್ಜಹಾತಿ ಚ ॥೪೭॥**

**ಅನ್ಯಸ್ಯ** ಲೋಕವಿಲಕ್ಷಣನಾದ ಪರಮಾತ್ಮನ **ಮನೋರಥಮಯೀಃ** ಇಚ್ಛಾದಿಂದ ನಿರ್ಮಿತವಾದ **ಗುಣಸಂಗಾತ್ ಉಚ್ಚಾವಚಾಃ** ಸತ್ವಾದಿಗುಣ ಸಂಬಂಧದಿಂದ ಉತ್ಕೃಷ್ಟ-ಅಪಕೃಷ್ಟವಾಗಿರುವ **ಏತಾಃ ತನೂಃ** ಈ ಶರೀರಗಳನ್ನು **ಕ್ವಚಿದ್ ದೇಶೇ ಕ್ವಚಿದ್ ಕಾಲೇ** ಕೆಲವು ದೇಶಗಳಲ್ಲಿ ಕೆಲವು ಕಾಲಗಳಲ್ಲಿ **ಉಪಾದತ್ತೇ** ಸ್ವೀಕಾರ ಮಾಡುತ್ತಾನೆ **ಜಹಾತಿ ಚ** ಬಿಡುತ್ತಾನೆ.॥೪೭॥

ದೇಹಕ್ಕೆ ಉತ್ಪತ್ತಿನಾಶಗಳಿವೆ ಎಂಬುದನ್ನು ನಿರೂಪಿಸುತ್ತಿದ್ದಾರೆ-

**ಆತ್ಮನಃ ಪಿತೃಪುತ್ರಾಭ್ಯಾಮನುಮೇಯೌ ಭವಾಪ್ಯಯೌ ।**
**ಭವಾಪ್ಯಯೌ ಹಿ ಭೂತಾನಾಮಭಿಜ್ಞಾದ್ವಯಲಕ್ಷಣೌ ॥೪೮॥**

**ಆತ್ಮನಃ** (ದೇಹಸ್ಯ) ತನ್ನ ದೇಹದ **ಭವಾಪ್ಯಯೌ** ಉತ್ಪತ್ತಿ-ನಾಶಗಳನ್ನು **ಪಿತೃಪುತ್ರಾಭ್ಯಾಂ** ಪಿತೃದೇಹತ್ವ, ಪುತ್ರದೇಹತ್ವ ಎಂಬ ಹೇತುಗಳಿಂದ **ಅನುಮೇಯೌ** ಅನುಮಾನ ಮಾಡಿಕೊಳ್ಳಬೇಕು **ಭೂತಾನಾಂ** ಜೀವರ **ಭವಾಪ್ಯಯೌ** ಉತ್ಪತ್ತಿ-ನಾಶಗಳು (ಅಹಂ ಜಾತಃ ಅಹಂ ಮೃತಃ) ಎನ್ನುವ ಪ್ರತೀತಿಯು **ಅಭಿಜ್ಞಾದ್ವಯಲಕ್ಷಣೌ ಅಭಿಜ್ಞಾ** ಅಭಿಮಾನ ಅರ್ಥಾತ್ ಅಜ್ಞಾನ ಅಜ್ಞಾನನಿಮಿತ್ತಕವಾಗಿ ಬಂದ ಭ್ರಮರೂಪ ಜ್ಞಾನಗಳು ಹೊರತು ವಾಸ್ತವವಾಗಿ ಜೀವಸ್ವರೂಪದಲ್ಲಿ ಇಲ್ಲ ಎಂದರ್ಥ.

ಜೀವನು ತನ್ನ ದೇಹದ ಉತ್ಪತ್ತಿ-ನಾಶಗಳನ್ನು ಅನುಮಾನ ಮಾಡಿಕೊಳ್ಳಬೇಕು. ಹೇಗೆಂದರೆ ತನ್ನ ದೇಹದಿಂದ ತನ್ನ ಪುತ್ರನ ದೇಹ ಹುಟ್ಟಿದ್ದನ್ನು ಕಂಡಿದ್ದಾನೆ. ತನ್ನದು ಪುತ್ರದೇಹವಾದ್ದರಿಂದ ತನ್ನ ತಂದೆಯ ದೇಹದಿಂದಾಗಿ ಹುಟ್ಟಿದೆ ಎಂಬುದಾಗಿ ತಿಳಿದುಕೊಳ್ಳಬೇಕು.

ಅನುಮಾನದ ಆಕಾರ

ಮದಿಯೋದೇಹಃ (ನನ್ನದೇಹವು) ಉತ್ಪತ್ತಿಮಾನ್ (ಉತ್ಪತ್ತಿಯುಳ್ಳದ್ದಾಗಿದೆ) ದೇಹತ್ವಾತ್ (ದೇಹವಾದ್ದರಿಂದ) ಪುತ್ರದೇಹವತ್ (ಮಗನ ದೇಹದಂತೆ)

ನಾಶದ ಅನುಮಾನದ ಆಕಾರವನ್ನು ತಿಳಿಸುತ್ತಿದ್ದಾರೆ

ಮದೀಯೋ ದೇಹಃ (ನನ್ನ ದೇಹವು) ವಿನಾಶವಾನ್ (ಮರಣ ಉಳ್ಳದ್ದಾಗಿದೆ) ಪಿತೃದೇಹತ್ವಾತ್ (ಪಿತೃದೇಹವಾದ್ದರಿಂದ,) ಪಿತೃದೇಹವತ್ (ನನ್ನ ತಂದೆಯ ದೇಹದಂತೆ.)

**ತಾತ್ಪರ್ಯ-** ದೇಹವೇ ಹುಟ್ಟುತ್ತದೆ ದೇಹವೇ ನಾಶವಾಗುತ್ತದೆ. ಅಂತಾದರೆ ''**ಅಹಂ ಜಾತಃ ಅಹಂ ಮೃತಃ**''ಎಂಬುದಾಗಿ ಜೀವನಿಗೆ ಪ್ರತೀತಿ ವ್ಯವಹಾರಗಳು ಕಂಡಿವೆ. ಅದಕ್ಕೇನು ಗತಿ ಎಂಬ ಪ್ರಶ್ನೆಗೆ ಆಚಾರ್ಯರು ಉತ್ತರಿಸುತ್ತಿದ್ದಾರೆ.

**ತಾತ್ಪರ್ಯ- ಅಭಿಜ್ಞಾದ್ವಯಲಕ್ಷಣೌ ಅಭಿಮಾನಮಾತ್ರೌ ॥**

ದೇಹದ ಮೇಲೆ ಅತ್ಯಂತ ಅಭಿಮಾನವಿರುವುದರಿಂದ ದೇಹ ಹುಟ್ಟಿದಾಗ (ಅಹಂ ಜಾತಃ) ಎನ್ನುವದಾಗಿ ದೇಹ ನಾಶವಾದಾಗ (ಅಹಂ ಮೃತಃ) ಎನ್ನುವದಾಗಿ ವ್ಯವಹಾರ ಮಾಡುತ್ತಾನೆ ಹೊರತು ವಾಸ್ತವವಲ್ಲ. ಇದನ್ನೇ ಶ್ರೀಮದಾಚಾರ್ಯರು ಅಭಿಮಾನಮಾತ್ರೌ ಎಂದು ''ಮಾತ್ರ'' ಶಬ್ದದಿಂದ ಹೇಳುತ್ತಿದ್ದಾರೆ.

ಅಭಿಮಾನಮಾತ್ರೌ-ಅಜ್ಞಾನನಿಮಿತ್ತಕವಾದ ಭ್ರಮರೂಪ ಪ್ರತೀತಿ ಮತ್ತು ವ್ಯವಹಾರ ಹೊರತು ವಾಸ್ತವವಲ್ಲ ಎಂದರ್ಥ.॥೪೮॥

**ತರೋರ್ಬೀಜವಿಕಾರಾಭ್ಯಾಂ ಯೋ ವಿದ್ವಾನ್ ಜನ್ಮಸಂಯಮೌ ।**
**ತರೋರ್ವಿಲಕ್ಷಣೋ ದ್ರಷ್ಟಾ ಏವಂ ದ್ರಷ್ಟಾ ತನೋಃ ಪೃಥಕ್ ॥೪೯॥**

**ಪ್ರಕೃತೇರೆವಮಾತ್ಮಾನಮವಿವಿಚ್ಯಾಬುಧಃ ಪುಮಾನ್ ।**
**ತತ್ತ್ವೇನ ಸ್ಪರ್ಶಸಮ್ಮೂಢಃ ಸಂಸಾರಂ ಪ್ರತಿಪದ್ಯತೇ ॥೫೦॥**

**ಆತ್ಮಾನಂ** ಜೀವ-ಪರಮಾತ್ಮರನ್ನು **ಪ್ರಕೃತೇಃ** ಪ್ರಕೃತಿಯಿಂದ **ತತ್ತ್ವೇನ** ಯಥಾರ್ಥವಾಗಿ **ಅವಿವಿಚ್ಯ** ವಿವೇಕ ಜ್ಞಾನವಿಲ್ಲದಿರುವ **ಅಬುಧಃ ಪುಮಾನ್** ಯಾವ ಅಜ್ಞಾನಿಯಿದ್ದಾನೊ **ಸ್ಪರ್ಶಸಮ್ಮೂಢಃ** ವಿಷಯಪದಾರ್ಥಗಳಲ್ಲಿ ಆಸಕ್ತನಾಗಿ **ಸಂಸಾರಂ ಪ್ರತಿಪದ್ಯತೇ** ಸಂಸಾರವನ್ನೇ ಹೊಂದುತ್ತಾನೆ.॥೫೦॥

ಸಂಸಾರವೂ ಎಲ್ಲರಿಗೂ ಏಕಪ್ರಕಾರವಾಗಿ ಇರುವುದಿಲ್ಲ. ಸತ್ವಾದಿ-ಗುಣದಿಂದಲೇ ಸಂಸಾರದಲ್ಲಿಯೂ ತಾರತಮ್ಯ ಇರುತ್ತದೆ ಎಂದು ಹೇಳುತ್ತಿದ್ದಾರೆ-

**ಸತ್ವಸಂಗಾತ್ ಋಷೀನ್ ದೇವಾನ್ ರಜಸಾಽಽಸುರಮಾನುಷಾನ್ ।**
**ತಮಸಾ ಭೂತತಿರ್ಯಕ್ತ್ವಂ ಭ್ರಾಮಿತೋ ಯಾತಿ ಕರ್ಮಭಿಃ ॥೫೦॥**

**ಸತ್ವಸಂಗಾತ್** ಸಾತ್ವಿಕರ ಸಂಗದಿಂದ ಲಭ್ಯವಾದ ಪುಣ್ಯಕರ್ಮದಿಂದ **ಋಷೀನ್ ದೇವಾನ್** ಋಷಿತ್ವವನ್ನು ಮತ್ತು ದೇವತ್ವವನ್ನು, **ರಜಸಾ** ರಾಜಸಕರ್ಮದಿಂದ **ಅಸುರಮಾನುಷಾನ್** ಅಸುರತ್ವ, ಮಾನುಷತ್ವಗಳನ್ನು **ತಮಸಾ** ತಾಮಸಕರ್ಮದಿಂದ **ಭೂತತಿರ್ಯಕ್ತ್ವಂ** ರಾಕ್ಷಸ-ಪಿಶಾಚ-ತಿರ್ಯಕ್ತ್ವಗಳನ್ನು **ಕರ್ಮಭಿಃ** ಈ ವಿಧವಾದ ಭಿನ್ನ ಭಿನ್ನ ಕರ್ಮಗಳಿಂದ **ಭ್ರಾಮಿತಃ** ಮತ್ತೆ ಮತ್ತೆ ಜನಿಸಿದವನಾಗಿ **ಯಾತಿ** ದುಃಖಗಳನ್ನು ಪಡೆಯುತ್ತಾನೆ.

ಸಂಸಾರವು ಅಭಿಮಾನನಿಮಿತ್ತಕವೇ ಹೊರತು ಸ್ವಾಭಾವಿಕವಲ್ಲ ಎನ್ನುವದನ್ನು ತಿಳಿಸುತ್ತಿದ್ದಾರೆ-

**ನೃತ್ಯತೋ ಗಾಯತಃ ಪಶ್ಯನ್ ಯಥೈವಾನುಕರೋತಿ ತಾನ್ ।**
**ಏವಂ ಬುದ್ಧಿಗುಣಾನ್ ಪಶ್ಯನ್ನನೀಹೋಽಪ್ಯನುಕಾರ್ಯತೇ ॥೫೨॥**

ಮನುಷ್ಯನು **ನೃತ್ಯತಃ** ನೃತ್ಯ ಮಾಡುವ ವ್ಯಕ್ತಿಗಳನ್ನು **ಗಾಯತಃ** ಗಾನ ಮಾಡುವ ವ್ಯಕ್ತಿಗಳನ್ನು **ಪಶ್ಯನ್** ನೋಡುತ್ತಾ **ಯಥಾ ಅನುಕರೋತಿ** ಹೇಗೆ ಅನುಕರಿಸುತ್ತಾನೋ (ತಾನು ಹೇಗೆ ನರ್ತನ ಗಾನ ಮಾಡುತ್ತಾನೋ) **ಏವಂ** ಅದೇ ರೀತಿಯಾಗಿ ಸಜ್ಜೀವನು **ಅನೀಹೋಽಪಿ** ದುಃಖಾದ್ಯನುಭವಯೋಗ್ಯತಾ ಇಲ್ಲದಿದ್ದರೂ **ಬುದ್ಧಿಗುಣಾನ್** ಬುದ್ಧಿಗುಣಗಳಾದ ದುಃಖಾದಿಗಳನ್ನು **ಪಶ್ಯನ್** ತನ್ನಲ್ಲಿ ಎಂಬುದಾಗಿ ತಿಳಿಯುತ್ತಾ **ಅನುಕಾರ್ಯತೇ** ಅಹಂ ದುಃಖೀ ಎಂಬುದಾಗಿ ಅನುಕರಿಸುತ್ತಾನೆ.

ಸಜ್ಜೀವನು ದುಃಖಾದ್ಯನುಭವಯೋಗ್ಯನಲ್ಲ ಎನ್ನುವದನ್ನು ಪ್ರಮಾಣದಿಂದ ಉಪಪಾದನೆ ಮಾಡುತ್ತಿದ್ದಾರೆ.

**ತಾತ್ಪರ್ಯ- ದುಃಖಶೋಕಾದಯಃ ಸರ್ವೇ ಜ್ಞೇಯಾ ಬುದ್ಧಿಗುಣಾ ಇತಿ।**
**ಸುಖಜ್ಞಾನೇ ತು ಜೀವಸ್ಯ ಭಕ್ತಿಃ ಸ್ನೇಹಸ್ತಥೈವ ಚ ।**
**ವಿಪರ್ಯಯೇಣಾಸುರಾಣಾಂ ಜೀವಬುದ್ಧಿಗುಣಾ ಇತಿ ॥ ಇತಿ ಚ**

**ಆತ್ಮನೋಽಪಿ ಗುಣಾ ಬುದ್ಧಿಕೃತಬುದ್ಧಿಗುಣಾ ಇತಿ ।**
**ಉಚ್ಯಂತೇ ಸುಖದುಃಖಾದ್ಯಾಃ ಪರಮಾತ್ಮಾಕೃತಾ ಯಥಾ ॥ ಇತಿ ತ್ರೈಕಾಲ್ಯೇ।**

ದುಃಖ-ಶೋಕಾದಿಗಳೆಲ್ಲವೂ ಬುದ್ಧಿಗುಣ ಎಂದು ತಿಳಿಯಬೇಕು. ಸುಖ, ಜ್ಞಾನ, ಭಕ್ತಿ ,ಇವುಗಳು ಸ್ವರೂಪಭೂತವಾದದ್ದು. (ಜೀವಗುಣ) ಇದಕ್ಕೆ ವಿಪರೀತವಾಗಿ ಇರುತ್ತದೆ. ಅಸುರರಿಗೆ ದುಃಖಾದಿಗಳು ಜೀವಗುಣ ಸುಖ-ಜ್ಞಾನಾದಿಗಳು ಬುದ್ಧಿಗುಣ ಇದರ ಮೇಲೆ ಒಂದು ಆಕ್ಷೇಪ. ಅಹಂ ದುಃಖೀ ಅಹಂ ಸುಖೀ ಎಂಬ ಅನುಭವಬಲದಿಂದ ದುಃಖಶೋಕಾದಿಗಳೂ ಸುಖಾದಿಗಳಂತೆ ಜೀವನಲ್ಲಿ ಇದೆ ಎಂಬುದಾಗಿ ತೋರುತ್ತಿದೆ. ಇದು ಬುದ್ಧಿಗುಣ ಎಂದು ಹೇಗೆ ಹೇಳುತ್ತಿರಾ? ಎಂದರೆ ಉತ್ತರಿಸುತ್ತಿದ್ದಾರೆ-

ಹೇಗೆಮನಸ್ಸಿನಿಂದಹುಟ್ಟಿದಸುಖಾದಿಗಳಿಗೆಆತ್ಮನುಸ್ವಾಮಿಯಾದದ್ದರಿಂದ ಆತ್ಮಗುಣ ಬುದ್ಧಿಯಿಂದ ಹುಟ್ಟಿದ್ದರಿಂದ ಬುದ್ಧಿಗುಣ ಎಂದು ಹೇಗೆ ಕರೆಯುತ್ತಾರೋ ಅದೇ ರೀತಿಯಾಗಿ ದುಃಖಶೋಕಾದಿಗಳು ಆತ್ಮಸ್ವಾಮಿಕ-ವಾದದ್ದರಿಂದ ಆತ್ಮನಲ್ಲಿ ಇದೆ ಎಂಬುದಾಗಿ ತೋರುತ್ತಿದೆ. ಒಂದು ದೃಷ್ಟಾಂತ 'ಸುಖಂ ದುಃಖಂ ಭವೋ ಭಾವಃ' ಎಂಬ ಪ್ರಮಾಣಾನುಸಾರವಾಗಿ ಪರಮಾತ್ಮನಿಂದ ನಿರ್ಮಿತವಾಗಿವೆ ಎಂದು ತಿಳಿದಿದ್ದರೂ ಸುಖಾದಿಗಳು ಜೀವಗತ ಎಂದು ಹೇಗೆ ಕರೆಯುತ್ತಾರೊ ಅದೇ ರೀತಿಯಾಗಿ ಬುದ್ಧಿಕೃತ-ವಾಗಿದ್ದರೂ ದುಃಖಾದಿಗಳು ಆತ್ಮಸ್ವಾಮಿಕವಾದದ್ದರಿಂದ ಆತ್ಮಗುಣ ಎಂದು ಕರೆಯುತ್ತಾರೆ.।।೫೨।।

ದುಃಖಾದಿ ಸಂಸಾರವು ಮಿಥ್ಯಾ (ಅಸ್ವಾಭಾವಿಕ) ಎಂಬ ಈ ದೃಷ್ಟಾಂತವನ್ನು ಅನೇಕ ವಿಷಯಗಳಿಂದ ತಿಳಿಸುತ್ತಿದ್ದಾರೆ.

**ಯಥಾಽಂಭಸಾ ಪ್ರಚಲತಾ ತರವೋಽಪಿ ಚಲಾ ಇವ ।**
**ಚಕ್ಷುಷಾ ಭ್ರಾಮ್ಯಮಾಣೇನ ದೃಶ್ಯತೇ ಭ್ರಮತೀವ ಭೂಃ ।।೫೩।।**

**ಯಥಾ ಮನೋರಥಧಿಯೋ ವಿಷಯಾನುಭವೋ ಮೃಷಾ ।**
**ಸ್ವಪ್ನದೃಷ್ಟಶ್ಚ ದಾಶಾರ್ಹ ತಥಾ ಸಂಸಾರ ಆತ್ಮನಃ ।।೫೪।।**

**ಅಂಭಸಾ ಪ್ರಚಲತಾ** ನೀರು ಅಲುಗಾಡಿದಾಗ **ತರವೋಽಪಿ ಚಲಾಃ** ಅದರಲ್ಲಿ ಪ್ರತಿಬಿಂಬಿತವಾದ ಮರಗಳು ಹೇಗೆ ಅಲುಗಾಡುತ್ತವೊ **ಚಕ್ಷುಷಾ ಭ್ರಾಮ್ಯಮಾಣೇನ** ಕಣ್ಣು ತಿರುಗಿದಾಗ **ಭೂಃ ಭ್ರಮತೀವ ದೃಶ್ಯತೇ** ಭೂಮಿಯು ಚಲಿಸಿದಂತೆ ಕಾಣುತ್ತದೊ **ಯಥಾ ಸ್ವಪ್ನದೃಷ್ಟಃ ವಿಷಯಾನುಭವಃ** ಜಾಗ್ರತ್

ಪದಾರ್ಥದ ಜೊತೆಗೆ ಅಭೇದೇನ ತೋರಿದ ವಿಷಯಾನುಭವವು **ಮೃಷಾ** ಹೇಗೆ ಮಿಥ್ಯಾಭೂತವೊ **ತಥಾ** ಅದೇ ರೀತಿಯಾಗಿ **ಆತ್ಮನಃ** ಜೀವನ **ಸಂಸಾರಃ** ಸಂಸಾರವು **ಮಿಥ್ಯಾ** ಮಿಥ್ಯಾಭೂತವಾಗಿದೆ.

ಇಲ್ಲಿ ನಾಲ್ಕು ದೃಷ್ಟಾಂತಗಳನ್ನು ಮಿಥ್ಯಾ ಎಂಬುದಾಗಿ ಹೇಳಿದರು. ಅದೇ ರೀತಿಯಾಗಿ ದುಃಖಾದಿ ಸಂಸಾರವು ಮಿಥ್ಯಾ ಎಂಬುದಾಗಿ ಹೇಳಿದರು. ಇದು ಸಿದ್ಧಾಂತವಿರುದ್ಧ ಎಂಬ ಆಕ್ಷೇಪಕ್ಕೆ ''ಮೃಷಾ'' ಶಬ್ದದ ವ್ಯಾಖ್ಯಾನ ಮಾಡುತ್ತಾ ಪರಿಹರಿಸುತ್ತಿದ್ದಾರೆ -

**ತಾತ್ಪರ್ಯ- ಮೃಷಾ ವೃಥಾ ।**

**ಅಲ್ಪಪ್ರಯೋಜನಂ ಯತ್ತನ್ಮೃಷೇತ್ಯೇವ ತದುಚ್ಯತೇ । ಇತಿ ನಿರ್ಣಯೇ ।**

**ಆತ್ಮನಃ ಸ್ವತ ಏವ ದುಃಖಾದ್ಯಾಃ ಸುಖಾದಿವದಿತಿ ಮಿಥ್ಯಾಬುದ್ಧಿರಿತಿ ವಾ ॥**

ಮೃಷಾ ಎಂಬ ಶಬ್ದಕ್ಕೆ ಮಿಥ್ಯಾ ಎಂಬ ಅರ್ಥ ಅಲ್ಲ. ನಿಷ್ಪ್ರಯೋಜನ ಎಂದು ಅರ್ಥ. ಆದ್ದರಿಂದ ಯಾವ ವಿರೋಧ ಇಲ್ಲ. ದೃಷ್ಟಾಂತದಲ್ಲಿ ಮೃಷಾ ಶಬ್ದದ ಅರ್ಥವಾದ ನಿಷ್ಪ್ರಯೋಜನತ್ವ ಎಂಬ ಅರ್ಥ ಹೊಂದಬಹುದು. ಆದರೆ ದಾರ್ಷ್ಟಾಂತಿಕವಾದ ಸಂಸಾರದಲ್ಲಿ ಸುಖಾದಿರೂಪ ಅಲ್ಪ ಪ್ರಯೋಜನವು ಕೂಡ ಮಿಥ್ಯಾ ಎಂದು ಕರೆಸಿಕೊಳ್ಳಲ್ಪಡುತ್ತದೆ. ಅಥವಾ ಮೃಷಾ ಎನ್ನುವ ಶಬ್ದಕ್ಕೆ ಮಿಥ್ಯಾ ಎಂಬುದಾಗಿಯೂ ಅರ್ಥ. ಆತ್ಮನ ಸುಖಾದಿಗಳು ಹೇಗೆ ಸ್ವಾಭಾವಿಕವೊ ಹಾಗೆ ದುಃಖಾದಿಗಳು ಸ್ವಾಭಾವಿಕ ಎಂಬ ಬುದ್ಧಿಯೂ ಮಿಥ್ಯಾ ಎಂಬುದಾಗಿ ಅರ್ಥ. ಹೊರತು ಸಂಸಾರವು ಮಿಥ್ಯಾ ಎಂಬುದಾಗಿ ಅಲ್ಲ. ಆದ್ದರಿಂದ ಸಿದ್ಧಾಂತ ವಿರೋಧ ಇಲ್ಲ.॥೫೪॥

ಸಂಸಾರವು ಅಸ್ವಾಭಾವಿಕವಾಗಿದೆ ಎಂದಾದರೇ ಸ್ವತ ಏವ ನಿವೃತ್ತವಾಗಬೇಕು. ಅದಕ್ಕಾಗಿ ಜ್ಞಾನಾದಿಗಳನ್ನು ಸಂಪಾದಿಸುವುದು ವ್ಯರ್ಥ ಎಂದಾಗುತ್ತದೆ. ಆದ್ದರಿಂದ ಸಂಸಾರವು ಸ್ವತ ಏವ ನಿವೃತ್ತವಾಗುವುದಿಲ್ಲ ಎಂದು ಹೇಳುತ್ತಿದ್ದಾರೆ-

**ಅರ್ಥೇ ಹ್ಯವಿದ್ಯಮಾನೇಽಪಿ ಸಂಸೃತಿರ್ನ ನಿವರ್ತತೇ ।**
**ಧ್ಯಾಯತೋ ವಿಷಯಾನ್ ಪುಂಸಃ ಸ್ವಪ್ನೇಽನರ್ಥಾಗಮೋ ಯಥಾ ॥೫೫॥**

**ಯಥಾ** ಹೇಗೆ **ವಿಷಯಾನ್ ಧ್ಯಾಯತಃ** ಜಾಗ್ರತ್ಕಾಲದಲ್ಲಿ ವಿಷಯಗಳನ್ನು ನಿರಂತರವಾಗಿ ಚಿಂತಿಸುವ **ಪುಂಸಃ** ಜೀವನಿಗೆ **ಸ್ವಪ್ನೇ** ಸ್ವಪ್ನದಲ್ಲಿ **ಅನರ್ಥಾಗಮಃ** ಅನರ್ಥಗಳ ಪ್ರಾಪ್ತಿಯು **ನ ನಿವರ್ತತೇ** ನಿವೃತ್ತವಾಗುವುದಿಲ್ಲವೋ (**ತಥಾ** ಹಾಗೆ) **ಅರ್ಥೇ** ಯಾವಾಗಲೂ ವಿಷಯಗಳನ್ನು ಧ್ಯಾನ ಮಾಡುವ (**ಪುಂಸಃ** ಜೀವನಿಗೆ) ಆ ವಿಷಯಗಳಿಂದ ಪ್ರಯೋಜನವು **ಅವಿದ್ಯಮಾನೇ ಅಪಿ** ಇಲ್ಲದಿದ್ದರೂ ಕೂಡಾ **ಸಂಸೃತಿಃ** ವಿಷಯಪ್ರವಾಹಗಳ ಉತ್ಪತ್ತಿಯು ನಿರಂತರ ಆಗುತ್ತಿರುವುದರಿಂದ **ಸಂಸೃತಿಃ** ಸಂಸಾರವು **ನ ನಿವರ್ತತೇ** ನಿವೃತ್ತವಾಗುವುದಿಲ್ಲ.

ಈಶ್ವರಪ್ರಸಾದ ಸಂಪಾದನೆಗಾಗಿ, ಭ್ರಮಪರಿಹಾರಕ್ಕಾಗಿಯೂ ವಿಷಯ-ಗಳಲ್ಲಿ ಅತ್ಯಾಸಕ್ತಿಯನ್ನು ಪರಿಹರಿಸಿಕೊಳ್ಳಬೇಕೆಂದು ಹೇಳುತ್ತಿದ್ದಾನೆ-

**ತಸ್ಮಾದುದ್ಧವ ಮಾ ಭುಂಕ್ಷ್ವ ವಿಷಯಾನಸದಿಂದ್ರಿಯೈಃ ।**
**ಆತ್ಮಾಗ್ರಹಣನಿಷ್ಪನ್ನಂ ಪಶ್ಯನ್ ವೈಕಲ್ಪಿಕಂ ಭ್ರಮಮ್ ॥೫೬॥**

**ಹೇ ಉದ್ಧವ** ಹೇ ಉದ್ಧವನೇ **ತಸ್ಮಾತ್** ಸಂಸಾರವು ಸುಲಭವಾಗಿ ನಿವೃತ್ತವಾಗದಿರುವುದರಿಂದ **ಭ್ರಮಂ** ಭ್ರಮವನ್ನು **ಆತ್ಮಾಗ್ರಹಣನಿಷ್ಪನ್ನಂ** ಜೀವಪರಮಾತ್ಮರ ಸ್ವರೂಪದ ಅಜ್ಞಾನದಿಂದ ಉತ್ಪನ್ನವಾದದ್ದನ್ನಾಗಿ **ವೈಕಲ್ಪಿಕಂ** ವಿರುದ್ಧಕಲ್ಪನಾಜನಿತವಾದದ್ದನ್ನಾಗಿ **ಪಶ್ಯನ್** ತಿಳಿದವನಾಗಿ **ಅಸದಿಂದ್ರಿಯೈಃ** ವಿಷಯಗಳತ್ತ ಧಾವಿಸುವ ದುಷ್ಟವಾದ ಇಂದ್ರಿಯಗಳಿಂದ **ವಿಷಯಾನ್** ದುಷ್ಟವಾದ ವಿಷಯಗಳನ್ನು **ಮಾ ಭುಂಕ್ಷ್ವ** ಭೋಗಿಸಬೇಡ. ಹೀಗೆ ವಿರಕ್ತನಾಗಿ ಭಗವಂತನ ಪ್ರಸಾದವನ್ನು ಸಂಪಾದಿಸು ಎಂದು ತಾತ್ಪರ್ಯ.

ಸಾವಿರಾರು ವಿಷಯಗಳಿಂದ ಉಪದ್ರುತನಾಗಿದ್ದರೂ ಅವುಗಳ ಪರಿಹಾರಕ್ಕಾಗಿ ಪ್ರಯತ್ನ ಮಾಡಬಾರದು. ಕಿಂತು ವಿಷಯಗಳಿಂದ ಮನಸ್ಸನ್ನು ನಿಗ್ರಹಿಸಿ, ತಾನು ಸಂಸಾರದಿಂದ ಮುಕ್ತನಾಗಲು ಪ್ರಯತ್ನಿಸಬೇಕು ಎಂದು ಬೋಧಿಸುತ್ತಿದ್ದಾನೆ-

**ಕ್ಷಿಪ್ತೋಽವಮಾನಿತೋಽಸದ್ಭಿಃ ಪ್ರಲಬ್ಧಃ ಶಾಪಿತೋಽಪಿ ವಾ ।**
**ತಾಡಿತಃ ಸನ್ನಿರುದ್ಧೋ ವಾ ವೃತ್ತ್ಯಾ ವಾ ಪರಿಹಾಪಿತಃ ॥೫೭॥**

**ವಿಷ್ಠಿತೋ ಮೂತ್ರಿತೋ ವಾಽಜ್ಞೈರ್ಬಹುಧೈವಂ ಪ್ರಕಂಪಿತಃ ।**
**ಶ್ರೇಯಸ್ಕಾಮಃ ಕೃಚ್ಛ್ರಗತ ಆತ್ಮನಾಽಽತ್ಮಾನಮುದ್ಧರೇತ್ ॥೫೮॥**

**ಅಸದ್ಭಿಃ** ದುಷ್ಟರಾದ ಬಾಂಧವರಿಂದ **ಕ್ಷಿಪ್ತಃ** ಮನೆಯಿಂದ ಬಹಿಷ್ಕೃತನಾದ, **ಅವಮಾನಿತಃ** ಅವಮಾನಕ್ಕೆ ಒಳಗಾದ **ಪ್ರಲಬ್ಧಃ** ಅಯಥಾರ್ಥವಚನಗಳಿಂದ ವಂಚಿತನಾದ **ಶಾಪಿತಃ** ಶಾಪಕ್ಕೆ ಒಳಗಾದ **ವಾ** ಅಥವಾ **ತಾಡಿತಃ** ಹೊಡಿಸಿಕೊಂಡ **ಸನ್ನಿರುದ್ಧಃ** ಬೇಡಿ ಮುಂತಾದವುಗಳಿಂದ ಬದ್ಧನಾದ, **ವಾ** ಅಥವಾ **ವೃತ್ತ್ಯಾ** ಜೀವನೋಪಾಯವಾದ ಧನ-ಧಾನ್ಯಾದಿಗಳಿಂದ **ಪರಿಹಾಪಿತಃ** ರಹಿತನನ್ನಾಗಿ ಮಾಡಲ್ಪಟ್ಟ,

**ವಿಷ್ಠಿತಃ** ಮಲದಿಂದ ಸಂಬದ್ಧನಾದ **ಮೂತ್ರಿತಃ** ಮೂತ್ರದಿಂದ ಸಂಬದ್ಧನಾದ **ಅಜ್ಞೈಃ** ಅಜ್ಞಾನಿಗಳಿಂದ **ಏವಂ** ಈ ರೀತಿಯಾಗಿ **ಬಹುಧಾ** ಅನೇಕವಿಧವಾಗಿ **ಪ್ರಕಂಪಿತಃ** ಭಯಗ್ರಸ್ತನಾಗಿದ್ದರೂ **ಕೃಚ್ಛ್ರಗತಃ** ಈ ವಿಧವಾದ ಕಷ್ಟಗಳಿಂದ ಯುಕ್ತನಾಗಿದ್ದರೂ **ಆತ್ಮನಾ** ಧೈರ್ಯದಿಂದ **ಆತ್ಮಾನಂ** ತನ್ನನ್ನು **ಉದ್ಧರೇತ್** ಕಾಮ-ಕ್ರೋಧಾದಿದೋಷಗಳಿಂದ ಅಥವಾ ಸಂಸಾರದಿಂದ ಮುಕ್ತನಾಗುವಂತೆ ಮಾಡಿಕೊಳ್ಳಬೇಕು.

ಕಾಮ-ಕ್ರೋಧಾದಿಗಳನ್ನು ನಿಯಂತ್ರಿಸಿಕೊಳ್ಳಬೇಕೆಂದು ಭಗವಂತನು ಹೇಳಿದ ಈ ಮಾತನ್ನು ಕೇಳಿ ಆ ವಿಷಯದಲ್ಲಿ ಉದ್ಧವನು ಪ್ರಶ್ನಿಸುತ್ತಿದ್ದಾನೆ-

ಅವಮಾನಾದಿಗಳನ್ನು ಸಹಿಸಿಕೊಳ್ಳುವ ಶಕ್ತಿಯನ್ನು ಸಂಪಾದಿಸಿಕೊಳ್ಳಲು ಉಪಾಯವನ್ನು ಉದ್ಧವನು ಕೇಳುತ್ತಿದ್ದಾನೆ-

**ಉದ್ಧವ ಉವಾಚ-**

**ಯಥೈವಮನುಬುದ್ಧ್ಯೇಯಂ ವದ ನೋ ವದತಾಂ ವರ ।**
**ಸುದುಸ್ಸಹಮಹಂ ಮನ್ಯೇ ಆತ್ಮನ್ಯಸದತಿಕ್ರಮಮ್ ॥೫೯॥**

**ವದತಾಂ ವರ** ಉಪಾಯಗಳನ್ನು ಉಪದೇಶಿಸುವರಲ್ಲಿ ಅಗ್ರಗಣ್ಯನಾದ ಶ್ರೀಕೃಷ್ಣನೇ! **ಆತ್ಮನಿ** ದೇಹಸಂಬದ್ಧನಾದ ಜೀವನಲ್ಲಿ **ಅಸದತಿಕ್ರಮಂ** ದುಷ್ಟರಿಂದ ಪ್ರಾಪ್ತವಾದ ಅವಮಾನಾದಿಗಳನ್ನು **ಸುದುಸ್ಸಹಂ** ಸಹಿಸುವುದು ಅತ್ಯಂತ ಅಸಾಧ್ಯವೆಂದು **ಅಹಂ** ನಾನು **ಮನ್ಯೇ** ತಿಳಿದಿರುವೆನು **ಯಥಾ** ಯಾವ ಉಪಾಯಗಳನ್ನು ಮಾಡುವುದರಿಂದ **ಏವಂ ಅನುಬುದ್ಧ್ಯೇಯಂ** ಅವಮಾನಾದಿಗಳನ್ನು ಸಹಿಸಿಕೊಳ್ಳುವ ಶಕ್ತಿಯನ್ನು ಸಂಪಾದಿಸಬಹುದೋ **ತಥಾ** ಆ ರೀತಿಯಾದ ಉಪಾಯಗಳನ್ನು **ನಃ** ನಮಗೆ **ವದ** ಉಪದೇಶ ಮಾಡು.

ಅವಮಾನಾದಿಗಳಿಂದ ಪ್ರಾಪ್ತವಾದ ಕ್ರೋಧವನ್ನು ನಿಯಂತ್ರಿಸುವುದು ಯಾಕೆ ಅಸಾಧ್ಯ ಎಂದು ಶಂಕಿಸಿ ಹೇಳುತ್ತಿದ್ದಾನೆ-

**ವಿದುಷಾಮಪಿ ವಿಶ್ವಾತ್ಮನ್ ಪ್ರಕೃತಿರ್ಹಿ ಬಲೀಯಸೀ ।**
**ಋತೇ ತ್ವದ್ಧರ್ಮನಿರತಾನ್ ಶಾಂತಾಂಸ್ತೇ ಚರಣಾಲಯಾನ್ ॥೬೦॥**

**ಹೇ ವಿಶ್ವಾತ್ಮನ್** ಸಮಸ್ತವಿಶ್ವಕ್ಕೆ ಸ್ವಾಮಿಯಾದ ಶ್ರೀಕೃಷ್ಣನೇ **ತೇ** ನಿನ್ನ **ಚರಣಾಲಯಾನ್** ಪಾದಗಳನ್ನೇ ಆಶ್ರಯಿಸಿದ **ಶಾಂತಾನ್** ಅಹಂಕಾರಾದಿ ಮನೋದೋಷಾದಿಗಳಿಂದ ರಹಿತರಾದ **ತ್ವದ್ಧರ್ಮನಿರತಾನ್** ಯಜ್ಞ-ಯಾಗಾದಿ, ಶ್ರವಣಾದಿ ನಿವೃತ್ತಧರ್ಮಧರ್ಮಗಳಲ್ಲಿ ನಿರತರಾದ ಯೋಗಿಗಳನ್ನು **ಋತೇ** ಬಿಟ್ಟು **ವಿದುಷಾಮಪಿ** ಇಷ್ಟಾನಿಷ್ಟಧರ್ಮಗಳನ್ನು ತಿಳಿದ ವಿದ್ವಾಂಸರಿಗೂ **ಪ್ರಕೃತಿಃ** ಅಹಂ ಮಮ ಎಂಬ ದೇಹಾಭಿಮಾನಸ್ವಭಾವವು, ಪೂರ್ವಸಂಸ್ಕಾರವು **ಬಲೀಯಸೀ** ಬಲಿಷ್ಠವಾಗಿದೆ. ಅಪರಿಹಾರ್ಯವಾಗಿದೆ.

**॥ ಇತಿ ಶ್ರೀಮದ್ಭಾಗವತೇ ಏಕಾದಶಸ್ಕಂಧೇ ದ್ವಾವಿಂಶೋऽಧ್ಯಾಯಃ ॥**

★★★

## ಅಥ ತ್ರಯೋವಿಂಶೋಽಧ್ಯಾಯಃ

ಶ್ರೀಹರಿಯಲ್ಲಿ ಭಕ್ತಿಯಿಲ್ಲದೇ ಸರ್ವಸನ್ಯಾಸ ದುಃಖಕ್ಕೆ ಕಾರಣ. ಭಕ್ತಿ ಸಹಿತವಾದರೆ ಸುಖಕಾರಣವೆಂದು ಈ ಅಧ್ಯಾಯದಲ್ಲಿ ಸಮರ್ಥಿಸುವರು ಮೊದಲಿಗೆ ಉದ್ಧವನ ಪ್ರಶ್ನೆಗೆ ಏನು ಉತ್ತರವನ್ನಿತ್ತನು ಶ್ರೀಕೃಷ್ಣ ಎಂದು ಹೇಳಿ ರಾಜನ ಸಂಶಯವನ್ನು ಪರಿಹರಿಸುವರು-

**ಶ್ರೀಶುಕ ಉವಾಚ-**

**ಸ ಏವಮಾಂಶಸಿತ ಉದ್ಧವೇನ**
**ಭಾಗವತಮುಖ್ಯೇನ ದಶಾರ್ಹವರ್ಯಃ ।**
**ಸಭಾಜಯನ್ ಭೃತ್ಯವಚೋ ಮುಕುಂದ-**
**ಸ್ತಮಾಬಭಾಷೇ ಶ್ರವಣೀಯವೀರ್ಯಃ ॥೧॥**

**ಭಾಗವತಮುಖ್ಯೇನ** ಭಗವದ್ಭಕ್ತನಾದ **ಉದ್ಧವೇನ** ಉದ್ಧವನಿಂದ **ಏವಂ** ಈ ರೀತಿಯಾಗಿ **ಆಶಂಸಿತಃ** ಪ್ರಶ್ನಿಸಲ್ಪಟ್ಟ **ದಶಾರ್ಹವರ್ಯಃ** ದಶಾರ್ಹ ವಂಶದಲ್ಲಿ ಶ್ರೇಷ್ಠನಾದ **ಶ್ರವಣೀಯವೀರ್ಯಃ** ಕೇಳಲೇಬೇಕಾದ ಕೇಳುವುದರಿಂದ ಸರ್ವಾಭೀಷ್ಟಪ್ರದವಾದ ಸೃಷ್ಟ್ಯಾದಿ ಪರಾಕ್ರಮವುಳ್ಳ **ಸಃ ಮುಕುಂದಃ** ಆ ಶ್ರೀಕೃಷ್ಣನು **ಭೃತ್ಯವಚಃ** ದಾಸನಾದ ಉದ್ಧವನ ಮಾತನ್ನು **ಸಭಾಜಯನ್** ಶ್ಲಾಘಿಸುತ್ತ **ತಂ** ಆ ಉದ್ಧವನನ್ನು ಕುರಿತು **ಆಬಭಾಷೇ** ಮಾತನಾಡಿದನು.

ನೀನು ಹೇಳಿದಂತೆ ನನ್ನ ಭಕ್ತನೇ ದುಷ್ಟರು ಕೊಡುವ ಕಷ್ಟವನ್ನು ಸಹಿಸಲು ಸಮರ್ಥನೆಂದು ಹೇಳುವನು-

**ಶ್ರೀಭಗವಾನುವಾಚ-**

**ಬಾಹ್ಯಾಂತರ್ಭಜನೋ ಹ್ಯತ್ರ ಸಾಧುರ್ವೈ ದುರ್ಜನೇರಿತೈಃ।**
**ದುರುಕ್ತೈರ್ಭಿನ್ನಮಾತ್ಮಾನಂ ಯಃ ಸಮಾಧಾತುಮೀಶ್ವರಃ ॥೨॥**

**ಅತ್ರ** ಈ ಜೀವರಾಶಿಯಲ್ಲಿ **ಯಃ** ಯಾರು **ಬಾಹ್ಯಾಂತರ್ಭಜನಃ** ಬಾಹ್ಯಶತ್ರುಗಳು ಅಂತಃಶತ್ರುಗಳನ್ನು ಶೋಷಿಸುವ **ಸಾಧುಃ ವೈ** ಸಜ್ಜನನೇ **ದುರ್ಜನೇರಿತೈಃ** ದುಷ್ಟರಾಡಿದ **ದುರುಕ್ತೈಃ** ದುಷ್ಟಮಾತುಗಳಿಂದ **ಭಿನ್ನಂ** ವ್ಯಥೆಗೊಂಡ **ಆತ್ಮಾನಂ** ಮನಸ್ಸನ್ನು **ಸಮಾಧಾತುಂ** ಸಾಂತ್ವನಗೊಳಿಸಲು **ಈಶ್ವರಃ** ಸಮರ್ಥನು.

ಅಥವಾ **ಯಃ ದುರುಕ್ತೈಃ ಭಿನ್ನಂ ಆತ್ಮಾನಂ ಸಮಾಧಾತುಂ ಈಶ್ವರಃ ಸಃ ಯತಃ ಬಾಹ್ಯಾಂತರ್ಭಜನಃ ಅತಃ ಸಾಧುಃ** ಹೀಗೂ ಅನ್ವಯ ಮಾಡಿ ಯಾವನು ದುಷ್ಟರ ದುರುಕ್ತಿಗಳಿಂದ ವ್ಯಗ್ರನಾಗದೇ ಸಹಿಸುವನೋ ಅವನೇ ಕಾಮ-ಕ್ರೋಧವನ್ನು ಗೆದ್ದವನಾದ್ದರಿಂದ ನಿಜವಾದ ಸಾಧುವೆಂದರ್ಥ. **ಬಾಹ್ಯಾಂತ-ರ್ಭಜನಃ** ಹೊರಗಿರುವ ಚಲಾಚಲ ಅಧಿಷ್ಠಾನದಲ್ಲಿ ತನ್ನ ಹೃದಯದಲ್ಲಿಯೂ ಇರುವ ಶ್ರೀಹರಿ ಸೇವಾನಿರತನೆಂದರ್ಥ.

ಅಥವಾ **ಬಾಹ್ಯಾಂತರ್ಭಜನಃ** ಹೊರಗಡೆ ದೇಹೇಂದ್ರಿಯಾದಿಗಳನ್ನು ಒಳಗೆ ಮನಃಪ್ರಾಣಗಳನ್ನು ವ್ರತೋಪವಾಸಾದಿಗಳಿಂದಲೂ (ಒಳ್ಳೆ ಶಿಕ್ಷಣ-ದಿಂದ) ಒಳ್ಳೆ ಶಿಕ್ಷೆಯಿಂದ ಹುರಿದು ಹಾಕುವನೆಂದರ್ಥ ತಪಸ್ಸು ಮೊದಲಾದ ಸಾಧನದಿಂದ ಇಂದ್ರಿಯನಿಗ್ರಹವೇ ಅಸದತಿಕ್ರಮಸಹನೋಪಾಯವೆಂದು ಭಾವ.॥೨॥

ದುರುಕ್ತಿಯಿಂದ ಮನೊವ್ಯಥೆ ಆಗುವದು ಏಕೆಂದು ಹೇಳುವನು -

**ನ ತಥಾ ತಪ್ಯತೇ ವಿದ್ಧಃ ಪುಮಾನ್ ಬಾಣೈರ್ಹಿ ಮರ್ಮಗೈಃ ।**
**ಯಥಾ ತುದಂತಿ ಮರ್ಮಸ್ಥಾ ಅಸತಾಂ ಪರುಷೇಷವಃ ॥೩॥**

**ಮರ್ಮಸ್ಥಾಃ** ಮನಸ್ಸಿಗೆ ನೆಟ್ಟ **ಅಸತಾಂ** ದುಷ್ಟರ **ಪರುಷೇಷವಃ** ನಿಷ್ಠುರ ಮಾತುಗಳೆಂಬ ಬಾಣಗಳು **ಯಥಾ ತುದಂತಿ** ಎಷ್ಟು ವ್ಯಥೆಗೊಳಿಸುವವೋ **ತಥಾ** ಅಷ್ಟು **ಮರ್ಮಗೈಃ** ಎದೆ ತಲೆ ಮೊದಲಾದ ಮರ್ಮಸ್ಥಳಗಳಲ್ಲಿರುವ **ಬಾಣೈಃ** ಬಾಣಗಳಿಂದ **ವಿದ್ಧಃ** ಗಾಯಗೊಂಡ **ಪುಮಾನ್** ಮನುಷ್ಯನು **ನ ತಪ್ಯತೇ** ವ್ಯಥೆಪಡುವದಿಲ್ಲ.॥೩॥

ಈ ವಿಷಯದಲ್ಲಿ ಸುಖವಾಗಿ ತಿಳಿಯಲು ಒಂದು ಇತಿಹಾಸವನ್ನು ಶ್ರೀಕೃಷ್ಣ ಹೇಳುವನು-

**ಕಥಯಂತಿ ಮಹಾಪುಣ್ಯಮಿತಿಹಾಸಮಿಹೊದ್ಧವ ।**
**ತಮಹಂ ವರ್ಣಯಿಷ್ಯಾಮಿ ನಿಬೋಧ ಸುಸಮಾಹಿತಃ ॥೪॥**

**ಹೇ ಉದ್ಧವ** ಉದ್ಧವನೇ **ಇಹ** ದುಷ್ಟ ಮಾತುಗಳಿಂದ ವ್ಯಗ್ರಗೊಂಡ ಮನಃ-ಸಮಾಧಾನ ವಿಷಯದಲ್ಲಿ **ಮಹಾಪುಣ್ಯಂ** ಪುಣ್ಯಜನಕವಾದ **ಇತಿಹಾಸಂ**

ಹಿಂದೆ ನಡೆದ ವೃತ್ತಾಂತವನ್ನು **ಕಥಯಂತಿ** ಜ್ಞಾನಿಗಳು, ವೃದ್ಧರು, ಶಿಷ್ಯರನ್ನು ಕುರಿತು ಹೇಳುವರು **ಅಹಂ** ನಾನು **ತಂ** ಆ ವೃತ್ತಾಂತವನ್ನು **ವರ್ಣಯಿಷ್ಯಾಮಿ** ಹೇಳುವೆನು **ಸುಸಮಾಹಿತಃ** ಸಮಾಧಾನ ಮನಸ್ಸಿನಿಂದ **ನಿಬೋಧ** ಕೇಳು.।।೪।।

**ಕೇನಚಿದ್ ಭಿಕ್ಷುಣಾ ಗೀತಂ ಪರಿಭೂತೇನ ದುರ್ಜನೈಃ ।**
**ಸ್ಮರತಾ ಧೃತಿಯುಕ್ತೇನ ವಿಪಾಕಂ ನಿಜಕರ್ಮಣಃ ।।೫।।**

**ದುರ್ಜನೈಃ ಪರಿಭೂತೇನ** ದುಷ್ಟರಿಂದ ಉಪದ್ರವಕ್ಕಿಡಾದ **ಧೃತಿಯುಕ್ತೇನ** ಧೈರ್ಯದಿಂದ ಕೂಡಿದ **ನಿಜಕರ್ಮಣಃ ವಿಪಾಕಂ ಸ್ಮರತಾ** ತಾನು ಮಾಡಿದ ನೀಚ ಕಾರ್ಯ ಫಲವಿದು ಎಂದು ಸ್ಮರಿಸುವ **ಕೇನಚಿದ್ ಭಿಕ್ಷುಣಾ** ಓರ್ವ ಸನ್ಯಾಸಿಯಿಂದ **ಗೀತಂ** ಹೇಳಲ್ಪಟ್ಟ ಇತಿಹಾಸವನ್ನು ಹೇಳುವೆನು ಎಂದು ಅನ್ವಯ.।।೫।।

ಸನ್ಯಾಸಿಯು ಮೊದಲು ಹೇಗಿದ್ದನೆಂದು ಹೇಳುವರು-

**ಅವಂತೀಷು ದ್ವಿಜಃ ಕಶ್ಚಿದಾಸೀದಾಢ್ಯತಮಃ ಶ್ರಿಯಾ ।**
**ವಾರ್ತಾವೃತ್ತಿಃ ಕದರ್ಯಸ್ತು ಕಾಮೀ ಲುಬ್ಧೋऽತಿಕೋಪನಃ ।।೬।।**

**ಅವಂತೀಷು** ಅವಂತೀ ಎಂಬ ದೇಶದಲ್ಲಿ **ಶ್ರಿಯಾ ಆಢ್ಯತಮಃ** ಸಂಪತ್ತಿನಿಂದ ಬಹಳ ಬಲಿಷ್ಠನಾದ (ಮಹಾಧನಿಕನಾದ) **ವಾರ್ತಾವೃತ್ತಿಃ** ಬಡ್ಡಿ ವ್ಯವಹಾರ ಮಾಡುವ **ಕದರ್ಯಃ** ದರಿದ್ರನಾಗದಿದ್ದರೂ ದರಿದ್ರನಂತಿರುವ, ಹಣಕ್ಕಾಗಿ ನೀಚರನ್ನು ಸೇವಿಸುವ **ಕಾಮೀ** ಮಂದಿಯ ಹಣವನ್ನಿಚ್ಛಿಸುವ **ಲುಬ್ಧಃ** ಭೋಗಕ್ಕಾಗಲಿ, ದಾನಕ್ಕಾಗಲಿ, ಹಣ ಖರ್ಚು ಮಾಡದ **ಅತಿಕೋಪನಃ** ಹಣ ಕೇಳುವವರ ಮೇಲೆ ಸಿಟ್ಟು ಮಾಡುವ **ಕಶ್ಚಿತ್ ದ್ವಿಜಃ ಆಸೀತ್** ಒಬ್ಬ ಬ್ರಾಹ್ಮಣನಿದ್ದನು.।।೬।।

**ಜ್ಞಾತಯೋऽತಿಥಯಸ್ತಸ್ಯ ವಾಙ್ಮಾತ್ರೇಣಾಪ್ಯನರ್ಚಿತಾಃ ।**
**ಶೂನ್ಯಾವಸಥ ಆತ್ಮಾಪಿ ಕಾಲೇ ಕಾಮೈರನರ್ಚಿತಃ ।।೭।।**

**ಜ್ಞಾತಯಃ** ಬಂಧುಗಳಾಗಲಿ **ಅತಿಥಯಃ** ಅತಿಥಿಗಳಾಗಲಿ **ತಸ್ಯ** ಅವನಿಂದ **ವಾಙ್ಮಾತ್ರೇಣಾಪಿ** ಮೃದುವಾದ ಮಾತುಗಳಿಂದಲೂ ಸಹ **ಅನರ್ಚಿತಾಃ** ಪೂಜಿಸಲ್ಪಡಲಿಲ್ಲ **ಶೂನ್ಯಾವಸಥಃ** ಅತಿಥಿ ಬಂಧುಗಳಿಂದ ವೈಶ್ವದೇವಾದಿ

ಪಂಚ ಯಜ್ಞಗಳಿಂದ ಮತ್ತು ತನ್ನ ಉಪಭೋಗ ಸಾಧನಗಳಾದ ಧಾನ್ಯ-ಪಶು ಮುಂತಾದವುಗಳಿಂದ ರಹಿತವಾದ ಮನೆಯಲ್ಲಿ ವಾಸಿಸುವ **ಆತ್ಮಾಪಿ** ತಾನೂ ಸಹ **ಕಾಲೇ** ಹಸಿವೆ ನೀರಡಿಕೆಗಳಿಂದಲೂ **ಕಾಮ್ಯೈಃ** ಕಾಮ್ಯವಾದ ಅನ್ನಾದಿಗಳಿಂದಾಗಲಿ ಹೆಂಡತಿ ಮಕ್ಕಳಿಂದಾಗಲಿ **ಅನರ್ಚಿತಃ** ಪೂಜಿಸಲ್ಪಡಲಿಲ್ಲ. ತಾನೂ ತಿನ್ನದೇ ಮಂದಿಗೂ ಕೊಡದೆ ಇದ್ದನೆಂದರ್ಥ.।।೭।।

**ದುಃಶೀಲಸ್ಯ ಕದರ್ಯಸ್ಯ ದ್ರುಹ್ಯತಃ ಪುತ್ರಬಾಂಧವಾನ್ ।**
**ದಾರಾ ದುಹಿತರೊ ಭೃತ್ಯಾ ವಿಷಣ್ಣಾ ನಾಚರನ್ ಪ್ರಿಯಮ್ ।।೮।।**

**ದುಃಶೀಲಸ್ಯ** ದುಷ್ಟಸ್ವಭಾವದ **ಕದರ್ಯಸ್ಯ** ದರಿದ್ರನಂತಿರುವ **ಪುತ್ರಬಾಂಧವಾನ್** ಮಕ್ಕಳು-ಬಂಧುಗಳನ್ನು **ದ್ರುಹ್ಯತಃ** ಕಾಲಕಾಲಕ್ಕೆ ಅನ್ನ ವಸ್ತ್ರಾದಿಗಳನ್ನೀಯದ ಇವನಿಗೆ **ವಿಷಣ್ಣಾಃ** ದುಃಖಿತರಾದ **ದಾರಾಃ** ಹೆಂಡತಿಯು **ದುಹಿತರಃ** ಮಕ್ಕಳು **ಭೃತ್ಯಾಃ** ದಾಸ-ದಾಸಿಯರು **ಪ್ರಿಯಂ** ಹಿತವನ್ನು ಬಯಸಲಿಲ್ಲ.

**ತಸ್ಯೈವಂ ಯಕ್ಷವಿತ್ತಸ್ಯ ಚ್ಯುತಸ್ಯೋಭಯಲೋಕತಃ ।**
**ಧರ್ಮಕಾಮವಿಹೀನಸ್ಯ ಚುಕ್ರುಧುಃ ಪಂಚಭಾಗಿನಃ ।।೯।।**

**ಧರ್ಮಕಾಮವಿಹೀನಸ್ಯ** ದಾನಾದಿಗಳನ್ನು, ಭೋಗವನ್ನು ಮಾಡದಿರುವ ಆದ್ದರಿಂದಲೇ **ಉಭಯಲೋಕತಃ ಚ್ಯುತಸ್ಯ** ಧರ್ಮ ಮಾಡದೇ ಇದ್ದದ್ದರಿಂದ ಪರಲೋಕ ಭೋಗ ಮಾಡದ್ದರಿಂದ **ಇಹ** ಲೋಕದಿಂದಲೂ ವಂಚಿತನಾದ (ರಹಿತನಾದ) **ಏವಂ** ಈ ರೀತಿ **ಯಕ್ಷವಿತ್ತಸ್ಯ** ಯಕ್ಷನಿರುವ ಹಣದಂತೆ ತಾನು ಭೊಗಿಸದ ಪರರಿಗೂ ಬಿಡದ ದ್ರವ್ಯವುಳ್ಳ ಇವನ ಮೇಲೆ **ಪಂಚಭಾಗಿನಃ** ಪಂಚಮಹಾಯಜ್ಞಭೋಕ್ತೃಗಳಾದ ದೇವತೆಗಳು, ಋಷಿಗಳು, ಪಿತೃಗಳು, ಪ್ರಾಣಿಗಳು, ಸಂಬಂಧಿಗಳು ಇವರೆಲ್ಲ (ಐದು ಜನ ಹಣದ ಭಾಗಾರ್ಹರು) **ಚುಕ್ರುಧುಃ** ಕುಪಿತರಾದರು.।।೯।।

**ತದವಧ್ಯಾನವಿಸ್ರಸ್ತಪುಣ್ಯಸ್ಕಂಧಸ್ಯ ಭೂರಿದ ।**
**ಅರ್ಥೋಽಪ್ಯಗಚ್ಛನ್ನಿಧನಂ ಬಹ್ವಾಯಾಸಪರಿಶ್ರಮಾತ್ ।।೧೦।।**

**ಹೇ ಭೂರಿದ** ಬಹುದಾನಶೀಲನಾದ ಉದ್ಧವನೇ! **ತದವಧ್ಯಾನವಿಸ್ರಸ್ತ-ಪುಣ್ಯಸ್ಕಂಧಸ್ಯ ತತ್** ಐದು ಭಾಗಿಗಳಲ್ಲಿರುವ ಶ್ರೀಹರಿಯ **ಅವಧ್ಯಾನೇನ**

ದ್ರೋಹದಿಂದ, ತಿರಸ್ಕಾರದಿಂದ, **ವಿಸ್ರಸ್ತ** ನಷ್ಟವಾದ **ಪುಣ್ಯಸ್ಕಂಧಸ್ಯ** ಧನಸಂಪಾದಕ ಪುಣ್ಯವೆಂಬ ಗಿಡವುಳ್ಳ ಇವನ **ಬಹ್ವಾಯಾಸಪರಿಶ್ರಮಃ** ಬಹು ಕಷ್ಟದಿಂದ ಸಂಪಾದಿತವಾದ **ಅರ್ಥಃ** ಸಂಪತ್ತು **ನಿಧನಂ ಅಗಚ್ಛತ್** ನಾಶವನ್ನು ಹೊಂದಿತು.॥೧೦॥

ನಾಶದ ರೀತಿಯನ್ನೇ ಹೇಳುವರು -

**ಜ್ಞಾತಯೋ ಜಗೃಹುಃ ಕಿಂಚಿತ್ ಕಿಂಚಿದ್ ದಸ್ಯವ ಉದ್ಧವ ।**
**ದೈವತಃ ಕಾಲತಃ ಕಿಂಚಿದ್ ಬ್ರಹ್ಮಬಂಧೋರ್ನೃಪಾರ್ಥಿವಾತ್ ॥೧೧॥**

**ಕಿಂಚಿತ್** ಕೆಲವನ್ನು **ಜ್ಞಾತಯಃ** ಅಣ್ಣತಮ್ಮಂದಿರು ಕಕ್ಕನ ಮಕ್ಕಳು **ಜಗೃಹುಃ** ತಂದೆ ತಾತನ ಹಣವಿದೆಯೆಂದು ಹೇಳಿ ತೆಗೆದುಕೊಂಡರು **ಕಿಂಚಿದ್** ಕೆಲವನ್ನು **ದಸ್ಯವಃ** ಕಳ್ಳರು ಕಿತ್ತುಕೊಂಡರು **ದೈವತಃ** ಇವನಿಂದ ಸಾಲ ತೆಗೆದುಕೊಂಡವರಿಗೆ ದಾರಿದ್ರ್ಯ ಬಂದಿರುವ ಪಾಪದಿಂದ **ಕಾಲತಃ** ಅನಾವೃಷ್ಟಿಮುಂತಾದವುಗಳಿಂದ **ಬ್ರಹ್ಮಬಂಧೋಃ ನೃಪಾರ್ಥಿವಾತ್** ಬ್ರಾಹ್ಮಣಾಧಮನಾದ ಮನುಷ್ಯ ರಾಜನಿಂದ **ನಿಧನಂ ಅಗಚ್ಛತ್** ನಾಶವಾಯಿತು. ಆ ಕಾಲದಲ್ಲಿ ಒಬ್ಬ ಬ್ರಾಹ್ಮಣಾಭಾಸ-ನಾದವನು ಮನುಷ್ಯರಿಗೆ ರಾಜನಾಗಿದ್ದ. ಅವನಿಂದ ಕೆಲವು ನಷ್ಟವಾಯಿತು.

ಯೋಗ್ಯರಿಗೆ ಧನಹಾನಿಯು ವೈರಾಗ್ಯ ಕಾರಣವಾಗುವದೆಂದು ಹೇಳುವರು-

**ಸ ಏವಂ ದ್ರವಿಣೇ ನಷ್ಟೇ ಧರ್ಮಕಾಮವಿವರ್ಜಿತಃ ।**
**ಉಪೇಕ್ಷಿತಶ್ಚ ಸ್ವಜನೈಶ್ಚಿಂತಾಮಾಪ ದುರತ್ಯಯಾಮ್ ॥೧೨॥**

**ಏವಂ** ಈ ರೀತಿಯಾಗಿ **ದ್ರವಿಣೇ ನಷ್ಟೇ** ಹಣವೆಲ್ಲ ಹಾಳಾಗುತ್ತಿರಲು **ಧರ್ಮಕಾಮವಿವರ್ಜಿತಃ** ಪುಣ್ಯಭೋಗ ಎರಡು ಇಲ್ಲದೇ **ಸ್ವಜನೈಃ** ಬಂಧುಗಳಿಂದ **ಉಪೇಕ್ಷಿತಃ** ಉದಾಸೀನ ಮಾಡಲ್ಪಟ್ಟವನಾಗಿ **ಸಃ** ಬ್ರಾಹ್ಮಣನು **ದುರತ್ಯಯಾಂ ಚಿಂತಾಂ ಆಪ** ಅಪರಿಹಾರ್ಯವಾದ ಚಿಂತೆಗೀಡಾದನು.॥೧೨॥

**ತಸ್ಯೈವಂ ಧ್ಯಾಯತೋ ದೀರ್ಘಮಗದಾಯುಸ್ತಪಸ್ವಿನಃ ।**
**ಖಿದ್ಯತೋ ಬಾಷ್ಪಕಂಠಸ್ಯ ನಿರ್ವೇದಃ ಸುಮಹಾನಭೂತ್ ॥೧೩॥**

**ಏವಂ** ಈ ರೀತಿಯಾಗಿ **ದೀರ್ಘಂ ಧ್ಯಾಯತಃ** ಬಹಳವಾಗಿ ಚಿಂತಿಸುವ **ತಪಸ್ವಿನಃ** ಸಂತಾಪಗೊಂಡ (ತಪ ಸಂತಾಪೇ ಎಂದು ಧಾತು) **ಖಿದ್ಯತಃ** ದುಃಖಿಸುವ **ಬಾಷ್ಪಕಂಠಸ್ಯ** ಕಣ್ಣೀರಿನಿಂದ ಗದ್ಗದಿತನಾದ ಇವನಿಗೆ **ಆಯುಃ ಅಗಾತ್** ಬಹು ದಿನಗಳು ಕಳೆದವು ನಂತರ **ಸುಮಹಾನ್ ನಿರ್ವೇದಃ ಅಭೂತ್** ಅತಿಶಯವಾದ ವೈರಾಗ್ಯ ಉಂಟಾಯಿತು.।।೧೩।।

**ಸ ಚಾಹೇದಮಹೋ ಕಷ್ಟಂ ವೃಥಾಽಽತ್ಮಾ ಮೇ ಸುತಾಪಿತಃ ।**
**ನ ಧರ್ಮಾಯ ನ ಕಾಮಾಯ ಯಸ್ಯಾರ್ಥಾಯಾಸ ಈದೃಶಃ ।।೧೪।।**

**ಸಃ** ಆ ಬ್ರಾಹ್ಮಣನು **ಇದಂ** ಮುಂದೆ ಹೇಳುವ ಮಾತನ್ನು **ಆಹ** ಹೇಳಿದನು. **ಅಹೋ** ಕಷ್ಟ ಅತಿದುಃಖವು **ಮೇ ಆತ್ಮಾ** ನನ್ನ ದೇಹ, ಮನಸ್ಸು, ಜೀವ, **ವೃಥಾ** ವ್ಯರ್ಥವಾಗಿ **ಸುತಾಪಿತಃ** ದುಃಖಪಡಿಸಲ್ಪಟ್ಟಿತು **ಯಸ್ಯ** ಯಾವ ಲೋಭಿಗೆ ಅರ್ಥಾಸಕ್ತಿಯುಂಟೋ **ಸಃ** ಅವನು **ಧರ್ಮಾಯ** ಪುಣ್ಯಸಾಧನೆಗೆ ಆಗಲಿ **ಕಾಮಾಯ** ಕುಟುಂಬದ ಜೊತೆಗೆ ಭೊಗಿಸಲಾಗಲಿ ನ ಪ್ರವರ್ತಿಸುವದಿಲ್ಲ **ಈದೃಶಃ ಅರ್ಥಾಯಾಸಃ** ಅವನಿಗೆ ದ್ರವ್ಯಾರ್ಜನೆ ಕಷ್ಟವಷ್ಟೇ ಬೇರೆ ಪ್ರಯೋಜನವಿಲ್ಲ.।।೧೪।।

**ಪ್ರಾಯೇಣಾರ್ಥಾಃ ಕದರ್ಯಾಣಾಂ ನ ಸುಖಾಯ ಕದಾಚನ ।**
**ಇಹ ಚಾತ್ಮೋಪತಾಪಾಯ ಮೃತಸ್ಯ ನರಕಾಯ ಚ ।।೧೫।।**

**ಕದರ್ಯಾಣಾಂ** ದರಿದ್ರರಂತೆ ಇರಲು ಆಸಕ್ತಿಯುಳ್ಳವರಿಗೆ **ಅರ್ಥಃ** ದ್ರವ್ಯವು **ಕದಾಚನ** ಯಾವಾಗಲೂ **ನ ಸುಖಾಯ** ಐಹಿಕ ಆಮುಷ್ಮಿಕ ಸುಖಕ್ಕೆ ಕಾರಣವಾಗುವುದಿಲ್ಲ ಅಷ್ಟೇ ಅಲ್ಲ **ಇಹ** ಈ ಲೋಕದಲ್ಲಿ **ಆತ್ಮೋಪತಾಪಾಯ** ತನ್ನ ದುಃಖಕ್ಕೂ ಕಾರಣವಾಗಿದೆ ಮತ್ತು **ಮೃತಸ್ಯ** ಮೃತನಾದವನಿಗೆ **ನರಕಾಯ** ನರಕಕ್ಕೆ ಕಾರಣವು।।೧೫।।

ಈ ಲೋಭವು ಎಲ್ಲ ಗುಣಗಳನ್ನು ಹಾಳು ಮಾಡುವದು ಎಂದು ಹೇಳುವರು-

**ಯಶೋ ಯಶಸ್ವಿನಾಂ ಶುಭ್ರಂ ಶ್ಲಾಘ್ಯಾ ಯೇ ಗುಣಿನಾಂ ಗುಣಾಃ ।**
**ಲೋಭಃ ಸ್ವಲ್ಪೋಽಪಿ ತಾನ್ ಹಂತಿ ಶ್ವಿತ್ರೋ ರೂಪಮಿವೇಪ್ಸಿತಮ್ ।।೧೬।।**

**ಈಪ್ಸಿತಂ** ಇಷ್ಟವಾದ **ರೂಪಂ** ಸೌಂದರ್ಯವನ್ನು **ಶ್ವಿತ್ರಂ ಇವ** ಶ್ವೇತಕುಷ್ಠವು ಹಾಳು ಮಾಡುವಂತೆ **ಸ್ವಲ್ಪಃ ಅಪಿ ಲೋಭಃ** ಅಲ್ಪವಾದ ಜಿಪುಣತನವು **ಯಶಸ್ವಿನಾಂ** ಕೀರ್ತಿಶಾಲಿಗಳಾದವರ **ಶುಭ್ರಂ** ಕಳಂಕ ರಹಿತವಾದ **ಯಶಃ** ಕೀರ್ತಿಯನ್ನು **ಯೇ** ಯಾವ **ಶ್ಲಾಘ್ಯಾಃ** ಸ್ತುತಿಸಲು ಯೋಗ್ಯವಾದ **ಗುಣಿನಾಂ** ಗುಣವಂತರ **ಗುಣಾಃ** ಗುಣಗಳೇನುಂಟೋ **ತಾನ್** ಅವುಗಳನ್ನು **ಹಂತಿ** ನಾಶ ಮಾಡುವದು.॥೧೬॥

ಆತ್ಮೋಪತಾಪಾಯ ಎಂದದ್ದನ್ನು ವಿವರಿಸುವರು -

**ಅರ್ಥಸ್ಯ ಸಾಧನೇ ಸಿದ್ಧ ಉತ್ಕರ್ಷೇ ರಕ್ಷಣೇ ವ್ಯಯೇ ।**
**ನಾಶೋಪಭೋಗ ಆಯಾಸಸ್ತ್ರಾಸಶ್ಚಿಂತಾ ಭ್ರಮೋ ನೃಣಾಮ್॥೧೭॥**

**ಅರ್ಥಸ್ಯ ಸಾಧನೇ** ಹಣ ಸಂಪಾದಿಸಲು **ಆಯಾಸಃ** ಕಷ್ಟವು **ಸಿದ್ಧೇ ಅರ್ಥೇ** ಹಣ ಸಂಪಾದನೆ ಆದ ಮೇಲೆ **ಉತ್ಕರ್ಷೇ** ಅದನ್ನು ಬೆಳೆಸಲು **ಚಿಂತಾ** ಚಿಂತೆಯು **ರಕ್ಷಣೇ** ಉಳಿಸಿಕೊಳ್ಳಲು **ತ್ರಾಸಃ** ಕಷ್ಟವು **ನಾಶೋಪಭೋಗಯೋಃ ವ್ಯಯೇ** ಖರ್ಚಾಗದಂತೆ ನಾಶವಾದಾಗ ಭೋಗ ಮಾಡಿದಾಗ **ಭ್ರಮಃ** ಧನಪಿಶಾಚ ಆವೇಶದಿಂದ ಬುದ್ಧಿಭ್ರಂಶವು **ನೃಣಾಂ** ಜನರಿಗೆ ಆಗುವುದು.

ಹಣ ಸಂಪಾದಿಸಲು ಆಯಾಸ, ಸಂಪಾದಿಸಿದ ಮೇಲೆ ತ್ರಾಸ, ಕಳ್ಳರ ಭಯ, ಬಹಳವಾದಾಗ ರಕ್ಷಿಸುವ ಚಿಂತೆ, ರಕ್ಷಣ ಮಾಡುವಾಗ ವಿಶ್ವಸನೀಯರಲ್ಲಿ ಅವಿಶ್ವಾಸ, ಭೋಗಮಾಡಿದರೆ ನಾಶವಾಗುವದೆಂದು ಚಿಂತೆ ಹೀಗೆ ಎಲ್ಲ ರೀತಿ ತಾಪವೇ.

**ಸ್ತೇಯಂ ಹಿಂಸಾಽನೃತಂ ದಂಭಃ ಕಾಮಃ ಕ್ರೋಧಃ ಸ್ಮಯೋ ಮದಃ ।**
**ಭೇದೋ ವೈರಮವಿಶ್ವಾಸಃ ಸಂಸ್ಪರ್ಧಾ ವ್ಯಸನಾನಿ ಚ ॥೧೮॥**

**ಏತೇ ತ್ರಯೋದಶಾನರ್ಥಾ ಹ್ಯರ್ಥಮೂಲಾ ಮತಾ ನೃಣಾಮ್ ।**
**ತಸ್ಮಾದನರ್ಥಮರ್ಥಾಖ್ಯಾಂ ಶ್ರೇಯೋಽರ್ಥೀ ದೂರತಸ್ತ್ಯಜೇತ್॥೧೯॥**

**ಸ್ತೇಯಂ** ಕಳ್ಳತನ **ಹಿಂಸಾ** ಹಿಂಸಿಸುವುದು **ಅನೃತಂ** ಸುಳ್ಳು **ದಂಭಃ** ವಂಚನೆ **ಕಾಮಃ** ವಿಷಯಾಭಿಲಾಷೆ **ಕ್ರೋಧಃ** ಸಿಟ್ಟು **ಸ್ಮಯಃ** ಅಹಂಕಾರ **ಮದಃ** ದರ್ಪ ಭೇದ ಒಡಕು (ವಿರೋಧ) **ವೈರಂ** ಶತ್ರುತ್ವವು **ಅವಿಶ್ವಾಸಃ** ಅಪನಂಬಿಕೆ

**ಸಂಸ್ಪರ್ಧಾ** ಪೈಪೋಟಿಯು **ವ್ಯಸನಾನಿ ಚ** ರಾಜಾದಿಗಳಿಂದ ವಿವಿಧ ಕಷ್ಟಗಳು (ದುಶ್ಚಟಗಳು)

**ಏತೇ** ಈ ಮೇಲೆ ಹೇಳಿದ **ಪಂಚದಶ** ಹದಿನೈದು **ಅರ್ಥಮೂಲಾಃ** ದ್ರವ್ಯ ನಿಮಿತ್ತದಿಂದ ಆಗುವ **ಅನರ್ಥಾಃ** ಕಷ್ಟಗಳು **ಮತಾಃ** ಸಿದ್ಧವಾಗಿವೆ. **ನೃಣಾಂ** ಜನರಿಗೆ **ತಸ್ಮಾತ್** ಆದ್ದರಿಂದ **ಶ್ರೇಯೋಽರ್ಥಿ** ಶ್ರೇಯಸ್ಸನ್ನು ಇಚ್ಛಿಸುವವನು **ಅರ್ಥಾಖ್ಯಂ** ದ್ರವ್ಯವೆಂಬ **ಅನರ್ಥಂ** ಅನರ್ಥಸಾಧನವನ್ನು **ದೂರತಃ ತ್ಯಜೇತ್** ದೂರದಿಂದಲೇ ಬಿಟ್ಟು ಬಿಡಬೇಕು.॥೧೮ ೧೯॥

ವಿರೋಧವಾಗುವದನ್ನು ತಿಳಿಸುವರು -

**ಭಿದ್ಯಂತೇ ಭ್ರಾತರೋ ದಾರಾಃ ಪಿತರಃ ಸುಹೃದಸ್ತಥಾ ।**
**ಏಕಯಾಽರ್ಥೇಚ್ಛಯಾ ಸದ್ಯಃ ಸರ್ವೇ ಚಾಪ್ಯರಯಃ ಕೃತಾಃ ॥೨೦॥**

**ಭ್ರಾತರಃ** ಅಣ್ಣ-ತಮ್ಮಂದಿರು **ದಾರಾಃ** ಹೆಂಡತಿ **ಪಿತರಃ** ತಂದೆ-ತಾಯಿಗಳು **ತಥಾ** ಅದೇ ರೀತಿಯಾಗಿ **ಸುಹೃದಃ** ಗೆಳೆಯರು ಎಲ್ಲರೂ **ಭಿದ್ಯಂತೇ** ವಿರುದ್ಧಾಭಿಪ್ರಾಯ ಉಳ್ಳವರಾಗುತ್ತಾರೆ ದೂರವಾಗುತ್ತಾರೆ ಅಷ್ಟೇ ಅಲ್ಲ **ಏಕಯಾ ಅರ್ಥೇಚ್ಛಯಾ** ಒಂದು ಹಣದಾಸೆಗಾಗಿ **ಸರ್ವೇ ಚ** ಎಲ್ಲರು **ಸದ್ಯಃ** ತಕ್ಷಣದಲ್ಲಿಯೇ **ಅರಯಃ ಕೃತಾಃ** ಶತ್ರುಗಳಾಗಿ ಮಾಡಲ್ಪಟ್ಟರು॥೨೦॥

**ಅರ್ಥೇನಾಲ್ಪೀಯಸಾ ಹ್ಯೇತೇ ಸಂರಬ್ಧಾ ದೀಪ್ತಮನ್ಯವಃ ।**
**ತ್ಯಜಂತ್ಯಸೂನ್ ವೃಥಾ ಘ್ನಂತಿ ಸಹಸೋತ್ಸೃಜ್ಯ ಸೌಹೃದಮ್ ॥೨೧॥**

**ಏತೇ** ಜ್ಞಾತಿಗಳೇ ಮೊದಲಾದವರು **ಅಲ್ಪೀಯಸಾ ಅರ್ಥೇನ** ಸ್ವಲ್ಪ ಹಣಕ್ಕಾಗಿ **ಸಂರಬ್ಧಾಃ** ಅಂತಃ ಕೋಪವುಳ್ಳವರಾಗಿ **ದೀಪ್ತಮನ್ಯವಃ** ನಿಷ್ಠುರ ಮಾತುಗಳಿಂದ ಅತಿಯಾಗಿ ಬೆಳೆದ ಸಿಟ್ಟುಳ್ಳವರಾಗಿ **ಸಹಸಾ** ಕರ್ತವ್ಯ-ಅಕರ್ತವ್ಯವನ್ನು ಆಲೋಚಿಸದೇ **ಸೌಹೃದಂ ಉತ್ಸೃಜ್ಯ** ಸ್ನೇಹವನ್ನು ಬಿಟ್ಟು **ವೃಥಾ** ಪ್ರಯೋಜನವಿಲ್ಲದೇ **ಸ್ಪೃಧಾ** ಸ್ಪರ್ಧೆಯಿಂದ **ಅಸೂನ್ ತ್ಯಜಂತಿ** ಪ್ರಾಣವನ್ನೇ ಬಿಡುವರು **ಘ್ನಂತಿ ಹಿ** ಪ್ರಾಣವನ್ನೂ ತೆಗೆಯುವರು.॥೨೧॥

**ಲಬ್ಧ್ವಾ ಜನ್ಮಾಮರೈಃ ಪ್ರಾರ್ಥ್ಯಂ ಮಾನುಷ್ಯಂ ತದ್ ದ್ವಿಜಾಗ್ರ್ಯತಾಮ್ ।**
**ತದನಾದೃತ್ಯ ಯೇ ಸರ್ವಂ ಘ್ನಂತಿ ಯಾಂತ್ಯಶುಭಾಂ ಗತಿಮ್ ॥೨೨॥**

**ಅಮರ್ತ್ಯೈಃ** ದೇವತೆಗಳಿಂದಲೂ **ಪ್ರಾರ್ಥ್ಯಂ** ಅಪೇಕ್ಷಣೀಯವಾದ **ಮಾನುಷ್ಯಂ ಜನ್ಮ** ಮನುಷ್ಯ ಜನ್ಮವನ್ನು **ಲಬ್ಧ್ವಾ** ಹೊಂದಿ **ತತ್** ಅದರಲ್ಲಿಯೂ **ದ್ವಿಜಾಗ್ರ್ಯತಾಂ** ಶ್ರೇಷ್ಠ ಬ್ರಾಹ್ಮಣ್ಯವನ್ನು **ಲಬ್ಧ್ವಾ** ಪಡೆದೂ ಸಹ **ತತ್** ಆ ಬ್ರಾಹ್ಮಣ್ಯವನ್ನು ಕಡೆಗಣಿಸಿ **ಯೇ** ಯಾರು **ಸರ್ವಂ ಘ್ನಂತಿ** ಹಣ ಸಂಪಾದನೆಗಾಗಿ ಎಲ್ಲ ಪುಣ್ಯಗಳನ್ನು ಹಾಳು ಮಾಡುವರೋ **ತೇ** ಅವರು **ಅಶುಭಾಂ ಗತಿಂ** ನರಕಾದಿಗಳನ್ನು **ಯಾಂತಿ** ಹೊಂದುವರು. **ಜನ್ಮಾಂತರೈಃ** ಎಂಬ ಪಾಠದಲ್ಲಿ ದೇವಾದಿ ಜನ್ಮ ವಿಶೇಷವುಳ್ಳವರಿಂದ ಎಂದರ್ಥ (ಸ್ವರ್ಗಸ್ಥಾಃ ಮಾನುಷೋದ್ಭವಂ ವಾಂಛಂತ್ಯಾತ್ಮವಿಮೊಕ್ಷಾಯ ಉದ್ರೇಕಾರ್ಥೇಽಧಿಕಾರಿಣಃ) ಎಂದು ಪಂಚಮ ತಾತ್ಪರ್ಯದಲ್ಲಿದೆ.।।೨೨।।

**ಸ್ವರ್ಗಾಪವರ್ಗಯೋರ್ದ್ವಾರಂ ಪ್ರಾಪ್ಯ ಲೋಕಮಿಮಂ ಪುಮಾನ್ ।**
**ದ್ರವಿಣೇ ಕೋಽನುಷಜ್ಜೇತ ಮರ್ತ್ಯೋಽನರ್ಥಸ್ಯ ಧಾಮನಿ ।।೨೩।।**

**ಪುಮಾನ್** ಮನುಷ್ಯನು **ಸ್ವರ್ಗಾಪವರ್ಗಯೋಃ** ಸ್ವರ್ಗ ಮತ್ತು ಮೋಕ್ಷಕ್ಕೆ **ದ್ವಾರಂ** ಸಾಧನವಾದ **ಇಮಂ ಲೋಕಂ** ಈ ಮನುಷ್ಯ ದೇಹವನ್ನು **ಪ್ರಾಪ್ಯ** ಹೊಂದಿ **ಅನರ್ಥಸ್ಯ ಧಾಮನಿ** ಅನರ್ಥಕ್ಕೆ ಆಶ್ರಯವಾದ **ದ್ರವಿಣೇ** ಹಣದಲ್ಲಿ **ಕಃ ಮರ್ತ್ಯಃ** ಯಾವ ಮನುಷ್ಯನು **ಅನುಷಜ್ಜೇತ್** ಆಸಕ್ತನಾದಾನು ಆಗಲಾರನೆಂದರ್ಥ.

**ದೇವರ್ಷಿಪಿತೃಭೂತಾನಿ ಜ್ಞಾತೀನನ್ಯಾಂಶ್ಚ ಭಾಗಿನಃ ।**
**ಅಸಂವಿಭಜ್ಯ ಚಾತ್ಮಾನಂ ಯಕ್ಷವಿತ್ತಃ ಪತತ್ಯಧಃ ।।೨೪।।**

**ದೇವರ್ಷಿಪಿತೃಭೂತಾನಿ** ದೇವತೆಗಳು, ಋಷಿಗಳು, ಪಿತೃಗಳು, **ಭೂತಾನಿ** ಪ್ರಾಣಿಗಳನ್ನು **ಜ್ಞಾತೀನ್** ಬಂಧುಗಳನ್ನು **ಅನ್ಯಾನ್ ಭಾಗಿನಃ** ಇನ್ನುಳಿದ ಹೆಂಡತಿ ಮಕ್ಕಳು ಸೇವಕರು ಮುಂತಾದ ಭಾಗ ಕೊಡಲು ಯೊಗ್ಯರಾದವರಿಗೆ **ಆತ್ಮಾನಂ ಚ** ತನಗೂ **ಅಸಂವಿಭಜ್ಯ** ಭಾಗಗಳನ್ನು ಕೊಡದೇ **ಯಕ್ಷವಿತ್ತಃ** ಪಿಶಾಚಿಯ ಧನದಂತಿರುವ ಧನವುಳ್ಳವನು **ಆತ್ಮಾನಂ** ತನ್ನನ್ನು **ಅಧಃ ಪತತಿ** ಅಧೋಗತಿಗೆ ಬೀಳಿಸುವನು.

''**ತುಷ್ಟೋಽರ್ಥೇನ ಗುರುರ್ಯಸ್ಮಾತ್ ಕೈವಲ್ಯಂ ದಾತುಮಪ್ಯಲಮ್**'' ಎಂದಿರುದರಿಂದ ಹಣವು ಅನರ್ಥಸಾಧವವೇಕೆ? ಎಂದರೆ ನಿಜ ಹಣ,

ವಯಸ್ಸು, ಬಲ ಇವುಗಳಿಂದ ಕುಶಲವನ್ನು ಸಾಧಿಸಬಹುದು. ಯೌವನದಲ್ಲೇ ಸ್ವಸ್ವಧರ್ಮಗಳನ್ನಾಚರಿಸಬೇಕು, ಅರ್ಥಾಸಕ್ತಿಯಿಂದ ಕಾಲ ಕಳೆಯಬಾರದು, ಕಳೆದರೆ ಅನರ್ಥವಾಗುವುದು ಎಂದು ಹೇಳುವರು-

**ವ್ಯರ್ಥಯಾऽರ್ಥೇಹಯಾ ವಿತ್ತಂ ಪ್ರಮತ್ತಸ್ಯ ವಯೋ ಬಲಮ್ ।**
**ಕುಶಲಾಯ ನ ಸಿದ್ಧ್ಯಂತಿ ಜರಠಃ ಕಿನ್ನು ಸಾಧಯೇತ್ ॥೨೫॥**

**ವ್ಯರ್ಥಯಾ** ದಾನ-ಧರ್ಮ-ಜ್ಞಾನಾದಿಗಳಿಗೆ ಉಪಯೋಗವಾಗದ **ಅರ್ಥೇಹಯಾ** ಧನಾಕಾಂಕ್ಷೆಯಿಂದ **ಪ್ರಮತ್ತಸ್ಯ** ಧನಮದದಿಂದ ಉನ್ಮತ್ತನಾದ ವನಿಗೆ **ವಿತ್ತಂ** ಧನವು **ವಯಃ** ಆಯುಷ್ಯವು **ಬಲಂ** ದೇಹಬಲವು ಕುಶಲಾಯ **ನ ಸಿದ್ಧ್ಯಂತಿ** ಜ್ಞಾನ-ಭಕ್ತಿಗಳಿಗೆ ಸಾಧನಗಳಾಗಲಾರವು **ಜರಠಃ** ಮುಪ್ಪನ್ನಪ್ಪಿದವನು **ಕಿಂ ನು ಸಾಧಯೇತ್** ಏನು ತಾನೇ ಸಾಧಿಸಿಯಾನು? ಏನನ್ನೂ ಸಾಧಿಸಲಾರ. ಕಾರಣ ದೇಹಬಲವಿರುವಾಗ ಸಾಧನೆ ಮಾಡಬೇಕು.॥೨೫॥

**ತಸ್ಮಾತ್ ಸಂಕ್ಲಿಶ್ಯತೇಽವಿದ್ವಾನ್ ವ್ಯರ್ಥಯಾऽರ್ಥೇಹಯಾऽಸಕೃತ್ ।**
**ಕಸ್ಯಚಿನ್ಮಾಯಯಾ ನೂನಂ ಲೋಕೋಽಯಂ ಸುವಿಮೋಹಿತಃ ॥೨೬॥**

**ಅವಿದ್ವಾನ್** ತನ್ನ ಹಿತವನ್ನರಿಯದವನು **ಕಸ್ಯಚಿನ್ಮಾಯಯಾ** ಲೋಕ-ವಿಲಕ್ಷಣನಾದ ಆನಂದರೂಪನಾದ ಶ್ರೀಹರಿಯ ಸಾಮರ್ಥ್ಯದಿಂದಲೇ **ವ್ಯರ್ಥಯಾ** ಪ್ರಯೋಜನವಿಲ್ಲದ **ಅರ್ಥೇಹಯಾ** ಹಣದ ಆಸೆಯಿಂದ **ಅಸಕೃತ್** ಅನೇಕ ರೀತಿಯಿಂದ **ಸಂಕ್ಲಿಶ್ಯತೇ** ಕಷ್ಟಪಡುವನು **ಅಯಂ ಲೋಕಃ** ಈ ಜನರು **ನೂನಂ ಸುವಿಮೋಹಿತಃ** ವಿಷಯಸುಖದಲ್ಲಿ ಮೋಹಿತನು.

ಈ ರೀತಿಯಾಗಿ ವಿಚಾರ ಮಾಡಿದವನಿಗೆ ಪರಮಾತ್ಮನ ಪ್ರಸಾದದಿಂದ ಉಂಟಾದ ವೈರಾಗ್ಯವನ್ನು ಹೇಳುವರು-

**ಕಿಂ ಧನೈರ್ಧನದೈರ್ವಾ ಕಿಂ ಕಾಮೈರ್ವಾ ಕಾಮದೈರುತ ।**
**ಮೃತ್ಯುನಾ ಗ್ರಸ್ಯಮಾನಸ್ಯ ಕರ್ಮಭಿರ್ವೇತಿ ಜನ್ಮಭಿಃ ॥೨೭॥**

**ಧನೈಃ** ದ್ರವ್ಯದಿಂದಾಗಲಿ **ಧನದೈಃ** ಧನವನ್ನು ಕೊಡುವವರಾದ **ಕಾಮದೈಃ** ಸುಖವನ್ನು ಕೊಡುವ **ಕಾಮೈಃ** ವಿಷಯಗಳಿಂದ ಮನುಷ್ಯರಿಂದ **ಕಿಂ** ಏನು

ಪ್ರಯೋಜನ? **ಜನ್ಮದೈಃ ಕರ್ಮಭಿಃ** ಜನ್ಮ ಕೊಡುವ ಕರ್ಮಗಳಿಂದಾಗಲಿ **ಕಿಂ** ಏನು ಪ್ರಯೋಜನ? **ಮೃತ್ಯುನಾ ಗ್ರಸ್ಯಮಾನಸ್ಯ** ಪ್ರತಿಕ್ಷಣದಲ್ಲಿಯೂ ಮರಣವನ್ನು ಸಮೀಪಿಸುವವನಿಗೆ **ಕರ್ಮಭಿಃ** ಯಜ್ಞಾದಿಗಳಿಂದ **ಜನ್ಮಭಿಃ** ಬ್ರಾಹ್ಮಣಾದಿ ಜನ್ಮಗಳಿಂದ **ಕಿಂ** ಏನು ಪ್ರಯೋಜನ? (ತನ್ನ ಬ್ರಾಹ್ಮಣ್ಯ ವ್ಯರ್ಥವಾದದ್ದನ್ನು ಕಂಡು ಹೇಳಿದ್ದು)।।೨೭।।

ಎಲ್ಲದಕ್ಕೂ ಶ್ರೀಹರಿಯ ಅನುಗ್ರಹವೇ ಕಾರಣವೆಂಬುದು ಅನುಭವಸಿದ್ಧ ಎಂದು ಹೇಳುವರು-

**ನೂನಂ ಮೇ ಭಗವಾಂಸ್ತುಷ್ಟಃ ಸರ್ವದೇವಮಯೋ ಯತಃ ।**
**ಯೇನ ನೀತೋ ದಶಾಮೇತಾಂ ನಿರ್ವೇದಶ್ಚಾತ್ಮನಃ ಪ್ಲವಃ ।।೨೮।।**

**ಯೇನ** ಯಾವ ಕಾರಣದಿಂದ **ಆತ್ಮನಃ** ಜೀವನಿಗೆ **ನಿರ್ವೇದಃ** ವೈರಾಗ್ಯವು **ಪ್ಲವಃ** ಸಂಸಾರಸಮುದ್ರವನ್ನು ದಾಟಿಸುವ ನೌಕೆಯೋ ಆ ಕಾರಣ **ಯೇನ ಏತಾಂ ದಶಾಂ ನೀತಃ** ಯಾವ ಕಾರಣ ವಿರಕ್ತಾವಸ್ಥೆಯನ್ನು ಹೊಂದಿಸಲ್ಪಟ್ಟಿರು-ವೆನೋ ಅದರಿಂದ **ನೂನಂ** ನಿಶ್ಚಯವಾಗಿ **ಸರ್ವದೇವಮಯಃ** ಎಲ್ಲ ದೇವತೆಗಳಿಗೆ ಪ್ರಧಾನನಾದ ಭಗವಾನ್ ಶ್ರೀಹರಿಯು **ಮೇ** ನನ್ನ ಮೇಲೆ **ಸಂತುಷ್ಟಃ** ಪ್ರಸನ್ನನಾಗಿದ್ದಾನೆ.।।೨೮।।

ವೈರಾಗ್ಯದ ಲಕ್ಷಣ ಸನ್ಯಾಸ, ಆದ್ದರಿಂದ ಅದರ ನಿಶ್ಚಯ ಹೇಳುವರು-

**ಸೋಽಹಂ ಕಾಲಾವಶೇಷೇಣ ಶೋಷಯಿಷ್ಯೇಽಂಗಮಾತ್ಮನಃ ।**
**ಅಪ್ರಮತ್ತೋಽಖಿಲಾರ್ಥೇಷು ಯದಿ ಸ್ಯಾಂ ಸಿದ್ಧ ಆತ್ಮನಿ ।।೨೯।।**

**ಯದಿ** ಯಾವ ಕಾರಣದಿಂದ **ಆತ್ಮನಿ** ಭಗವದ್ವಿಷಯದಲ್ಲಿ **ಸಿದ್ಧಃ ಸ್ಯಾಂ** ಜ್ಞಾನಿಯಾಗುವೆನೋ ಆದ ಕಾರಣ **ಅಖಿಲಾರ್ಥೇಷು** ಎಲ್ಲ ಪದಾರ್ಥಗಳಲ್ಲಿ **ಅಪ್ರಮತ್ತಃ** ಆಸಕ್ತನಾಗದೇ **ಕಾಲಾವಶೇಷೇಣ** ಉಳಿದ ಆಯುಷ್ಯದಿಂದ **ಆತ್ಮನಃ** ನನ್ನ **ಅಂಗಂ** ದೇಹವನ್ನು **ಶೋಷಯಿಷ್ಯಾಮಿ** ಇಂದ್ರಿಯನಿಗ್ರಹ ಮಾಡುವೆನೆಂದರ್ಥ **ಸಃ ಅಹಂ** ಆ ನಾನು ಒಂದು ವೇಳೆ ಅಂಗಶೋಷಣೆಯಿಂದ ಜ್ಞಾನ ಬರುವದಾದರೆ ಅಂಗಶೋಷಣೆ ಮಾಡುವೆನು. ಅಥವಾ ನಾನು ಭಗವದ್ಭಕ್ತನಾಗಿದ್ದರೆ ಅಂಗಶೋಷಣೆ ಮಾಡುತ್ತೇನೆ ಇಲ್ಲವಾದರೆ ಭಕ್ತನೇ ಅಲ್ಲ ಎಂದು ಶಪಥ ಪೂರ್ವಕ ಹೇಳಿದ್ದು.

ಇದು ನನ್ನ ಜಂಭದ ಮಾತಲ್ಲ ಎಂದು ಹೇಳುವನು -

**ತತ್ರ ಮಾಮನುಮೋದೇರನ್ ದೇವಾಸ್ತ್ರಿಭುವನೇಶ್ವರಾಃ ।**
**ಮೂಹುರ್ತೇನ ಬ್ರಹ್ಮಲೋಕಂ ಖಟ್ವಾಂಗಃ ಸಮಸಾಧಯತ್ ॥೩೦॥**

**ತ್ರಿಭುವನೇಶ್ವರಾಃ** ಮೂರು ಲೋಕಕ್ಕೆ ಒಡೆಯರಾದ **ದೇವಾಃ** ದೇವತೆಗಳು **ತತ್ರ** ಇಂದ್ರಿಯನಿಗ್ರಹ ಮಾಡುವದರಲ್ಲಿ **ಮಾಂ** ನನ್ನನ್ನು **ಅನುಮೋದೇರನ್** ಅನುಮೋದಿಸುವರು ಅಂದರೇ ಅನುಕೂಲರಾಗಲಿ ಎಂದರ್ಥ. ಸ್ವಲ್ಪ ಕಾಲದಲ್ಲಿ ಏನು ಸಾಧಿಸುವಿ ಎನ್ನಬೇಡಿರಿ **ಖಟ್ವಾಂಗಃ** ಈ ಹೆಸರಿನ ರಾಜನು **ಮೂಹುರ್ತೇನ** ಒಂದೇ ಮೂಹುರ್ತ ಆಯುಷ್ಯವಿರುವಾಗಲೇ **ಬ್ರಹ್ಮಲೋಕಂ ಸಮಸಾಧಯತ್** ವಿಷ್ಣುಲೋಕಪ್ರಾಪ್ತಿಗೆ ಬೇಕಾದ ಸಾಧನೆ ಮಾಡಿ ವಿಷ್ಣುಲೋಕವನ್ನು ಪಡೆದನಷ್ಟೇ ಎಂದು ಭಾವ .॥೩೦॥

**ಶ್ರೀ ಭಗವಾನುವಾಚ -**

**ಇತ್ಯಭಿಪ್ರೇತ್ಯ ಮನಸಾ ಹ್ಯಾವಂತ್ಯೋ ದ್ವಿಜಸತ್ತಮಃ ।**
**ಉನ್ಮುಚ್ಯ ಹೃದಯಗ್ರಂಥಿಂ ಶಾಂತೋ ಭಿಕ್ಷುರಭೂನ್ಮುನಿಃ ॥೩೧॥**

**ಅವಂತ್ಯಃ ದ್ವಿಜಸತ್ತಮಃ** ಅವಂತಿ ದೇಶದ ಆ ಬ್ರಾಹ್ಮಣಶ್ರೇಷ್ಠನು **ಮನಸಾ** ಮನಸ್ಸಿನಿಂದ **ಇತಿ** ಮೇಲೆ ಹೇಳಿದಂತೆ **ಅಭಿಪ್ರೇತ್ಯ** (ವೈರಾಗ್ಯವೇ ಸೂಚಕವೆಂದು ಭಾವಿಸಿ) **ಹೃದಯಗ್ರಂಥಿಂ** ಅಂತಃಕರಣವೆಂಬ ಬಂಧವನ್ನು **ಉನ್ಮುಚ್ಯ** ತೊರೆದು **ಶಾಂತಃ** ಭಗವನ್ನಿಷ್ಠನಾಗಿ **ಮುನಿಃ** ಮನನಶಿಲನಾಗಿ **ಭಿಕ್ಷುಃ ಅಭೂತ್** ಸನ್ಯಾಸಿಯಾದನು.॥೩೧॥

**ಸ ಚಚಾರ ಮಹೀಮೇತಾಂ ಸಂಯತಾತ್ಮೇಂದ್ರಿಯಾನಲಃ ।**
**ಭಿಕ್ಷಾರ್ಥಂ ನಗರಗ್ರಾಮಾನಸಂಗೋಽಲಕ್ಷಿತೋಽವಿಶತ್ ॥೩೨॥**

**ಸಂಯತ** ನಿಗ್ರಹಿಸಲ್ಪಟ್ಟ **ಆತ್ಮಾ**,ಮನಸ್ಸು,**ಇಂದ್ರಿಯ** ಇಂದ್ರಿಯಗಳು **ಅನಲಃ** ವಾಯುವುಳ್ಳವನಾದ **ಸಃ** ಸನ್ಯಾಸಿಯು **ಏತಾಂ ಮಹೀಂ** ಈ ಭೂಮಂಡಲವನ್ನು **ಚಚಾರ** ಸಂಚರಿಸಿದನು. **ಭಿಕ್ಷಾರ್ಥಂ** ಭಿಕ್ಷೆಗಾಗಿ **ನಗರಗ್ರಾಮಾನ್** ನಗರಗಳನ್ನು ಹಳ್ಳಿಗಳನ್ನು **ಅಸಂಗಃ** ನಿಸ್ಸಂಗನಾಗಿ **ಅಲಕ್ಷಿತಃ** ಜ್ಞಾನಿಯೆಂದು ತಿಳಿಯದಂತೆ **ಅವಿಶತ್** ಪ್ರವೇಶಿಸಿದನು. ತನ್ನ ಗುಣಗಳನ್ನು ಹೊರಗೆ ತೋರಿಸದವನಾಗಿ ಸಂಚರಿಸಿದನು ಎಂದು ಭಾವ.॥೩೨॥

**ತಂ ವೈ ಪ್ರವಯಸಂ ಭಿಕ್ಷುಮವಧೂತಮಸಜ್ಜನಾಃ ।**
**ದೃಪ್ತಾಃ ಪರ್ಯಭವನ್ ಭದ್ರ ಬಹ್ವೀಭಿಃ ಪರಿಭೂತಿಭಿಃ ॥೩೩॥**

**ಭದ್ರ** ಉದ್ಧವನೇ **ತಂ** ಆ **ಪ್ರವಯಸಂ** ವೃದ್ಧನಾದ **ಅವಧೂತಂ** ಅಭ್ಯಂಗಾದಿಗಳಿಲ್ಲದಿರುವುದರಿಂದ ಮಲಿನನಾದ **ಭಿಕ್ಷುಂ** ಸನ್ಯಾಸಿಯನ್ನು **ದೃಪ್ತಾಃ** ಉನ್ಮತ್ತರಾದ **ಅಸಜ್ಜನಾಃ** ದುಷ್ಟಜನರು **ಬಹ್ವೀಭಿಃ** ಬಹಳವಾದ **ಪರಿಭೂತಿಭಿಃ** ತಿರಸ್ಕಾರಗಳಿಂದ **ಪರ್ಯಭವನ್** ತಿರಸ್ಕರಿಸಿದರು.॥೩೩॥

ಅದನ್ನೇ ಹೇಳುವರು -

**ಕೇಚಿತ್ ತ್ರಿವೇಣುಂ ಜಗೃಹುರೇಕೇ ಪಾತ್ರಂ ಕಮಂಡಲುಮ್ ।**
**ಪೀಠಂ ಚೈಕೇಽಕ್ಷಸೂತ್ರಂ ಚ ಕಂಥಾಂ ಚೀರಾಣಿ ಕೇಚನ ॥೩೪॥**

**ಕೇಚಿತ್** ಕೆಲವರು **ತ್ರಿವೇಣುಂ** ತ್ರಿದಂಡವನ್ನು (ಪರಮಹಂಸರಲ್ಲದವರಿಗೆ) ಮೂರು ಗಂಟುಗಳಿರುವ ದಂಡವನ್ನು **ಏಕೇ** ಕೆಲವರು **ಪಾತ್ರಂ** ದೇವಪೂಜೆಗೆ ಉಪಯುಕ್ತವಾದ ಪರಟೆಗಳನ್ನು **ಕಮಂಡಲುಂ** ನೀರು ತರುವ ಪಾತ್ರೆಯನ್ನು **ಏಕೇ** ಮತ್ತೆ ಹಲವರು **ಪೀಠಂ** ಕೃಷ್ಣಾಜಿನ ಮುಂತಾದ ಆಸನಗಳನ್ನು **ಅಕ್ಷಸೂತ್ರಂ** ಜಪಮಾಲೆಯನ್ನು **ಕಂಥಾಂ** ಕೌಪದಿಯನ್ನು **ಕೇಚನ** ಕೆಲವರು **ಚೀರಾಣಿ** ಹರಕು ಬಟ್ಟೆಗಳನ್ನು **ಜಗೃಹುಃ** ಕಿತ್ತಿಕೊಂಡರು.॥೩೪॥

**ಪ್ರದಾಯ ಚ ಪುನಸ್ತಾನಿ ದರ್ಶಿತಾನ್ಯಾದದುರ್ಮುನೇಃ ।**
**ಅನ್ನಂ ಚ ಭೈಕ್ಷಸಂಪನ್ನಂ ಭುಂಜಾನಸ್ಯ ಸರಿತ್ತಟೇ ॥೩೫॥**

**ಮೂತ್ರಯಂತಿ ಚ ಪಾಪಿಷ್ಠಾ ನಿಷ್ಠೀವಂತ್ಯಸ್ಯ ಮೂರ್ಧನಿ ।**
**ಯತವಾಚಂ ವಾಚಯಂತಿ ತಾಡಯಂತಿ ನ ವಕ್ತಿ ಚೇತ್ ॥೩೬॥**

**ಮುನೇಃ** ಸನ್ಯಾಸಿಗೆ **ತಾನಿ** ದಂಡಾದಿಗಳನ್ನು **ಪ್ರದಾಯ** ಕೊಟ್ಟು ಕೆಲವರು **ದರ್ಶಿತಾನಿ** ತೋರಿಸಲ್ಪಟ್ಟ ಅವುಗಳನ್ನು **ಪುನಃ** ಮತ್ತೆ ತೆಗೆದುಕೊಂಡರು **ಸರಿತ್ತಟೇ** ನದಿಯ ದಡದಲ್ಲಿ **ಭೈಕ್ಷಸಂಪನ್ನಂ** ತಿರುಪೆ ಬೇಡಿ ತಂದ **ಅನ್ನಂ ಭುಂಜಾನಸ್ಯ** ಅನ್ನವನ್ನುಣ್ಣುವಾಗ **ಪಾಪಿಷ್ಠಾಃ** ಅತ್ಯಂತ ಪಾಪಿಗಳು **ಮೂತ್ರಯಂತಿ** ಮೂತ್ರ ವಿಸರ್ಜನೆ ಮಾಡುವರು **ಅಸ್ಯ ಮೂರ್ಧನಿ** ಇವನ ತಲೆಯಲ್ಲಿ **ನಿಷ್ಠೀವಂತಿ** ಉಗುಳುವರು **ಯತವಾಚಂ** ಮೌನಿಯಾದವನನ್ನು

**ವಾಚಯಂತಿ** ಮಾತನಾಡಿಸುವರು **ನ ವಕ್ತಿ ಚೇತ್** ಮಾತನಾಡದಿದ್ದರೆ **ತಾಡಯಂತಿ** ಹೊಡೆಯುವರು.।।೩೫-೩೬।।

**ತರ್ಜಯಂತ್ಯಪರೇ ವಾಗ್ಭಿಃ ಸ್ತೇನೋಽಯಮಿತಿ ವಾದಿನಃ ।**
**ಬಧ್ನಂತಿ ರಜ್ವಾ ತಂ ಕೇಚಿದ್ ವಧ್ಯತಾಂ ವಧ್ಯತಾಮಿತಿ ।।೩೭।।**

**ಅಪರೇ** ಇನ್ನು ಕೆಲವರು **ವಾಗ್ಭಿಃ ತರ್ಜಯಂತಿ** ಮಾತುಗಳಿಂದ ಬಯ್ಯುವರು **ಅಯಂ ಸ್ತೇನಃ ಇತಿ ವಾದಿನಃ** ಇವನು ಕಳ್ಳನು ಎಂದು ಹೇಳುವರು **ಕೇಚಿತ್** ಕೆಲವರು **ವಧ್ಯತಾಂ ವಧ್ಯತಾಂ** ಕೊಲ್ಲಲ್ಪಡಲಿ ಎಂದು ಹೇಳುತ್ತ **ರಜ್ವಾ** ಹಗ್ಗದಿಂದ **ಬಧ್ನಂತಿ** ಕಟ್ಟುವರು.।।೩೭।।

**ಕ್ಷಿಪಂತ್ಯೇಕೇಽವಜಾನಂತ ಏಷ ಧರ್ಮಧ್ವಜಃ ಶಠಃ ।**
**ಕ್ಷೀಣವೃತ್ತ ಇಮಾಂ ವೃತ್ತಿಮಗೃಹೀತ್ ಸ್ವಜನೋಜ್ಝಿತಃ ।।೩೮।।**

**ಏಷಃ** ಇವನು **ಧರ್ಮಧ್ವಜಃ** ಧರ್ಮವನ್ನು ತೋರಿಸುವವನು ಡಾಂಭಿಕನು **ಶಠಃ** ವಂಚಕನು **ಕ್ಷೀಣವೃತ್ತಃ** ಜೀವನೋಪಾಯ ಕಳೆದುಕೊಂಡವನು **ಸ್ವಜನೈಃ** ತನ್ನವರೆಲ್ಲರಿಂದ **ಉಜ್ಝಿತಃ** ತ್ಯಜಿಸಲ್ಪಟ್ಟು **ಇಮಾಂ ವೃತ್ತಿಂ ಅಗೃಹೀತ್** ಈ ಭಿಕ್ಷೆಯಿಂದ ಜೀವನೊಪಾಯವನ್ನು ಸ್ವೀಕರಿಸುವನು ಎಂದು **ಕ್ಷಿಪಂತಿ** ನಿಷ್ಠುರ ಮಾತುಗಳಿಂದ ತಿರಸ್ಕರಿಸುವರು.।।೩೮।।

**ಅಹೋ ಏಷ ಮಹಾಸಾರೋ ಧೃತಿಮಾನ್ ಗಿರಿರಾಡಿವ ।**
**ಮೌನೇನ ಸಾಧಯಂತ್ಯರ್ಥಂ ಬಕವದ್ ದೃಢನಿಶ್ಚಯಃ ।।೩೯।।**

**ಇತ್ಯೇಕೇ ವಿಹಸಂತ್ಯೇನಮೇಕೇ ದೌರ್ವಾದಯಂತಿ ಚ ।**
**ತಂ ಬಬಂಧುರ್ನಿರುರುಧುರ್ಯಥಾ ಕ್ರೀಡನಕಂ ದ್ವಿಜಮ್ ।।೪೦।।**

**ಅಹೋ** ಆಶ್ಚರ್ಯ **ಏಷಃ** ಇವನು **ಮಹಾಸಾರಃ** ಬುದ್ಧಿಶಾಲಿಯು **ಗಿರಿರಾಡಿವ** ಪರ್ವತರಾಜನಾದ ಹಿಮಾಲಯದಂತೆ **ಧೃತಿಮಾನ್** ಅಚಲನಾದವನು ಮನಃಸ್ಥೈರ್ಯ ಉಳ್ಳವನು **ಮಹಾಸಾರಃ** ಕಠಿಣ ಹೃದಯ ಎಂದು ಅರ್ಥ. **ಬಕವತ್** ಬಕಪಕ್ಷಿಯಂತೆ **ದೃಢನಿಶ್ಚಯಃ** ಸ್ಥಿರವಾದ ನಿಶ್ಚಯವುಳ್ಳವನು **ಮೌನೇನ** ಮಾತನಾಡದೇ **ಅರ್ಥಂ ಸಾಧಯಂತಿ** ತನ್ನ ಅಭಿಲಾಷೆಯನ್ನು ಪಡೆಯುವನು. (ಸುಮ್ಮನೆ ಕುಳಿತು ಬಕಪಕ್ಷಿ ಮೀನು ಹಿಡಿಯುವಂತೆ) **ಇತಿ**

ಈ ರೀತಿ **ಏಕೇ** ಕೆಲವರು **ವಿಹಸಂತಿ** ನಗುವರು **ಏಕೇ** ಮತ್ತೆ ಕೆಲವರು **ಏನಂ ದೌರ್ವಾದಯಂತಿ** ಇವನನ್ನು ದೂಷಿಸುವರು. **ಕ್ರೀಡನಕಂ** ಆಟವಾಡುವ ವನದಿಂದ ತಂದ **ದ್ವಿಜಂ** ಪಕ್ಷಿಯನ್ನು **ಯಥಾ** ಹೇಗೆ ಕಟ್ಟುವರೋ ಹಾಗೆ ತಂ ಅವನನ್ನು **ಬಬಂಧುಃ** ಕಟ್ಟಿದರು **ನಿರುರುಧುಃ** ತಡೆದರು.।।೩೯ ೪೦।।

ಇಷ್ಟು ಮಾಡಿದರೂ ಜ್ಞಾನ ದೃಢವಾಗಿದ್ದುದರಿಂದ ಏನೂ ವಿಕಾರವಾಗಿಲ್ಲ-ವೆಂದು ಹೇಳುವರು.

**ಏವಂ ಸ ಭೌತಿಕಂ ದುಃಖಂ ದೈವಿಕಂ ದೈಹಿಕಂ ಚ ಯತ್ ।**
**ಭೋಕ್ತವ್ಯಮಾತ್ಮನೋ ದಿಷ್ಟಂ ಪ್ರಾಪ್ತಂ ಪ್ರಾಪ್ತಮಬುಧ್ಯತ ।।೪೧।।**

**ಪರಿಭೂತ ಇಮಾಂ ಗಾಥಾಮಗಾಯತ ನರಾಧಮೈಃ ।**
**ಪಾತಯದ್ಭಿಃ ಸ್ವಧರ್ಮಸ್ಥೋ ಧೃತಿಮಾಸ್ಥಾಯ ಸಾತ್ವಿಕೀಮ್ ।।೪೨।।**

**ಏವಂ** ಈ ರೀತಿಯಾಗಿ **ಭೌತಿಕಂ** ಪ್ರಾಣಿಗಳಿಂದ ಆದ ಬಟ್ಟೆ-ಪಾತ್ರೆಗಳನ್ನು ಕಿತ್ತುಕೊಂಡದ್ದರಿಂದ ಉಂಟಾದದ್ದು **ದೈವಿಕಂ** ಮಳೆ-ಛಳಿ-ಗಾಳಿಗಳಿಂದಾಗುವ **ಚ** ಮತ್ತು **ದೈಹಿಕಂ** ತಲೆಶೂಲೆ ಮುಂತಾದ ಅಥವಾ ಅನ್ನಾದಿಗಳನ್ನು ಕಿತ್ತುಕೊಂಡುದರಿಂದ ಬಂದ ಉಪವಾಸದಿಂದ ಉಂಟಾದ **ದುಃಖಂ ಚ** ದುಃಖವನ್ನಾದರೂ **ಪ್ರಾಪ್ತಂ ಪ್ರಾಪ್ತಂ ದುಃಖಂ** ಬಂದ ಎಲ್ಲ ದುಃಖವನ್ನು **ಆತ್ಮನಃ** ತನ್ನ **ದಿಷ್ಟಂ** ಪ್ರಾರಬ್ಧಕರ್ಮದಿಂದ ಬಂದದ್ದು **ಭೋಕ್ತವ್ಯ** ಅವಶ್ಯ ಅನುಭವಿಸಬೇಕಾದದ್ದೇ ಎಂದು **ಅಬುಧ್ಯತ** ತಿಳಿದನು.।।೪೧।।

**ಪಾತಯದ್ಭಿಃ** ಯೋಗಮಾರ್ಗದಿಂದ ಕೆಡಹುವ **ನರಾಧಮೈಃ** ನೀಚ-ಮನುಷ್ಯರಿಂದ **ಪರಿಭೂತಃ** ಸೋಲನ್ನು ಹೊಂದಿದ ಅರ್ಥಾತ್ ತೊಂದರೆ-ಗೀಡಾದ **ಸ್ವಧರ್ಮಸ್ಥಃ** ತನ್ನ ಧರ್ಮದಲ್ಲಿ ನಿಷ್ಠನಾದ **ಸಃ** ಸನ್ಯಾಸಿಯು **ಸಾತ್ವಿಕೀಂ** ಸ್ವಾಭಾವಿಕವಾದ ಸತ್ವಗುಣದಿಂದ ಪ್ರವೃದ್ಧವಾದ **ಧೃತಿಂ** ಧೈರ್ಯವನ್ನು **ಆಸ್ಥಾಯ** ಅವಲಂಬಿಸಿ **ಇಮಾಂ** ಮುಂದೆ ಹೇಳುವ **ಗಾಥಾಂ ಅಗಾಯತ** ಗಾನವನ್ನು ಮಾಡಿದನು.।।೪೨।।

**ಭಿಕ್ಷು ಉವಾಚ -**

**ನಾಯಂ ಜನೋ ಮೇ ಸುಖದುಃಖಹೇತು-**
**ರ್ನ ದೇವತಾತ್ಮಾ ಗ್ರಹಕರ್ಮಕಾಲಃ ।**

**ಮನಃ ಪರಂ ಕಾರಣಮಾಮನಂತಿ**
**ಸಂಸಾರಚಕ್ರಂ ಪರಿವರ್ತಯೇದ್ ಯತ್** ||೪೩||

**ಅಯಂ ಜನಃ** ಈ ಸುತ್ತಲಿರುವ ಜನರು **ದೇವತಾಃ** ದೇವತೆಗಳು **ಆತ್ಮಾ** ಜೀವನ ದೇಹವು **ಗ್ರಹಾಃ** ನವಗ್ರಹಗಳು **ಕರ್ಮ** ಅದೃಷ್ಟವು **ಕಾಲಃ** ಕಾಲವಾಗಲಿ **ಮೇ** ನನ್ನ **ಸುಖದುಃಖಹೇತುಃ ನ** ಸುಖದುಃಖಗಳಿಗೆ ಕಾರಣವಲ್ಲ. **ಯತ್** ಯಾವ **ಮನಃ** ಅಭಿಮಾನ ಸಹಿತವಾದದು **ಸಂಸಾರಚಕ್ರಂ** ಸಂಸಾರವೆಂಬ ಚಕ್ರವನ್ನು **ಪರಿವರ್ತಯೇತ್** ತಿರುಗಿಸುವುದೊ ಆ ಮನಸ್ಸೇ **ಪರಂ** ಕೇವಲವಾಗಿ **ಕಾರಣಂ** ಕಾರಣವೆಂದು **ಆಮನಂತಿ** ಆಗಮಗಳು ಹೇಳುವವು ಮನಸ್ಸೆಂದರೆ ಮನಃಪ್ರಧಾನಕ ಲಿಂಗವೆಂದರ್ಥ.||೪೩||

ಇದು ಪ್ರತಿಜ್ಞಾ ಶ್ಲೋಕ. ಮುಂದಿನ ಎಲ್ಲ ಶ್ಲೋಕಗಳು ಇದರ ವಿವರಣೆಗಳು.

**ಮನೋ ಗುಣಾನ್ ವೈ ಸೃಜತೇ ಬಲೀಯಸ್ತತಶ್ಚ ಕರ್ಮಾಣಿ ವಿಲಕ್ಷಣಾನಿ ।**
**ಶುಕ್ಲಾನಿ ಕೃಷ್ಣಾನ್ಯಥ ಲೋಹಿತಾನಿ ತೇಭ್ಯಃ ಸವರ್ಣಾ ಗತಯೋ ಭವಂತಿ ॥**

**ಮನಃ** ಪ್ರಾಕೃತವಾದ ಲಿಂಗಶರೀರರೂಪವಾದ, ಪ್ರಲಯದಲ್ಲಿ ಸೂಕ್ಷ್ಮರೂಪದಿಂದ ಇರುವ ಮನಸ್ಸು ಸೃಷ್ಟಿಕಾಲದಲ್ಲಿ **ಗುಣಾನ್ ಸೃಜತೇ** ತನಗೆ ಸತ್ವರಜಸ್ತಮೊಗುಣಗಳನ್ನು ಸೃಷ್ಟಿಸುವುದು ಅಂದರೆ ಸತ್ವಾದಿಗುಣಗಳಿಂದ ಉಪಚಿತವಾಗುವದು ಅಥವಾ **ಮನಃ** ಮನಸ್ಸು **ಗುಣಾನ್** ಸತ್ವಾದಿಗಳನ್ನು **ಪ್ರಾಪ್ಯ** ಹೊಂದಿ **ಸೃಜತೇ** ತನಗೆ ಸಾತ್ವಿಕ-ರಾಜಸ-ತಾಮಸವೆಂಬ ವಿಶಿಷ್ಟಾ-ಕಾರವನ್ನುಂಟು ಮಾಡುವುದು **ಅತ ಏವ** ಆದ್ದರಿಂದ **ಬಲೀಯಃ** ಕಾರ್ಯಮಾಡಲು ಸಮರ್ಥವಾಗುವವು. **ತತಃ** ನಂತರ **ಗುಣಾನ್** ಸಾತ್ವಿಕಾದಿ ಇಚ್ಛಾಪ್ರಯತ್ನಗಳನ್ನು **ಸೃಜತೇ** ಹುಟ್ಟಿಸುವುದು. **ತತಃ** ಸಾತ್ವಿಕ (ಮನಸ್ಸಿನ) ಇಚ್ಛಾ ಪ್ರಯತ್ನದಿಂದ **ಶುಕ್ಲಾನಿ** ಸಾತ್ವಿಕವಾದ **ಲೋಹಿತಾನಿ** (ರಾಜಸ ಮನಸ್ಸಿನ ಇಚ್ಛೆಯಿಂದ) ರಾಜಸವಾದ **ಕೃಷ್ಣಾನಿ** (ತಾಮಸ ಮನೋರೂಪ ಇಚ್ಛೆಯಿಂದ) ತಾಮಸವಾದ **ವಿಲಕ್ಷಣಾನಿ** ಭಿನ್ನಭಿನ್ನವಾದ **ಕರ್ಮಾಣಿ ಸೃಜತೇ** ಕರ್ಮಗಳನ್ನು ಮಾಡಿಸುವುದು **ತೇಭ್ಯಃ** ಆ ಕರ್ಮಗಳಿಂದ **ಸವರ್ಣಾಃ** ಅನುಗುಣವಾದ **ಗತಯಃ**ಸುರ, ನರ, ತಿರ್ಯಗಾದಿದೇಹಗಳು, ಮೋಕ್ಷ-ಸ್ವರ್ಗ-ನರಕಾದಿಗಳು,

**ಭವಂತಿ** ಆಗುವವು. ಇದರಿಂದ ಎಲ್ಲ ಸುಖದುಃಖಗಳಿಗೆ ಮನಸ್ಸು ಮುಖ್ಯ ಕಾರಣವೆಂದಂತಾಯಿತು.।।೪೪।।

ಮನಸ್ಸೇ ಮುಖ್ಯ ಕಾರಣವೆಂದರೆ ''**ಬಂಧಕೋ ಭವಪಾಶೇನ ಭವಪಾಶಾಚ್ಚ ಮೋಚಕಃ**'' ಎಂದು ಹೇಳಿರುವ ಭಗವಂತನನ್ನು ಬಿಟ್ಟಂತಾಯಿತಲ್ಲ ಎಂದರೆ ಹೇಳುವರು-

**ಅನೀಹ ಆತ್ಮಾ ಮನಸಃ ಸಮೀಹಿತಂ**
**ಹಿರಣ್ಮಯೋ ಮತ್ಸಖ ಉದ್ವಿಚಷ್ಟೇ ।**
**ಮನಃ ಸ್ವಲಿಂಗಂ ಪರಿಗೃಹ್ಯ ಕಾಮಾನ್**
**ಜುಷನ್ ನಿಬದ್ಧೋ ಗುಣಸಂಗತೋऽಸೌ** **।।೪೫।।**

**ಅನೀಹಃ** ಸ್ವರೂಪದಲ್ಲಿ ನಿಷಿದ್ಧ ಚೇಷ್ಟೆಗಳಿಲ್ಲದ್ದರಿಂದ ಅನೀಹನೆನಿಸುವ **ಆತ್ಮಾ** ಜೀವನು **ಮನಸಾ** ಮನಸ್ಸಿನ ಅಭಿಮಾನದಿಂದ **ಸಮೀಹತೇ** ಕರ್ಮಗಳನ್ನು ಮಾಡುವನು. **ಅನೀಹಃ ಸ್ವಯಂ** ಆ ರೀತಿ ಕರ್ಮ ಮಾಡದ **ಆತ್ಮಾ** ಪರಮಾತ್ಮನು **ಹಿರಣ್ಮಯಃ** ಸರ್ವವಿಲಕ್ಷಣ ಸುಖಾತ್ಮಕನೂ **ಮತ್ಸಖಃ** ನನ್ನ ಮಿತ್ರನು **ಸಮೀಹಿತಂ** ಸಂಸಾರಕಾರಣವಾದ ಕರ್ಮಗಳನ್ನು **ಉದ್ವಿಚಷ್ಟೇ** ಫಲಕೊಡುವದಕ್ಕಾಗಿ ಸಾಕ್ಷಿಯಾಗಿ ನೋಡುವನು ಜಡಮನಸ್ಸಿಗೆ ಹೇಗೆ ಕಾರಣತ್ವವು ಎಂದರೆ ಹೇಳುವರು. **ಅಸೌ ನಿಬದ್ಧಃ** ದೇಹಾಭಿಮಾನಿ ಜೀವನು **ಸ್ವಲಿಂಗಂ ಮನಃ** ಮನಸ್ಸು ಮೊದಲಾದ ಷೋಡಶ ಕಲಾತ್ಮಕ ಲಿಂಗದೇಹವನ್ನು **ಪರಿಗೃಹ್ಯ** ಆಶ್ರಯಿಸಿ **ಗುಣಸಂಗತಃ** ವಿಷಯಾಸಕ್ತಿಯಿಂದ **ಕಾಮಾನ್** ವಿಷಯಗಳನ್ನು **ಜುಷನ್ ಆಸ್ತೇ** ಸೇವಿಸುತ್ತಿರುವನು. **ಅಸೌ** ಆ ಜೀವನು **ವಿಷಯಾನ್ ಜುಷನ್ ನಿಬದ್ಧೋ ಭವತಿ** ಹೀಗೂ ಮಾಡಬಹುದು ವಿಷಯಾನುಭವದಿಂದ ಬಹಳವಾಗಿ ಬದ್ಧನಾಗುವನು ಎಂದು ಭಾವ. ವಿಷಯಾಸಕ್ತನಾದ ಜೀವಸಹಿತ ಮನಸ್ಸು ಕಾರಣ. ಕೇವಲ ಜಡವಲ್ಲ ಎಂದಂತಾಯಿತು. ಮತ್ತು ಶ್ರೀಹರಿಯೇ ಕ್ಲೇಶವಿಲ್ಲದೇ ಕರ್ಮ ಮಾಡಿಸುವವನು ಆದರೆ ಮನಸ್ಸಾದರೂ ಕ್ಲೇಶದಿಂದ ಕರ್ಮ ಮಾಡಿಸುವುದು. ಈ ಅಭಿಪ್ರಾಯದಿಂದ ಮನಸ್ಸು ಕಾರಣ ಎಂದು ಹೇಳಿದ್ದು. **ಮತ್ಸಖಃ** ನನಗೆ ಪರಮೋಪಕಾರಕನು ಎಂದು ಹೇಳಿದ್ದರಿಂದ ನನಗೆ ದುಃಖದಾಯಕನಲ್ಲ ಎಂದು ಭಾವ ತೋರುವದು. (ಪರೇಷಾಂ ದುಃಖಕಾರಣಂ ಮನ ಇತ್ಯರ್ಥಃ) ಎಂದು ವಿಜಯಧ್ವಜೀಯ ಪಂಕ್ತಿ.

ಅವತಾರಿಕೆಯಲ್ಲಿ ಪರಮಾತ್ಮನು ಸಾಕ್ಷಿಯಾಗಿ ದೇಹದಲ್ಲಿದ್ದರೆ ಅವನಿಗೂ ದುಃಖ ಬರಲಿ ಎಂದು ಶಂಕಿಸಿ ಹಿರಣ್ಮಯ ಎಂದು ಉತ್ತರಿಸಿರುವರು. ಹಿರಣ್ಮಯ ಶಬ್ದಕ್ಕೆ ವಿಲಕ್ಷಣ ಸುಖವುಳ್ಳವನು, ಸ್ವರೂಪಭೂತಪೂರ್ಣಾನಂದನು ಎಂದು ಅರ್ಥ ಮಾಡಿ ನಂತರ ಈ ಪಂಕ್ತಿ ಇರುವುದರಿಂದ ಮನಸ್ಸು ಅರ್ಥಾತ್ ದೇಹವು ಇತರರಿಗೆ ಮಾತ್ರ ದುಃಖದಾಯಕವೇ ಹೊರತು ಶ್ರೀಹರಿಗೆ ಅಲ್ಲ ಇವನು ಪ್ರೇರಕನು ಅಭಿಮಾನಿ ಅಲ್ಲವೆಂದು ಅಭಿಪ್ರಾಯ ಹೇಳಬಹುದು ಅನಿಸುತ್ತದೆ.

**ಸುಧೀಂದ್ರರು-**

**ಅನೀಹಃ** ಕ್ಲೇಶವಿಲ್ಲದೇ ಕಾರ್ಯ ಮಾಡುವ **ಹಿರಣ್ಮಯಃ** ಲೋಕವಿಲಕ್ಷಣ ಆನಂದವುಳ್ಳ **ಮತ್ಸಖಾ** ನನ್ನ ಮಿತ್ರನಾದ **ಆತ್ಮಾ** ಪರಮಾತ್ಮನು **ಮನಃ ಸಮೀಹಿತಂ** ಮನಃಸಂಬಧಿಯಾದ ಕರ್ಮಗಳನ್ನು ಮನೋವೃತ್ತಿವಿಶೇಷಗಳನ್ನು ಅಂದರೆ ಮನಸ್ಸಿನ ಅಧೀನವಾದ ಮನೋಽಭಿಮಾನಿದೇವತಾ ನಿಯತವಾದ ಪುಣ್ಯಪಾಪ ಕರ್ಮವನ್ನು **ಸ್ವಲಿಂಗಂ ಮನಃ** ತನ್ನ ಅಧೀನವಾದ್ದರಿಂದ ತನ್ನದಾದ ತನ್ನ ಜ್ಞಾನಸಾಧನವಾದ ಲಿಂಗದೇಹಾತ್ಮಕ ಮನಸ್ಸನ್ನು ಪರಿಗ್ರಹ್ಯ **ಅಧಿಷ್ಠಾಯ** ನಿಯಾಮಕನಾಗಿದ್ದು **ಕಾಮಾನ್ ಜುಷನ್** ವಿಷಯಗಳನ್ನು ಅನುಭವಿಸುತ್ತ **ಉದ್ವಿಚಷ್ಟೇ** ಉತ್ಕೃಷ್ಟವಾಗಿ ನೋಡುವನು.

> **ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ।**
> **ಶುಭಂ ಪಿಬತ್ಯಸೌ ನಿತ್ಯಂ ನಾಶುಭಂ ಸ ಹರಿಃ ಪಿಬೇತ್ ॥**

ಶ್ರೀಹರಿಯು ಅಧಿಕಾರಿಯ ದೇಹೇಂದ್ರಿಯಗಳಲ್ಲಿದ್ದು ಪುಣ್ಯಫಲವಾದ ಶುಭವಿಷಯಗಳನ್ನು ಭೋಗ ಮಾಡಿ ಆನಂದಿಸುವನು. ಪಾಪಫಲವಾದ ದುಃಖವೆಂಬುದು ಆಗುವದಿಲ್ಲ ಎಂದು ಭಾವ. ಜೀವನು ಅಭಿಮಾನ ಪ್ರಯುಕ್ತ ದುಃಖಕ್ಕೀಡಾಗುವನು ಬದ್ಧನಾಗುವನು ಎಂದು ವಿವರಿಸುವರು.॥೪೫॥

> **ದಾನಂ ಸ್ವಧರ್ಮೋ ನಿಯಮೋ ಯಮಶ್ಚ -**
> **ಶ್ರುತಾನಿ ಕರ್ಮಾಣಿ ಚ ಸದ್ವ್ರತಾನಿ ।**
> **ಸರ್ವೇ ಮನೋನಿಗ್ರಹಲಕ್ಷಣಾಂತಾಃ**
> **ಪರೋ ಹಿ ಯೋಗೊ ಮನಸಃ ಸಮಾಧಿಃ ॥೪೬॥**

**ದಾನಂ** ದಾನವು **ಸ್ವಧರ್ಮಃ** ವರ್ಣಾಶ್ರಮೋಚಿತಧರ್ಮಗಳು **ನಿಯಮಃ ಯಮಶ್ಚ** ಶೌಚ, ತಪಸ್ಸು, ಸ್ವಾಧ್ಯಾಯ ಪ್ರಣಿಧಾನವೆಂಬ ನಿಯಮಗಳು, ಇಂದ್ರಿಯನಿಗ್ರಹವಾಗಲಿ **ಶ್ರುತಾನಿ** ವೇದಶಾಸ್ತ್ರಶ್ರವಣಗಳು **ಕರ್ಮಾಣಿ** ಸಂಧ್ಯಾವಂದನಾದಿಗಳು **ಸದ್ವ್ರತಾನಿ** ಏಕಾದಶೀ ಉಪವಾಸ ಮುಂತಾದವು **ಸರ್ವೇ** ಈ ಎಲ್ಲವೂ **ಮನೋನಿಗ್ರಹಲಕ್ಷಣಾಂತಾಃ** ಮನಸ್ಸಿನ ನಿಗ್ರಹವೆಂಬ ಯೋಗವೇ ಫಲವಾಗಿ ಉಳ್ಳವುಗಳು ಇವುಗಳಿಗೆಲ್ಲ ಮನೋನಿಗ್ರಹವೇ ಫಲವೆಂದರ್ಥ. ಶ್ರೀಹರಿಯಲ್ಲಿ ಮನಸ್ಸಿಡುವದೆಂಬ ಮನೋನಿಗ್ರಹವೇ ಲಕ್ಷಣ. ತಮಗೆ ಸಾಧನತ್ವಜ್ಞಾಪಕವೆಂಬ ನಿರ್ಣಯ ಉಳ್ಳವು. **ಮನಸಃ ಸಮಾಧಿಃ** ಪ್ರಯತ್ನವಿಲ್ಲದೇ ಸಹಜವಾಗಿ ಶ್ರೀಹರಿಯಲ್ಲಿ ಮನಸ್ಸಿನ ಸ್ಥಿತಿಯೇ **ಪರಃ** ಉತ್ತಮವಾದ **ಯೋಗಃ** ಮುಕ್ತಿಗೆ ಉಪಾಯವು. ಕೇವಲ ಶ್ರವಣಾದಿಗಳಲ್ಲ ಎಂದು ಭಾವ **ಹಿ** ಪ್ರಮಾಣಸಿದ್ಧ.**॥೪೬॥**

ಮನಸ್ಸಮಾಧಿಯೇ ಮುಖ್ಯ ಉಪಾಯವೆಂಬುದನ್ನು ಉಪಪಾದಿಸುವರು-

**ಸಮಾಹಿತಂ ಯಸ್ಯ ಮನಃ ಪ್ರಶಾಂತಂ ದಾನಾದಿಭಿಃ ಕಿಂ ವದ ತಸ್ಯ ಕೃತ್ಯಮ್ ।**
**ಅಸಂಯತಂ ಯಸ್ಯ ಮನೋ ವಿನಶ್ಯೇದ್ದಾನಾದಿಭಿಶ್ಚೇದಪರಂ ಕಿಮೇಭಿಃ ॥**

**ಯಸ್ಯ** ಯಾವನ **ಮನಃ** ಮನಸ್ಸು **ಪ್ರಶಾಂತಂ** ವಿಷಯಾಸಕ್ತಿ ರಹಿತ-ವಾಗಿದೆಯೋ **ಸಮಾಹಿತಂ** ಪರಮಾತ್ಮನಲ್ಲಿ ಧ್ಯಾನಮಗ್ನವಾಗಿದೆಯೋ **ತಸ್ಯ** ಅವನಿಗೆ **ದಾನಾದಿಭಿಃ** ದಾನ-ಶ್ರವಣಾದಿಗಳಿಂದ **ಕಿಂ ಕೃತ್ಯಂ ವದ** ಏನು ಪ್ರಯೋಜನವಿದೆ? ಏನಾದರೂ ಇದ್ದರೆ ಹೇಳು. ಅಂದರೆ ದಾನಾದಿಗಳ ಫಲವಾದಮನಸ್ಸಮಾಧಾನವಾದಮೇಲೆಅವುಗಳಿಗೆಪ್ರಯೋಜನವಿಲ್ಲವೆಂದು ಭಾವ. **ಯಸ್ಯ** ಯಾವನಿಗೆ **ದಾನಾದಿಭಿಃ** ದಾನಾದಿಗಳನ್ನು ಮಾಡುವುದರಿಂದ **ಮನಃ** ಮನಸ್ಸು **ಅಸಂಯತಂ** ಭಗವನ್ನಿಷ್ಠವಾಗದೇ ನಿಗ್ರಹಿಸಲ್ಪಡದೇ **ವಿನಶ್ಯೇತ್ ಚೇತ್** ಹಾಳಾಗುವದಾದರೆ ಅಂದರೆ ವಿಷಯಗಳಲ್ಲೇ ಹೋಗುತ್ತಿದ್ದರೆ **ಏಭಿಃ** ಈ ದಾನಾದಿಗಳಿಂದ **ಕಿಂ ಅಪರಂ** ಸಾಧಿಸಬೇಕಾದುದು ಬೇರೆ ಏನಿದೆ? ಅಂದರೆ ದಾನದಿಗಳಿಂದ ಸಾಧಿಸಬೇಕಾದ ಫಲ ಮನೋನಿಗ್ರಹವಾಗದಿದ್ದರೆ ಅವುಗಳು ವ್ಯರ್ಥವೆಂದು ಭಾವ. ದುಷ್ಟವಾದಾಗ ನಷ್ಟನೆಂದು ಕರೆಯುವದರಿಂದ ಇಲ್ಲಿ ನಷ್ಟವೆಂದರೆ ದುಷ್ಟವೆಂದರ್ಥ. (ವಿನಶ್ಯೇದ್ ಎಂದರೆ) ಹಾಗಾದರೆ ಮನೋನಿಗ್ರಹವನ್ನೇ ಸಂಪಾದಿಸೋಣ

ಎಂದರೆ ದೇವತಾನುಗ್ರಹವಿಲ್ಲದೇ ಅಶಕ್ಯವೆಂದು ವಿಜಯಧ್ವಜತೀರ್ಥೀಯ ವ್ಯಾಖ್ಯಾನದಲ್ಲಿ ಹೇಳುವರು

**ಮನೋವಶೇಽನ್ಯೇ ಹಿ ಭವಂತಿ ದೇವಾ**
**ಮನಶ್ಚ ನಾನ್ಯಸ್ಯ ವಶಂ ಸಮೇತಿ ।**
**ಭೀಮೋ ಹಿ ದೇವಃ ಸಹಸಃ ಸಹೀಯಾ-**
**ನ್ನಾತ್ಯಾವಿಶತ್ ತತ್ ಸ ಹಿ ದೇವದೇವಃ ॥೪೮॥**

**ಅನ್ಯೇ ದೇವಾಃ** ವಿಷ್ಣು,ಲಕ್ಷ್ಮೀ,ಬ್ರಹ್ಮ, ಸರಸ್ವತಿ, ಇವರಿಂದ ಭಿನ್ನರಾದ ತತ್ವಾಭಿಮಾನಿಗಳಾದ ಇಂದ್ರಾದಿದೇವತೆಗಳೆಲ್ಲರೂ **ಭೀಮಃ ದೇವಃ** ಸರ್ವ ಭಯಂಕರನಾದ ರುದ್ರನು **ಮನಃ** ಮನೋನಿಯಾಮಕನು. **ನ ಅನ್ಯಸ್ಯ ವಶಂ ಏತಿ** ಇಂದ್ರಾದಿಗಳ ಅಧೀನನಾಗುವದಿಲ್ಲ ಏಕೆಂದರೆ **ಸಹಸಃ** ವಾಯುದೇವರ ಅನುಗ್ರಹದಿಂದ **ಸಹೀಯಾನ್** ಸಹನಶಕ್ತಿಯುಳ್ಳವನು (ವ್ಯೋಮಕೇಶೋ ಭವೋ ಭೀಮಃ)ಎಂದು ಕೋಶವಿರುದರಿಂದ **ಭೀಮಃ** ರುದ್ರನು **ತತ್** ಮನಸ್ಸನ್ನು ಮನೋಽಭಿಮಾನಿ ರುದ್ರನನ್ನು **ಕೋಽಪಿ** ಯಾರು **ನ ಅತ್ಯಾವಿಶತ್** ಅತಿಕ್ರಮಿಸಲಿಲ್ಲ. **ಸ ಹಿ** ಅವನು **ದೇವದೇವಃ** ಇಂದ್ರಾದಿಗಳಿಗೆ ದೇವನು.

ಹೇಗೆ ಮನೋನಿಯಮಕ ರುದ್ರಾದಿಗಳ ಅನುಗ್ರಹವು ಸಂಪಾದನೀಯವೋ ಅದರಂತೆ ಮನೋನಿಯಾಮಕ ಕಾಲನೇಮಿ ಮುಂತಾದವರ ಜಯವೂ ಅವಶ್ಯಕವೆಂದು ಹೇಳುವರು-

**ತಂ ದುರ್ಜಯಂ ಶತ್ರುಮಸಹ್ಯವೇಗಮರುಂತುದಂ ತನ್ನ ವಿಜಿತ್ಯ ಕೇಚಿತ್।**
**ಕುರ್ವಂತ್ಯಸದ್ವಿಗ್ರಹಮತ್ರಮರ್ತ್ಯೈರ್ಮಿತ್ರೈರುದಾಸೀನರಿಪುಂ ವಿಮೂಢಾಃ ॥**

**ಅತ್ರ** ಜೀವರಲ್ಲಿ **ಕೇಚಿತ್ ವಿಮೂಢಾಃ** ಕೆಲವು ತಾಮಸ ಜೀವರು ಮನಸ್ಸಿನ ದೋಷವನ್ನರಿಯದವರು **ಅಸಹ್ಯವೇಗಂ** ಅನಿವಾರ್ಯವಾದ ವೇಗಶಕ್ತಿಯುಳ್ಳ **ಅರುಂತುದಂ** ಗಾಯದ ಮೇಲೆ ಹಾಕಿದ ಉಪ್ಪಿನಂತೆ ದುಃಖಕರನಾದ **ಉದಾಸೀನರಿಪುಂ** ವಿಷಯಾಸಕ್ತಿಯಿಂದ ಭಗವಂತನ ಧ್ಯಾನಾದಿಗಳಲ್ಲಿ ಪ್ರಯತ್ನ ಮಾಡದ ಉದಾಸೀನರಿಗೆ ದುಃಖದಾಯಕನಾದ **ದುರ್ಜಯಂ** ದುಷ್ಟನಾದ ಕಾಲನೇಮಿಯಿಂದ ಅಭಿಮನ್ಯಮಾನವಾದುದರಿಂದ ನಮ್ಮಿಂದ ಗೆಲ್ಲಲಾಗದ **ತಂ ಶತ್ರುಂ** ಜ್ಞಾನ-ಭಕ್ತಿಗಳಿಂದ ಸುಖಕ್ಕೆ ವಿರೋಧಿಯಾದ **ತಂ**

ತಾಮಸ ಮನಸ್ಸೆಂಬ ಶತ್ರುವನ್ನು **ನ ವಿಜಿತ್ಯ** ಗೆಲ್ಲದೇ **ಮಿತ್ರೈಃ ಮರ್ತ್ಯೈಃ** ಸ್ನೇಹಿತರಾದ ಮನುಷ್ಯರೊಡನೆ **ಅಸದ್ವಿಗ್ರಹಂ** ಅಮಂಗಲವಾದ ವೈರವನ್ನು ಕಲಹವನ್ನು **ಕುರ್ವಂತಿ** ಮಾಡುವರು.।।೪೯।।

ಇದರಿಂದ ಶತ್ರುವನ್ನು ಗೆಲ್ಲದೇ ಮಿತ್ರರೊಡನೆ ಕಲಹ ಮಾಡುವ ಬಾಲಿಶರಂತೆ ನನ್ನ ಅವಸ್ಥೆ ಹಾಸ್ಯಾಸ್ಪದ.

ಇಲ್ಲಿ ೪೮ ನೆಯ ಶ್ಲೋಕದಲ್ಲಿ 'ಭೀಮೋ ಹಿ ದೇವಃ' ಎಂದು ಮನಸಿಗೆ (ಅಭಿಮಾನಿ) ದೇವತ್ವವನ್ನು ಹೇಳಿ 'ತಂ ದುರ್ಜಯಂ ಶತ್ರುಂ' ಎಂದು ೪೯ರಲ್ಲಿ ಶತ್ರುತ್ವ ಹೇಳುವದು ಸರಿಯಲ್ಲ. ದೇವತೆಗಳು ಎಲ್ಲರಿಗೂ ಉಪಕಾರಕರಾದ್ದರಿಂದ ಮಿತ್ರರೇ ಆಗಿರುವರು ಎಂಬ ಶಂಕೆಗೆ ಮತ್ತು ಮನೋವಶೇ ಎಂಬಲ್ಲಿ ಮನೋಽಭಿಮಾನಿಗಳು ರುದ್ರಾದಿಗಳು ಕಲ್ಯಾದಿಗಳು ಪುರಂಜನ ಭಾರ್ಯಾದಿಗಳು ಹೀಗೆ ಅನೇಕರಿರುವರು. ಅವರೆಲ್ಲರ ವಶತ್ವ ಇಂದ್ರಾದಿಗಳಿಗೆ ಹೇಳಿದಂತೆ ತೋರುವದು. 'ದೇಹೇಂದ್ರಿಯಪ್ರಾಣಧಿಯಾಂ ತ್ರಿಧೈವ ಹ್ಯಭಿಮಾನಿನಃ' ಎಂದಿರುವುದರಿಂದ ಅಸುರರು ಅಭಿಮಾನಿಗಳು ಇರುವುದರಿಂದ 'ಮನೋ ಹಿ ದೇವಃ' ಎಂದು ನಿರ್ಧರಿಸುವದು ಹೇಗೆ ಎಂದು ಶಂಕೆ? ಕಾರಣ ತಾತ್ಪರ್ಯ ಹೇಳುವರು-

**ತಾತ್ಪರ್ಯ- ಸಾತ್ವಿಕಮನೋವಿವಕ್ಷಯಾ ದೇವಶಬ್ದಃ।**
**ತಾಮಸಮನೋವಿವಕ್ಷಯಾ ಶತ್ರುಶಬ್ದಃ।**

ಮನಸ್ಸು ಸಾತ್ವಿಕ,ರಾಜಸ,ತಾಮಸವೆಂದು ಮೂರು ವಿಧವಾಗಿದೆ. ಅದರಲ್ಲಿ ಸಾತ್ವಿಕಮನೋಽಭಿಮಾನಿ ರುದ್ರದೇವರ ವಿವಕ್ಷೆಯಿಂದ ಮೊದಲಿನ ಶ್ಲೋಕದಲ್ಲಿ ದೇವಶಬ್ದವನ್ನು ಉಪಯೋಗಿಸಿದೆ. ರಾಜಸ, ತಾಮಸ, ಮನೋಽಭಿಮಾನಿ ಕಾಲನೇಮಿ ಅಪೇಕ್ಷಯಾ ಎರಡನೇ ಶ್ಲೋಕದಲ್ಲಿ ಶತ್ರುಶಬ್ದ ಪ್ರಯೋಗಿಸಿದೆ. ಆದ್ದರಿಂದ ದೋಷವಿಲ್ಲ.

ಚೇಳಿಗೆ ಹೆದರಿ ಓಡುವವನು ಹಾವಿನ ಬಾಯಿಯಲ್ಲಿ ಬಿದ್ದಂತೆ, ದೇವತ್ವ ಶತ್ರುತ್ವವನ್ನು ಉಪಪಾದನ ಮಾಡಲು ಮೇಲೆ ಹೇಳಿದಂತೆ ವಿವಕ್ಷಾಭೇದ ಮಾಡಿದರೆ ಮುಂದಿನ ಶ್ಲೋಕದಲ್ಲಿ ''**ತಂ**'' ಎಂದು ಪೂರ್ವಪರಾಮರ್ಶ ಮಾಡಿದ್ದು ಹೇಗೆ? ಹಿಂದೆ (ಅವನೇ ಶತ್ರು ಎಂದತಾಯಿತಲ್ಲ) ಮತ್ತೆ ಹಿಂದಿನ

ದೋಷ ಬಂದಿತಲ್ಲ ಎಂದರೆ ಹಾಗಲ್ಲ ಹಿಂದಿನ ಶ್ಲೋಕದಲ್ಲಿ ಮುಂದಿನ ಶ್ಲೋಕದಲ್ಲಿ ಹೇಳಿದ ವ್ಯಕ್ತಿ ಬೇರೆಯಾಗಿದ್ದರೂ ''**ತಂ**'' ಎಂದು ಪರಾಮರ್ಶ ಮಾಡಬಹುದು ಎಂದು ಪ್ರಮಾಣ ಹೇಳುವರು-

**ತಾತ್ಪರ್ಯ-** ಏಕಸ್ಥಾನಾದಿಪತ್ಯೇ ತು ಭಿನ್ನಾನಾಮಪಿ ಯುಜ್ಯತೇ ।
ಅಭೇದೇನ ಪರಾಮರ್ಶಃ ಸಾದೃಶ್ಯೇನಾಪಿ ವಸ್ತುನೋಃ''॥ ಇತಿ ಪ್ರಯೋಗೇ

ಭಿನ್ನವಾದ ವಸ್ತುಗಳಿಗೆ ಅವನೇ ಎಂದು ಅಭೇದದಿಂದ ಪರಾಮರ್ಶ ಮಾಡುವದು ಒಂದೇ ಸ್ಥಾನಕ್ಕೆ ಅಧಿಪತಿಯಾದರೆ ಮತ್ತು ಭಿನ್ನವಾದ ವಸ್ತುಗಳಿಗೆ ಸಾದೃಶ್ಯವಿದ್ದರೂ ಯುಕ್ತವಾಗುವದು. ಪ್ರಕೃತದಲ್ಲಿ ಸಾತ್ವಿಕ ಮತ್ತು ತಾಮಸ ಮನಸಿಗೆ ಅಭಿಮಾನಿಗಳಾದ ರುದ್ರ ಮತ್ತು ಕಾಲನೇಮಿಗಳಿಗೆ ಭೇದವಿದ್ದರೂ ಒಂದೇ ಸ್ಥಾನಕ್ಕೆ ಅಧಿಪತಿಗಳೆಂಬ ಕಾರಣವಿಲ್ಲದಿದ್ದರೂ ಇಬ್ಬರಿಗೂ ಅಭಿಮಾನಿಗಳೆಂಬ ಸಾದೃಶ್ಯವಿರುವದರಿಂದ ಪರಾಮರ್ಶ ಯುಕ್ತವೇ. ''**ತಂ**'' ಅಂದರೇ ಹಿಂದೆ ಹೇಳಿದ ರುದ್ರದೇವರಿಗೆ ಅಭಿಮಾನಿತ್ವೇನ ಸದೃಶನಾದ ಕಾಲನೇಮಿ ಎಂಬ ಶತ್ರುವನ್ನು ಎಂದರ್ಥ ಮಾಡಿದಂತಾಯಿತು.

'ಮನೋ ಹಿ ನಾನ್ಯಸ್ಯ ವಶಂ ಸಮೇತಿ' ಎಂದು ಮನೋಽಭಿಮಾನಿ ರುದ್ರದೇವರು ಯಾರ ಅಧೀನವಲ್ಲವೆಂದು ಹೇಳುವದು ಸರಿಯಲ್ಲವೆಂದರೆ ಹೇಳುವರು-

**ತಾತ್ಪರ್ಯ-** ಋತೇ ದ್ವೇ ಬ್ರಹ್ಮಣೇ ಕಸ್ಯ ಮನೋ ಯಾತಿ ವಶಂ ಕ್ವಚಿತ್ ।
ಶ್ರಿಯಂ ಸರಸ್ವತೀಂ ವಾಪಿ ಯಾತಿ ವಾ ತತ್ಪ್ರಸಾದತಃ''॥ -ಇತಿ ಪಾದ್ಮೇ ।

ಕಾರ್ಯಬ್ರಹ್ಮ ಅಕಾರ್ಯಬ್ರಹ್ಮ ಎಂಬ ಚತುರ್ಮುಖ, ವಿಷ್ಣು, ಲಕ್ಷ್ಮೀ, ಸರಸ್ವತಿ (ವಾಯು ಭಾರತಿ ) ಇವರನ್ನು ಬಿಟ್ಟು ಬೇರಾರಿಗೂ ವಶವಲ್ಲ-ವೆಂದರ್ಥ. ಹಾಗಾದರೆ ಮನಸ್ಸು ವಶವಾಗುವದು ಹೇಗೆಂದರೆ 'ಯಾತಿ ತತ್ಪ್ರಸಾದತಃ' ಅಂದರೆ ಮನೋಽಭಿಮಾನಿ ಶೇಷ,ಗರುಡ, ಅಂದರೆ ರುದ್ರರು ಯಾರ ಮೇಲೆ ಪ್ರಸನ್ನರಾಗುವನು ಅವನ ವಶವಾಗಿದೆ ಮನಸ್ಸು ಎಂದು ಹೇಳಬಹುದು. 'ತತ್ಪ್ರಸಾದತಃ' ವಿಷ್ಣು, ಚತುರ್ಮುಖ, ಸರಸ್ವತಿ, ವಾಯು, ಭಾರತೀಯರ ಅನುಗ್ರಹದಿಂದ ಎಂದು ಅರ್ಥ. 'ಉದಾಸೀನರಿಪುಂ' (ಉದಾಸೀನಶ್ಚಾಸೌ ರಿಪುಶ್ಚ ವಿಗ್ರಹ ಮಾಡಿದರೆ) ಅದು ಸರಿಯಲ್ಲ ರಿಪು

ಎಂದರೆ ಹೇಯ ಉದಾಸೀನ ರಿಪು ಅಲ್ಲ ರಿಪು ಉದಾಸೀನನಲ್ಲ ಹಾಗಾಗಿ ಉದಾಸೀನರಿಪು ಅಪ್ರಸಿದ್ಧ ಕಾರಣ ವಿಗ್ರಹ ತೋರಿಸುವರು ಅಭಿಪ್ರಾಯ ಹೇಳುವರು-

**ತಾತ್ಪರ್ಯ-** ಉದಾಸೀನಾನಾಂ ರಿಪುಮ್ । ಸಮ್ಯಗ್ ಯತತಾಂ ನ ರಿಪುತ್ವಂ ಶಕ್ಯತೇ'' ಇತ್ಯರ್ಥಃ ॥

ಮನಸ್ಸನ್ನು ನಿಗ್ರಹಿಸಲು ಯಾರು ಪ್ರಯತ್ನಶೀಲರಲ್ಲವೋ ಅಂಥ ಉದಾಸೀನರಿಗೆ ಸಂಸಾರಾದಿ ದುಃಖ ಕಾರಣವಾದ್ದರಿಂದ ರಿಪು ಆಗುವದು. ಹೊರತು ಮನೋನಿಗ್ರಹಕ್ಕಾಗಿ ಯಾರು ಚೆನ್ನಾಗಿ ಯತ್ನಿಸುವರೋ ಅವರ ವಿಷಯದಲ್ಲಿ ಶತ್ರುತ್ವ ಸಾಧ್ಯವಿಲ್ಲವೆಂದರ್ಥ. ಭಕ್ತಿಯಿಂದ ಪ್ರಯತ್ನ ಮಾಡಿದರೆ ವಶವಾಗುವರು ಎಂದು ಭಾವ.॥೪೯॥

ದುಷ್ಟನಾದ ಅಭಿಮಾನಿಯ ಬಲದಿಂದ ಸಹಕೃತವಾದ ಶಕ್ತಿಯುಳ್ಳ ತಾಮಸ ಮನೋನಿರ್ಮಿತ ಅಭಿಮಾನದಿಂದುಂಟಾದ ಭ್ರಮದಿಂದ ಜೀವನಿಗೆ ನಿತ್ಯನರಕವಾಗುವದು. ಆದ್ದರಿಂದ ಅಭಿಮಾನಿಯನ್ನು ಗೆಲ್ಲಬೇಕು ಎಂದು ಹೇಳುವರು-

**ದೇಹಂ ಮನೋಮಾತ್ರಮಿದಂ ಗೃಹೀತ್ವಾ**
**ಮಮಾಹಮಿತ್ಯನ್ಯಧೀಯೋ ಮನುಷ್ಯಾಃ ।**
**ಏಷೋऽಹಮನ್ಯೋऽಯಮಿತಿ ಭ್ರಮೇಣ**
**ದುರಂತಪಾರೇ ತಮಸಿ ಭ್ರಮಂತಿ ॥೫೦॥**

**ಮನೋಮಾತ್ರಂ** ಕೇವಲ ಮನೋऽಭಿಮಾನದಿಂದ ಉಂಟಾದ **ಇದಂ ದೇಹಂ** ಈ ದೇಹವನ್ನು **ಗೃಹೀತ್ವಾ** ಹೊಂದಿ **ಮಮ ಇದಂ** ಇದು ನನ್ನದು ಎಂಬ ಸ್ವಾತಂತ್ರ್ಯ ಭ್ರಮದಿಂದ **ಏಷಃ** ದೇಹವು **ಅಹಂ** ನಾನು ಎಂಬ ಜಡದೇಹವನ್ನು ಜೀವನೆಂದು ಭ್ರಮಿಸುವದರಿಂದ **ಅನ್ಯಃ** ವಿಲಕ್ಷಣನಾದ ಈಶ್ವರನು **ಅಯಂ** ಜೀವನು ಅಥವಾ **ಅನ್ಯಃ** ನಾನೇ ಕರ್ತಾ ಎಂಬ ಭ್ರಮದಿಂದಲೂ ಬೇರೆ ಜೀವನು **ಅಹಮೇವ** ನಾನೇ **ಅಹಂ ಅನ್ಯಃ ಇತಿ ಭೇದೊ ನ** ನಾನು ಅವನು ಎಂಬ ಭೇದವಿಲ್ಲ ಎಂಬ **ಭ್ರಮೇಣ** ಭ್ರಾಂತಿಯಿಂದ **ಅಂಧಧಿಯಃ** ಸರಿಯಾದ ಜ್ಞಾನವಿಲ್ಲದವರಾಗಿ **ಮನುಷ್ಯಾಃ ದುರಂತಪಾರೇ**

**ತಮಸಿ ಭ್ರಮಂತಿ** ಜನರು ದಾಟಲಾಗದ ತಮಸ್ಸಿನಲ್ಲಿ ಬಿದ್ದು **ಪುನಃ ಪುನಃ** ದುಃಖಪಡುವರೆಂದರ್ಥ.।।

**ತಾತ್ಪರ್ಯ- ಅಭಿಮಾನಮಾತ್ರೇಣೈವ ಜೀವಸ್ಯ ದೇಹೇನ ಸಂಬಂಧ ಇತಿ ಮನೋಮಾತ್ರಮ್ । ಮನಸಾ ನಿರ್ಮಾಣಮಿತಿ । ಅಹಮನ್ಯ ಇತ್ಯಪಿ ದೇಹಮಾತ್ರೇ ಮನ್ಯಂತೇ ।**

**ದೇಹಮಾತ್ರಂ ಸ್ವಮಾತ್ಮಾನಂ ಯಃ ಪರಂ ಚಾಭಿಪಶ್ಯತಿ ।**
**ಅಂಧೇ ತಮಸಿ ಮಗ್ನಸ್ಯ ನೋತ್ತಾರಸ್ತಸ್ಯ ಕುತ್ರಚಿತ್ ।। -ಇತಿ ಚ ।**

ಜೀವನಿಗೆ ಕೇವಲ ಅಭಿಮಾನದಿಂದಲೇ ದೇಹಸಂಬಂಧವಿರುವುದರಿಂದ ಆ ದೇಹವು ಮನೋಮಾತ್ರ ಎನಿಸಿಕೊಳ್ಳವದು. ಅಥವಾ ಮನಸ್ಸಿನಿಂದ ನಿರ್ಮಿಸಿರುವದರಿಂದಲೂ ಮನೋಮಾತ್ರವೆನಿಸುತ್ತದೆ. **ಏಷಃ ಅಹಂ** ಎಂದು ತನ್ನ ದೇಹವನ್ನು ತಾನು ಎಂದು ತಿಳಿಯುವಂತೆ ಅನ್ಯಃ ಎಂದು ಪರರ ದೇಹವನ್ನೇ ತಿಳಿಯುವನು. ಅಂತು ದೇಹಭಿನ್ನವಾದ ಜೀವನಿರುವನೆಂದು ತಿಳಿಯದೇ ಅಂಧಂತಮಸ್ಸಿನಲ್ಲಿ ಬಿದ್ದವನು ಮೇಲೇಳಲಾರನು ಎಂದು ಭಾವ.।।೫೦।।

ಇಲ್ಲಿಯವರೆಗೆ ಮನಸ್ಸಿಗೆ ದುಃಖಕಾರಣತ್ವವನ್ನು ಹೇಳಿದರು. ಅಭಿಮಾನದಿಂದಲೇ ಸುಖದುಃಖಕಾರಣವಾಗುವದೆಂದು ತಿಳಿದ ಮೇಲೆ ತಾನು ಮಾಡಿದ್ದನ್ನು ಅನುಭವಿಸುವ ಪುರುಷನು ಸಹನ ಮಾಡಬೇಕು ಕೋಪ ಮಾಡಬಾರದು ಎಂದು ಹೇಳುವರು-

**ಜನೋಽಸ್ಯ ಹೇತುಃ ಸುಖದುಃಖಯೋಶ್ಚೇತ್**
**ಕಿಮಾತ್ಮನಶ್ಚಾತ್ರ ಹಿ ಭೌಮಯೋಸ್ತತ್ ।**
**ಜಿಹ್ವಾಂ ಕ್ವಚಿತ್ ಸಂದಶತಿ ಸ್ವದದ್ಭಿ -**
**ಸ್ತದ್ವೇದನಾಯಾಂ ಕತಮಾಯ ಕುಪ್ಯೇತ್ ।।೫೧।।**

**ಅಸ್ಯ** ಜೀವನಿಗೆ **ಸುಖದುಃಖಯೋಃ ಹೇತುಃ** ಸುಖದುಃಖಕಾರಣವು **ಜನಃ ಚೇತ್** ಪರದೇಹವೆಂದಾದರೆ **ಅತ್ರ** ದೇಹದಲ್ಲಿರುವ ದೇಹಭಿನ್ನನಾದ **ಆತ್ಮನಃ** ಆತ್ಮನಿಗೆ **ಕಿಂ** ಏನಾಗುವದು? ಯಾವ ದುಃಖವು ಆಗಲಾರದು **ಕಿಂತು ಭೌಮಯೋಃ ತತ್** ಆ ದುಃಖವು ವಿವೇಕದಿಂದ ವಿಚಾರ ಮಾಡಿದಲ್ಲಿ ಪೃಥಿವಿ

ಕಾರ್ಯವಾದ ತಾಡ್ಯತಾಡಕಗಳಿಗೇನೇ ಹೊಡೆಯುವ ಹೊಡಿಸಿಕೊಳ್ಳುವ ದೇಹಕ್ಕೇನೇ ಆಗುವದು. ಜೀವನಿಗೆ ಅಲ್ಲ ಎಂದು ತಿಳಿದುಕೊಳ್ಳುವವರು ಯಾರ ಮೇಲೆ ಕೋಪಿಸಬೇಕು. ಅಥವಾ **ಅಸ್ಯ** ದೇಹಾಭಿಮಾನಿಗೆ **ಜನಃ** ದೇಹದಿಂದ ಕೂಡಿದ ಮತ್ತೊಬ್ಬನು ದುಃಖಾದಿಗಳಿಗೆ ಕಾರಣವೆಂದರೂ ತನ್ನ ದೇಹದಲ್ಲಿ ಜಡಚೇತನಗಳ ಮಧ್ಯದಲ್ಲಿ **ತತ್** ದುಃಖಾದಿಗಳು **ಭೌಮಯೋಃ** ಪೃಥಿವೀಪರಿಣತ ಸಾತ್ವಿಕ,ತಾಮಸ, ಮನಸ್ಸು ಇದ್ದರೇನೇ ಸುಖಾದಿಗಳಾಗು-ವವು. ಇಲ್ಲವಾದರೆ ಇಲ್ಲ (ಸೂಕ್ಷ್ಮಮನಸ್ಸಿನಲ್ಲಿ ದುಃಖವಿಲ್ಲ) **ಆತ್ಮನಃ ಕಿಂ** ದೇಹಾಭಿಮಾನ ರಹಿತನಾದ ಆತ್ಮನಿಗೆ ಸುಖದುಃಖಗಳಿಂದ ವಿಕಾರವಾಗದು. ಮನಸ್ಸಿನ ಸತ್ವಭಾಗ ತಮೋಭಾಗಗಳಿಗೆ ಪೀಡ್ಯಪೀಡಕತ್ವವು ಚೇತನರಿಗೆ ಮನಸ್ಸಂಬಂಧವಿದ್ದಾಗಲೇ ಆಗುವವು ಇಲ್ಲದಾಗ ಇಲ್ಲ. ನಿದ್ದೆಯಲ್ಲಿ ಸುಖ-ದುಃಖವಾಗದು. ಕಾರಣ ಯಾರ ಮೇಲೆ ಕೋಪ ಮಾಡುವದು? ಉದಾಹರಣ **ಸ್ವದದ್ಭಿಃ** ತನ್ನ ಹಲ್ಲುಗಳಿಂದ **ಜಿಹ್ವಾಂ ಕ್ವಚಿತ್ ಸಂದಶತಿ** ನಾಲಗೆಯನ್ನು ಕೆಲವೊಮ್ಮೆ ಕಚ್ಚುವನು. **ತದ್ವೇದನಾಯಾಂ** ಹಲ್ಲಿನಿಂದ ನಾಲಿಗೆಗೆ ನೋವು ಆದಾಗ **ಕತಮಾಯ ಕುಪ್ಯೇತ್** ಯಾರ ಮೇಲೆ ಸಿಟ್ಟಾಗುವನು ಹೇಗೆ ತನ್ನ ಅವಯವಗಳ ಮೇಲೆ ಕೋಪಿಸುವದಿಲ್ಲವೋ ಹಾಗೆ ಜನರ ಮೇಲೆ ಕೋಪಿಸಬಾರದು ಎಂದು ಭಾವ.

**ತಾತ್ಪರ್ಯ-** ಜನಶಬ್ದಃ ಸ್ವತೋ ಜೀವೇ ಕ್ವಚಿದ್ದೇಹೇ ಚ ವರ್ತತೇ।।ಇತಿ ಪ್ರಯೋಗೇ

'**ಅಯೋಗ್ಯಕ್ರೋಧಾದೇಃ ಮನ ಏವ ಕಾರಣಂ**' ಜನಶಬ್ದವು ಸ್ವಾಭಾವಿಕವಾಗಿ ಜೀವನಲ್ಲಿ ಇದೆ. ಅವನ ಸಂಬಂಧದಿಂದ ಕೆಲವು ಸಲ ದೇಹ ವಾಚಕವು ಆಗಿದೆ. ಕ್ರೋಧ ಮಾಡಬಾರದ ಸ್ಥಳದಲ್ಲಿ ಕ್ರೋಧ ಮಾಡುವದಕ್ಕೆ ಮನಸ್ಸೇ ಕಾರಣವೆಂದರ್ಥ.

**ತಾಮ್ರಪರ್ಣಿ-** ಯದ್ಯಪಿ ಹೊಡಿಸಿಕೊಳ್ಳುವವನಿಗೆ ಅಭಿಮಾನ ನಿಮಿತ್ತ ದುಃಖವಾಗುವದು ಹೊಡೆಯುವವನಿಗೆ ಅಲ್ಲ. ಆದರೂ ಹೊಡೆಯುವವನಿಗೆ ಪರರನ್ನು ಪೀಡಿಸುವದರಿಂದ ತಾತ್ಕಾಲಿಕ ಸುಖ ಮತ್ತು ಹೊಡೆದ ಪಾಪದಿಂದ ನರಕಾದಿ ದುಃಖ ಏನಾಗುವದೋ ಅದೂ ಸಹ ನಾನು ಪೀಡಕನು ಎಂಬ ಅಭಿಮಾನ ನಿಮಿತ್ತಕವೇ. ಎಂದು ತಿಳಿಸಲು ಭೌಮಯೋಃ ಎಂದು ಪೀಡ್ಯಪೀಡಕ ಮನಸ್ಸನ್ನು ಹೇಳಿದ್ದು ಎಂದು ತಿಳಿಯಬೇಕು.

ಇಲ್ಲಿ ಜನ ಶಬ್ದಕ್ಕೆ ಪೀಡಿಸುವ ಜೀವನೆಂದು ಅರ್ಥ ಮಾಡುವದೇ ಸೂಕ್ತ ಏಕೆಂದರೆ 'ತಂ ವೈ ಪ್ರವಯಸಂ ಭಿಕ್ಷುಮವಧೂತಮಸಜ್ಜನಾಃ । **ದೃಷ್ಟಾಃ ಪರ್ಯಭವನ್**'' ಎಂಬ ಶ್ಲೋಕದಲ್ಲಿ ಅಸಜ್ಜನರು ಕಾಡಿಸಿದರು ಎಂದು ಹೇಳಿ ''**ನಾಯಂಜನೋಮೇಸುಖದುಃಖಹೇತುರ್ನದೇವತಾತ್ಮಾಗ್ರಹಕರ್ಮಕಾಲಾಃ**'' ಎಂದು ಪ್ರಾರಂಭಿಸಿ ಹೊರಟ ಜನೋऽಸ್ಯ ಎಂಬುದಕ್ಕೆ ಪೀಡಕ ಜೀವ ಎಂದು ಅರ್ಥ ಹೇಳುವದೇ ಯುಕ್ತ . ಮುಂದೆ ೫೪ನೆಯ ಶ್ಲೋಕದಲ್ಲಿ ಅಜಸ್ಯ ಜನಸ್ಯ ಎಂದು ಜನಶಬ್ದ ಜೀವ ಪರವಾಗಿಯೇ ಕಂಡಿದೆ. ಮತ್ತು ಗೃಹ್ಯಮಾಣತ್ವಾದ್ಗ್ರಹಃ ದೇಹಃ ಎಂಬ ತಾತ್ಪರ್ಯಾನುಸಾರ ಗ್ರಹ ಶಬ್ದೋಕ್ತ ದೇಹಕ್ಕೆ ದುಃಖಕಾರಣತ್ವ ನಿಷೇಧ ಮಾಡುವದರಿಂದ ಇಲ್ಲಿಯೂ ಜನಶಬ್ದಕ್ಕೆ ದೇಹವೆಂದರ್ಥ ಮಾಡಿದರೆ ಪುನರುಕ್ತವಾಗುವದು. ಸ್ವಪರಸಾಧಾರಣವಾದ ಗ್ರಹಶಬ್ದದಿಂದ ಎರಡೂ ದೇಹ ಸ್ವೀಕರಿಸಲು ಬರುವಾಗ ಜನಶಬ್ದದಿಂದ ಪರದೇಹ ಸ್ವೀಕರಿಸಬೇಕು. ೫೪ರಲ್ಲಿ ಸ್ವದೇಹ ಸ್ವೀಕರಿಸಬೇಕು ಎಂದು ಹೇಳಲು ಯಾವ ವಿಶೇಷ ಕಾರಣವಿಲ್ಲ. ಇಲ್ಲಿಯ ತಾತ್ಪರ್ಯದಲ್ಲಿ ಜನಶಬ್ದ ದೇಹವನ್ನು ತಿಳಿಸುವದು ಎಂದು ಹೇಳಿದುದು ಸಾವಕಾಶವಾಗಿದೆ. ಅದಕ್ಕೆ ಐದನೆಯ ಸ್ಕಂಧದಲ್ಲಿ ''**ಅಯಂ ಜನೋ ನಾಮ**'' ಎಂಬಲ್ಲಿ ಜನಶಬ್ದ ದೇಹ ಪರವಾಗಿ ಕಂಡಿದೆ. ಆದ್ದರಿಂದ ಅನೇಕಾರ್ಥವಾಗಿದೆ. ಅದರಲ್ಲಿ ಒಂದರ್ಥನಾದ ಜೀವನನ್ನು ಸ್ವೀಕರಿಸಿದೆ. ಎಂದು ಹೇಳಲು ತಾತ್ಪರ್ಯ ಹೊರಟಿದೆ ಎಂದರ್ಥ ಮಾಡಬಹುದು. ಯೋಜನೆ ಮೇಲೆ ಹೇಳಿದ್ದೇ ಆಗಿದೆ.

'**ನನು ರಾಗಾದ್ಯಾಃ ನ ಗುಣೋದ್ಭವಾಃ । ಶುದ್ಧಜ್ಞಾನಾತ್ಮಕಾಃ ಸರ್ವೇ ಮುಕ್ತಾನಾಂ ನಾತ್ರ ಸಂಶಯಃ**'' ಎಂದು ದಶಮತಾತ್ಪರ್ಯ ನಾಲ್ಕನೆಯ ಅಧ್ಯಾಯ ೨೧ನೆಯ ಶ್ಲೋಕದಲ್ಲಿ, ಮಿಥ್ಯಾಜ್ಞಾನಿಗಳಲ್ಲಿ ಮಾಡುವ ಕ್ರೋಧ, ಗುರುಗಳಲ್ಲಿ ಭಕ್ತಿಜ್ಞಾನಗಳಲ್ಲಿ ಮಾಡುವ ರಾಗಾದಿಗಳು ಸ್ವರೂಪವೆಂದು ಹೇಳಿದೆ. ಕಾರಣ ಅಭಿಮಾನ ರೂಪ ಮನಸ್ಸು ಕಾರಣ ಎಂದು ಹೇಳುವದು ಹೇಗೆ? ಎಂಬ ಶಂಕೆಯನ್ನು ನಿವಾರಿಸಲೆಂದು ಅಯೋಗ್ಯ ಕ್ರೋಧಾಧಿಗಳಿಗೆ ಮನಸ್ಸು ಕಾರಣ ಎಂದು ಆಚಾರ್ಯರು ಹೇಳಿದ್ದು. ಯೋಗ್ಯಸ್ಥಳದಲ್ಲಿ ಮಾಡುವ ಕ್ರೋಧ, ರಾಗಗಳು ಸ್ವರೂಪವಾದರೂ ಭಗವದ್ಭಕ್ತರಲ್ಲಿ ಕ್ರೋಧ, ಅಸಜ್ಜನರಲ್ಲಿರಾಗ ಹೀಗೆ ಮಾಡುವ ಅಯೋಗ್ಯ ಕ್ರೋಧಾದಿಗಳಿಗೆ ಮನಸ್ಸು ಕಾರಣವೆಂದರ್ಥ.

ದೇಹವು ಅಚೇತನವಾದುದರಿಂದ ದುಃಖ ಉಂಟು ಮಾಡುವ ಪ್ರವೃತ್ತಿ ಕೂಡಲಾರದು ಅಭಿಮಾನವು ಪರಾಧೀನವಾದುದರಿಂದ ಹೇಳಿದ್ದು ಅಯುಕ್ತ ಆದರೆ ದೇವತೆಗಳು ಮುಖ್ಯರಾದ್ದರಿಂದ ಅವರೆ ಕಾರಣವೆಂಬ ಶಂಕೆಗೆ ಉತ್ತರಿಸುವರು-

**ದುಃಖಸ್ಯ ಹೇತುರ್ಯದಿ ದೇವತಾಽಸ್ತು ಕಿಮಾತ್ಮನಸ್ತತ್ರ ವಿಕಾರಯೋಸ್ತತ್ ।**
**ಯದಂಗಮಂಗೇನ ವಿಹನ್ಯತೇ ಕ್ವಚಿತ್ ಕ್ರುಧ್ಯೇತ ಕಸ್ಮೈ ಪುರುಷಃ ಸ್ವದೇಹೇ॥**

**ಯದಿ** ಒಂದು ವೇಳೆ **ದುಃಖಸ್ಯ ಹೇತುಃ** ದುಃಖಕಾರಣವು **ದೇವತಾ** ದೇವತೆ ಎನ್ನುವದಾದರೆ **ಅಸ್ತು** ಅದು ಹಾಗಿರಲಿ ವಿಚಾರ ಮಾಡಿದರೆ ಅದು ಸರಿಯಲ್ಲ ಏಕೆ **ವಿಕಾರಯೋಃ** ವಿಕಾರಾಭಿಮಾನಿ ದೇವತೆಗಳಿಂದಾಗುವ **ತತ್** ಆ ದುಃಖವು ಅಭಿಮಾನನಿಮಿತ್ತವೇ **ಆತ್ಮನಃ ಕಿಂ** ನಿರಭಿಮಾನಿಯಾದ ಸುಖರೂಪನಾದ ಜೀವನಿಗೇನಾಗಬೇಕಾಗಿದೆ ದೇವತೆಗಳಿಂದ ಆಗಬೇಕಾದರೂ ಅಭಿಮಾನ-ವಿರುವಾಗಲೇ ಆಗುವದು. ದೇವತೆಗಳು ಇರುವ ಮಾತ್ರದಿಂದಾಗದು. ಸುಪ್ತಿ-ಸಮಾಧಿಯಲ್ಲಿ ದೇವತೆಗಳಿದ್ದರೂ ದುಃಖವಾಗದು. ಅದಕ್ಕೆ ದೃಷ್ಟಾಂತ **ಕ್ವಚಿತ್** ಕೆಲವು ಸಲ **ಅಂಗಂ** ಸೂರ್ಯಾಭಿಮನ್ಯಮಾನವಾದ ಚಕ್ಷುರಿಂದ್ರಿಯವು (ಕಣ್ಣು) **ಅಂಗೇನ** ಇಂದ್ರಾಭಿಮನ್ಯಮಾನ ಕೈಯಿಂದ **ವಿಹನ್ಯತೇ** ತಿವಿಯಲ್ಪಡುತ್ತದೆ. **ಸ್ವದೇಹೇ** ತನ್ನ ದೇಹದಲ್ಲಿ **ಪುರುಷಃ** ಜೀವನು **ಕಸ್ಮೈ ಕ್ರುಧ್ಯೇತ್** ಯಾರ ಮೇಲೆ ಸಿಟ್ಟಾಗುವನು. ಕಣ್ಣಲ್ಲಿ ಬೆರಳು ಚುಚ್ಚಿದಾಗ ಆ ಹಸ್ತಕ್ಕೆ ಸ್ವತಃಪ್ರವೃತ್ತಿ ಇಲ್ಲವಾದ್ದರಿಂದ ಕೈ ಕಾರಣವಲ್ಲ. ನಿಯಾಮಕ ದೇವತೆಗಳೂ ಅಭಿಮಾನವಿಲ್ಲದೇ ಪೀಡಕರಲ್ಲ ಮತ್ತು ಪೂಜ್ಯರಾದ್ದರಿಂದ ಕ್ರೋಧಾನರ್ಹರು.

ಶ್ರೀನಿವಾಸತೀರ್ಥರು ಇಲ್ಲಿ ''**ಅಯೋಗ್ಯಕ್ರೋಧಾದೇಃ ಮನ ಎವ ಕಾರಣಂ**'' ಎಂಬ ತಾತ್ಪರ್ಯವನ್ನು ಸೇರಿಸುವರು. ಕೋಪಮಾಡಲನರ್ಹರಾದ ದೇವತೆಗಳ ಮೇಲೆ ಕೋಪ ಮಾಡಲು ಅಭಿಮಾನಯುಕ್ತ ಮನಸ್ಸೇ ಕಾರಣ. ಅಂಥ ಮನಸ್ಸು ನನಗಿಲ್ಲ. ಆದ್ದರಿಂದ ನನಗೆ ದೇವತೆಗಳ ಮೇಲೆ ಕೋಪವಿಲ್ಲ ಎಂದು ಅರ್ಥ ಮಾಡಿರುವರು.

ದೇವತೆಗಳಿಗೆ ವಿಕಾರಶಬ್ದವಾಚ್ಯತ್ವ ಹೇಗೆಂದು ಹೇಳುವರು-

**ಅವಿಕಾರಾಶ್ಚ ತೇ ದೇವಾ ವಿಕಾರಾ ಇತಿ ಶಬ್ದಿತಾಃ ।**
**ಅಭಿಮಾನಾದ್ವಿಕಾರಸ್ಯ ಸ್ವತಃ ಶಕ್ತಾ ಅಪಿ ಧ್ರುವಮ್ ॥ ಇತಿ ಚ ।**

ಸ್ವತಃಸಮರ್ಥರಾದ ವಿಕಾರರಹಿತರಾದ ದೇವತೆಗಳು ವಿಕಾರವುಳ್ಳ ಇಂದ್ರಿಯಾದಿಗಳಿಗೆ ಅಭಿಮಾನಿಗಳಾದ್ದರಿಂದ ವಿಕಾರವೆನಿಸುವರು ಎಂದರ್ಥ ಅವರಿಗೆ ದುಃಖವಿಲ್ಲ. ಸ್ವತಃ ಶಕ್ತಾಃ ಎಂಬುದಕ್ಕೆ (ಅವಿಕಾರರಾದ ದೇವತೆಗಳು ವಿಕಾರವಾದ ಮನೋಽಭಿಮಾನಿಗಳಾದ್ದರಿಂದ ವಿಕಾರಾಃ ಎಂದು ಕರೆಸಿ-ಕೊಳ್ಳುವರು) ಅಭಿಮನ್ಯಮಾನವಾದ ಮನಸ್ಸೇ ಇಲ್ಲದೇ ದುಃಖ ಕೊಡಲು ಸಮರ್ಥರಾದರೂ ವಿಕಾರವಾದ ಮನಸ್ಸಿದ್ದಾಗಲೇ ದುಃಖಕಾರಣರು ಅಥವಾ ಮನೋಽಭಿಮಾನವಿಲ್ಲದೇ ದುಃಖ ಕೊಡಲು ಶಕ್ತರಾದರೂ ವಿಕಾರ ಮನಸ್ಸಿನ ಅಭಿಮಾನದಿಂದಲೇ ದುಃಖದಾಯಕರು ಹೀಗೂ ಅರ್ಥ ತಾಮ್ರಪರ್ಣಿಯಲ್ಲಿ ಇದೆ.॥೫೨॥

**ಆತ್ಮಾ ಯದಿ ಸ್ಯಾತ್ ಸುಖದುಃಖಹೇತುಃ**
**ಕಿಮನ್ಯತಸ್ತತ್ರ ನಿಜಃ ಸ್ವಭಾವಃ ।**
**ನ ಹ್ಯಾತ್ಮನೋಽನ್ಯದ್ಯದಿ ತನ್ಮೃಷಾ ಸ್ಯಾತ್**
**ಕ್ರುಧ್ಯೇತ ಕಸ್ಮೈ ನ ಸುಖಂ ನ ದುಃಖಮ್ ॥೫೩॥**

**ಯದಿ** ಒಂದು ವೇಳೆ **ಆತ್ಮಾ** ಮನಸ್ಸು **ಸುಖದುಃಖಹೇತುಃ ಸ್ಯಾತ್** ಸುಖದುಃಖ ಕಾರಣವೆಂದು ಹೇಳುವದಾದರೆ ಆಗಲಿ ಸುಖದುಃಖಗಳು ಮನಃ ಪರಿಣಾಮವಾದ್ದರಿಂದ ಒಪ್ಪಬಹುದು ಆದರೆ **ಯಃ ನಿಜಃ ಸ್ವಭಾವಃ** ಆತ್ಮೀಯವಾದ ಆನಂದಸ್ವಭಾವನಾದ ಜೀವನಿರುವನೋ **ತತ್ರ** ಅವನಿಗೆ **ಕಿಂ ಅನ್ಯತಃ** ತನ್ನಿಂದ ಭಿನ್ನವಾದ ದುಃಖಾತ್ಮನಾಪರಿಣತವಾದ ಮನಸ್ಸಿನಿಂದ ಏನು ಅನಿಷ್ಟವಾಯಿತು? ಏನೂ ಇಲ್ಲ. ಆದ್ದರಿಂದ ಕೋಪವೇಕೆ? ಎಂದರ್ಥ.

ದುಃಖರೂಪವಾದ ಮನಸ್ಸಿನ ಸಂಬಂಧದಿಂದ ಆನಂದರೂಪನಾದ ಜೀವನಿಗೆ ದುಃಖವಾಗುವದು ಎಂದರೆ ಹೇಳುವರು-

**ನ ಹಿ ಆತ್ಮನಃ ಅನ್ಯತ್** ಜೀವಸ್ವರೂಪದಿಂದ ಭಿನ್ನವಾದ ವಿರುದ್ಧವಾದ ದುಃಖವು ಯಾವುದೇ ನಿಮಿತ್ತದಿಂದ ಜೀವಸ್ವರೂಪವಾಗಲಾರದು. ಅಹಂ ಚೇತನಃ ಎಂದಂತೆ ಅಹಂ ದುಃಖೀ ಎಂದೂ ತೋರುತ್ತದೆ ಆದ್ದರಿಂದ

ದುಃಖಸ್ವರೂಪತ್ವವನ್ನು ಹೇಗೆ ನಿಷೇಧಿಸಲಾಗುತ್ತಿದೆ ಎಂದರೇ ಹೇಳುವರು **ತನ್ಮೃಷಾ ಸ್ಯಾತ್** ಹಾಗೆ ಕಂಡರೆ ಅದು ಸುಳ್ಳು ಅಸತ್ಯ ಏಕೆಂದರೆ **ನ ಸುಖಂ ನ ದುಃಖಂ** ಅಂದರೆ ಸುಖಸ್ವರೂಪನಾದ ಜೀವನು ಮನಸಾ ದುಃಖರೂಪ-ನಾಗಲಾರನು **ದುಃಖಂ** ದುಃಖರೂಪವಾದ ಮನಸ್ಸು ಸುಖರೂಪವಾಗಲಾರದು (ಜೀವ) ಕಾರಣ ಅಭಿಮಾನವಿಲ್ಲದೇ ಬೇರೆ ಯಾವ ಕಾರಣ ಹೇಳಲಾಗದು. **ಕಸ್ಮೈ ಕ್ರುಧ್ಯೇತ್** ಯಾರ ಮೇಲೆ ಕೋಪಿಸುವದು ಸಾಧ್ಯವಿಲ್ಲ. ಕಾರಣ ಸುಖರೂಪನಾದ ಜೀವ ದುಃಖಸ್ವರೂಪನೆಂದು ತೋರುವುದು ಭ್ರಮವೇ ಆಗಿದೆ.

**ತಾತ್ಪರ್ಯ- ನ ಹ್ಯಾತ್ಮನಃ ಸ್ವಭಾವಾದನ್ಯದ್ಭವತಿ । ಯದಿ ದೃಶ್ಯತೇ ತಥಾಪಿ ಮೃಷಾ ಸ್ಯಾತ್। ಸುಖರೂಪಂ ದುಖಂ ನ ಭವತಿ । ಅತೋ ಮನ ಏವ ತಥಾ ದರ್ಶಯತಿ ।**

**ಜೀವಸ್ಯ ಸುಖರೂಪಸ್ಯ ನ ದುಃಖಂ ಕ್ವಚಿದಿಷ್ಯತೇ ।**
**ಅತೋ ಮನೋಽಭಿಮಾನೇನ ದುಃಖೀ ಭವತಿ ನಾನ್ಯಥಾ ॥ -ಇತಿ ಭಾರತೇ**

ಸುಖರೂಪನಾದ ಜೀವನ ಸ್ವಭಾವದಿಂದ ಭಿನ್ನವಾದ ದುಃಖವು ಸ್ವರೂಪವಾಗಲಾರದು. ಜೀವನು ದುಃಖೀ ಎಂದು ತೋರುವದು ಭ್ರಮವೇ ಆಗುವದು. ಜೀವನು ಆನಂದಸ್ವರೂಪನಾದುದರಿಂದ ಸುಖಸ್ವರೂಪವಾದ ಜೀವಸ್ವರೂಪವು ದುಃಖರೂಪವಾಗಲಾರದು. ದುಃಖರೂಪವಾದ ಜೀವ-ಸ್ವರೂಪ ಸುಖಸ್ವರೂಪವಾಗಲಾರದು ಆದ ಕಾರಣ ದುಃಖರೂಪತ್ವ-ವಿಲ್ಲದ್ದರಿಂದ ಮನಸ್ಸೇ ಅಭಿಮಾನನಿಮಿತ್ತ ದುಃಖೀಎಂದು ತೋರುತ್ತಾನೆ ಎಂದು ಭಾರತದಲ್ಲಿದೆ.॥೫೩॥

**ಗ್ರಹಾ ನಿಮಿತ್ತಂ ಸುಖದುಃಖಯೋಶ್ಚೇತ್**
**ಕಿಮಾತ್ಮನೋಽಜಸ್ಯ ಜನಸ್ಯ ತೇ ವೈ ।**
**ಗ್ರಹೈರ್ಗ್ರಹಸ್ಯೈವ ಭವಂತಿ ಪೀಡಾಃ**
**ಕ್ರುಧ್ಯೇತ ಕಸ್ಮೈ ಪುರುಷಸ್ತತೋಽನ್ಯಃ ॥೫೪॥**

**ಗ್ರಹಾಃ** ನವಗ್ರಹಗಳು **ಸುಖದುಃಖಯೋಃ ನಿಮಿತ್ತಂ ಇತಿ ಚೇತ್** ಸುಖ-ದುಃಖ ಕಾರಣವೆಂದು ಅಂಗೀಕರಿಸಿದರೂ **ಅಜಸ್ಯ** ಉತ್ಪತ್ತಿರಹಿತವಾದ **ಆತ್ಮನಃ** ನನ್ನ ಸ್ವರೂಪಕ್ಕೆ **ಕಿಂ** ಏನು ಮಾಡಿಯಾವು? ಏನು ಮಾಡಲಾರವು.

ಏಕೆಂದರೆ ಅವುಗಳು **ಜನಸ್ಯ** ತಮ್ಮ ತಮ್ಮ ದಶೆಯಲ್ಲಿ ಹುಟ್ಟಿದವರಿಗೆ ತಮ್ಮ ಕಾರ್ಯ ಮಾಡುವವು ಎಂದು ಜ್ಯೋತಿಃಶಾಸ್ತ್ರದಲ್ಲಿ **ವೈ** ಪ್ರಸಿದ್ಧವಾಗಿವೆ. ಜನಸ್ಯತೇ ಎಂದದ್ದನ್ನೇ ವಿವರಿಸುವರು **ಗ್ರಹೈಃ** ನವಗ್ರಹಗಳಿಂದ **ಪೀಡಾಃ** ತೊಂದರೆಗಳು **ಗ್ರಹಸ್ಯೈವ** ಉತ್ಪತ್ತಿಯುಳ್ಳ ದೇಹಕ್ಕೇನೇ ಗೃಹ್ಯತೇ ಇತಿ ಗ್ರಹಃ ಅಂದರೆ ಭೋಗಕ್ಕಾಗಿ ಜೀವನಿಂದ ಸ್ವೀಕರಿಸುವದರಿಂದ ರೋಗಾದಿಗಳಿಗೆ ಒಳಗಾಗುವದರಿಂದಲು ಗ್ರಹ ಎಂದರೆ ದೇಹವೆಂದರ್ಥ. ಆದ್ದರಿಂದ **ತತಃ ಅನ್ಯಃ** ಪೀಡಾಯುಕ್ತ ದೇಹದಿಂದ ಭಿನ್ನನಾದ **ಪುರುಷಃ** ಮನುಷ್ಯನು **ಕಸ್ಮೈ ಕ್ರುಧ್ಯೇತ** ಯಾರ ಮೇಲೆ ಕೋಪಿಸುವನು?

ಆದರೆ ತಾಮ್ರಪರ್ಣಿಯವರು ನವಗ್ರಹಕ್ಕೆ ದುಃಖಕಾರಣತ್ವವು ಹಿಂದಿನ 'ದುಃಖಸ್ಯಹೇತುರ್ಯದಿ ದೇವತಾಸ್ತು' ಎಂಬಲ್ಲಿ ಹೇಳಿ ಆಗಿದೆ. ಜನೋऽಸ್ಯ ಎಂಬಲ್ಲಿ ಪರದೇಹಕ್ಕೆ ದುಃಖಕಾರಣತ್ವ ನಿರಾಕರಿಸಲಾಗಿದೆ. ಗ್ರಹಾ ನಿಮಿತ್ತಂ ಎಂಬಲ್ಲಿ ಸ್ವದೇಹಕ್ಕೆ ದುಃಖಕಾರಣತ್ವ ನಿರಾಕರಿಸಲಾಗಿದೆ. ಆದ್ದರಿಂದ ಪೌನರುಕ್ತ್ಯವಿಲ್ಲ ಎನ್ನುವರು. ಅವರ ಪ್ರಕಾರ ಹೀಗೆ ಅರ್ಥ ತಿಳಿಯುವುದು-

**ಗ್ರಹಾಃ** ದೇಹಗಳು **ಆತ್ಮನಃ** ಜೀವನಿಗೆ **ಸುಖದುಃಖಯೋಃ ನಿಮಿತ್ತಂ ಚೇತ್** ಸುಖದುಃಖ ಕಾರಣವೆಂದು ಹೇಳುವದಾದರೆ ಅವಿವೇಕದ ದಶೆಯಲ್ಲಿ ಆಗಲಿ ಜನನ, ಮರಣ, ಮುಪ್ಪು, ರೋಗ, ಮುಂತಾದವುಗಳ ದ್ವಾರಾ ದುಃಖ-ಕಾರಣವೆಂದು ಅಂಗೀಕರಿಸಿದರೆ **ಅಜಸ್ಯಆತ್ಮನಃ ಕಿಂ** ಜನನಾದಿ ರಹಿತನಾದ ದೇಹ ನನ್ನದಲ್ಲ ನಾನಲ್ಲವೆಂಬ ವಿವೇಕಿಯಾದ ಜೀವನಿಗೆ **ತೇ** ದೇಹಗಳು ದುಃಖ ಕಾರಣವಾಗುವವೇ? ಆಗಲಾರವು. ಆದ್ದರಿಂದ **ಗ್ರಹೈಃ** ದೇಹಗಳಿಂದ **ಪೀಡಾಃ** ಪಿಡೆಗಳು **ಗ್ರಹಸ್ಯ** ವಿಷಯಜ್ಞಾನರೂಪವಾದ ಮನಸಿಗೆ ಆಗುವದು. **ತತಃ ಅನ್ಯಃ** ದೇಹಭಿನ್ನವಾದ **ಪುರುಷಃ** ಬ್ರಹ್ಮಜ್ಞಾನಿಯು (ಪುರು ಬ್ರಹ್ಮ ಸರತೀತಿ) **ಕಸ್ಮೈ ಕ್ರುಧ್ಯೇತ್** ಯಾರಿಗೆ ಕೋಪಿಸುವನು. (ಮನಸಿನ ಮೇಲೆಯೆ ಕೋಪಿಸಬೇಕು)।।೫೪।।

ಗ್ರಹಾ ನಿಮಿತ್ತಂ ಎಂಬ ಶ್ಲೋಕದಲ್ಲಿ ಗ್ರಹಸ್ಯ ಎಂಬ ಷಷ್ಠ್ಯಂತವಾದ ಪದವನ್ನು ಆಚಾರ್ಯರು ತಾತ್ಪರ್ಯದಲ್ಲಿ ವ್ಯಾಖ್ಯಾನಿಸುತ್ತಿದ್ದಾರೆ-

**ತಾತ್ಪರ್ಯ- ಗೃಹ್ಯಮಾಣತ್ವಾತ್ ಗ್ರಹೋ ದೇಹಃ।**

ಗೃಹ್ಯತೇ ಎಂಬ ಕರ್ಮವ್ಯುತ್ಪತ್ತಿಯಿಂದ ಗ್ರಹ ಎಂದರೇ ದೇಹ ಎಂದು ಅರ್ಥ.

**ಕರ್ಮಾಸ್ತು ಹೇತುಃ ಸುಖದುಃಖಯೋರ್ವೈ**
**ಕಿಮಾತ್ಮನಸ್ತದ್ ಹಿ ಜಡೇಽಜಡತ್ವೇ।**
**ದೇಹೇ ಸ್ವವಿತ್ ಪುರುಷೋಽಯಂ ಸುಪರ್ಣಃ**
**ಕ್ರುಧ್ಯೇತ್ ಕಸ್ಮೈ ನ ಹಿ ಕರ್ಮ ಮೂಲಮ್** ॥೫೫॥

**ಕರ್ಮ** ಕರ್ಮವು (ಪುಣ್ಯಪಾಪಗಳು) **ಸುಖದುಃಖಹೇತುಃ ಅಸ್ತು** ಸುಖ-ದುಃಖಕ್ಕೆ ಕಾರಣ ಆಗುವದಾದರೆ ಆಗಲಿ ಆದರೆ **ಆತ್ಮನಃ ಅಜಡತ್ವೇ ಸತಿ ಕಿಂ** ಜೀವನಿಗೆ ಚೇತನತ್ವ ಸಿದ್ಧವಾದ ಮೇಲೆ ಅವನಿಗೇನಾಗುವದು? ಏನೂ ಇಲ್ಲ **ತತ್** ಕರ್ಮಾಧೀನವಾದ ದುಃಖಾದಿಗಳು **ಜಡೇ ವೈ** ಕರ್ಮಾಧೀನ ದೇಹದಲ್ಲಿ ಮನಸ್ಸಿಗೆ ಆಗುವದು. **ದೇಹೇ** ದೇಹದಲ್ಲಿರುವ **ಸ್ವವಿತ್** ಸ್ವತಂತ್ರನಾದ ಶ್ರೀಹರಿಯು ತನ್ನ ಸ್ವರೂಪವನ್ನು ತಿಳಿಯುವ **ಪುರುಷಃ ಸುಪೂರ್ಣಃ** ಜೀವನು ಸುಖಾತ್ಮಕನು **ಕಸ್ಮೈ ಕ್ರುಧ್ಯೇತ್** ಯಾರ ಮೇಲೆ ಕೋಪ ಮಾಡಬೇಕು. **ಕರ್ಮ ನಹಿ ಮೂಲಂ** ಆನಂದರೂಪನಾದ ಜೀವನಿಗೆ ಕರ್ಮಾಧೀನವಾದ ಜಡಮನಸ್ಸಿನಲ್ಲಿ ಅಭಿಮಾನ ಸೇರಿದಾಗ ಮಾತ್ರ ಆಗುವದು ನನಗೆ ಆ ವಿಧ ಮನಸ್ಸಿಲ್ಲ ಕಾರಣ ಕರ್ಮವು ನನ್ನ ದುಃಖಕ್ಕೆ ಕಾರಣವಲ್ಲ ಎಂದು ಭಾವ.॥೫೫॥

**ತಾತ್ಪರ್ಯ- ಅಜಡತ್ವೇ ಆತ್ಮನಃ।**

ಜೀವನು ಜಡವಲ್ಲವೆಂದು ಸಿದ್ಧವಾದ ಮೇಲೆ ಎಂದು ಅರ್ಥ. (ಮೂಲದಲ್ಲಿ ಜಡೇ ಎಂದು ಹೇಳಿ ಮತ್ತೆ ಜಡತ್ವೇ ಎಂದು ಪ್ರವೃತ್ತಿನಿಮಿತ್ತವನ್ನು ಪ್ರತ್ಯೇಕ ಹೇಳುವುದು ವ್ಯರ್ಥವೆನಿಸುವದು. ಕಾರಣ ಅಜಡತ್ವೇ ಎಂದು ಪದ ವಿಭಾಗ ಮಾಡಿ ಆತ್ಮನಃ ಎಂಬಲ್ಲಿ ಅನ್ವಯ ಮಾಡಿ ಜಡದಲ್ಲಿ ಅಜಡತ್ವ ವಿರುದ್ಧ ಎಂಬ ಶಂಕೆಯನ್ನು ನಿರಾಕರಿಸುವರು ಆಚಾರ್ಯರು.॥೫೫॥

**ಕಾಲೋಽಸ್ತು ಹೇತುಃ ಸುಖದುಃಖಯೋಶ್ಚೇತ್**
**ಕಿಮಾತ್ಮನಸ್ತತ್ರ ತದಾತ್ಮನೋಽಸೌ।**
**ನಾಗ್ನೇರ್ಹಿ ತಾಪೋ ನ ಹಿಮಸ್ಯ ತತ್ ಸ್ಯಾತ್**
**ಕ್ರುಧ್ಯೇತ ಕಸ್ಮೈ ನ ಪರಸ್ಯ ಬೋದ್ಧುಃ** ॥೫೬॥

**ಕಾಲಃ** ಕಾಲವು **ಸುಖದುಃಖಯೋಃ ಹೇತುಃ ಚೇತ್ ಅಸ್ತು** ಕಾಲವೇ ಸುಖದುಃಖ ಕಾರಣ ಎನ್ನುವದಾದರೆ ಆಗಲಿ ಎಲ್ಲದಕ್ಕೂ ನಿಮಿತ್ತ ಕಾರಣವಾಗಿದೆಯಷ್ಟೇ ಆದರೆ **ಆತ್ಮನಃ ಕಿಂ** ಸುಖರೂಪನಾದ ಜೀವನಿಗೆ ಏನಾಗುವದು? ಏನೂ ಇಲ್ಲ. **ತತ್ರ** ಅಂದ ಮೇಲೆ ಆಗುವದಾದರೆ **ತದಾತ್ಮನಃ** ಕಾಲಾಧೀನವಾದ ದೇಹಕ್ಕೆ **ಅಸೌ** ದುಃಖಾದಿಗಳು ಎನ್ನಬೇಕಾಗುವದು (ಆತ್ಮ ನಿತ್ಯ , ದೇಹ ಅನಿತ್ಯ) ಅದೂ ಸರಿಯಲ್ಲ. ಜಡವಾದುದರಿಂದ ದೇಹಕ್ಕೆ ದುಃಖಾದಿಗಳು ಸಾಧ್ಯವಿಲ್ಲ. ಹೇಗೆಂದರೆ ಜಡವಾದುದರಿಂದ **ಅಗ್ನೇಃ** ಅಗ್ನಿಗೆ **ತಾಪಃ** ತಾಪ ನಿಮಿತ್ತ ದುಃಖವು **ನ** ಇಲ್ಲವೋ **ಹಿಮಸ್ಯ** ಹಿಮಕ್ಕೆ **ತತ್** ಚಳಿಯಿಂದ ದುಃಖವಾಗದೊ ಅದರಂತೆ ದೇಹಕ್ಕೆ ಕಾಲಸಂಬಂಧವಿದ್ದರೂ ದುಃಖವಾಗಲಾರದು. ಅದರಲ್ಲಿರುವ ಶ್ರೀಹರಿಗೆ ಆಗುವದೇ? **ಬೋದ್ಧುಃ** ಸರ್ವಜ್ಞನಾದ **ಪರಸ್ಯ** ಪ್ರಕೃತಿವಿಲಕ್ಷಣನಾದ ಶ್ರೀಹರಿಗೆ **ನ** ಆಗಲಾರದು. ಕಾರಣ ಜೀವನಿಗೆ ಮನೋಽಭಿಮಾನವೇ ದುಃಖ ಕಾರಣವಾದ್ದರಿಂದ **ಕಸ್ಮೈ ಕ್ರುಧ್ಯೇತ್** ಯಾರ ಮೇಲೆ ಕೋಪಿಸುವದು. ಕಾಲದ ಮೇಲೆಯೂ ಕೋಪಿಸುವಂತಿಲ್ಲ.

ತದಾತ್ಮನಃ ಎಂದು ಕಾಲಾಭೇದ ಹೇಳುವಂತೆ ತೊರುವದು ಕಾರಣ ವ್ಯಾಖ್ಯಾನಿಸುವರು-

**ತಾತ್ಪರ್ಯ**- 'ತದಾತ್ಮನಃ ಕಾಲಾಧೀನಸ್ಯ । ಸ್ವಾತಂತ್ರ್ಯ(ಸ್ವಾಮಿತ್ವ)ಮಾತ್ಮಶಬ್ದೋಕ್ತಂ ಸ್ವರೂಪಮಪಿ ಕುತ್ರಚಿದಿತಿ ವಿವೇಕೇ। ಯಥಾಽಗ್ನೇರ್ಹಿಮಸ್ಯ ಚ ನೈವ ದುಃಖಂ ತಾಪನಿಮಿತ್ತಂ ಜಡತ್ವಾತ್। ಏವಂ ಜಡತ್ವಾದ್ದೇಹಸ್ಯಾಪಿ ಕಾಲಾದಿಸಂಬಂಧೇ ವಿದ್ಯಮಾನೇಽಪಿ ನ ದುಃಖಂ ಯುಕ್ತಮ್।

ಸದಾ ಕಾಲಾದಿಸಂಬಂಧಾದ್ದುಖಂ ದೇಹಸ್ಯ ಯುಜ್ಯತೇ ।
ತಥಾಪಿ ನೈವ ದುಃಖೀ ಸ ಜಡತ್ವಾನ್ನಿಯಮೇನ ತು ॥

ಆತ್ಮನಃ ಸುಖರೂಪತ್ವಾನ್ನ ದುಃಖಂ ಯುಜ್ಯತೇ ಕ್ವಚಿತ್ ।
ತಸ್ಮಾನ್ಮನೋಭ್ರಮೇಣೈವ ದುಃಖೀ ಜೀವೋ ನ ಚಾನ್ಯಥಾ ॥

ಸರ್ವೇಷಾಂ ಮನಸೋ ನೇತಾ ಮನೋರೂಪಸ್ತ್ರಿಲೋಚನಃ ।
ತದ್ವಶಾಃ ಸರ್ವದೇವಾಶ್ಚ ತೇನೈವ ಸುಖದುಃಖಿನಃ ॥

**ನಿಯಂತಾ ತಸ್ಯ ಚ ಪ್ರಾಣಸ್ತತೋಽಪಿ ಬಲವತ್ತರಃ ।**
**ತನ್ನಿಯಂತಾ ಹರಿಃ ಸಾಕ್ಷಾತ್ಪರಮಾನಂದಲಕ್ಷಣಃ ।। ಇತಿ ತಾತ್ಪರ್ಯೇ ।**

ತದಾತ್ಮನಃ ಎಂದರೆ ಕಾಲನಿಮಿತ್ತ ವಿಕಾರವುಳ್ಳದ್ದರಿಂದ ಕಾಲಾಧೀನವಾದ ಮನಸ್ಸಿಗೆ ಸ್ವಾತಂತ್ರ್ಯವು ಎಂಬುದು ಸ್ವರೂಪವು ಆತ್ಮ ಶಬ್ದದಿಂದ ಹೇಳಲ್ಪಡುತ್ತದೆ ಎಂದು ವಿವೇಕಗ್ರಂಥದಲ್ಲಿ ಹೇಳಿದೆ. ಹೇಗೆ ತಾಪ ನಿಮಿತ್ತ ದುಃಖವು ಅಗ್ನಿಗೆ, ಹಿಮನಿಮಿತ್ತ ದುಃಖವು ಹಿಮಕ್ಕೆ, ಜಡವಾದುದರಿಂದ ಇಲ್ಲವೋ ಹಾಗೆಯೇ ದೇಹವೂ ಜಡವಾದ ಪ್ರಯುಕ್ತ ಕಾಲಾದಿ ಸಂಬಂಧವಿದ್ದರೂ ಅದರಿಂದ ದುಃಖವಾಗುವುದಿಲ್ಲ.

**ಪ್ರಮಾಣಗಳ ಅರ್ಥ-**

ದೇಹಕ್ಕೆ ಕಾಲ ಸಂಬಂಧ ಸರ್ವದಾ ಇರುವದರಿಂದ ದುಃಖವು ಬರಬಹುದು. ಆದರೆ ದೇಹವು ಜಡವಾದ ಕಾರಣ ಅದಕ್ಕೆ ಸರ್ವಥಾ ದುಃಖವಾಗಲಾರದು. ಸಜ್ಜೀವನು ಸುಖಸ್ವರೂಪ ಆದುದರಿಂದ ಆತನಿಗೂ ದುಃಖವು ಕೂಡಲಾರದು. ಆದ ಕಾರಣ ಜೀವನು ಕೇವಲ ಮನೋಽಭಿಮಾನದಿಂದಲೇ ದುಃಖವುಳ್ಳವನು ಎನಿಸಿಕೊಳ್ಳುತ್ತಾನೆ. ಮನೋಽಭಿಮಾನಿ ರುದ್ರನು ಎಲ್ಲರ ಮನಸ್ಸಿಗೆ ಪ್ರೇರಕನು. ಇಂದ್ರಾದಿ ದೇವತೆಗಳೆಲ್ಲರೂ ರುದ್ರದೇವರ ಅಧೀನರು. ಅವರಿಂದ ಸುಖದುಃಖವುಳ್ಳವರು ಆಗುತ್ತಾರೆ. ರುದ್ರರಿಗಿಂತ ಅತಿ ಬಲಿಷ್ಠನಾದ ಮುಖ್ಯಪ್ರಾಣನು ರುದ್ರನಿಗೂ ಪ್ರೇರಕನು. ಸಾಕ್ಷಾತ್ ಪರಮಾನಂದರೂಪಿಯಾದ ಶ್ರೀಹರಿಯು ಮುಖ್ಯಪ್ರಾಣನಿಗೂ ನಿಯಾಮಕನು ಎಂದು ತಾತ್ಪರ್ಯ ಗ್ರಂಥದಲ್ಲಿದೆ.।।೫೬।।

ಹಿಂದಿನ ಶ್ಲೋಕಗಳಲ್ಲಿ ಮನಸ್ಸಿದ್ದರೆ ದುಃಖವಾಗುವದು ಎಂದು ಅನ್ವಯ ಸಹಚಾರ ತಿಳಿಸಿ ಮನಸ್ಸಿಲ್ಲದಿದ್ದರೆ ದುಃಖವೂ ಇಲ್ಲ ಎಂದು ವ್ಯತಿರೇಕ ಸಹಚಾರವನ್ನು ತಿಳಿಸಿ ಮನಸ್ಸಿಗೆ ಕಾರಣತ್ವವನ್ನು ಸ್ಥಿರಪಡಿಸುವರು-

**ನ ಕೇನಚಿತ್ ಕ್ವಾಪಿ ಕಥಂಚನಾಸ್ಯ**
**ದ್ವಂದ್ವೋಪರಾಗಃ ಪರತಃ ಪರಸ್ಯ ।**
**ಯಥಾಽತ್ಮನಃ ಸಂಸೃತಿರೂಪಿಣಃ ಸ್ಯಾ-**
**ದೇವಂ ಪ್ರಬುದ್ಧೋ ನ ಬಿಭೇತಿ ಭೂತೈಃ ।।೫೭।।**

**ಯಥಾ** ಹೇಗೆ **ಸಂಸೃತಿರೂಪಿಣಃ** ಸಂಸಾರ ತರುವ ಸ್ವಭಾವವುಳ್ಳ **ಆತ್ಮನಃ** ಮನಸ್ಸಿಗೆ**ಯಥಾದ್ವಂದ್ವೋಪರಾಗಃ**ಸುಖದುಃಖವೆಂಬರಾಹುಗ್ರಹಣವಿದೆಯೋ **ತಥಾ** ಹಾಗೇ **ಪರತಃ** ಬ್ರಹ್ಮಾದಿಗಳಿಗಿಂತ **ಪರಸ್ಯ** ಉತ್ತಮನಾದ **ಅಸ್ಯ** ಶ್ರೀಹರಿಗೆ **ದ್ವಂದ್ವೋಪರಾಗಃ** ದ್ವಂದ್ವಗ್ರಹಣವು **ಕೇನಚಿತ್** ಯಾವುದೇ ಕಾರಣದಿಂದ **ಕಂಥಚನ ಕ್ವಾಪಿ** ಯಾವ ರೀತಿಯಿಂದಲೂ **ನ ಸ್ಯಾತ್** ಆಗುವದಿಲ್ಲ. ಮನಸ್ಸೇ ಇಲ್ಲದ್ದರಿಂದ **ಏವಂ ಪ್ರಬುದ್ಧಃ** ಈ ರೀತಿ ತಿಳಿದವನು **ಭೂತ್ಯೈಃ ನ ಬಿಭೇತಿ** ದುಷ್ಟರು ಮಾಡುವ ಉಪದ್ರವದಿಂದ ಹೆದರುವದಿಲ್ಲ.।।೫೭।।

ಮೇಲಿನ ಶ್ಲೋಕದಲ್ಲಿ ಜೀವನಿಗೆ ಸಂಸಾರರೂಪತ್ವ ಹೇಳಿದಂತೆ ತೋರುವದು ಕಾರಣ ಅದು ಯುಕ್ತವಲ್ಲ. ಕಾರಣ ಆತ್ಮ ಪದವನ್ನು ವ್ಯಾಖ್ಯಾನಿಸುವರು ''ಆತ್ಮನಃ ಮನಸಃ'' ಈ ಶ್ಲೋಕ ಬೇಕಿರಲಿಲ್ಲ ಹಿಂದೆ ಜೀವನ ಸಂಸಾರ ಪ್ರಸಕ್ತವಾದುದರಿಂದ ಅದಕ್ಕೆ ಮನಸ್ಸೇ ಕಾರಣವೆಂದು ಹೇಳಿ ಅದನ್ನೇ ಉಪಸಂಹಾರ ಮಾಡಬೇಕು. ಭಗವಂತನಿಗೆ ದುಃಖಾದಿಗಳಿಲ್ಲ ಎಂದು ಹೇಳುವದು ಅಸಂಗತ ಎಂದು ಶಂಕಿಸಿ ಉತ್ತರಿಸುವರು-

**ತಾತ್ಪರ್ಯ-ಭೌಮಯೋರ್ವಿಕಾರಯೋಃಪೀಡ್ಯಪೀಡಕಯೋರುಭಯಮನಸೋಃ ಸತೋಃ ದುಃಖಂ ಭವತಿ। ಗ್ರಹಸ್ಯ ಗ್ರಹಣರೂಪಸ್ಯ ಮನಸಃ ಸತ ಏವ । ಜಡೇ ಮನಸಿ ಸತ್ಯೇವ । ತದಾತ್ಮನೋ ಮನಸಃ ಸತಃ । ಸಂಸೃತಿರೂಪಿಣಃ ಆತ್ಮನೋ ಜೀವಸ್ಯ ಯಥಾ ತಥಾನಹಿಪರಸ್ಯ ।ಅಮನಸ್ತ್ವಾತ್(ಅಮನಸ್ಕತ್ವಾತ್)ಅತೋಮನೋಽನ್ವಯವ್ಯತಿರೇಕ ಇತಿ ಭಾವಃ ।।೫೭।।**

ಆತ್ಮನಃ ಮನಸ್ಸಿಗೆ (ಮನಸ್ಸಿದ್ದರೇನೆ ಜೀವನಿಗೆ ದುಃಖಾದಿಗಳು) 'ಜನೋಽಸ್ಯ ಹೇತುಃ' ಎಂಬ ೫೧ ನೇ ಶ್ಲೋಕದಲ್ಲಿ ಭೌಮಯೋಃ ಎಂದು, 'ದುಃಖಸ್ಯ ಹೇತುಃ' ಎಂಬ ೫೨ ನೇ ಶ್ಲೋಕದಲ್ಲಿ ವಿಕಾರಯೋಃ ಎಂದು ಭೂವಿಕಾರಗಳಾದ ಪಿಡ್ಯಪೀಡಕರಾದ ಯಜ್ಞದತ್ತ ದೇವದತ್ತ ಶರೀರ-ಗಳಿದ್ದರೂ ಅಷ್ಟರಿಂದಲೇ ಸುಖದುಃಖಗಳಾಗಲಾರದು. ಮತ್ತೆ ಎರಡು ಮನಸ್ಸುಗಳಿದ್ದರೇನೇ ಜೀವನಿಗೆ ದುಃಖವಾಗುತ್ತದೆ. ಎಂದೂ, 'ಗ್ರಹಾ ನಿಮಿತ್ತಂ' ಎಂಬ ೫೪ ನೇ ಶ್ಲೋಕದಲ್ಲಿ ಗ್ರಹಸ್ಯ ದೇಹವನ್ನು ಹುಟ್ಟಿಸುವ ಸ್ವಭಾವವುಳ್ಳ ಮನಸ್ಸಿದ್ದರೇನೇ ಎಂದು, 'ಕರ್ಮಾಸ್ತು' ಎಂಬ ೫೫ ನೇ ಶ್ಲೋಕದಲ್ಲಿಯೂ ಜಡವಾದ ಮನಸ್ಸಿದ್ದರೇನೇ ಎಂದು ಕಾಲೋಽಸ್ತು ಎಂಬ

೫೬ನೇ ಶ್ಲೋಕದಲ್ಲಿಯೂ ಕಾಲಕೃತವಿಕಾರವಿರುವ ಮನಸ್ಸಿದ್ದರೇನೇ ಎಂದು ಹೇಳಿ 'ನ ಕೇನಚಿತ್' ಎಂಬ ೫೭ನೇ ಶ್ಲೋಕದಲ್ಲಿಯೂ ಸಂಸಾರವನ್ನು ಹೊಂದಿಕೊಂಡಿರುವ ಜೀವರಿಗೆ ಸಂಸಾರಕಾರಣ ಸ್ವಭಾವವುಳ್ಳ ಮನಸ್ಸಿದ್ದರೇನೇ ಹೇಗೆ ಸುಖದುಃಖಗಳು ಆಗುತ್ತವೋ ಹಾಗೆ ಅಂತಹ ಮನಸ್ಸು ಇಲ್ಲದಿರುವದರಿಂದ ಶ್ರೀಹರಿಗೆ ಸುಖದುಃಖಗಳಿಲ್ಲ ಎಂಬ ಅನ್ವಯ-ವ್ಯತಿರೇಕಗಳಿಂದ ಮನಸ್ಸೇ ದುಃಖಕಾರಣವೆಂದು ತಿಳಿಯುತ್ತದೆ.।।೫೭।।

ಈ ರೀತಿ ವೈರಾಗ್ಯವು ಶ್ರೀಹರಿಯ ಪಾದಾರವಿಂದದಲ್ಲಿ ಭಕ್ತಿಯನ್ನು ಹುಟ್ಟಿಸಿ ಮುಕ್ತಿಸಾಧನವಾಗುವದು ಎಂದು ಹೇಳುವರು-

**ಏತಾಂ ಸಮಾಸ್ಥಾಯ ಪರಾತ್ಮನಿಷ್ಠಾ-**
**ಮಧ್ಯಾಸಿತಾಂ ಪೂರ್ವತನೈರ್ಮಹರ್ಷಿಭಿಃ ।**
**ಅಹಂ ತರಿಷ್ಯಾಮಿ ದುರಂತಪಾರಂ**
**ತಮೋ ಮುಕುಂದಾಂಘ್ರಿನಿಷೇವಯೈವ ।।೫೮।।**

**ಪೂರ್ವತನೈಃ** ಹಿಂದೆ ಇರುವ **ಮಹರ್ಷಿಭಿಃ** ದೊಡ್ಡದೊಡ್ಡ ಋಷಿಗಳಿಂದ **ಅಧ್ಯಾಸಿತಾಂ** ಅತ್ಯುಪಾದೇಯವೆಂದು ಸ್ವೀಕರಿಸಿದ **ಏತಾಂ** ಅಭೀಷ್ಟಪ್ರದವಾದ **ಪರಾತ್ಮನಿಷ್ಠಾಂ** ಪರಮಾತ್ಮಧ್ಯಾನರೂಪವಾದ ನಿಷ್ಠೆಗೆ ಕಾರಣವಾದ ಗಾಥಾವನ್ನು ಅಥವಾ ಪರಮಾತ್ಮವಿಷಯಕವಾದ ಸ್ವಸ್ವಾಮಿಭಾವಸಂಬಂಧ ನಿಶ್ಚಯವನ್ನು **ಸಮಾಸ್ಥಾಯ** ಸ್ಥಿರಪಡಿಸಿಕೊಂಡು (ಮನನ ಮಾಡಿ) **ಮುಕುಂದಾಂಘ್ರಿನಿಷೇವಯಾ ಏವ** ಶ್ರೀಹರಿಯ ಪಾದ ಸೇವನೆಯಿಂದಲೇ **ದುರಂತಪಾರಂ** ಎಲ್ಲಿಯೂ ತಿಳಿಯದ **ತಮಃ** ಬಂಧವನ್ನು ಅವಿದ್ಯಾವನ್ನು ತನ್ನಿಮಿತ್ತಕವಾದ ಸಂಸಾರವನ್ನು **ತರಿಷ್ಯಾಮಿ** ದಾಟುವೆನು.।।೫೮।।

ಈ ಗಾಥೆಯು ಋಷಿಸಂಪ್ರದಾಯಗತವಾದುದು ಎಂದಂತಾಯಿತು

**ಶ್ರೀಭಗವಾನುವಾಚ-**

**ನಿರ್ವಿದ್ಯ ನಷ್ಟದ್ರವಿಣೋ ಗತಕ್ಲಮಃ**
**ಪ್ರವ್ರಜ್ಯ ಗಾಂ ಪರ್ಯಟಮಾನ ಇತ್ಥಮ್ ।**
**ನಿರಾಕೃತೋಽಸದ್ಭಿರಪಿ ಸ್ವಧರ್ಮಾ-**
**ದಕಂಪಿತೋಽಸೌ ಮುನಿರಾಹ ಗಾಥಾಮ್ ।।೫೯।।**

**ನಷ್ಟದ್ರವಿಣಃ** ಐಶ್ವರ್ಯವನ್ನು ಕಳೆದುಕೊಂಡ ಬ್ರಾಹ್ಮಣನು **ನಿರ್ವಿದ್ಯ** ವಿರಕ್ತನಾಗಿ **ಗತಕ್ಲಮಃ** ವಿಕಾರರಹಿತನಾಗಿ **ಇತ್ಥಂ** ಹಿಂದೆ ಹೇಳಿದ ಪ್ರಕಾರ **ಅಸದ್ಭಿಃ** ದುರ್ಜನರಿಂದ **ನಿರಾಕೃತಃ ಅಪಿ** ಧರ್ಮಾಚರಣೆಗೆ ತೊಂದರೆಗಳು ಬಂದರೂ **ಸ್ವಧರ್ಮಾತ್** ಕ್ರೋಧಾದಿ ಪರಿತ್ಯಾಗದಿಂದ **ಅಕಂಪಿತಃ** ಚಲಿಸದಲೇ **ಪ್ರವ್ರಜ್ಯ** ಸನ್ಯಾಸವನ್ನು ಪಡೆದು **ಗಾಂ ಪರ್ಯಟಮಾನಃ** ಭೂಸಂಚಾರ ಮಾಡುತ್ತಾ **ಅಸೌ ಮುನಿಃ** ಈ ಜ್ಞಾನಿಯು **ಗಾಥಾಂ ಆಹ** ಈ ಗಾಥಾವನ್ನು ಹೇಳಿದನು.

ಗಾಥಾದ ಸಾರಾಂಶವನ್ನು ಹೇಳುವನು-

**ಸುಖದುಃಖಪ್ರದೋ ನಾನ್ಯಃ ಪುರುಷಸ್ಯಾತ್ಮವಿಭ್ರಮಃ ।**
**ಮಿತ್ರೋದಾಸೀನರಿಪವಃ ಸಂಸಾರಃ ಸ್ವಮನಸ್ತತಃ ॥೬೦॥**

**ಪುರುಷಸ್ಯ** ಮನುಷ್ಯನಿಗೆ **ಆತ್ಮವಿಭ್ರಮಃ** ಮನಸ್ಸಿನಲ್ಲಿ ರೂಢವಾದ ಅಹಂ ಮಮ ಎಂಬ ಅಭಿಮಾನರೂಪವಾದ ಭ್ರಮವೇ **ಸುಖದುಃಖಪ್ರದಃ** ಸುಖದುಃಖ ಕೊಡುವುದು **ನ ಅನ್ಯಃ** ಬೇರಾವುದೂ ಅಲ್ಲ. **ತತಃ** ಆದ್ದರಿಂದ **ಮಿತ್ರೋದಾಸಿನರಿಪವಃ** ಇವನು ಮಿತ್ರನು ಇವನು ಉದಾಸೀನನು ಇವನು ಶತ್ರು ಎಂಬ **ಸಂಸಾರಃ** ಸಂಸಾರವು **ಸ್ವಮನಃ** ಮನೋಽಭಿಮಾನ ನಿಮಿತ್ತಕವೇ ಆಗಿದೆ.॥೬೦॥

**ತಸ್ಮಾತ್ ಸರ್ವಾತ್ಮನಾ ತಾತ ನಿಗೃಹಾಣ ಮನೋಧಿಯಾ ।**
**ಮಯ್ಯಾವೇಶಿತಯಾ ಯುಕ್ತ ಏತಾವಾನ್ ಯೋಗಸಂಗ್ರಹಃ ॥೬೧॥**

**ತಸ್ಮಾತ್** ಆದ ಕಾರಣ **ಸರ್ವಾತ್ಮನಾ** ಎಲ್ಲ ರೀತಿಯಿಂದಲೂ **ಮಯ್ಯಾವೇಶಿತಯಾ ಯುಕ್ತಃ** ನನ್ನಲ್ಲಿ ಪ್ರವಿಷ್ಟವಾದ ಬುದ್ಧಿ ಎಂಬ ಮನೋನಿಗ್ರಹ ಉಪಾಯದಿಂದ ಕೂಡಿದವನಾಗಿ **ಮನಃ** ಮನಸ್ಸನ್ನು **ನಿಗೃಹಾಣ** ವಿಷಯಗಳಿಂದ ಪರಾವೃತ್ತಗೊಳಿಸು **ಏತಾವಾನ್ ಯೋಗಸಂಗ್ರಹಃ** ಯೋಗಶಾಸ್ತ್ರದಲ್ಲಿ ಹೇಳಿದ ಪ್ರಮೇಯದ ಸಾರ ಇಷ್ಟೇ.॥೬೧॥

**ಯ ಏತಾಂ ಭಿಕ್ಷುಣಾ ಗೀತಾಂ ಬ್ರಹ್ಮನಿಷ್ಠಾಂ ಸಮಾಹಿತಃ ।**
**ಧಾರಯನ್ ಶ್ರಾವಯನ್ ಶೃಣ್ವನ್ ದ್ವಂದ್ವೈರ್ನೈವಾಭಿಭೂಯತೇ ॥೬೨॥**

**ಯಃ** ಯಾರು **ಭಿಕ್ಷುಣಾ** ಸನ್ಯಾಸಿಯಿಂದ **ಗೀತಾಂ** ಹೇಳಿದ **ಬ್ರಹ್ಮನಿಷ್ಠಾಂ** ಶ್ರೀಹರಿಯಲ್ಲಿ ಸರ್ವೋತ್ತಮತ್ವಜ್ಞಾನಪೂರ್ವಕ ಮನೋನಿಗ್ರಹ ಸಾಧನವಾದ **ಏತಾಂ** ಈ ಗಾನವನ್ನು **ಧಾರಯನ್** ಮನಸ್ಸಿನಲ್ಲಿ ತಿಳಿಯುತ್ತಾ **ಶ್ರಾವಯನ್** ಕೇಳಿಸುತ್ತಾ **ಶೃಣ್ವನ್** ಕೇಳುತ್ತ ಇರುವವನು. **ದ್ವಂದ್ವೈಃ** ಶಿತೋಷ್ಣಸುಖ-ದುಃಖಗಳಿಂದ **ನ** **ಅಭಿಭೂಯತೇ** ಪರಾಜಿತನಾಗುವದಿಲ್ಲ. ದ್ವಂದ್ವ ಸಹಿಷ್ಣುವಾಗುವನು ಎಂದು ಭಾವ.॥೬೨॥

**॥ ಇತಿ ಶ್ರೀಮದ್ಭಾಗವತೇ ಏಕಾದಶಸ್ಕಂಧೇ ತ್ರಯೋವಿಂಶೋಽಧ್ಯಾಯಃ ॥**

★★★



## ಅಥ ಚತುರ್ವಿಂಶೋಧ್ಯಾಯಃ

ಸೃಷ್ಟ್ಯಾದಿಗಳ ಸರಿಯಾದ ಜ್ಞಾನವು ಮಿಥ್ಯಾಜ್ಞಾನನಾಶಕವೆಂದು ಹೇಳುತ್ತಾರೆ-

**ಅಥ ತೇ ಸಂಪ್ರವಕ್ಷ್ಯಾಮಿ ಸಾಂಖ್ಯಂ ಪೂರ್ವವಿನಿಶ್ಚಿತಮ್ ।**
**ಯದ್ವಿಜ್ಞಾಯ ಪುಮಾನ್ ಸದ್ಯೋ ಜಹ್ಯಾದ್ ವೈಕಲ್ಪಿಕಂ ಮಲಮ್॥೧॥**

**ಪೂರ್ವವಿನಿಶ್ಚಿತಂ** ಪ್ರಾಚೀನರಿಂದ ಭ್ರಮನಿವರ್ತಕವೆಂದು ನಿಶ್ಚಯಿಸಲ್ಪಟ್ಟ **ಸಾಂಖ್ಯಂ** ಯಥಾರ್ಥಜ್ಞಾನಸಾಧನವಾದ ಶಾಸ್ತ್ರೋಕ್ತಪ್ರಮೇಯವನ್ನು **ತೇ** ನಿನಗೆ **ಸಂಪ್ರವಕ್ಷ್ಯಾಮಿ** ಚೆನ್ನಾಗಿ ಹೇಳುವೆನು. **ಯದ್ ವಿಜ್ಞಾಯ** ಯಾವುದನ್ನು ತಿಳಿದು **ಸದ್ಯಃ** ಆವಾಗಲೇ **ವೈಕಲ್ಪಿಕಂ ಮಲಂ** ಭ್ರಮವೆಂಬ ದೋಷವನ್ನು **ಜಹ್ಯಾತ್** ಬಿಡುವನೋ ಅಂಥ **ಅಥ** ಪ್ರಮೇಯಾಂತರವನ್ನು ಹೇಳುವೆನು.॥೧॥

**ಆಸೀದ್ ಜ್ಞಾನಮಥೋ ಹ್ಯರ್ಥಶ್ಚೈಕಮೇವಾವಿಕಲ್ಪಿತಮ್ ।**
**ಯದಾ ವಿವೇಕನಿಪುಣಾ ಆದೌ ಕೃತಯುಗೇ ಜನಾಃ ॥೨॥**

**ಅಥೋ** ಆರಂಭದಲ್ಲಿ ಸೃಷ್ಟಿಸಮಯದಲ್ಲಿ ಅದರಲ್ಲಿಯೂ **ಆದೌ ಕೃತಯುಗೇ** ಕೃತಯುಗದ ಆದಿಯಲ್ಲಿ ಅಥವಾ ಮೊದಲಿನ ಕೃತಯುಗದಲ್ಲಿ **ಯದಾ** ಯಾವಾಗ ಯಾವ ಕಾರಣ **ವಿವೇಕನಿಪುಣಾಃ ಜನಾಃ** ಉಪಕ್ರಮಾದಿ-ಗಳಿಂದ ವೇದಾರ್ಥಜ್ಞಾನ ಮಾಡಿಕೊಳ್ಳಲು ಕುಶಲರಾದ ಜನರು **ಆಸನ್** ಇದ್ದರೋ **ತದಾ** ಆಗ ಆ ಕಾರಣ **ಅರ್ಥಃ ಜ್ಞಾನಂಚ ಏಕಮೇವ ಆಸೀತ್** ಅರ್ಥ ಮತ್ತು ಜ್ಞಾನ ಒಂದೇ ಆಗಿತ್ತು. ಅಂದರೆ ಪದಾರ್ಥ ಯಾವ ರೀತಿಯಾಗಿದೆಯೋ, ಅದೇ ರೀತಿ ಜ್ಞಾನ ಬರುತಿತ್ತು. ಜ್ಞಾನಂ ಎಂದರೆ 'ಜ್ಞಾಯತೇ ಅನೇನ ಇತಿ ಜ್ಞಾನಂ' ಎಂಬ ವ್ಯುತ್ಪತ್ತಿಯಿಂದ ವೇದಗಳೆಂದರ್ಥ. ಜ್ಞಾನಜನಕವಾದ ವೇದಗಳು ಯಥಾರ್ಥ ಜ್ಞಾನಜನಕಗಳೇ ಆಗಿದ್ದವು ಎಂದರ್ಥ. **ಜ್ಞಾನಂ** ಶಾಸ್ತ್ರವು **ಅರ್ಥಶ್ಚ ಏಕಮೇವ** ಪದಾರ್ಥವು ಒಂದು ಎಂದರೆ **ಅವಿಕಲ್ಪಿತಂ** ಸಂಶಯ ಮತ್ತು ವಿಪರೀತಜ್ಞಾನಜನಕವಾಗಿರಲಿಲ್ಲ ಎಂದು ಅರ್ಥ. ಪದಾರ್ಥ ಹೇಗೆ ಸತ್ಯವೋ ಹಾಗೆ ಜ್ಞಾನವೂ ಸತ್ಯವಾದುದ್ದರಿಂದ ಸತ್ತಯಾ ಸಾದೃಶ್ಯವಿರುವುದರಿಂದ ಸಾದೃಶ್ಯಾಭೇದ ನಿಮಿತ್ತಕ ಜ್ಞಾನಾರ್ಥಗಳಿಗೆ ಐಕ್ಯವನ್ನು ಮೂಲದಲ್ಲಿ ಹೇಳಿರುವರು. ಇದೇ

ಮಾತನ್ನೇ ''ನಾರಾಯಣಾದ್ವಿನಿಷ್ಪನ್ನಂ ಜ್ಞಾನಂ ಕೃತಯುಗೇ ಸ್ಥಿತಂ'' ಎಂದು ಸೂತ್ರಭಾಷ್ಯದಲ್ಲಿ ಹೇಳಿದೆ. ಯಥೋತ್ಪನ್ನಂ ತಥೈವ ಸ್ಥಿತಂ ಎಂದು ತತ್ವಪ್ರಕಾಶಿಕೆ ಅಂದರೆ ಇದಮದೋ ವಾ ಎಂದು ಸಂದಿಗ್ಧವಾಗಲಿ ಮಿಥ್ಯಾದೃಷ್ಟಿದುಷ್ಟವಾಗಲಿ ಆಗಿರಲಿಲ್ಲ. ಹರಿ ಸರ್ವೋತ್ತಮನೆಂಬ ಜ್ಞಾನ ದೃಢವಾಗಿತ್ತು. ಹೌದೋ ಅಲ್ಲೋ ಸಂಶಯವಾಗಲೀ, ಶಿವನೇ ಸರ್ವೋತ್ತಮ ಎಂಬ ವಿಪರೀತ ಜ್ಞಾನವಾಗಲೀ ಇರಲಿಲ್ಲ ಎಂದು ಭಾವ.

ಪ್ರಕೃತ ಮೇಲಿನ ಶ್ಲೋಕದಲ್ಲಿ ಜ್ಞಾನಾರ್ಥಗಳಿಗೆ ಐಕ್ಯ ಹೇಳಿದರೆ ಬೌದ್ಧರ ವಿಜ್ಞಾನವಾದ ಒಪ್ಪಿದಂತಾಯಿತಲ್ಲ ಎಂದರೆ ಹೇಳುವರು-

**ತಾತ್ಪರ್ಯ- ಯಥೈವಾರ್ಥಸ್ತಥಾ ಜ್ಞಾನಂ ಜ್ಞಾನಾರ್ಥೈಕ್ಯಮುದಾಹೃತಮ್ ।**
**ತಥಾ ಕೃತಯುಗೇ ಪ್ರಾಯಸ್ತದನ್ಯೇಷು ತು ಕಸ್ಯಚಿತ್'' ।। ಇತಿ ಬ್ರಹ್ಮ ತರ್ಕೇ**

ವಿಷಯವು ಯಾವ ರೀತಿಯಾಗಿರುವುದೋ ಅದೇ ರೀತಿ ವಿಷಯೀ-ಕರಿಸುವುದು. (ಇದ್ದದ್ದನ್ನು ಇದ್ದಂತೆ ತಿಳಿಸಿದರೆ) ಜ್ಞಾನಾರ್ಥಗಳ ಐಕ್ಯವೆಂದು ಹೇಳಲ್ಪಟ್ಟಿದೆ. ಕೃತಯುಗದಲ್ಲಿ ಬಹುಶಃ ಯಥಾರ್ಥಜ್ಞಾನವೇ ಇರುವುದು ಬೇರೆ ಯುಗಗಳಲ್ಲಿ ಕೆಲವರಿಗೆ ಮಾತ್ರ ಸರಿಯಾದ ಜ್ಞಾನವಿರುವುದು ಎಂದು ಭಾವ.

ಸಮ್ಯಗ್ಜ್ಞಾನ ಬೇರೆ ಯುಗಗಳಲ್ಲಿದ್ದರೂ ಬಹಳವಾಗಿಲ್ಲ ಎಂಬ ಅಭಿಪ್ರಾಯದಿಂದ ಕೃತಯುಗ ಸ್ವೀಕರಿಸಿದ್ದಾರೆ. ಕೃತಯುಗದಲ್ಲಿಯೂ ಮಿಥ್ಯಾಜ್ಞಾನಿಗಳಾದ ದೈತ್ಯರಿರುವುದರಿಂದಲೂ ಪ್ರಾಯಃ ಎಂದಿದ್ದಾರೆ.।।೨।।

**ತನ್ಮಯಾ ಫಲರೂಪೇಣ ಕೇವಲೇನ ವಿಕಲ್ಪಿತಮ್ ।**
**ವಾಙ್ಮನೋಗೋಚರಂ ಸತ್ಯಂ ದ್ವಿಧಾ ಸಮಭವದ್ ಬೃಹತ್ ।।೩।।**

**ಫಲರೂಪೇಣ** ಅವರವರ ಯೋಗ್ಯತಾನುಸಾರ ಫಲ ನೀಡುವ **ಕೇವಲೇನ** ವೈಷಮ್ಯಾದಿದೋಷರಹಿತನಾದ **ಮಯಾ** ನನ್ನಿಂದ **ಬೃಹತ್** ಅಭಿಮಾನಿ ವಿವಕ್ಷೆಯಿಂದಸಮ್ಯಕ್ತ್ವವಿರುವುದರಿಂದಶ್ರೇಷ್ಠವಾದ **ವಾಙ್ಮನೋಗೋಚರಂ** ವಾಕ್ಕಿಗೆ ವಿಷಯವಾದ ಶಬ್ದ, ಮನಸ್ಸಿಗೆ ವಿಷಯವಾದ ಅರ್ಥ ಇವುಗಳಿಂದ ಹುಟ್ಟಿದ್ದರಿಂದ ವಾಙ್ಮನೋಗೋಚರವಾದ **ಸತ್ಯಂ** ಜ್ಞಾನಾರ್ಥಗಳಿಗೆ ಏಕರೂಪತೆ ಇರುವುದರಿಂದ ಅಬಾಧಿತವಾದ **ತತ್** ಶಬ್ದ ಮತ್ತು ಅರ್ಥಗಳೆಂಬ

ಉಭಯವು **ವಿಕಲ್ಪಿತಂ ಸತ್** ವಿವಿಧ ಕಲ್ಪನಾವಿಷಯವಾಗಿ ಮಾಡಲ್ಪಟ್ಟು **ದ್ವಿಧಾ ಸಮಭವತ್** ಎರಡಾಗಿ ಆಯಿತು. ಅಂದರೆ ಸಂಶಯ, ವಿಪರೀತಜ್ಞಾನ ವಿಷಯವಾಯಿತು. ವೇದವು ಸಂಶಯಜನಕ ಮತ್ತು ವಿಪರೀತಜ್ಞಾನ ಜನಕವಾಯಿತು. ಈ ಜ್ಞಾನ ಸರಿಯೋ ಆ ಜ್ಞಾನ ಸರಿಯೋ ಎಂಬ ಸಂಶಯ ವಿಷಯವಾಯಿತು. ಆ ಜ್ಞಾನವೇ ಸರಿಯೆಂದು ವಿಪರೀತಜ್ಞಾನ ವಿಷಯವಾಯಿತು ಇದನ್ನೇ (ಕಿಂಚಿತ್ತದನ್ಯಥಾ ಜಾತಂ ತ್ರೇತಾಯಾಂ ದ್ವಾಪರೇऽಖಿಲಂ ಎಂದು ಹೇಳಿದ್ದಾರೆ) **ಅನ್ಯಥಾ** ಇದಂ ಅದೋ ವಾ ಇತಿ ಸಂದಿಗ್ಧಂ ಅನ್ಯದೇವೇತಿ ಮಿಥ್ಯಾದೃಷ್ಟಿದುಷ್ಟಂ ಚ ಎಂದು ಭಾಷ್ಯ-ಟೀಕೆಗಳಲ್ಲಿ ಹೇಳಿದೆ.

ಮೇಲಿನ ಶ್ಲೋಕದಲ್ಲಿ (೩) ಫಲರೂಪನೆಂದು ಶ್ರೀಕೃಷ್ಣನಿಗೆ ಫಲದಿಂದ ಅಭೇದ ಹೇಳಿದಂತೆ ತೋರುವುದು ಕಾರಣ ವ್ಯಾಖ್ಯಾನಿಸುವರು.

**ತಾತ್ಪರ್ಯ– ಫಲಂ ರೂಪಯತೀತಿ ಫಲರೂಪಃ ।**

ಶ್ರೀಕೃಷ್ಣನು ಅವರವರ ಯೋಗ್ಯತಾ ಪ್ರಕಾರ ಕರ್ಮಫಲ ಕೊಡುವವನಾದುದರಿಂದ ಫಲರೂಪನೆಂದು ಕರೆಸಿಕೊಳ್ಳುವನು.

ಸತ್ಯಂ ದ್ವಿಧಾ ಸಮಭವತ್ ಎಂದರೆ ಪಾರಮಾರ್ಥಿಕ ವ್ಯಾವಹಾರಿಕ ಎಂದು ಸತ್ಯವು ಎರಡಾಯಿತು. ಎಂದರ್ಥ ತೋರುವುದು ಕಾರಣ ವ್ಯಾಖ್ಯಾನಿಸುವರು-

**ತಾತ್ಪರ್ಯ– ಜ್ಞಾನಾರ್ಥೈಕ್ಯೇನ ಸತ್ಯಮ್ ।**

ಸತ್ಯವೆಂದರೆ ಸಮ್ಯಗ್ಜ್ಞಾನವೆಂದರ್ಥ. ಪರಸ್ಪರ ವಿರೋಧವಿಲ್ಲದ್ದರಿಂದ ಜ್ಞಾನ ಅರ್ಥಗಳೆರಡೂ ಅಬಾಧಿತವಾದ್ದರಿಂದ ಸತ್ಯವೆಂದರ್ಥ.

ಕೃತಯುಗದಲ್ಲೇ ದ್ವಿವಿಧವಾಯಿತು ಎಂದರ್ಥವಾಗಬಾರದೆಂದು ಅಧ್ಯಾಹಾರ ಮಾಡಿ ವ್ಯಾಖ್ಯಾನಿಸುವರು-

**ತಾತ್ಪರ್ಯ– ಪಶ್ಚಾದ್ ದ್ವಿಧಾ ಸಮಭವತ್ ।**

ಅನಂತರ ತ್ರೇತಾಯುಗದಲ್ಲಿ ದ್ವಿಧಾ ಹರಿಸರ್ವೋತ್ತಮನೆಂಬ ಜ್ಞಾನ ಸರಿಯೋ, ಶಿವ ಸರ್ವೋತ್ತಮನೆಂಬ ಜ್ಞಾನವು ಸರಿಯೋ, ಎಂಬ ಸಂಶಯಾಸ್ಪದವಾಯಿತು. ಪಶ್ಚಾತ್ ದ್ವಾಪರದಲ್ಲಿ ಶಿವ ಸರ್ವೋತ್ತಮನೆಂಬ

ಜ್ಞಾನವೇ ಸರಿ ಎಂಬ ವಿಪರೀತ ಜ್ಞಾನ ವಿಷಯವಾಯಿತು. ಜ್ಞಾನ, ವಿಪರೀತ ಜ್ಞಾನದಿಂದ, ಸಂಭಿನ್ನವು ಅಭವತ್ ಆಯಿತು ಹೀಗೂ ಅರ್ಥ.

**ತಾತ್ಪರ್ಯ- ತತ್ ಶಬ್ದಾರ್ಥಾತ್ಮಕಮುಭಯಂ ಮಹತ್ತರಮ್ ।**

ಆಗಮಜನ್ಯವಾದ ಜ್ಞಾನ ಮತ್ತು ಅರ್ಥಗಳು ಎರಡೂ ಕೂಡಾ ಅತ್ಯಂತ ಮಹತ್ತಾಗಿದೆ.

ಈ ಶ್ಲೋಕದಲ್ಲಿ ಜ್ಞಾನ ಮತ್ತು ಅರ್ಥಗಳಿಗೆ ವಾಙ್ಮನೋಗೋಚರತ್ವ ಮತ್ತು ಬೃಹತ್ ಎಂದು ಅತ್ಯಂತಮಹತ್ವವನ್ನು ಹೇಳಿದೆ. ಜ್ಞಾನಾರ್ಥಗಳಿಗೆ ಮಹತ್ತರತ್ವ ಹೇಗೆ ಎಂದರೆ ಅಭಿಮಾನಿ ದೇವತೆಗಳ ಮಹತ್ವದಿಂದ ಎಂದು ಹೇಳಲು 'ತಯೋರೇಕತರಃ' ಮುಂತಾದ ಶ್ಲೋಕಗಳು ಹೊರಟಿವೆ. ಅವುಗಳ ತಾತ್ಪರ್ಯವನ್ನು ಪ್ರಮಾಣದಿಂದ ಹೇಳುವರು.

''ಜ್ಞಾನಾಭಿಮಾನೀ ಪುರುಷಃ ಸ ಬ್ರಹ್ಮಾ ಸಮುದಾಹೃತಃ ।
ಅರ್ಥಾಭಿಮಾನೀ ಪ್ರಕೃತಿರ್ಗಾಯತ್ರೀ ಸಾ ಪ್ರಕೀರ್ತಿತಾ ॥

ತಯೋರ್ನಿಯಾಮಕೋ ವಿಷ್ಣುಃ ಶ್ರೀಶ್ಚಾನುಗ್ರಾಹಿಕಾ ಸ್ಮೃತಾ ।
ವಾಯುಸ್ತು ಬ್ರಹ್ಮಣಃ ಪುತ್ರಃ ಪ್ರಕೃತೌ ಸಮಜಾಯತ ॥

ತ್ರಿಗುಣಾತ್ಮಾ ಸಮುದ್ದಿಷ್ಟಃ ಪ್ರಾಯಃ ಸತ್ವಾತ್ಮಕಸ್ತಥಾ ।
ಗಾಯತ್ರಿ ಚೈವ ಸಾವಿತ್ರೀ ತಥೈವ ಚ ಸರಸ್ವತೀ ॥

ಏವಂ ತ್ರಿರೂಪಾ ಪ್ರಕೃತಿರೇಕಾ ಸತ್ವಾದಿಭೇದತಃ ।
ತಾಸು ವೀರ್ಯಂ ಸಮುತ್ಸೃಷ್ಟಂ ಬ್ರಹ್ಮಣೈಕತ್ವಮಾಗತಮ್ ॥

ಸ ಸೂತ್ರಾತ್ಮಾ ಸಮುದ್ದಿಷ್ಟೋ ವಾಯುರ್ಲೋಕಪ್ರಣಾಯಕಃ ।
ತಸ್ಯಾಪಿ ಸೂತ್ರಂ ಭಗವಾನ್ ಧಾರಣಾದ್ವಿಷ್ಣುರವ್ಯಯಃ ॥

ಸೂತ್ರಪುತ್ರಸ್ತ್ವಹಂಕಾರಃ ಸ ರುದ್ರಃ ಸಮುದಾಹೃತಃ ।
ಸೂತ್ರಾತ್ಮನಾ ಮಹಾಂಶ್ಚಾಪಿ ಸಹಜಾತಶ್ಚತುರ್ಮುಖಃ ॥

ತಸ್ಯಾಪಿ ಪುತ್ರೋಽಹಂಕಾರಃ ಸ ಚಾನಂತ ಉದಾಹೃತಃ ।
ಅನಂತಾದಪಿ ರುದ್ರೋಽಭೂದ್ಬ್ರಹ್ಮಣಶ್ಚೇತಿ ಸ ತ್ರಿಧಾ ॥

ವೈಕಾರಿಕೋ ಬ್ರಹ್ಮಜಸ್ತು ತೈಜಸೋ ವಾಯುಜಃ ಸ್ಮೃತಃ ।
ತಾಮಸೋಽನಂತಜಶ್ಚೈವ ಸ ಏಕೋ ಗುಣಭೇದತಃ ॥ ಇತಿ ಪ್ರಾಥಮ್ಯೇ ।

**ಚಿದಚಿದ್ಯದ್ವಶೇ ಸರ್ವಂ ಸ ರುದ್ರಶ್ಚಿದಚಿನ್ಮಯಃ ಇತಿ ಚ ॥ ೩-೭ ॥**

ಜ್ಞಾನಕ್ಕೆ ಅಭಿಮಾನಿಯು ಪುರುಷನಾಮಕ ಬ್ರಹ್ಮನು. ಅರ್ಥಕ್ಕೆ ಅಭಿಮಾನಿನಿಯು ಗಾಯತ್ರೀ ನಾಮಕ ಪ್ರಕೃತಿಯು. ಇವರೀರ್ವರಿಗೂ ಲಕ್ಷ್ಮೀನಾರಾಯಣರು ನಿಯಾಮಕರೂ ಅನುಗ್ರಾಹಕರೂ ಆಗಿದ್ದಾರೆ. ವಾಯುವು ಪ್ರಕೃತಿಯಲ್ಲಿ ಬ್ರಹ್ಮನಿಗೆ ಮಗನಾಗಿ ಜನಿಸಿದನು. ಅವನು ಗುಣತ್ರಯ ಸ್ವರೂಪನು. ಆದರೂ 'ಸತ್ವಸತ್ವಮಹಾಸತ್ವಶುದ್ಧಸತ್ವಶ್ಚತು-ರ್ಮುಖಃ' ಎಂದಿರುವುದರಿಂದ ಸತ್ವಭಾಗವೇ ಬಹಳವಾಗಿರುವುದರಿಂದ ಸತ್ವಾತ್ಮಕ ದೇಹವುಳ್ಳವನೆನಿಸುತ್ತಾನೆ. ಬ್ರಹ್ಮನ ಪತ್ನಿಯಾದ ಪ್ರಕೃತಿಯೊಬ್ಬಳೇ ಸತ್ವಾದಿಗುಣಗಳಿಗೆ ಅಭಿಮಾನಿಯಾದುದರಿಂದ ಗಾಯತ್ರೀ, ಸಾವಿತ್ರೀ, ಸರಸ್ವತಿ, ಎಂಬ ಮೂರು ರೂಪವುಳ್ಳವಳಾಗಿದ್ದಾಳೆ. ಈ ಗಾಯತ್ರಿ ಸಾವಿತ್ರಿ ಸರಸ್ವತಿಯರಲ್ಲಿ ಬ್ರಹ್ಮನಿಂದ ಮೊದಲು ಪ್ರತ್ಯೇಕ-ಪ್ರತ್ಯೇಕವಾಗಿ ವೀರ್ಯವು ಸ್ಥಾಪಿತವಾಯಿತು. ಆಮೇಲೆ ಪ್ರತ್ಯೇಕ-ಪ್ರತ್ಯೇಕವಾಗಿಯೇ ವೀರ್ಯದಿಂದ ನಿರ್ಮಿತವಾದ ೨ ಶರೀರಗಳು ಐಕ್ಯವನ್ನು ಹೊಂದಿದವು. ಆ ದೇಹದಿಂದಲೇ ಸರ್ವಲೋಕಪ್ರೇರಕರಾದ ವಾಯುವೇ ಸೂತ್ರನಾಮಕನಾದನು. ಶ್ರೀಹರಿಯು (ಶ್ರೀಕೃಷ್ಣನು) ಮುಖ್ಯಪ್ರಾಣನಿಗೂ ಧಾರಕನಾದುದರಿಂದ ಸೂತ್ರನೆನಿಸುತ್ತಾನೆ. ಸೂತ್ರನಾಮಕ ವಾಯುವಿನಿಂದ ಅಹಂಕಾರಾಭಿಮಾನಿ- ಯಾದ ರುದ್ರನು ಜನಿಸಿದನು. ಸೂತ್ರ ನಾಮಕ ವಾಯುವಿನ ಜೊತೆಗೆ ಮಹತ್ತತ್ವಾಭಿಮಾನಿ ಚತುರ್ಮುಖನು ತನ್ನ ಪತ್ನಿಯರಲ್ಲೇ ಜನಿಸಿದನು. ಆ ಚತುರ್ಮುಖನಿಗೆ ಅಹಂಕಾರಾಭಿಮಾನಿ ಶೇಷನು ಜನಿಸಿದನು. ರುದ್ರನು ವಾಯುವಿನಿಂದ ಮಾತ್ರವಲ್ಲ ಶೇಷಬ್ರಹ್ಮನಿಂದಲೂ ಜನಿಸಿದನು. ವೈಕಾರಿಕ ಅಹಂಕಾರಾಭಿ-ಮಾನಿಯು ಬ್ರಹ್ಮನಿಂದಲೂ ತೈಜಸ ಅಹಂಕಾರಾಭಿಮಾನಿಯು ವಾಯುವಿನಿಂದಲೂ ತಾಮಸ ಅಹಂಕಾರಾಭಿಮಾನಿಯು ಶೇಷನಿಂದ ಜನಿಸಿದನು. ಹೀಗೆ ಒಬ್ಬನೇ ವೈಕಾರಿಕಾದಿ ಕಾರ್ಯಭೇದದಿಂದ ಮೂರು ರೂಪವುಳ್ಳವನು ಎಂದರ್ಥ.

ಚೇತನಾಚೇತನ ಜಗತ್ತು ಯಾವ ರುದ್ರನ ವಶವಾಗಿದೆಯೋ ಅವನು ಚಿದಚಿನ್ಮಯ ಎನಿಸುತ್ತಾನೆ. ಎಂದು ೩-೭ರ ವರೆಗಿನ ಶ್ಲೋಕಗಳ ತಾತ್ಪರ್ಯದ ಅಕ್ಷರಾರ್ಥ.

**ಪ್ರಮೇಯ ಸಂಗ್ರಹ ಶ್ರೀನಿವಾಸತೀರ್ಥರು-**

ಮೊದಲು ವಾಸುದೇವನಿಂದ ಮಾಯಾಳಲ್ಲಿ ಪುರುಷನಾಮಕ ಬ್ರಹ್ಮನು ಉತ್ಪನ್ನನಾದನು. ನಂತರ ಬ್ರಹ್ಮಪತ್ನಿಯಾದ ಪ್ರಕೃತಿಯೆಂಬುವಳು ವಾಯು ಪತ್ನಿಯಾದ ಭಾರತಿ, ಶ್ರದ್ಧಾ ಎಂಬ ಅವಳಿಯು ಪ್ರದ್ಯುಮ್ನನಿಂದ ಕೃತಿನಾಮಕ ರಮೆಯಲ್ಲಿ ಜನಿಸಿತು. ಆ ಪ್ರಕೃತಿಯು ಗಾಯತ್ರೀ, ಸಾವಿತ್ರೀ, ಸರಸ್ವತೀ, ಹೀಗೆ ಮೂರು ವಿಧಳಾದಳು. ಅವರಲ್ಲಿ ಪುನ್ನಾಮಕ ಬ್ರಹ್ಮನು ಪ್ರತ್ಯೇಕ ಪ್ರತ್ಯೇಕವಾಗಿ ವೀರ್ಯಾಧಾನ ಮಾಡಿದನು. ಆಗ ಸಂಕರ್ಷಣನಿಂದ ಜಯಾಳಲ್ಲಿ ಮೊದಲು ಜನಿಸಿದ್ದರೂ ಸೂತ್ರನಾಮಕ ವಾಯುವು ಪುನಃ ಜನಿಸಿದನು. ಅವನ ಜೊತೆಗೆ ಬ್ರಹ್ಮನು ತಾನೂ ಸಹ ತನ್ನ ಪತ್ನಿಯರಲ್ಲಿ ತನ್ನ ಮಗನಾಗಿ ಜನಿಸಿದನು. ಸೂತ್ರ ನಾಮಕವಾಯುವಿನಿಂದ ರುದ್ರನು ಜನಿಸಿದನು. ಅನಂತನಿಂದ ಮತ್ತೆ ರುದ್ರನು ಜನಿಸಿದನು. ಇವನು ತಾಮಸಾಹಂಕಾರಾಭಿಮಾನಿ, ಬ್ರಹ್ಮನಿಂದಲೇ ಸಾಕ್ಷಾತ್ ಹುಟ್ಟಿದ ರುದ್ರನು ವೈಕಾರಿಕ ಅಹಂಕಾರಾಭಿಮಾನಿಯು. ಇದು ಸಾರಾಂಶ.||೩-೭||

**ತಯೋರೇಕತರೋ ಹ್ಯರ್ಥಃ ಪ್ರಕೃತಿಃ ಸೋಭಯಾತ್ಮಿಕಾ ।**
**ಜ್ಞಾನಂ ತ್ವನ್ಯತಮೋ ಭಾಗಃ ಪುರುಷಃ ಸೋಽಭಿಧೀಯತೇ ||೪||**

**ತಯೋಃ** ಜ್ಞಾನ ಮತ್ತು ವಿಷಯಗಳ ಮಧ್ಯದಲ್ಲಿ **ಏಕತರಃ ಅರ್ಥಃ** ಅರ್ಥ ವಿಷಯವೆಂಬ ಅರ್ಥಕ್ಕೆ ಅಭಿಮಾನಿನಿಯು **ಪ್ರಕೃತಿಃ** ಗಾಯತ್ರೀ ಎಂಬುವವಳು. (ಅರ್ಥವು ಗಾಯತ್ರೀ ಅಭಿಮನ್ಯಮಾನವಾಗಿದೆ) **ಸಾ** ಇವಳು **ಉಭಯಾತ್ಮಿಕಾ** ಲಕ್ಷ್ಮೀನಾರಾಯಣರ ಅಧೀನಳು **ತಯೋಃ** ಜ್ಞಾನಾರ್ಥಗಳ ಮಧ್ಯದಲ್ಲಿ **ಅನ್ಯತಮಃ ಭಾಗಃ** ಒಂದಾದ ಜ್ಞಾನವು **ಯತ್ ಸಃ ಪುರುಷಃ ಅಭಿಧೀಯತೇ** ಪುನ್ನಾಮಕ ಬ್ರಹ್ಮನಿಂದ ಅಭಿಮನ್ಯಮಾನವು ಜ್ಞಾನಕ್ಕೆ ಬ್ರಹ್ಮನು ಅಭಿಮಾನಿಯು ಎಂದರ್ಥ. ಇವನು ಉಭಯಾತ್ಮಕನೇ ಲಕ್ಷ್ಮೀನಾರಾಯಣರಿಂದ ಸೃಷ್ಟನು ಅನುಗ್ರಾಹ್ಯನು. ಆದ್ದರಿಂದ ಜ್ಞಾನಾರ್ಥಗಳು ಮಹತ್ತರತ್ವಯುಕ್ತವೆಂದು ಭಾವ.||೪||

ಮತ್ತೆ ಅರ್ಥಾತ್ಮಕ ಪ್ರಕೃತಿಗೆ ಜ್ಞಾನಾತ್ಮಕ ಬ್ರಹ್ಮನಿಗೆ ಮಹತ್ವವನ್ನು ಉಪಪಾದಿಸುವರು-

**ಚಿದಚಿದ್ಯದ್ವಶೇ ಸರ್ವಂ ಸ ರುದ್ರಶ್ಚಿದಚಿನ್ಮಯಃ ಇತಿ ಚ ॥ ೩-೭ ॥**

ಜ್ಞಾನಕ್ಕೆ ಅಭಿಮಾನಿಯು ಪುರುಷನಾಮಕ ಬ್ರಹ್ಮನು. ಅರ್ಥಕ್ಕೆ ಅಭಿಮಾನಿನಿಯು ಗಾಯತ್ರೀ ನಾಮಕ ಪ್ರಕೃತಿಯು. ಇವರೀರ್ವರಿಗೂ ಲಕ್ಷ್ಮೀನಾರಾಯಣರು ನಿಯಾಮಕರೂ ಅನುಗ್ರಾಹಕರೂ ಆಗಿದ್ದಾರೆ. ವಾಯುವು ಪ್ರಕೃತಿಯಲ್ಲಿ ಬ್ರಹ್ಮನಿಗೆ ಮಗನಾಗಿ ಜನಿಸಿದನು. ಅವನು ಗುಣತ್ರಯ ಸ್ವರೂಪನು. ಆದರೂ 'ಸತ್ವಸತ್ವಮಹಾಸತ್ವಶುದ್ಧಸತ್ವಶ್ಚತು-ರ್ಮುಖಃ' ಎಂದಿರುವುದರಿಂದ ಸತ್ವಭಾಗವೇ ಬಹಳವಾಗಿರುವುದರಿಂದ ಸತ್ವಾತ್ಮಕ ದೇಹವುಳ್ಳವನೆನಿಸುತ್ತಾನೆ. ಬ್ರಹ್ಮನ ಪತ್ನಿಯಾದ ಪ್ರಕೃತಿಯೊಬ್ಬಳೇ ಸತ್ವಾದಿಗುಣಗಳಿಗೆ ಅಭಿಮಾನಿಯಾದುದರಿಂದ ಗಾಯತ್ರೀ, ಸಾವಿತ್ರೀ, ಸರಸ್ವತಿ, ಎಂಬ ಮೂರು ರೂಪವುಳ್ಳವಳಾಗಿದ್ದಾಳೆ. ಈ ಗಾಯತ್ರಿ ಸಾವಿತ್ರಿ ಸರಸ್ವತಿಯರಲ್ಲಿ ಬ್ರಹ್ಮನಿಂದ ಮೊದಲು ಪ್ರತ್ಯೇಕ-ಪ್ರತ್ಯೇಕವಾಗಿ ವೀರ್ಯವು ಸ್ಥಾಪಿತವಾಯಿತು. ಆಮೇಲೆ ಪ್ರತ್ಯೇಕ-ಪ್ರತ್ಯೇಕವಾಗಿಯೇ ವೀರ್ಯದಿಂದ ನಿರ್ಮಿತವಾದ ೨ ಶರೀರಗಳು ಐಕ್ಯವನ್ನು ಹೊಂದಿದವು. ಆ ದೇಹದಿಂದಲೇ ಸರ್ವಲೋಕಪ್ರೇರಕರಾದ ವಾಯುವೇ ಸೂತ್ರನಾಮಕನಾದನು. ಶ್ರೀಹರಿಯು (ಶ್ರೀಕೃಷ್ಣನು) ಮುಖ್ಯಪ್ರಾಣನಿಗೂ ಧಾರಕನಾದುದರಿಂದ ಸೂತ್ರನೆನಿಸುತ್ತಾನೆ. ಸೂತ್ರನಾಮಕ ವಾಯುವಿನಿಂದ ಅಹಂಕಾರಾಭಿಮಾನಿ- ಯಾದ ರುದ್ರನು ಜನಿಸಿದನು. ಸೂತ್ರ ನಾಮಕ ವಾಯುವಿನ ಜೊತೆಗೆ ಮಹತ್ತತ್ವಾಭಿಮಾನಿ ಚತುರ್ಮುಖನು ತನ್ನ ಪತ್ನಿಯರಲ್ಲೇ ಜನಿಸಿದನು. ಆ ಚತುರ್ಮುಖನಿಗೆ ಅಹಂಕಾರಾಭಿಮಾನಿ ಶೇಷನು ಜನಿಸಿದನು. ರುದ್ರನು ವಾಯುವಿನಿಂದ ಮಾತ್ರವಲ್ಲ ಶೇಷಬ್ರಹ್ಮನಿಂದಲೂ ಜನಿಸಿದನು. ವೈಕಾರಿಕ ಅಹಂಕಾರಾಭಿ-ಮಾನಿಯು ಬ್ರಹ್ಮನಿಂದಲೂ ತೈಜಸ ಅಹಂಕಾರಾಭಿಮಾನಿಯು ವಾಯುವಿನಿಂದಲೂ ತಾಮಸ ಅಹಂಕಾರಾಭಿಮಾನಿಯು ಶೇಷನಿಂದ ಜನಿಸಿದನು. ಹೀಗೆ ಒಬ್ಬನೇ ವೈಕಾರಿಕಾದಿ ಕಾರ್ಯಭೇದದಿಂದ ಮೂರು ರೂಪವುಳ್ಳವನು ಎಂದರ್ಥ.

ಚೇತನಾಚೇತನ ಜಗತ್ತು ಯಾವ ರುದ್ರನ ವಶವಾಗಿದೆಯೋ ಅವನು ಚಿದಚಿನ್ಮಯ ಎನಿಸುತ್ತಾನೆ. ಎಂದು ೩-೭ರ ವರೆಗಿನ ಶ್ಲೋಕಗಳ ತಾತ್ಪರ್ಯದ ಅಕ್ಷರಾರ್ಥ.

**ಪ್ರಮೇಯ ಸಂಗ್ರಹ ಶ್ರೀನಿವಾಸತೀರ್ಥರು-**

ಮೊದಲು ವಾಸುದೇವನಿಂದ ಮಾಯಾಳಲ್ಲಿ ಪುರುಷನಾಮಕ ಬ್ರಹ್ಮನು ಉತ್ಪನ್ನನಾದನು. ನಂತರ ಬ್ರಹ್ಮಪತ್ನಿಯಾದ ಪ್ರಕೃತಿಯೆಂಬುವಳು ವಾಯು ಪತ್ನಿಯಾದ ಭಾರತಿ, ಶ್ರದ್ಧಾ ಎಂಬ ಅವಳಿಯು ಪ್ರದ್ಯುಮ್ನನಿಂದ ಕೃತಿನಾಮಕ ರಮೆಯಲ್ಲಿ ಜನಿಸಿತು. ಆ ಪ್ರಕೃತಿಯು ಗಾಯತ್ರೀ, ಸಾವಿತ್ರೀ, ಸರಸ್ವತೀ, ಹೀಗೆ ಮೂರು ವಿಧಳಾದಳು. ಅವರಲ್ಲಿ ಪುನ್ನಾಮಕ ಬ್ರಹ್ಮನು ಪ್ರತ್ಯೇಕ ಪ್ರತ್ಯೇಕವಾಗಿ ವೀರ್ಯಾಧಾನ ಮಾಡಿದನು. ಆಗ ಸಂಕರ್ಷಣನಿಂದ ಜಯಾಳಲ್ಲಿ ಮೊದಲು ಜನಿಸಿದ್ದರೂ ಸೂತ್ರನಾಮಕ ವಾಯುವು ಪುನಃ ಜನಿಸಿದನು. ಅವನ ಜೊತೆಗೆ ಬ್ರಹ್ಮನು ತಾನೂ ಸಹ ತನ್ನ ಪತ್ನಿಯರಲ್ಲಿ ತನ್ನ ಮಗನಾಗಿ ಜನಿಸಿದನು. ಸೂತ್ರ ನಾಮಕವಾಯುವಿನಿಂದ ರುದ್ರನು ಜನಿಸಿದನು. ಅನಂತನಿಂದ ಮತ್ತೆ ರುದ್ರನು ಜನಿಸಿದನು. ಇವನು ತಾಮಸಾಹಂಕಾರಾಭಿಮಾನಿ, ಬ್ರಹ್ಮನಿಂದಲೇ ಸಾಕ್ಷಾತ್ ಹುಟ್ಟಿದ ರುದ್ರನು ವೈಕಾರಿಕ ಅಹಂಕಾರಾಭಿಮಾನಿಯು. ಇದು ಸಾರಾಂಶ.॥೩-೭॥

**ತಯೋರೇಕತರೋ ಹ್ಯರ್ಥಃ ಪ್ರಕೃತಿಃ ಸೋಭಯಾತ್ಮಿಕಾ ।**
**ಜ್ಞಾನಂ ತ್ವನ್ಯತಮೋ ಭಾಗಃ ಪುರುಷಃ ಸೋಽಭಿಧೀಯತೇ ॥೪॥**

**ತಯೋಃ** ಜ್ಞಾನ ಮತ್ತು ವಿಷಯಗಳ ಮಧ್ಯದಲ್ಲಿ **ಏಕತರಃ ಅರ್ಥಃ** ಅರ್ಥ ವಿಷಯವೆಂಬ ಅರ್ಥಕ್ಕೆ ಅಭಿಮಾನಿನಿಯು **ಪ್ರಕೃತಿಃ** ಗಾಯತ್ರೀ ಎಂಬುವವಳು. (ಅರ್ಥವು ಗಾಯತ್ರೀ ಅಭಿಮನ್ಯಮಾನವಾಗಿದೆ) **ಸಾ** ಇವಳು **ಉಭಯಾತ್ಮಿಕಾ** ಲಕ್ಷ್ಮೀನಾರಾಯಣರ ಅಧೀನಳು **ತಯೋಃ** ಜ್ಞಾನಾರ್ಥಗಳ ಮಧ್ಯದಲ್ಲಿ **ಅನ್ಯತಮಃ ಭಾಗಃ** ಒಂದಾದ ಜ್ಞಾನವು **ಯತ್ ಸಃ ಪುರುಷಃ ಅಭಿಧೀಯತೇ** ಪುನ್ನಾಮಕ ಬ್ರಹ್ಮನಿಂದ ಅಭಿಮನ್ಯಮಾನವು ಜ್ಞಾನಕ್ಕೆ ಬ್ರಹ್ಮನು ಅಭಿಮಾನಿಯು ಎಂದರ್ಥ. ಇವನು ಉಭಯಾತ್ಮಕನೇ ಲಕ್ಷ್ಮೀನಾರಾಯಣರಿಂದ ಸೃಷ್ಟನು ಅನುಗ್ರಾಹ್ಯನು. ಆದ್ದರಿಂದ ಜ್ಞಾನಾರ್ಥಗಳು ಮಹತ್ತರತ್ವಯುಕ್ತವೆಂದು ಭಾವ.॥೪॥

ಮತ್ತೆ ಅರ್ಥಾತ್ಮಕ ಪ್ರಕೃತಿಗೆ ಜ್ಞಾನಾತ್ಮಕ ಬ್ರಹ್ಮನಿಗೆ ಮಹತ್ವವನ್ನು ಉಪಪಾದಿಸುವರು-

**ತಮೋರಜಃ ಸತ್ವಮಿತಿ ಪ್ರಕೃತೇರಭವನ್ ಗುಣಾಃ ।**
**ಮಯಾ ಪ್ರಕ್ಷೋಭ್ಯಮಾಣಾಯಾಃ ಪುರುಷಾನುಮತೇನ ವಾ ॥೫॥**

ಸೃಷ್ಟಿಯ ಆದಿಭಾಗದಲ್ಲಿ ನನ್ನಿಂದ ಗುಣತ್ರಯಾಭಿಮಾನಿ ಲಕ್ಷ್ಮೀಯಲ್ಲಿ ಬ್ರಹ್ಮ-ಗಾಯತ್ರಿಯರಲ್ಲಿ ಜನಿಸಿದರು. ನಂತರ **ಮಯಾ** ನನ್ನಿಂದ **ಪ್ರಕ್ಷೋಭ್ಯ-ಮಾಣಾಯಾಃ** ಕಾರ್ಯೋನ್ಮುಖಳಾದ **ಪುರುಷಾನುಮತೇನ** ಲಕ್ಷ್ಮೀಯಿಂದಲೂ ಪುರುಷನಾಮಕನಾದ ತನ್ನ ಗಂಡನಾದ ಬ್ರಹ್ಮನ ಸಮ್ಮತಿಯಿಂದ ಅವನು ಮಾಡಿದ ಗರ್ಭಾಧಾನದಿಂದ **ಪ್ರಕೃತೇಃ** ಬ್ರಹ್ಮ ಪತ್ನಿಯಾದ ಅವ್ಯಕ್ತತತ್ವಕ್ಕೆ ಅವಾಂತರಾಭಿಮಾನಿನಿಯಾದ ಗಾಯತ್ರಿಯಿಂದ **ತಮಃ ರಜಃ ಸತ್ವಂ ಇತಿ ಗುಣಾಃ** ಸತ್ವ ರಜಸ್ಸು ತಮೋಗುಣಗಳು ಅವುಗಳಿಗೆ ಅಭಿಮಾನಿನಿಯರಾದ ಗಾಯತ್ರೀ-ಸಾವಿತ್ರೀ-ಸರಸ್ವತಿಯರು **ಅಭವನ್** ಉತ್ಪನ್ನರಾದರು. ಮೂಲ ಅವ್ಯಕ್ತತತ್ವಕ್ಕೆ ಮತ್ತು ಗುಣತ್ರಯಗಳಿಗೂ ಲಕ್ಷ್ಮಿಯೊಬ್ಬಳೇ ಅಭಿಮಾನಿನಿಯು. ಮಹದಾದಿ ಕಾರ್ಯದಲ್ಲಿ ಅನುಸ್ಯೂತನಾದ ಅವ್ಯಕ್ತ ಮತ್ತು ಗುಣತ್ರಯಗಳಿಗೆ ಬ್ರಹ್ಮಪತ್ನಿಯರು ಅಭಿಮಾನಿನಿಯರು ಎಂದು ತಿಳಿಯಬೇಕು.॥೫॥

**ತೇಭ್ಯಃ ಸಮಭವತ್ ಸೂತ್ರಂ ಮತ್ಸೂತ್ರೇಣ ಚ ಸಂಯುತಮ್ ।**
**ತತೋ ವಿಕುರ್ವತೋ ಜಾತೋ ಯೋಽಹಂಕಾರೋ ವಿಮೋಹಕಃ ॥೬॥**

**ತೇಭ್ಯಃ** ಆ ಗಾಯತ್ರೀ ಸಾವಿತ್ರೀ ಸರಸ್ವತಿಯರಿಂದ, (ಪುರುಷನಾಮಕ ಬ್ರಹ್ಮನು ಗರ್ಭಾಧಾನ ಮಾಡಿದಾಗ) **ಮತ್ಸೂತ್ರೇಣ ಸಂಯುತಂ** ನನ್ನ ಸರ್ವಾಧಾರ ರೂಪದಿಂದ ಕೂಡಿದ **ಸೂತ್ರಂ** ಸರ್ವಾಧಾರ ವಾಯುತತ್ವವು **ಸಮಭವತ್** ಉತ್ಪನ್ನವಾಯಿತು. ಜೊತೆಗೆ ಬ್ರಹ್ಮನೂ ಬೇರೆ ರೂಪದಿಂದ ಜನಿಸಿದನು. **ವಿಕುರ್ವತಃ** ಸೃಷ್ಟಿಸಲಿಚ್ಛಿಸುವ **ತತಃ** ಸೂತ್ರನಾಮಕ ವಾಯುವಿನಿಂದ **ವಿಮೋಹಕಃ ಅಹಂಕಾರಃ ಜಾತಃ** ಮೋಹಜನಕವಾದ ತೈಜಸ ಅಹಂಕಾರಾಭಿಮಾನಿ ರುದ್ರನು ಜನಿಸಿದನು. ಹಾಗೂ **ವಿಕುರ್ವತಃ ತತಃ** ಸೃಷ್ಟಿಸುವ ಬ್ರಹ್ಮನಿಂದ **ವಿಮೋಹಕಃ ಅಹಂಕಾರಃ** ವೈಕಾರಿಕ ಅಹಂಕಾರ ಅಭಿಮಾನಿರುದ್ರನು ಜನಿಸಿದನು. **ವಿಕುರ್ವತಃ ತತಃ** ಬ್ರಹ್ಮನಿಂದ ಅಹಂಕಾರಾಭಿಮಾನಿ ಅನಂತನು ಜನಿಸಿದನು **ತತಃ** ಅನಂತನಿಂದ **ಅಹಂಕಾರಃ** ತಾಮಸ ಅಹಂಕಾರಾಭಿಮಾನಿ ರುದ್ರನು ಜನಿಸಿದನು.॥೬॥

**ವೈಕಾರಿಕಸ್ತೈಜಸಶ್ಚ ತಾಮಸಶ್ಚೇತ್ಯಹಂ ತ್ರಿವೃತ್ ।**
**ತನ್ಮಾತ್ರೇಂದ್ರಿಯಮನಸಾಂ ಕಾರಣಂ ಚಿದಚಿನ್ಮಯಃ ॥೭॥**

**ವೈಕಾರಿಕಃ ತೈಜಸಃ ತಾಮಸಶ್ಚ ಇತಿ** ವೈಕಾರಿಕ, ತೈಜಸ, ತಾಮಸ, ಎಂದು **ತ್ರಿವೃತ್ ಅಹಂ** ಮೂರುಪ್ರಕಾರ **ಚಿದಚಿನ್ಮಯಃ** ಚೇತನಾಚೇತನ ನಿಯಾಮಕನಾದ ರುದ್ರನು ಜನಿಸಿದನು. ರುದ್ರನು **ತನ್ಮಾತ್ರೇಂದ್ರಿಯಮನಸಾಂ ಕಾರಣಂ** ಪಂಚತನ್ಮಾತ್ರ, ಪಂಚಮಹಾಭೂತ, ಪಂಚೇಂದ್ರಿಯಗಳು, ತದಭಿಮಾನಿ ದೇವತೆಗಳ ದೇಹ ಮನಸ್ಸಿಗೆ ಕಾರಣನಾಗಿದ್ದಾನೆ.॥೭॥

**ಅರ್ಥಸ್ತನ್ಮಾತ್ರಕೋ ಜಜ್ಞೇ ತಾಮಸಾದಿಂದ್ರಿಯಾಣಿ ಚ ।**
**ತೈಜಸಾದ್ ದೇವತಾ ಆಸನ್ನೇಕಾದಶ ಚ ವೈಕೃತಾತ್ ॥೮॥**

**ತಾಮಸಾತ್** ತಾಮಸ ಅಹಂಕಾರದಿಂದ **ತನ್ಮಾತ್ರಕಃ ಅರ್ಥಃ ಜಜ್ಞೇ** ಪಂಚತನ್ಮಾತ್ರಾಗಳು ಅಂದರೆ ಪಂಚಮಹಾಭೂತಗಳಿಗೆ ಕಾರಣವಾದ ದ್ರವ್ಯಗಳು ಪಂಚಭೂತಗಳು ಹುಟ್ಟಿದವು. **ತೈಜಸಾತ್** ತೈಜಸ ಅಹಂಕಾರದಿಂದ **ಇಂದ್ರಿಯಾಣಿ ಚ** ಇಂದ್ರಿಯಗಳು **ಏಕಾದಶ** ಮನಸ್ಸು ಸೇರಿ ಹನ್ನೊಂದು ಇಂದ್ರಿಯಗಳು ಹುಟ್ಟಿದವು. **ವೈಕೃತಾತ್** ವೈಕಾರಿಕ ಅಹಂಕಾರದಿಂದ **ದೇವತಾಃ** ದೇವತೆಗಳ ದೇಹಗಳು **ಜಾತಾಃ** ಹುಟ್ಟಿದವು.॥೮॥

**ಮಯಾ ಸಂಚೋದಿತಾ ಭಾವಾಃ ಸರ್ವೇ ಸಂಹತ್ಯಕಾರಿಣಃ ।**
**ಅಂಡಮುತ್ಪಾದಯಾಮಾಸುರ್ಮಮಾಯತನಮುತ್ತಮಮ್ ॥೯॥**

**ಮಯಾ** ನನ್ನಿಂದ **ಸಂಚೋದಿತಾಃ** ಪ್ರೇರಿತವಾದ **ಭಾವಾಃ** ೨೪ ತತ್ವಗಳು **ಸರ್ವೇ ಸಂಹತ್ಯಕಾರಿಣಃ** ಎಲ್ಲವೂ ಸೇರಿ ಕಾರ್ಯಮಾಡುವವುಗಳು **ಮಮ ಉತ್ತಮಂ ಆಯತನಂ** ನನಗೆ ಶ್ರೇಷ್ಠವಾದ ಆವಾಸಸ್ಥಾನವಾದ **ಅಂಡಂ** ಬ್ರಹ್ಮಾಂಡವನ್ನು **ಉತ್ಪಾದಯಾಮಾಸುಃ** ಹುಟ್ಟಿಸಿದವು.

**ತಸ್ಮಿನ್ನಹಂ ಸಮಭವಮಂಡೇ ಸಲೀಲಸಂಸ್ಥಿತೇ ।**
**ಮಮ ನಾಭ್ಯಾ ಅಭೂತ್ ಪದ್ಮಂ ವಿಶ್ವಾಖ್ಯಂ ತತ್ರ ಚಾತ್ಮಭೂಃ ॥೧೦॥**

**ಸಲೀಲಸಂಸ್ಥಿತೇ** ನೀರಿನಲ್ಲಿರುವ **ತಸ್ಮಿನ್ ಅಂಡೇ** ಆ ಸೃಷ್ಟವಾದ ಬ್ರಹ್ಮಾಂಡದಲ್ಲಿ **ಅಹಂ** ನಾನು **ಸಮಭವಂ** ಪ್ರವೇಶ ಮಾಡಿ ಸಮೀಚೀನವಾಗಿ

ವ್ಯಾಪ್ತನಾದೆನು. **ಮಮ** ಬ್ರಹ್ಮಾಂಡದಲ್ಲಿ ಪ್ರವೇಶಿಸಿದ ನನ್ನ **ನಾಭ್ಯಾಂ** ಹೊಕ್ಕಳಿನಲ್ಲಿ **ವಿಶ್ವಾಖ್ಯಂ ಪದ್ಮಂ ಅಭೂತ್** ಎಲ್ಲ ಲೋಕಗಳಿಗೆ ಉಪಾದಾನವಾದ ಕಮಲವು ಜನಿಸಿತು. **ತತ್ರ** ಆ ಕಮಲದಲ್ಲಿ **ಆತ್ಮಭೂಃ** ಚತುರ್ಮುಖನು **ಅಭೂತ್** ಜನಿಸಿದನು.।।೧೦।।

ಈ ಶ್ಲೋಕದಲ್ಲಿ ಸಮಭವಂ ಎಂದು ಶ್ರೀಹರಿಗೆ ಉತ್ಪತ್ತಿಯಿದೆ ಎಂದು ತೋರುವುದು ಕಾರಣ ವ್ಯಾಖ್ಯಾನಿಸುವರು-

**ತಾತ್ಪರ್ಯ**-''ಚಿದಾನಂದಶರೀರಸ್ತು ಪ್ರವಿಷ್ಟೋಽಂಡೇ ಹರಿಃ ಸ್ವಯಮ್ ।
ತನ್ನಾಭೇರ್ಭೂತದೇಹೋಽಭೂತ್ ಪದ್ಮಾದಪಿ ಚತುರ್ಮುಖಃ ।।

ಚತುರ್ಮುಖಸ್ತು ಸರ್ವಾಂಡವ್ಯಾಪ್ತದೇಹೋ ಮಹಾತಪಾಃ ।
ಹರಿಸ್ತು ಸರ್ವವ್ಯಾಪ್ತೋऽಪಿ ಭೂತದೇಹೋ ನ ತು ಕ್ವಚಿತ್ ।।
ನೈವಾಸ್ಯ ಪ್ರಾಕೃತೋ ದೇಹಃ ಪ್ರಾದುರ್ಭಾವೇಷ್ವಪಿ ಕ್ವಚಿತ್ ।। -ಇತಿ ನಿವೃತ್ತೇ

ಜ್ಞಾನಾನಂದಮಯವಾದ ಶರೀರವುಳ್ಳ ಶ್ರೀಹರಿಯು ಸಾಕ್ಷಾತ್ತಾಗಿ ಬ್ರಹ್ಮಾಂಡದಲ್ಲಿ ಪ್ರವೇಶ ಮಾಡಿದನು. ಅವನ ನಾಭಿಯಿಂದ ಪದ್ಮ ಉಂಟಾಯಿತು. ಆ ಪದ್ಮದಿಂದ ಭೌತಿಕ ದೇಹವುಳ್ಳ ಚತುರ್ಮುಖನು ಹುಟ್ಟಿದನು. ಚತುರ್ಮುಖನು ಬ್ರಹ್ಮಾಂಡದಲ್ಲಿ ವ್ಯಾಪ್ತವಾದ ದೇಹವುಳ್ಳವನು ಮಹಾತಪಸ್ವಿಯು. ಶ್ರೀಹರಿಯು ಎಲ್ಲ ಕಡೆಗೆ ವ್ಯಾಪ್ತನಾದರೂ ಭೌತಿಕದೇಹವೂ ಸರ್ವಥಾ ಇಲ್ಲ. ಯಾವ ಅವತಾರ ರೂಪಗಳಲ್ಲಿಯೂ ಶ್ರೀಹರಿಗೆ ಪ್ರಾಕೃತದೇಹವಿಲ್ಲವೆಂದು ನಿವೃತ್ತದಲ್ಲಿ ಉಕ್ತವಾಗಿದೆ.।।೧೦।।

**ಸೋಽಸೃಜತ್ ತಪಸಾ ಯುಕ್ತೋ ರಜಸಾ ಮದನುಗ್ರಹಾತ್ ।**
**ಲೋಕಾನ್ ಸಪಾಲಾನ್ ವಿಶ್ವಾತ್ಮಾ ಭೂರ್ಭುವಃ ಸ್ವರಿತಿ ತ್ರಿಧಾ ।।೧೧।।**

**ವಿಶ್ವಾತ್ಮಾ** ಜಗತ್ತಿಗೆ ಅಂತರ್ನಿಯಾಮಕನಾದ **ಸಃ** ಬ್ರಹ್ಮದೇವರು **ತಪಸಾ ಯುಕ್ತಃ** ಜ್ಞಾನಯುತರಾಗಿ **ಮದನುಗ್ರಹಾತ್** ನನ್ನ ಅನುಗ್ರಹದಿಂದ **ರಜಸಾ** ರಜೋಗುಣವನ್ನು ಉಪಾದಾನ ಮಾಡಿಕೊಂಡು **ಸಪಾಲಾನ್** ದಿಕ್ಪಾಲಕರಿಂದ ಸಹಿತಗಳಾದ **ಭೂಃ ಭುವಃ ಸ್ವಃ ಇತಿ** ಎಂಬ **ತ್ರಿಧಾ** ಮೂರು ರೀತಿಯ **ಲೋಕಾನ್** ಲೋಕಗಳನ್ನು **ಅಸೃಜತ್** ಸೃಷ್ಟಿಸಿದನು. ಅತಲ, ವಿತಲ, ಸುತಲ, ತಲಾತಲ, ರಸಾತಲ, ಮಹಾತಲ, ಪಾತಾಲಗಳೆಂಬ ಏಳು ಲೋಕಗಳು

ಭೂಲೋಕದಲ್ಲಿ ಸೇರುವವು. ಮಹಃ, ಜನ, ತಪಃ, ಸತ್ಯ, ಎಂಬ ನಾಲ್ಕು ಲೋಕಗಳು ಸ್ವರ್ ಲೋಕದಲ್ಲಿ ಸೇರುವವು.।।೧೧।।

**ದೇವಾನಾಮೋಕ ಆಸೀತ್ ಸ್ವರ್ಭೂತಾನಾಂ ಚ ಭುವಃ ಪದಮ್ ।**
**ಮರ್ತ್ಯಾದೀನಾಂ ಚ ಭೂರ್ಲೋಕಃ ಸಿದ್ಧಾನಾಂ ತ್ರಿತಯಾತ್ಪರಮ್ ।।೧೨।।**

**ದೇವಾನಾಂ** ದೇವತೆಗಳಿಗೆ **ಸ್ವರ್** ಸ್ವರ್ಗಲೋಕವು **ಓಕಃ** ವಾಸಸ್ಥಾನವು **ಭೂತಾನಾಂ** ಪಿಶಾಚಾದಿಗಳಿಗೆ **ಭುವಃ** ಭುವರ್ಲೋಕವು **ಪದಂ** ಸ್ಥಾನವು **ಮರ್ತ್ಯಾದೀನಾಂ** ಮನುಷ್ಯರೇ ಮೊದಲಾದವರಿಗೆ **ಭೂರ್ಲೋಕಃ** ಭೂಲೋಕವು **ಸಿದ್ಧಾನಾಂ** ಪ್ರಾರಬ್ಧಕರ್ಮಗಳನ್ನು ಕಳೆದುಕೊಂಡ ಅಪರೋಕ್ಷಜ್ಞಾನಿಗಳಿಗೆ **ತ್ರಿತಯಾತ್ ಪರಂ** ಮೂರು ಲೋಕಗಳಿಗಿಂತ ಮೇಲಿರುವ ಮಹರಾದಿಗಳು ಅವಾಸಸ್ಥಾನವಾದವು.।।೧೨।।

**ಅಧೋಽಸುರಾಣಾಂ ನಾಗಾನಾಂ ಭೂಮೇರೋಕೋಽಸೃಜತ್ ಪ್ರಭುಃ ।**
**ತ್ರಿಲೋಕ್ಯಾಂ ಗತಯಃ ಸರ್ವಾಃ ಕರ್ಮಣಾಂ ತ್ರಿಗುಣಾತ್ಮನಾಮ್ ।।೧೩।।**

**ನಾಗಾನಾಂ** ಸರ್ಪಗಳಿಗೆ **ಭೂಮೇಃ ಅಧಃ ಓಕಃ** ಭೂಮಿಯ ಕೆಳಗಿನ ಪಾತಾಲಾದಿಗಳು ಸ್ಥಾನವು **ತ್ರಿಗುಣಾತ್ಮನಾಂ ಕರ್ಮಣಾಂ** ಸಾತ್ವಿಕ, ರಾಜಸ, ತಾಮಸ ಎಂದು ಮೂರು ವಿಧ ಕರ್ಮಗಳಿಗೆ **ಗತಯಃ** ಪ್ರಾಪ್ಯವಾದ ಸ್ಥಾನಗಳು **ತ್ರಿಲೋಕ್ಯಾಂ** ಮೂರುಲೋಕಗಳಲ್ಲಿಯೇ ಇವುಗಳನ್ನು **ಪ್ರಭುಃ** ಚತುರ್ಮುಖನು **ಅಸೃಜತ್** ಸೃಷ್ಟಿಸಿದನು. ಸಾತ್ವಿಕಕರ್ಮದಿಂದ ಸ್ವರ್ಗಲೋಕ, ರಾಜಸಕರ್ಮದಿಂದ ಭೂಲೋಕ, ತಾಮಸ ಕರ್ಮದಿಂದ ಭುವರ್ಲೋಕ ಎಂದು ತಿಳಿಯಬೇಕು. ನರಕಗಳು ಭೂಮಿಯಲ್ಲಿಯೇ ಇರುವುದರಿಂದ ವಿರೋಧವಿಲ್ಲ.।।೧೩।।

ಸಿದ್ಧರಿಗೆ ಮೂರು ಲೋಕಕ್ಕಿಂತ ಮೇಲಿನ ಲೋಕಗಳು ಎಂದು ಹೇಳಿದ್ದನ್ನು ಆ ಲೋಕಗಳ ಪ್ರಾಪ್ತಿಸಾಧನಗಳನ್ನು ಹೇಳುತ್ತ ವಿವರಿಸುವರು-

**ಯೋಗಸ್ಯ ತಪಸಶ್ಚೈವ ಜ್ಞಾನಸ್ಯ ಗತಯೋಽಮಲಾಃ ।**
**ಮಹರ್ಜನಸ್ತಪಃ ಸತ್ಯಂ ಭಕ್ತಿಯೋಗಸ್ಯ ಮದ್ಗತಿಃ ।।೧೪।।**

**ಯೋಗಸ್ಯ** ಪಾದಯೋಗಕ್ಕೆ **ಮಹಃ** ಮಹರ್ಲೋಕವು ಸಮಗ್ರಯೋಗಕ್ಕೆ **ಜನಃ** ಜನೋಲೋಕವು **ತಪಸಃ** ತಪಸ್ಸಿಗೆ **ತಪಃ** ತಪೋಲೋಕವು **ಜ್ಞಾನಸ್ಯ** ಜ್ಞಾನಕ್ಕೆ **ಸತ್ಯಂ** ಸತ್ಯಲೋಕವು **ಭಕ್ತಿಯೋಗಸ್ಯ** ಮಹಾಜ್ಞಾನವೆನಿಸುವ ಭಕ್ತಿಯೋಗಕ್ಕೆ **ಮದ್ಗತಿಃ** ವೈಕುಂಠಾದಿಗಳಲ್ಲಿರುವ ನನ್ನ ಲೋಕಪ್ರಾಪ್ತಿಯೇ ಫಲವು **ಅಮಲಾಃ** ನಿರ್ದುಷ್ಟವಾದ **ಗತಯಃ** ಪ್ರಾಪ್ತಿಸ್ಥಾನಗಳು.।।೧೪।।

ಮೇಲಿನ ಶ್ಲೋಕದಲ್ಲಿ ಯೋಗ ತಪಸ್ಸು ಜ್ಞಾನದಿಂದ ಮಹ,ಜನ, ತಪ, ಸತ್ಯ ಲೋಕ ಪ್ರಾಪ್ತಿಯಾಗುವುದು. ಭಕ್ತಿಯೋಗದಿಂದ ನನ್ನ ಲೋಕ ಎಂದು ಹೇಳಿದ್ದರಿಂದ ಮಹರಾದಿ ಲೋಕಗಳಿಗೆ ಭಕ್ತಿ ಬೇಕಿಲ್ಲವೆಂದು ತೋರುವುದು ಮತ್ತು ಸಾಧನಗಳು ಮೂರು, ಪ್ರಾಪ್ತಿಸ್ಥಾನಗಳು ಐದು ಎಂದು ಹೇಳಿದೆ. ಅದು ಸರಿಯಲ್ಲ ಎಂಬ ಶಂಕೆಗೆ ಉತ್ತರಿಸುತ್ತ ಭಕ್ತಿಜ್ಞಾನಗಳು ಎಲ್ಲದಕ್ಕೂ ಬೇಕು ಹೆಚ್ಚು ಕಡಿಮೆ ಎಂಬ ಅಭಿಪ್ರಾಯದಿಂದ ಹಾಗೆ ಹೇಳಿದೆ. ಮತ್ತು ಯೋಗ ಎಂದರೆ ಪಾದಯೋಗ, ಪೂರ್ಣಯೋಗ, ಎರಡು ಜ್ಞಾನ ಎಂಬಲ್ಲಿಯು ಜ್ಞಾನ ಮಹಾಜ್ಞಾನ ಎಂದು ಎರಡು ಅದು ಐದು ಸ್ಥಾನಕ್ಕೆ ಐದು ಸಾಧನವೆಂಬ ಅಭಿಪ್ರಾಯದಿಂದ ಯೋಗ, ಪಾದಯೋಗ, ಜ್ಞಾನ, ಮಹಾಜ್ಞಾನದ ಸ್ವರೂಪ ಹೇಳುವರು-

**ತಾತ್ಪರ್ಯ-** ಮಹರಾದೀನಾಮಪಿ ಭಕ್ತಿಯೋಗೋಽಪೇಕ್ಷಿತ ಏವ। ಆಧಿಕ್ಯೇನ ಅಪೇಕ್ಷಿತತ್ವಾದ್ ಭಕ್ತಿಯೋಗಸ್ಯ ಮದ್ಗತಿರಿತ್ಯುಕ್ತಮ್।

ನೈವ ವಿಷ್ಣಾವಭಕ್ತಸ್ಯ ಮಹರ್ಲೋಕಾದಿಕಾ ಗತಿಃ।
ಭಕ್ತ್ಯುದ್ರೇಕಾತ್ ಕ್ರಮಾದೂರ್ಧ್ವಂ ಯಾವದ್ವಿಷ್ಣುಪ್ರವೇಶನಮ್ ।।

ಏವಂ ಜ್ಞಾನಂ ವಿನಾ ಸಾಪಿ ಮಹರ್ಲೋಕಾದಿಕಾ ಗತಿಃ।
ಜ್ಞಾನೋದ್ರೇಕಾತ್ ಕ್ರಮಾದೂರ್ಧ್ವಂ ಯಾವದ್ವಿಷ್ಣುಪ್ರವೇಶನಮ್ ।।

ನಿತ್ಯಶೋ ಭಗವದ್ರೂಪಸ್ಯಾಪರೋಕ್ಷೇಣ ದರ್ಶನಮ್।
ಮುಹೂರ್ತಮಾತ್ರಂ ಜ್ಞಾನಂ ಸ್ಯಾತ್ ಮಹಾಜ್ಞಾನಂ ತತೋಽಧಿಕಮ್ ।।

ಜ್ಞಾನೇನ ಬ್ರಹ್ಮಲೋಕಃ ಸ್ಯಾತ್ ಮಹಾಜ್ಞಾನಾದ್ಧರೇರ್ಗತಿಃ।
ಸದೈವಾಖಂಡಿತಧ್ಯಾನಂ ತಪ ಇತ್ಯುಚ್ಯತೇ ಬುಧೈಃ ।।

ಅಪರೋಕ್ಷದೃಶಾ ಯುಕ್ತಂ ನಿತ್ಯಂ ಷಣ್ಮಾತ್ರಕಾಲಯಾ।
ಅಪರೋಕ್ಷದೃಶಾ ನಿತ್ಯಮೇಕಮಾತ್ರಾಯುಜಾ ಯುತಮ್ ।।

ಯೋಗನಾಮ್ನಾ ಸಮುದ್ದಿಷ್ಟಂ ಧ್ಯಾನಂ ನಿತ್ಯಮಖಂಡಿತಮ್ ।
ತಚ್ಚತುರ್ಭಾಗಯಾ ನಿತ್ಯಮಪರೋಕ್ಷದೃಶಾ ಯುತಮ್ ॥

ಪಾದಯೋಗಾಖ್ಯಮುದ್ದಿಷ್ಟಂ ಧ್ಯಾನಂ ನಿತ್ಯಮಖಂಡಿತಮ್ ।
ಪಾದಯೋಗಾನ್ಮಹರ್ಲೋಕೋ ಜನೋಲೋಕಸ್ತು ಯೋಗತಃ ।
ತಪಸಸ್ತು ತಪೋಲೋಕಃ ಪ್ರಾಪ್ಯತೇ ನಾನ್ಯಥಾ ಕ್ವಚಿತ್ ॥

-ಇತಿ ಧ್ಯಾನಯೋಗೇ

ಮಹರಾದಿಲೋಕಗಳು ದೊರೆಯಬೇಕಾದರೂ ಭಕ್ತಿಯೋಗವು ಅವಶ್ಯ ಬೇಕು. ಮಹರಾದಿಲೋಕ ಪಡೆಯಲು ಎಂತಹ ಭಕ್ತಿಯೋಗವು ಬೇಕೋ ಅದಕ್ಕಿಂತ ಹೆಚ್ಚು ಭಕ್ತಿಯು ವೈಕುಂಠ ಪಡೆಯಲು ಬೇಕಾಗುವುದು. ಈ ಅಭಿಪ್ರಾಯದಿಂದ ಭಕ್ತಿಯೋಗಕ್ಕೆ ನನ್ನ ಪ್ರಾಪ್ತಿಯೇ ಫಲವೆಂದು ಹೇಳಲಾಗಿದೆ. ಹೊರತು ಮಹರಾದಿಲೋಕ ಪಡೆಯಲು ಭಕ್ತಿ ಬೇಡವೆಂದಲ್ಲ. ಏಕೆಂದರೆ ಶ್ರೀಹರಿಯಲ್ಲಿ ಭಕ್ತಿಯಿಲ್ಲದವನಿಗೆ ಮಹರ್ಲೋಕಾದಿಗಳು ಸಿಗಲಾರವು. ವೈಕುಂಠಲೋಕ ಪ್ರವೇಶಿಸುವವರೆಗೆ (ಸಾಯುಜ್ಯದವರೆಗೆ) ಭಕ್ತಿಯು ಹೆಚ್ಚು ಹೆಚ್ಚು ಆದಂತೆ ಉತ್ತಮ ಉತ್ತಮ ಲೋಕ ಪ್ರಾಪ್ತಿಯಾಗುವುದು. ಭಕ್ತಿಯಂತೆಯೇ ಅಪರೋಕ್ಷಜ್ಞಾನವು ಇಲ್ಲದಿದ್ದರೇ ಮಹರ್ಲೋಕಾದಿಗಳು ಸರ್ವಥಾ ಸಿಗಲಾರವು.

ಸಾಯುಜ್ಯ ಮೋಕ್ಷವಾಗುವವರೆಗೆ ಜ್ಞಾನವು ಹೆಚ್ಚಾದಂತೆ ಮೇಲಿನ ಲೋಕಗಳು ಕ್ರಮವಾಗಿ ದೊರೆಯುವವು. ಒಂದು ಮುಹೂರ್ತದ ಪರ್ಯಂತ ಪ್ರತಿನಿತ್ಯವೂ ಭಗವದ್ರೂಪವನ್ನು ಪ್ರತ್ಯಕ್ಷೀಕರಿಸಿಕೊಳ್ಳುವುದು ಜ್ಞಾನವು. ಅದಕ್ಕಿಂತ ಹೆಚ್ಚು ೨ ಮುಹೂರ್ತ ಭಗವಂತನನ್ನು ಕಾಣುವುದು ಮಹಾಜ್ಞಾನವಾಗುತ್ತದೆ.

ಜ್ಞಾನದಿಂದ ಸತ್ಯಲೋಕಪ್ರಾಪ್ತಿಯು ಮಹಾಜ್ಞಾನದಿಂದ ಶ್ರೀಹರಿಯ ಲೋಕ ಪ್ರಾಪ್ತಿಯಾಗುವುದು. ೬ ಹ್ರಸ್ವ ಅಕ್ಷರ ಉಚ್ಚಾರ ಮಾಡಲು ಬೇಕಾಗುವಷ್ಟು ಕಾಲ ಇರುವ ಅಪರೋಕ್ಷಜ್ಞಾನ ಸಹಿತವಾದ ವಿಚ್ಛೇದವಿಲ್ಲದ ಧ್ಯಾನವು ತಪಸ್ಸೆನಿಸುತ್ತದೆ.

ಒಂದು ಹ್ರಸ್ವ ವರ್ಣ ಉಚ್ಚಾರ ಮಾಡುವ ಕಾಲಪರ್ಯಂತವಿರುವ ಅಪರೋಕ್ಷಜ್ಞಾನದಿಂದ ಪ್ರತಿನಿತ್ಯವೂ ಕೂಡಿದ ಅಖಂಡಧ್ಯಾನವು ಯೋಗವು

ಎಂದು ಹೇಳಲ್ಪಡುವುದು. ಒಂದು ಹ್ರಸ್ವ ವರ್ಣ ಉಚ್ಚರಿಸಲು ಬೇಕಾಗುವ ಕಾಲದ ನಾಲ್ಕನೇ ಒಂದು ಭಾಗದಲ್ಲಿ ಉಂಟಾಗುವ ಅಪರೋಕ್ಷ ಜ್ಞಾನಯುತವಾದ ಅಖಂಡಿತಧ್ಯಾನವು ಪಾದಯೋಗವೆನಿಸುವುದು. ಪಾದಯೋಗದಿಂದ ಮಹರ್ಲೋಕ, ಯೋಗದಿಂದ ಜನೋಲೋಕ, ತಪಸ್ಸಿನಿಂದ ತಪೋಲೋಕ, ಜ್ಞಾನದಿಂದ ಸತ್ಯಲೋಕ ಮಹಾಜ್ಞಾನವೆಂಬ ಭಕ್ತಿಯೋಗದಿಂದ ವಿಷ್ಣುಲೋಕಗಳಾಗುವವು. ಎಂದು ಧ್ಯಾನ ಯೋಗವೆಂಬ ಗ್ರಂಥದಲ್ಲಿ ಹೇಳಿದೆ.

ಶ್ರೀಮದ್ಭಾಷ್ಯದಲ್ಲಿಮಧ್ಯಮಾಜ್ಜನಲೋಕಾದಿಃ ಎಂದು ಶ್ರವಣಾದಿಗಳಿಂದ ಉಂಟಾದ ಮಧ್ಯಮಪ್ರಸಾದದಿಂದ ಜನೋಲೋಕವಾಗುವುದು ಎಂದು ಹೇಳಿದೆ. ಆದರೆ ಅಪರೋಕ್ಷಜ್ಞಾನವಾದ ಮೇಲೆ ಅದರ ಸಹಾಯದಿಂದ ಮೊದಲು ಸಂಪಾದಿಸಿದ ಶ್ರವಣಾದಿಗಳಿಂದಾದ ಶ್ರೀಹರಿಯ ಪ್ರಸಾದದ ಫಲ-ರೂಪವಾಗಿಯೇ ಜನೋಲೋಕಾದಿಗಳಾಗುವವು. ಎಂದು ಅಂಗೀಕರಿಸಿದ್ದರಿಂದ ವಿರೋಧವಿಲ್ಲ. ಅದರಂತೆ ''ಸಾಮಾನ್ಯದರ್ಶನಾತ್ ಲೋಕಾಃ'' ಎಂದಿರುವುದರಿಂದ ಅವತಾರಾದಿ ದರ್ಶನದಿಂದಲೂ ಜನೋಲೋಕ ಪ್ರಾಪ್ತಿಯಾಗುವುದು. ಇದು ಒಂದು ಉಪಾಯ. ಅದು ಒಂದು ಉಪಾಯ ಆದ್ದರಿಂದ ದೋಷವಿಲ್ಲ. ಸಾಮಾನ್ಯದರ್ಶನವೂ ಮಧ್ಯಮಪ್ರಸಾದದಿಂದಲೇ ಆಗುವುದು ಕಾರಣ ವಿರೋಧವಿಲ್ಲ ಹೀಗೂ ತಾಮ್ರಪರ್ಣಿ ಆಚಾರ್ಯರು ಹೇಳುವರು.

ದ್ವಿತೀಯಸ್ಕಂಧದಲ್ಲಿ ಹೀಗೆ ಹೇಳಿದ್ದಾರೆ. 'ಬಹಿಸ್ತ್ರೀಲೋಕ್ಯಾ ಗತಿಮಾ-ಮನಂತಿ ವಿದ್ಯಾತಪೋಯೋಗಸಮಾಧಿಭಾಜಾಮ್' ಎಂದು ಅಲ್ಲಿ ವಿದ್ಯಾ-ತಪಸ್ಸು-ಯೋಗಗಳಿಂದ ಕೂಡಿದ **ಸಮಾಧಿ** ಅಖಂಡಧ್ಯಾನ **ತದ್ಭಾಜಾಂ** ಅಪರೋಕ್ಷಜ್ಞಾನಿಗಳಿಗೆ **ಗತಿಂ** ಪ್ರಾಪ್ಯಸ್ಥಾನವನ್ನು ಮೂರು ಲೋಕದ ಹೊರಗೇನೆ ಎಂದು ಹೇಳುವರು. ಎಂದರ್ಥ ಹೇಳಬೇಕು. ಕಾರಣ ಯಾವ ದೋಷವಿಲ್ಲವೆಂದು ಸಂಪ್ರದಾಯ ಎನ್ನುವರು ಶ್ರೀನಿವಾಸತೀರ್ಥರು.।।೧೪।।

ಭಕ್ತಿಯೋಗರಹಿತರ ಸ್ಥಿತಿಯನ್ನು ಹೇಳುವರು-

**ಮಯಾ ಕಾಲಾತ್ಮನಾ ಧಾತ್ರಾ ಕರ್ಮಯುಕ್ತಮಿದಂ ಜಗತ್ ।**
**ಗುಣಪ್ರವಾಹ ಏತಸ್ಮಿನ್ನುನ್ಮಜ್ಜತಿ ನಿಮಜ್ಜತಿ ।।೧೫।।**

**ಕಾಲಾತ್ಮನಾ** ಜ್ಞಾನಾದಿಸ್ವರೂಪನಾದ **ಧಾತ್ರಾ** ಕಾರಣನಾದ **ಮಯಾ** ನನ್ನಿಂದ ಪ್ರೇರಿತವಾಗಿ **ಕರ್ಮಯುಕ್ತಂ** ಪುಣ್ಯ-ಪಾಪಗಳಿಂದ ಕೂಡಿದ **ಇದಂ ಜಗತ್** ಈ ಪ್ರಪಂಚವು **ಏತಸ್ಮಿನ್ ಗುಣಪ್ರವಾಹೇ** ಸಂಸಾರದಲ್ಲಿ **ಉನ್ಮಜ್ಜತಿ** ಹುಟ್ಟುವುದು **ನಿಮಜ್ಜತಿ** ನಾಶವಾಗುವುದು. ಮೇಲೆ ಹೋಗುವುದು, ಕೆಳಗೂ ಹೋಗುವುದು.।।೧೫।।

ಕಾಲಾತ್ಮನಾ ಎಂಬುದಕ್ಕೆ ಕಾಲದಿಂದ ಪರಮಾತ್ಮ ಅಭಿನ್ನ ಎಂಬುದಾಗಿ ತೋರುತ್ತದೆ. ಆದ್ದರಿಂದ ತಾತ್ಪರ್ಯ ಹೇಳುವರು-

**ತಾತ್ಪರ್ಯ- ಕಾಲಾತ್ಮನಾ ಜ್ಞಾನಾದ್ಯಾತ್ಮನಾ ।**

ಕಲ ಜ್ಞಾನೇ, ಕಲ ಕಾಮಧೇನುಃ ಎಂಬ ಧಾತುಕೋಶ ಇರುವುದರಿಂದ ಕಾಲ ಎಂದರೇ ಜ್ಞಾನಸ್ವರೂಪ ಎಂದು ಅರ್ಥ. ಹೀಗೆ ಹೇಳುವುದರಿಂದ ಕ್ಷಣಲವಾದಿ ಕಾಲಭೇದಶಂಕಾ ಪರಿಹೃತವಾಯಿತು.

**ಅಣುರ್ಬೃಹತ್ ಕೃಶಃ ಸ್ಥೂಲೋ ಯೋ ಯೋ ಭಾವಃ ಪ್ರಸಿಧ್ಯತಿ ।**
**ಸರ್ವಂ ಹ್ಯುಭಯಸಂಯುಕ್ತಂ ಪ್ರಕೃತ್ಯಾ ಪುರುಷೇಣ ಚ ।।೧೬।।**

**ಅಣುಃ** ಚಿಕ್ಕದು **ಬೃಹತ್** ದೊಡ್ಡದು **ಕೃಶಃ** ತೆಳ್ಳಗಿನದು **ಸ್ಥೂಲಃ** ದಪ್ಪಗಿನದು ಮುಂತಾದ **ಯಃ ಯಃ** ಯಾವ ಯಾವ **ಭಾವಃ** ಪದಾರ್ಥವು **ಪ್ರಸಿಧ್ಯತಿ** ಉತ್ಪನ್ನವಾಗುವುದೋ **ಸರ್ವಂ ಹಿ** ಆ ಎಲ್ಲ ಪದಾರ್ಥಗಳು **ಉಭಯಸಂಯುಕ್ತಂ** ಲಕ್ಷ್ಮೀನಾರಾಯಣರಿಂದ ಯುಕ್ತವಾದುದು. **ಚ** ಮತ್ತು **ಪ್ರಕೃತ್ಯಾ** ಸರಸ್ವತಿ-ಯಿಂದ **ಪುರುಷೇಣ** ಚತುರ್ಮುಖನಿಂದಲೂ ಸಂಯುಕ್ತವಾದುದು. ಯಾವ ಕಾರಣ ಲಕ್ಷ್ಮೀನಾರಾಯಣ, ಬ್ರಹ್ಮಸರಸ್ವತಿಯರಿಂದ ಪ್ರವೇಶಮಾಡಿ ಪ್ರೇರಿಸಲ್ಪಟ್ಟಿದೆಯೋ, ಆ ಕಾರಣ ಈಗಲು ಜೊತೆಯಾಗಿ ಇರುವುದೇ ಕಂಡು ಬರುವುದು.।।೧೬।।

ಈ ಶ್ಲೋಕದಲ್ಲಿ ಜಗತ್ತಿಗೆ ಸ್ವತಂತ್ರಕಾರಣ ಮತ್ತು ಉಪಾದಾನಕಾರಣ ಎರಡನ್ನೂ ಹೇಳುವರು-

**ಯಸ್ತು ಯಸ್ಯಾದಿರಂತಶ್ಚ ಸ ವೈ ಮಧ್ಯೇ ಚ ತಸ್ಯ ತತ್ ।**
**ವಿಕಾರೋ ವ್ಯವಹಾರಾರ್ಥೋ ಯಥಾ ತೈಜಸಪಾರ್ಥಿವಾಃ ।।೧೭।।**

**ಯಃ** ಯಾವ ನಿಮಿತ್ತಕಾರಣವು **ಯಸ್ಯ** ಯಾವ ಕಾರ್ಯಕ್ಕಿಂತ **ಆದಿಃ** ಮೊದಲಿರುವುದೋ **ಅಂತಃ** ಲಯಕಾಲದಲ್ಲಿಯೂ ಇರುವುದೋ **ಮಧ್ಯಃ** ಮಧ್ಯಕಾಲದಲ್ಲಿಯೂ ಏಕಪ್ರಕಾರವಾಗಿರುವ **ಸಃ** ಆ ಈಶ್ವರನು **ತಸ್ಯ** ಅದರ ಕರ್ತೃವು **ವ್ಯವಹಾರಾರ್ಥಃ** ಸ್ವೀಕಾರ ಮಾಡುವುದು ತ್ಯಜಿಸುವುದೇ ಮುಂತಾದ ವ್ಯವಹಾರಕ್ಕಾಗಿ **ಯಃ ವಿಕಾರಃ** ಮಹದಾದಿ ಪರಿಣಾಮಗಳು **ಯಸ್ಯ** ಯಾವುದರಿಂದ ಆಗುವುದೋ **ಸಃ** ಅದು ಉಪಾದಾನವು **ತತ್** ಕಾರ್ಯವೇ ಅಭಿನ್ನ ಎಂದರ್ಥ. **ಯಥಾ** ಹೇಗೆ **ತೈಜಸಪಾರ್ಥಿವಃ** ಸುವರ್ಣಾದಿಗಳಿಂದ ಮೃದಾದಿಗಳಿಂದಲೋ ಹಾಗೆ ಎಂದರ್ಥ. ತುಶಬ್ದವು ಪ್ರಕೃತೇಸ್ತು ಎಂಬ ಪ್ರಮಾಣೋಕ್ತ ವಿಶೇಷ ಸೂಚಕವು.

ಅಥವಾ ಹೀಗೂ ಅರ್ಥ ಮಾಡಬಹುದು.

**ಯಸ್ಯ** ಯಾವ ಮಹದಾದಿ ವಸ್ತುಗಳಿಗೆ **ಆದಿಃ** (ಪ್ರಕೃತಿಯು ಉಪಾದಾನ) ಪರಿಣಾಮಿ ಕಾರಣವು **ಅಂತಃ** ಲಯಸ್ಥಾನವು ಆದ ಕಾರಣ ಯಾವ ಕಾರಣ **ಸ ಏವ ಮಧ್ಯಂ ಚ** ಸ್ಥಿತಿಕಾಲದಲ್ಲಿಯೂ ಇರುವುದು **ತಸ್ಯ** ಆ ವಸ್ತುವಿಗೆ **ತತ್** ಪ್ರಕೃತ್ಯಾದಿಗಳು ಉಪಾದಾನವು **ಸ ಏವ** ಅಭಿನ್ನವೇ **ವಿಕಾರಃ ಇತಿ ವ್ಯವಹಾರಾರ್ಥಃ** ಪ್ರಕೃತಿಯ ಕಾರ್ಯ ಮಹದಾದಿಗಳು ಎನ್ನುವ ವ್ಯವಹಾರಕ್ಕಾಗಿ ಮಾತ್ರ. ಆದ ಕಾರಣ **ಅಯಂ** ಇದು **ವಿಕಾರಃ** ಕಾರ್ಯವೇ. **ಯಥಾ** ಹೇಗೆ **ತೈಜಸಃ** ಚಿನ್ನದ ಆಭರಣಗಳು **ಪಾರ್ಥಿವಃ** ವಸ್ತ್ರಗಳು ಮಡಿಕೆ ಮುಂತಾದವು **ತಥಾ** ಹಾಗೆ ಆಭರಣ ಚಿನ್ನವೇ ಆಗಿದ್ದರೂ ದಾರಗಳೇ ಬಟ್ಟೆಯಾಗಿದ್ದರೂ ಆಭರಣ ಚಿನ್ನದ ಕಾರ್ಯ ದಾರದಿಂದ ಬಟ್ಟೆ ಎನ್ನುವುದು ವ್ಯವಹಾರವಷ್ಟೇ, ವಸ್ತುತಃ ಚಿನ್ನವೇ ಆಭರಣ, ದಾರವೇ ವಸ್ತ್ರ, ಮಣ್ಣೇ ಮಡಿಕೆ. ಇಲ್ಲಿ ಉಪಾದಾನ ಉಪಾದೇಯಗಳಿಗೆ ಕೇವಲ ಅಭೇದ ಹೇಳಿದೆ. ಎಂದು ಕಾಣುವುದು ಅದು ಸರಿಯಲ್ಲ. ಸಿದ್ಧಾಂತದಲ್ಲಿ ಅವುಗಳಿಗೆ ಭೇದಾಭೇದ ಅಂಗೀಕರಿಸಿದ್ದಾರೆ. ಕಾರಣ ವ್ಯಾಖ್ಯಾನಿಸುವರು.

**ತಾತ್ಪರ್ಯ- ಪ್ರಕೃತೇಸ್ತು ವಿಕಾರಾಣಾಂ ಕೊಟ್ಯಂಶೋಽಭೇದ ಇಷ್ಯತೇ। ತತ್ಥೈವೈಕಾಂಶತೋ ಭೇದಃ ಸೋಽಪಿ ನಾಭೇದವರ್ಜಿತಃ। ಭೇದಾಭೇದಮತಃ ಪ್ರಾಹುರಭೇದಂ ವಾ ತಯೋರ್ಬುಧಾಃ ॥**

ಜಡಪ್ರಕೃತಿಯ ಮಹದಾದಿಕಾರ್ಯಗಳಿಗೆ ಉಪಾದಾನವಾದ (ಮಹದಾದ್ಯಾತ್ಮನಾ ಪರಿಣತವಾದ) ಎಲ್ಲ ಅಂಶಗಳು ವ್ಯತಿಷಂಗವಿಶೇಷ ರಹಿತವಾದವುಗಳು. ಮಹದಾದಿಕಾರ್ಯಗಳಿಂದ ಭಿನ್ನವು ಅದರಂತೆಯೇ ಒಂದೊಂದು ಅಂಶಗಳಿಗೆ ಪರಸ್ಪರಭೇದವು ಇವುಗಳಿಂದ ಅಂಶಿಯಾದ ಕಾರ್ಯಗಳಿಗೆ ಭೇದವೇ ಆ ಭೇದವು ಅಭೇದರಹಿತವಾದುದಲ್ಲ. ವ್ಯತಿಷಂಗ ಅಥವಾ ಸಂಸ್ಥಾನವಿಶೇಷವಿಶಿಷ್ಟ ಅಂಶಗಳಿಗೆ ಅತ್ಯಂತಭೇದವಿರುವುದು. ಈ ಅಭಿಪ್ರಾಯದಿಂದ ಭೇದಾಭೇದವನ್ನಾಗಲಿ ಹೇಳುವರು ಎಂದು ಭಾವ.

ಪ್ರಕೃತಿಪುರುಷರಿಗೆ ಸ್ವಾತಂತ್ರ್ಯವಿಲ್ಲವೆಂದು ಹೇಳುವರು-

**ಯದುಪಾದಾಯ ಪೂರ್ವಸ್ತು ಭಾವೋ ವಿಕುರುತೇ ಪರಮ್ ।**
**ಆದಿರಂತೋ ಯತೋ ಯಸ್ಮಿಂಸ್ತತ್ ಸತ್ಯಮಭಿಧೀಯತೇ ॥೧೮॥**

**ಪೂರ್ವಃ ಭಾವಃ** ಪ್ರಕೃತಿ ಮೊದಲಾದ ಕಾರಣಪದಾರ್ಥಗಳು **ಯತ್** ಯಾವ ನಿಮಿತ್ತಕಾರಣನಾದ ಪರಬ್ರಹ್ಮನನ್ನು **ಉಪಾದಾಯ** ಆಶ್ರಯಿಸಿ ಅಂದರೇ ಯಾವನ ಪ್ರೇರಣೆಯಿಂದ **ಪರಂ ವಿಕುರುತೇ** ಕಾರ್ಯರೂಪವಾಗಿ ಪರಿಣಮಿಸುವುದೋ ಮತ್ತು **ಯತಃ** ಯಾವ ಕಾರಣ ಯಾವ ಬ್ರಹ್ಮನಿಂದ **ಆದಿಃ ಅಂತಃ** ಜಗತ್ತಿನ ಸೃಷ್ಟಿ ಮತ್ತು ನಾಶವಾಗುವುದೋ **ಯಸ್ಮಿನ್** ಯಾವ ಬ್ರಹ್ಮನ ಅಧೀನವಾಗಿದೆಯೋ **ತತ್** ಆ ಕಾರಣ ಆ ಬ್ರಹ್ಮನು **ಸತ್ಯಮಭಿಧೀಯತೇ** ಸ್ವತಂತ್ರವೆಂದು ಹೇಳಲ್ಪಡುವನು.॥೧೮॥

ಮೇಲಿನ ಶ್ಲೋಕದಲ್ಲಿ ಬ್ರಹ್ಮನಿಗೆ ಉಪಾದಾನಕಾರಣತ್ವ ಮತ್ತು ಅವನು ಮಾತ್ರ ಸತ್ಯ ಮಿಕ್ಕಿದ್ದೆಲ್ಲಾ ಮಿಥ್ಯಾ ಎಂದಂತೆ ತೋರುವುದು ಕಾರಣ ವ್ಯಾಖ್ಯಾನಿಸುವರು-

**ತಾತ್ಪರ್ಯ-** ಪಾರಮಾರ್ಥಿಕಸತ್ಯತ್ವಂ ಸ್ವಾತಂತ್ರ್ಯಮಭಿಧೀಯತೇ ।
ತದ್ವಿಷ್ಣೋರೇವ ನಾನ್ಯಸ್ಯ ತದನ್ಯೇಷಾಂ ಸದಾಸ್ತಿತಾ ॥ ಇತಿ ಚ ।

ಯದ್ ಬ್ರಹ್ಮ ಉಪಾದಾಯ । ಪೂರ್ವಃ ಪ್ರಕೃತ್ಯಾದಿಃ । ಆದಿಃ ಅಂತಶ್ಚ ಯದ್ ಬ್ರಹ್ಮಣಿ ತಸ್ಮಾತ್ ತದ್ ಬ್ರಹ್ಮ ಪರಮಾರ್ಥಸತ್ಯಮ್ ॥

ಪಾರಮಾರ್ಥಿಕಸತ್ಯತ್ವವೆಂದರೆ ಸರ್ವಸ್ವಾತಂತ್ರ್ಯವು. ಅದು ಶ್ರೀಹರಿಗೆ ಮಾತ್ರ. ಬೇರಾರಿಗೂ ಇಲ್ಲ ಉಳಿದವರಿಗೆ ಸದಾ ಅಸ್ತಿತ್ವವೇ ಸತ್ಯತ್ವವು.

ಯಾವ ಬ್ರಹ್ಮನನ್ನು ನಿಮಿತ್ತಕಾರಣನನ್ನಾಗಿ ಸ್ವೀಕರಿಸಿ ಪ್ರಕೃತ್ಯಾದಿ ಕಾರಣಗಳು ಅವನ ಪ್ರೇರಣೆಯಿಂದ ವಿಕಾರ ಹೊಂದುವುದೋ, ಯಾವ ಕಾರಣ ಜಗದುತ್ಪತ್ತಿನಾಶ ಕಾರಣವೋ, ಯಾವ ಕಾರಣ ಜಗತ್ತು ಅವನ ಅಧೀನವೋ ಆ ಕಾರಣ ಅವನು ಸ್ವತಂತ್ರನು ಇತರ ಪದಾರ್ಥಗಳು ಪರತಂತ್ರ. ಪ್ರಕೃತ್ಯಾದಿಗಳ ಪರಿಣಾಮಾದಿ ಶಕ್ತಿ ಅವನ ಅಧೀನವು ಎಂದು ಭಾವ.।।೧೮।।

ಮುಂದೆ ಹೇಳುವ ಕಾರಣದಿಂದಲೂ ಶ್ರೀಹರಿಯೇ ಸ್ವತಂತ್ರನೆಂದು ಹೇಳುವರು-

**ಪ್ರಕೃತಿರ್ಹ್ಯಸ್ಯೋಪಾದಾನಮಾಧಾರಃ ಪುರುಷಃ ಸ್ಮೃತಃ (ಪರಃ) ।**
**ಸತೋಽಭಿವ್ಯಂಜಕಃ ಕಾಲೋ ಬ್ರಹ್ಮ ತತ್ ತ್ರಿತಯಂ ತ್ವಹಮ್ ।।೧೯।।**

**ಅಸ್ಯ** ಸೂತ್ರನಾಮಕ ವಾಯು ಮೊದಲಾದ ಎಲ್ಲ ಜಗತ್ತಿಗೆ **ಪ್ರಕೃತಿಃ** ಬ್ರಹ್ಮ ಪತ್ನಿಯಾದ ಸರಸ್ವತಿ ಅಭಿಮನ್ಯಮಾನ ಗುಣತ್ರಯಾತ್ಮಕ ಜಡಪ್ರಕೃತಿಯು **ಉಪಾದಾನಂ** ಪರಿಣಾಮಿಕಾರಣಮಾತ್ರವು **ಪುರುಷಃ** ಹಿರಣ್ಯಗರ್ಭನು **ಆಧಾರಃ** ಪೃಥವಿಯಂತೆ ಕಾರ್ಯಗಳಿಗೆ ಆಧಾರನು. **ಕಾಲಃ** ಕಾಲಾಭಿಮಾನಿ ಬ್ರಹ್ಮನು **ಸತಃ** ಕಾರ್ಯಗಳಿಗೆ **ವ್ಯಂಜಕಃ** ನಿಮಿತ್ತಕಾರಣನು **ತತ್ ತ್ರಿತಯಂ ತು** ಉಪಾದನ, ನಿಮಿತ್ತ, ವ್ಯಂಜಕ, ಈ ಮೂರು ಕಾರಣಗಳಿಗೂ ಪ್ರಸವಿತೃತ್ವ ಆಧಾರತ್ವ ವ್ಯಂಜಕತ್ವಶಕ್ತಿಪ್ರದನು ಮತ್ತು **ತೇಷಾಂ** ಕಾಲ-ಪ್ರಕೃತಿ-ಪುರುಷರಿಗೆ **ತ್ರಿತಯಂ** ಆಧಾರನು ವ್ಯಂಜಕನು ಪ್ರಸವಿತೃವು ಆದ **ಅಹಂ** ನಾನು **ಬ್ರಹ್ಮ** ಪೂರ್ಣನು ಎಂದರ್ಥ.

ಇಲ್ಲಿ ಪುರುಷಃ ಪರಃ ಎಂದರೆ ಭಗವಂತನೆಂದು ತೋರುವುದು ಕಾರಣ ಆಚಾರ್ಯರು ವ್ಯಾಖ್ಯಾನಿಸುವರು-

**ತಾತ್ಪರ್ಯ**- ಪರಃ ಪುರುಷಃ ಹಿರಣ್ಯಗರ್ಭಃ ।
ಕಾಲೋಽಪಿ ರೂಪಾಂತರೇಣ ಸ ಏವ ।।

ಕಾಲಾಭಿಮಾನೀ ಬ್ರಹ್ಮಾ ತು ಕಾಲ ಇತ್ಯಭಿಶಬ್ದಿತಃ ।
ಸರ್ವಜೀವಾಭಿಮಾನೀ ಸ ಪರಃ ಪುರುಷ ಉಚ್ಯತೇ ।।

ಪ್ರಕೃತಿರ್ನಾಮ ತತ್ಪತ್ನೀ ಪ್ರಕೃತೇರಭಿಮಾನಿನೀ ।
ಸಾ ಪ್ರಸೂತೇ ಜಗತ್ಸರ್ವಂ ಸೂತ್ರಮಾರಭ್ಯ ಸರ್ವಶಃ ।। ಇತಿ ಚ ।

**ಆಧಾರೋ ವ್ಯಂಜಕಶ್ಚೈವ ಪ್ರಸವೀತಾ ಚ ಕೇಶವಃ ।**
**ಕಾಲಪ್ರಕೃತಿಪುಂಸಾಂ ಚ ತನ್ಮೂಲಪ್ರಕೃತೇರಪಿ ।**
**ಆಧಾರೋ ವ್ಯಂಜಕಶ್ಚೈವ ಸರ್ವಸ್ಯಾಪಿ ನಿಯಾಮಕಃ ॥ ಇತಿ ಚ ।**

ಪರಃ ಪುರುಷಃ ಎಂದರೆ ಚತುರ್ಮುಖನು. ಅಭಿವ್ಯಂಜಕರೂಪದಿಂದ ಕಾಲ ಶಬ್ದವಾಚ್ಯನೂ ಆ ಚತುರ್ಮುಖನೇ. ಕಾಲಾಭಿಮಾನಿಯಾದ ಬ್ರಹ್ಮನು ಕಾಲನೆಂದು ಕರೆಸಿಕೊಳ್ಳುತ್ತಾನೆ. ಪುರುಷಶಬ್ದವಾಚ್ಯರಾದ ಸರ್ವಜೀವರಿಗೆ ಅಭಿಮಾನಿಯಾದ ಬ್ರಹ್ಮನೇ ಪರಃ ಪುರುಷಃ ಎನಿಸಿಕೊಳ್ಳುತ್ತಾನೆ. ಬ್ರಹ್ಮಪತ್ನಿಯಾದ ಪ್ರಕೃತಿಯು ಮಹದಾದಿಕಾರ್ಯಗಳಲ್ಲಿ ಸೇರಿದ ಅವ್ಯಕ್ತ-ತತ್ವಕ್ಕೆ ಅಭಿಮಾನಿನಿಯು. ಸರ್ವ ದೇಶ-ಕಾಲಗಳಲ್ಲಿ ಆ ಪ್ರಕೃತಿಯು ಸೂತ್ರನಾಮಕ ವಾಯುವಿನಿಂದ ಪ್ರಾರಂಭಿಸಿ ಎಲ್ಲ ಜಗತ್ತನ್ನು ಸೃಷ್ಟಿಸುವಳು.

ಶ್ರೀಹರಿಯು ಕಾಲ ಪ್ರಕೃತಿ ಚತುರ್ಮುಖ ಇವರಿಗೆ ಆಧಾರನು ವ್ಯಂಜಕನು ಸೃಷ್ಟಿಸುವವನು. ಆ ಮೂವರಿಗೂ ಮೂಲಭೂತಳಾದ ಲಕ್ಷ್ಮೀದೇವಿಗೂ ಕೂಡ ಶ್ರೀಹರಿಯೇ ಆಧಾರನು ವ್ಯಂಜಕನು ಮತ್ತು ಸಮಸ್ತಪದಾರ್ಥಗಳಿಗೆ ನಿಯಾಮಕನೂ ಆಗಿರುವನು. ಎಂದು ತಾತ್ಪರ್ಯದ ಭಾವ.॥೧೯॥

ಸೃಷ್ಟ್ಯಾದಿಗಳಿಗೆ ಮುಖ್ಯಕಾರಣ ಶ್ರೀಹರಿಯೇ ಎಂಬ ಅಭಿಪ್ರಾಯದಿಂದ ಸೃಷ್ಟ್ಯಾದಿಗಳ ಕಾಲಾವಧಿ ಹೇಳುವರು-

**ಸರ್ಗಃ ಪ್ರವರ್ತತೇ ತಾವತ್ ಪೌರ್ವಾಪರ್ಯೇಣ ನಿತ್ಯಶಃ ।**
**ಮಹಾನ್ ಗುಣವಿಸರ್ಗೋಽರ್ಥಃ ಸ್ಥಿತ್ಯಂತೋ ಯಾವದೀಕ್ಷಣಮ್॥೨೦॥**

**ಯಾವತ್ ಸ್ಥಿತಿರಸ್ತಿ** ಎಲ್ಲಿಯವರೆಗೆ ಸ್ಥಿತಿ ಇರುವುದೋ **ತಾವತ್ ಸರ್ಗಃ ಪ್ರವರ್ತತೇ** ಅಲ್ಲಿಯವರೆಗೆ ಸೃಷ್ಟಿಯು **ಪೌರ್ವಾಪರ್ಯೇಣ** ಸೃಷ್ಟಿಯಾದ ಮೇಲೆ ಸ್ಥಿತಿಯು ನಂತರ ಸೃಷ್ಟಿಯು ಮತ್ತೆ ಸ್ಥಿತಿ ಹೀಗೆ ಒಂದಾದ ಮೇಲೊಂದು **ನಿತ್ಯಶಃ** ಪ್ರಲಯದವರೆಗೆ ನಡೆಯುತ್ತಿರುತ್ತದೆ. **ಯಾವತ್ ಈಕ್ಷಣಂ** ಯಾವಾಗ ಪ್ರಲಯವಾಗಬೇಕೆಂದು ಶ್ರೀಹರಿಯ ಸ್ಮರಣ ಬರುವುದೋ ಆಗ **ಸ್ಥಿತ್ಯಂತಃ** ಸ್ಥಿತಿಯ ಕೊನೆ ಅಂದರೆ ಪ್ರಲಯವಾಗುವುದು **ಗುಣವಿಸರ್ಗಃ ಅರ್ಥಃ** ಮಹಾನ್ ಸತ್ವಾದಿಗುಣಗಳಿಂದ ಉತ್ಪನ್ನವಾದ ಮಹತ್ತತ್ವವೂ ಕೂಡ **ಸ್ಥಿತ್ಯಂತಃ** ಸ್ಥಿತಿಕಾಲದಲ್ಲಿರುವುದು ಪ್ರಲಯದಲ್ಲಿ ಇರಲಾರದು ಎಂದು ಭಾವ.

ಸ್ಥಿತ್ಯಂತಃ ಎಂಬ ಪದದ ಅರ್ಥವನ್ನು ತಿಳಿಸುತ್ತಿದ್ದಾರೆ-

**ತಾತ್ಪರ್ಯ- ಯಾವತ್‌ಸ್ಥಿತಿರಸ್ತಿ ತಾವದುತ್ಪತ್ತಿರಪ್ಯಸ್ಯೈವ। ಯಾವದೀಕ್ಷಣಂ ಯಾವತ್ ಪ್ರಲಯಃ ಸ್ಯಾತ್ ಇತಿ ಭಗವತಃ ಸ್ಮರಣಮ್।**

ಎಲ್ಲಿಯ ವರೆಗೆ ಸ್ಥಿತಿ ಇದೆಯೋ ಅಲ್ಲಿಯ ವರೆಗೆ ಉತ್ಪತ್ತಿಯೂ ಇದ್ದೇ ಇರುವುದು. ಯಾವಾಗ ಪ್ರಲಯವಾಗಲಿ ಎಂದು ಹರಿ ಇಚ್ಛೆಯಾಗುವುದು. ಆಗ ಪ್ರಲಯವಾಗುವುದು ಎಂದು ಭಾವ. ಸ್ಮರಣ ಎಂದರೆ ಅನುಗ್ರಹೋ-ನ್ಮುಖತಾ ಎಂದು ಹೇಳಿದೆ.

ಕರ್ಮ ಪ್ರಾಪ್ತ ಪ್ರಲಯವನ್ನು ನಿರೂಪಿಸುವರು-

**ವಿರಾಣ್ಮಯಾಽಽಸಾದ್ಯಮಾನೋ ಲೋಕಕಲ್ಪವಿಕಲ್ಪಕಃ।**
**ಪಂಚತ್ವಾಯಾವಿಶೇಷಾಯ ಕಲ್ಪತೇ ಭುವನೈಃ ಸಹ ॥೨೧॥**

**ಲೋಕಕಲ್ಪವಿಕಲ್ಪಕಃ** ಹದಿನಾಲ್ಕು ಲೋಕಗಳ ಸೃಷ್ಟಿ ವಿವಿಧದೇವತೆ ಮುಂತಾದ ಸೃಷ್ಟಿಯು ಯಾವುದರಲ್ಲಿ ಆಗುವುದೊ ಅಂಥ **ವಿರಾಟ್** ಬ್ರಹ್ಮಾಂಡವು **ಮಯಾ** ನನ್ನಿಂದ **ಆಸಾದ್ಯಮಾನಃ** ನಾಶವಾಗಲು ಪ್ರೇರಿತವಾಗಿ **ಭುವನೈಃ ಸಹ** ಲೋಕಗಳೊಟ್ಟಿಗೆ **ಪಂಚತ್ವಾಯ ಕಲ್ಪತೇ** ಆಕಾಶಾದಿ ಕಾರಣ ಮಾತ್ರ ರೂಪದಿಂದ ಇರಲು ಸಮರ್ಥವಾಗುವುದು ನಾಶವಾಗುವುದೆಂದರ್ಥ. ಅನಂತರ **ಅವಿಶೇಷಾಯ ಕಲ್ಪತೇ** ಆಕಾಶಾದಿ ಎಲ್ಲ ಗುಣಗಳಿಂದ ಕೂಡಿರುವುದರಿಂದ ವಿಶೇಷವೆನಿಸಿದ ಪೃಥಿವೀ ನಾಶವಾಗುವುದು ಎಂದರ್ಥ. ಆವರಣ (ಖರ್ಪರವಾದ ಪೃಥಿವಿಯು) ನಾಶವಾಗುವುದು.

ಪಂಚತ್ವಾಯ ಅವಿಶೇಷಾಯ ಎಂಬುದು ವಿಶೇಷಣ-ವಿಶೇಷ್ಯ ಎಂದು ತೋರುತ್ತದೆ. ಅದನ್ನು ನಿವಾರಿಸುವುದಕ್ಕಾಗಿ ಅವಿಶೇಷ ಶಬ್ದಾರ್ಥವನ್ನು ತಿಳಿಸಲು ವಿಶೇಷ ಶಬ್ದಾರ್ಥವನ್ನು ಹೇಳುತ್ತಿದ್ದಾರೆ-

**ತಾತ್ಪರ್ಯ- ವಿಶೇಷೇಣ ಗುಣೋದ್ರೇಕಾತ್ ವಿಶೇಷಃ ಪೃಥಿವೀ ಸ್ಮೃತಾ। ಇತಿ ಪ್ರವೃತ್ತೇ। ಪಂಚತ್ವಾನಂತರಂ ಅವಿಶೇಷಾಯ।**

ಪರಾನ್ವಯನ್ಯಾಯದಿಂದ ವಿಶೇಷೇಣ ಗುಣೋದ್ರೇಕವೆಂದರೆ ಆಕಾಶಾದಿ ಎಲ್ಲ ಭೂತಗಳ ಗುಣಗಳಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ

ಐದೂ ಗುಣಗಳಿರುವುದರಿಂದ ಪೃಥಿವಿಯು ವಿಶೇಷವೆನಿಸುವುದು. ಅದರ ನಾಶವಾಗಲು ಎಂದರ್ಥ.

ಬ್ರಹ್ಮಾಂಡ ನಾಶವಾದ ಮೇಲೆ ಪೃಥಿವಿಯು ನಾಶವಾಗುವುದು ಎಂದು ಭಾವ.।।೨೦।।

ಪೃಥಿವೀ ಮುಂತಾದವುಗಳ ಲಯವನ್ನು ವಿವರಿಸುವರು-

**ಅನ್ನೇ ಪ್ರಲೀಯತೇ ಮರ್ತ್ಯಮನ್ನಂ ಧಾನಾಸು ಲೀಯತೇ ।**
**ಧಾನಾ ಭೂಮೌ ಪ್ರಲೀಯಂತೇ ಭೂಮಿರ್ಗಂಧೇ ಪ್ರಲೀಯತೇ ।।೨೨।।**

ಇಲ್ಲಿ ಅಭಿಮಾನಿಗಳಿಗೂ ಅಭಿಮನ್ಯಮಾನ ಪದಾರ್ಥಗಳಿಗೂ ಒಂದೇ ಶಬ್ದದಿಂದ ಲಯ ಹೇಳುತ್ತಿರುವುದರಿಂದ ಅಭಿಮಾನಿಗಳಿಗೆ ಅಭಿಮಾನಿಗಳಲ್ಲಿ ಅಭಿಮನ್ಯಮಾನಗಳಿಗೆ ಅಭಿಮನ್ಯಮಾನಗಳಲ್ಲಿ ಲಯವೆಂದು ತಿಳಿಯಬೇಕು.

**ಮರ್ತ್ಯಂ** ಅನ್ನವನ್ನು ಉಪಜೀವಿಸಿರುವ ಶರೀರವೂ ಅದರ ಅಭಿಮಾನಿಯು **ಅನ್ನೇ ಪ್ರಲೀಯತೇ** ಅನ್ನದಲ್ಲಿ ಅನ್ನಾಭಿಮಾನಿಯಲ್ಲಿ ಲಯವಾಗುವುದು. ಔಷಧಿಗಳಲ್ಲಿ ಔಷಧ್ಯಭಿಮಾನಿದೇವಿಯಲ್ಲಿ **ಲೀಯತೇ** ಲಯವಾಗುವುದು **ಧಾನಾಃ** ಔಷಧಿಗಳು (ಧಾನಾವಿಕೃತ) **ಭೂಮೌ** ತನ್ನ ಕಾರಣವಾದ ಭೂಮಿಯಲ್ಲಿ **ಪ್ರಲೀಯತೇ** ಪ್ರವೇಶಿಸುವುದು **ಭೂಮಿಃ ಗಂಧೇ ಪ್ರಲೀಯತೇ** ಭೂಮಿಯು ತನಗೆ ಕಾರಣವಾದ ಗಂಧವೆಂಬ ದ್ರವ್ಯದಲ್ಲಿ ಲಯವಾಗುವುದು.

ಅನ್ನ ಔಷಧಿಗಳಲ್ಲಿ ಲಯವಾಗುವುದು ಪ್ರತ್ಯಕ್ಷವಿರುದ್ಧ. ಕಾರಣ ಅಭಿಮಾನಿಗಳನ್ನು ತೆಗೆದುಕೊಳ್ಳಬೇಕು ಎಂದು ವ್ಯಾಖ್ಯಾನಿಸುವರು.

**ತಾತ್ಪರ್ಯ**- ದೇವ್ಯಾಮೋಷಧಿಮಾನಿನ್ಯಾಂ ಲೀಯತೇಽನ್ನಾಭಿಮಾನಿನೀ ।

ಅನ್ನಾಭಿಮಾನಿನಿಯು ಔಷಧಿ ಅಭಿಮಾನಿನಿಯಲ್ಲಿ ಲಯವಾಗುವಳು ಇದರಂತೆ ಎಲ್ಲೆಡೆ ತಿಳಿಯುವುದು.

**ಅಪ್ಸು ಪ್ರಲೀಯತೇ ಗಂಧ ಆಪಶ್ಚ ಸ್ವಗುಣೇ ರಸೇ ।**
**ಲೀಯತೇ ಜ್ಯೋತಿಷಿ ರಸೋ ಜ್ಯೋತೀ ರೂಪೇ ಪ್ರಲೀಯತೇ ।।೨೩।।**

**ರೂಪಂ ವಾಯೌ ಸ ಚ ಸ್ಪರ್ಶೇ ಲೀಯತೇ ಸೋಽಪಿ ಚಾಂಬರೇ ।**
**ಅಂಬರಂ ಶಬ್ದತನ್ಮಾತ್ರ ಇಂದ್ರಿಯಾಣಿ ಸ್ವಯೋನಿಷು ।।೨೪।।**

**ಗಂಧಃ** ಗಂಧವು **ಅಪ್ಸು** ತನಗೆ ಕಾರಣವಾದ ನೀರಿನ ಅಭಿಮಾನಿಯಲ್ಲಿ **ಪ್ರಲೀಯತೇ** ಲಯವಾಗುವುದು **ಆಪಶ್ಚ** ನೀರಾದರೂ **ಸ್ವಗುಣೇ ರಸೇ** ತನ್ನ ಗುಣವಾದ ರಸದಲ್ಲಿ **ಜ್ಯೋತಿಷಿ** ಅಗ್ನಿಯಲ್ಲಿ **ರಸಃ** ರಸವು **ಜ್ಯೋತಿಃ** ಅಗ್ನಿಯು **ರೂಪೇ** ರೂಪದಲ್ಲಿ **ಪ್ರಲೀಯತೇ** ಲಯವಾಗುವುದು.।।೨೩।।

**ರೂಪಂ** ರೂಪವು **ವಾಯೌ** ವಾಯುವಿನಲ್ಲಿ **ಸ ಚ** ಆ ವಾಯುವು **ಸ್ಪರ್ಶೇ** ಸ್ಪರ್ಶದಲ್ಲಿ **ಸೋಽಪಿ** ಆ ಸ್ಪರ್ಶವು **ಅಂಬರೇ** ಆಕಾಶದಲ್ಲಿ **ಅಂಬರಂ** ಆಕಾಶವು **ಶಬ್ದತನ್ಮಾತ್ರೇ** ಶಬ್ದತನ್ಮಾತ್ರಾ ಎಂಬ ತನ್ನ ಕಾರಣದಲ್ಲಿ **ಲೀಯತೇ** ಲಯವಾಗುವುದು. **ಇಂದ್ರಿಯಾಣಿ** ಇಂದ್ರಿಯಗಳು **ಸ್ವಯೋನಿಷು** ತಮಗೆ ಕಾರಣವಾದ ತೈಜಸ ಅಹಂಕಾರದಲ್ಲಿ ಇಂದ್ರಿಯಾಭಿಮಾನಿಗಳು ತಮಗೆ ಕಾರಣವಾದ ವೈಕಾರಿಕ ಅಹಂಕಾರದಲ್ಲಿ ಲಯವಾಗುವುದು.।।೨೪।।

**ಯೋನಿರ್ವೈಕಾರಿಕೇ ಸೌಮ್ಯ ಲೀಯತೇ ಮಹತೀಶ್ವರೇ ।**
**ಶಬ್ದೋ ಭೂತಾದಿಮಪ್ಯೇತಿ ಭೂತಾದಿರ್ಮಹತಿ ಪ್ರಭುಃ ।।೨೫।।**

**ಯೋನಿಃ** ಇಂದ್ರಿಯಗಳಿಗೆ ಕಾರಣವಾದ ಅಹಂಕಾರವು **ವೈಕಾರಿಕೇ ಮಹತಿ** ಗುಣವಿಕಾರಜನ್ಯವಾದ ಮಹತ್ತತ್ವದಲ್ಲಿ **ಈಶ್ವರೇ** ತನ್ನ ಸ್ವಾಮಿಯಾದ ಬ್ರಹ್ಮನಲ್ಲಿ ಲಯವಾಗುವುದು **ಶಬ್ದಃ** ಆಕೋಶೋಪಾದಾನವಾದ ಶಬ್ದವು **ಭೂತಾದಿಂ** ತಾಮಸಾಹಂಕಾರವನ್ನು **ಅಪ್ಯೇತಿ** ಹೊಂದುವುದು. **ಭೂತಾದಿಃ** ತಾಮಸ ಅಹಂಕಾರವು **ಮಹತಿ** ಮಹತ್ತತ್ವದಲ್ಲಿ **ಲೀಯತೇ** ಲಯವಾಗುವುದು.

ಮೇಲಿನ ಶ್ಲೋಕದಲ್ಲಿ ವೈಕಾರಿಕವು ಅಹಂಕಾರ ಪ್ರಭೇದವಾದ್ದರಿಂದ ಮಹತಿ ಎಂಬುದಕ್ಕೆ ವಿಶೇಷಣವಾಗಲಾರದು. ಈಶ್ವರೇ ಎಂಬುದರಿಂದ ರುದ್ರನಿಗೂ ಮಹತ್ತತ್ವಾಭಿಮಾನಿತ್ವತೋರುವುದು. ಕಾರಣ ವ್ಯಾಖ್ಯಾನಿಸುವರು.

**ತಾತ್ಪರ್ಯ-** ವಿಕಾರಜತ್ವಾತ್ತು ಮಹಾನ್ ವೈಕಾರಿಕ ಉದಾಹೃತಃ ।
ಈಶನಾದೀಶ್ವರಶ್ಚೈವ ಬ್ರಹ್ಮಾ ಬೃಂಹಣತಃ ಸ್ಮೃತಃ ।। ಇತಿ ಚ ।

ಮಹತ್ತತ್ವಾಭಿಮಾನಿಯಾದ ಚತುರ್ಮುಖನು ಪ್ರಕೃತಿವಿಕಾರವಾದ ಗುಣತ್ರಯದಿಂದ ಹುಟ್ಟಿರುವುದರಿಂದ ವೈಕಾರಿಕನೂ, ಪ್ರೇರಿಸುವುದರಿಂದ ಈಶ್ವರನೆಂದೂ, ರುದ್ರಾದಿಗಳಿಗಿಂತ ಪೂರ್ಣನಾದ್ದರಿಂದ ಬ್ರಹ್ಮನೆಂದೂ ಕರೆಸಿಕೊಳ್ಳುವನು. ಅಹಂಕಾರಾಭಿಮಾನಿ ರುದ್ರನಿಗೆ ಮಹತ್ತತ್ವಾಭಿಮಾನಿ ಚತುರ್ಮುಖನಲ್ಲಿ ಲಯವೆಂದು ಭಾವ.।।೨೫।।

**ಸ ಲೀಯತೇ ಮಹಾನ್ ಸ್ವೇಷು ಗುಣೇಷು ಗುಣವತ್ತಮಃ ।**
**ತೇಽವ್ಯಕ್ತೇ ಸಂಪ್ರಲೀಯಂತೇ ತತ್ ಕಾಲೇ ಲೀಯತೇಽವ್ಯಯೇ ॥೨೬॥**

**ಕಾಲೋ ಮಾಯಾಮಯೇ ಜೀವೇ ಜೀವ ಆತ್ಮನಿ ಮಯ್ಯಜೇ ।**
**ಆತ್ಮಾ ಕೇವಲ ಆತ್ಮಸ್ಥೋ ವಿಕಲ್ಪಾಪಾಯಲಕ್ಷಣಃ ॥೨೭॥**

**ಸಃ** ಮಹಾನ್ ಆ ಮಹತ್ತತ್ವಾಭಿಮಾನಿಯಾದ ಪುನ್ನಾಮಕ ಬ್ರಹ್ಮನು **ಗುಣವತ್ತಮಃ ಅಪಿ** ಗುಣವುಳ್ಳವರಲ್ಲಿ ಶ್ರೇಷ್ಠನಾಗಿದ್ದರೂ **ಸ್ವೇಷು** ತನಗೆ ಕಾರಣರಾದ **ಗುಣೇಷು** ಸತ್ವರಜಸ್ತಮೋಭಿಮಾನಿಗಳಾದ ಗಾಯತ್ರೀ, ಸಾವಿತ್ರೀ, ಸರಸ್ವತಿಯರಲ್ಲಿ, **ಲೀಯತೇ** ಲಯ ಹೊಂದುವನು. **ತೇ** ಆ ಸತ್ವಾದಿ-ಗುಣಗಳು ಅಭಿಮಾನಿಗಳಾದ ಮೂವರೂ (ಗಾಯತ್ರೀ, ಸಾವಿತ್ರೀ, ಸರಸ್ವತಿಯರು) **ಅವ್ಯಕ್ತೇ** ಮೂಲಪ್ರಕೃತಿಯಲ್ಲಿ ಅವ್ಯಕ್ತತತ್ವದ ಅವಾಂತರ ಅಭಿಮಾನಿಯಾದ ಪ್ರದ್ಯುಮ್ನನಿಂದ ಜನಿಸಿದ ಪ್ರಧಾನಸಂಜ್ಞಕಳಾದ ಬ್ರಹ್ಮಪತ್ನಿಯಲ್ಲಿ ಲಯವಾಗುವುದು **ತತ್** ಆ ಅವ್ಯಕ್ತವು ಅವ್ಯಕ್ತಾಭಿಮಾನಿ-ಗಾಯತ್ರಿಯು ಪುರುಷನೆಂಬ ತನ್ನ ಪತಿಯಾದ ವಿರಿಂಚನಲ್ಲಿ ಲಯವಾಗುವಳು. ಆ ಪುರುಷನು **ಕಾಲೇ** ಕಾಲನಾಮಕನಾದ ತನ್ನಲ್ಲಿ ಲೀನನಾಗುವನು. **ಕಾಲಃ** ಕಾಲನಾಮಕವಿರಿಂಚನು **ಮಾಯಾಮಯೇ** ವಾಸುದೇವ ಪತ್ನಿಯಾದ ಮಾಯಾ ನಾಮಕಳಾದ **ಜೀವೇ** ಪ್ರಾಣಧಾರಕಳಾದ ಲಕ್ಷ್ಮೀಯಲ್ಲಿ ಲಯ ಹೊಂದುವನು. **ಜೀವಃ** ಜೀವನಾಮಕಳಾದ ಶ್ರೀದೇವಿಯು **ಅಜೇ** ಜನಿರಹಿತನಾದ **ಮಯಿ** ನನ್ನಲ್ಲಿ ಲಯ ಹೊಂದುವಳು ಅತ್ಯಂತ ರತಿಯುಳ್ಳವಳಾಗುವಳು.

ತನ್ನ ಸ್ವರೂಪವನ್ನು ಹೇಳುವನು. **ಆತ್ಮಾ** ಗುಣಪೂರ್ಣನು **ಕೇವಲಃ** ಪ್ರಕೃತಿ ಸಂಬಂಧರಹಿತನು. ಸಮಾಧಿಕರಹಿತನು **ಆತ್ಮಸ್ಥಃ** ಅನನ್ಯಾಧಾರನಾದವನು ಆದ್ದರಿಂದಲೇ ಲಯಾದಿಗಳಿಲ್ಲದಿರುವನು. **ವಿಕಲ್ಪಾಪಾಯಲಕ್ಷಣಃ** ಸಮ್ಯಗ್ ಜ್ಞಾನ ಸ್ವರೂಪನಾದ ಅಥವಾ ಮಿಥ್ಯಾಜ್ಞಾನ ಅಪಗಮವೇ ಲಕ್ಷಣವಾಗಿ ಉಳ್ಳವನು ಎಂದರ್ಥ.॥೨೬ - ೨೭॥

ಮೇಲಿನ ಶ್ಲೋಕಗಳ ಅರ್ಥ ಸರಿಯಾಗಿ ಆಗದಿದ್ದರಿಂದ ಸಮಾಖ್ಯಾ ಪ್ರಮಾಣ ಹೇಳುವರು-

ಗಾಯತ್ರೀ ಚೈವ ಸಾವಿತ್ರೀ ತಥೈವ ಚ ಸರಸ್ವತೀ ।
ಏವಂ ತ್ರಿರೂಪಾ ಪ್ರಕೃತಿರ್ಬ್ರಹ್ಮಪತ್ನೀ ಪ್ರಕೀರ್ತಿತಾ ॥

ಮಹತ್ತತ್ವಾತ್ಮಕೋ ಬ್ರಹ್ಮಾ ತಜ್ಜತ್ವಾತ್ ತತ್ರ ಲೀಯತೇ ।
ಗುಣಾಧಿಕಃ ಪತಿರಪಿ ತಸ್ಯಾ ಸತ್ವಾದಿಭೇದತಃ ॥

ತ್ರಿವಿಧಾ ಮೂಲರೂಪಾಯಾಂ ಪ್ರಕೃತ್ಯಾಂ ಸಾ ಪ್ರಲೀಯತೇ ।
ಪ್ರಕೃತಿರ್ಮೂಲರೂಪಾ ಸಾ ಬ್ರಹ್ಮಪತ್ನೀ ಜಗನ್ಮಯಾ ॥

ಪುರುಷಾಭಿಧೇ ವಿರಿಂಚೇ ತು ಸ ಸ್ವಸ್ಮಿನ್ ಕಾಲಸಂಜ್ಞಿತೇ ।
ಕಾಲಾಭಿಧೋ ವಿರಂಚಸ್ತು ಮಹಾಲಕ್ಷ್ಮ್ಯಾಂ ವಿಲೀಯತೇ ॥

ಜೀವಮಾಯೇತಿ ಯಾಮಾಹುಃ ಸಾ ಚ ಸತ್ವಾದಿಭೇದತಃ ।
ತ್ರಿವಿಧೈಕತ್ವಮಾಪಾದ್ಯ ವಿಷ್ಣಾವೇವ ಪ್ರಲೀಯತೇ ॥

ಹರೇರತ್ಯಂತಸಾಮೀಪ್ಯಂ ಲಯೋ ಲಕ್ಷ್ಮ್ಯಾಃ ಪ್ರಕೀರ್ತಿತಃ ।
ಪುರುಷೇಣಾಪಿ ಸಾಮೀಪ್ಯಂ ಪ್ರಕೃತೇರ್ಲಯ ಉಚ್ಯತೇ ।

ಬ್ರಹ್ಮಾ ಚ ಪ್ರಕೃತಿಶ್ಚೈವ ಮುಕ್ತಿಗೌ ವಿಲಯೇ ಯತಃ ।
ಅತಸ್ತೌ ಭಿನ್ನದೇಹೌ ತು ಜ್ಞಾನಮಾತ್ರೌ ಸಮೀಪಗೌ ॥ ಇತ್ಯಾದಿ ಚ ।

ಬ್ರಹ್ಮಪತ್ನಿಯಾದ ಪ್ರಕೃತಿಯು ಗಾಯತ್ರೀ, ಸಾವಿತ್ರೀ, ಸರಸ್ವತೀ, ಎಂದು ಮೂರು ರೂಪವುಳ್ಳವಳು. ಮಹತ್ತತ್ವಾಭಿಮಾನಿಯಾದ ಬ್ರಹ್ಮನು ಇವರುಗಳಿಗೆ ಪತಿಯಾಗಿದ್ದರೂ ಗುಣದಲ್ಲಿ ಅಧಿಕನಾಗಿದ್ದರೂ ಇವರಿಂದ ಹುಟ್ಟಿದ್ದರಿಂದ ಸತ್ವಾದಿಗುಣಗಳಿಗೆ ಅಭಿಮಾನಿಗಳಾದ ಗಾಯತ್ರಿ ಮೊದಲಾದ ಮೂರು ರೂಪಗಳಲ್ಲಿ ಲಯ ಹೊಂದುತ್ತಾನೆ. ಸತ್ವಾದಿಗಳಿಗೆ ಅಭಿಮಾನಿನಿಯಾದ ಗಾಯತ್ರ್ಯಾದಿ ಪ್ರಭೇದದಿಂದ ಮೂರು ರೀತಿಯಾದ ಪ್ರಕೃತಿಯು ಮೂಲರೂಪಳಾದ ಅವ್ಯಕ್ತ ಅವಾಂತರಾಭಿಮಾನಿನಿಯಾದ ಪ್ರದ್ಯುಮ್ನನಿಂದ ಹುಟ್ಟಿದ ಪ್ರಧಾನವೆಂಬ ಬ್ರಹ್ಮಪತ್ನಿಯಲ್ಲಿ ಲಯ ಹೊಂದುತ್ತಾಳೆ.

ಜಗತ್ತಿಗೆ ಅಭಿಮಾನಿನಿಯಾದ ಗಾಯತ್ರ್ಯಾದಿ ಮೂರು ರೂಪಗಳಿಗೆ ಮೂಲಳಾದ ಬ್ರಹ್ಮಪತ್ನಿಯಾದ ಸರಸ್ವತಿಯು ಪುರುಷನೆಂದು ಹೆಸರುಳ್ಳ ಚತುರ್ಮುಖನಲ್ಲಿಯೂ ಅವನು ಕಾಲನೆಂದು ಹೆಸರುಳ್ಳ ತನ್ನ ರೂಪದಲ್ಲಿ ಲಯ ಹೊಂದುತ್ತಾರೆ. ಕಾಲನಾಮಕ ಬ್ರಹ್ಮನು ಮೂಲ ಪ್ರಕೃತಿಗೆ

ಅಭಿಮಾನಿನಿಯಾದ ಜೀವ ಮಾಯಾಭಿಧಳಾದ ಮಹಾಲಕ್ಷ್ಮೀಯಲ್ಲಿ ಲಯ ಹೊಂದುತ್ತಾನೆ. (ಇಲ್ಲಿ ಪ್ರಾಣಸ್ಯ ತೇಜಸಿ ಲಯಃ ವಾಸುದೇವ ಪತ್ನಿ ಮಾಯಾ ತನ್ನ ತಾಯಿ) ಮಾರ್ಗಮಾತ್ರಮುದಾಹೃತಃ ಎಂದು ಭಾಷ್ಯದಲ್ಲಿ ಹೇಳಿದ ಪ್ರಕಾರ ವಾಸುದೇವನಲ್ಲಿ ಪ್ರವೇಶಿಸಲು ಅವಳ ಆಜ್ಞೆ ಪಡೆಯುವುದೇ ಲಯವೆಂದರೆ ಹೊರತು ಪ್ರವೇಶವಲ್ಲ. ಪ್ರಕೃತಿಯಲ್ಲಿ ಲೀನವಾದರೆ ಮತ್ತೆ ಸಂಸಾರ ಬರಬೇಕಾಗುವುದು. ಆ ಮಹಾಲಕ್ಷ್ಮೀಯು ಸತ್ವಾದಿಗುಣಗಳಿಗೆ ಅಭಿಮಾನಿಯಾಗಿ ಶ್ರೀ, ಭೂ, ದುರ್ಗಾರೂಪಗಳಿಂದ ಇದ್ದವಳು. ಒಂದಾಗಿ ಶ್ರೀಹರಿಯಲ್ಲಿ ಲಯ ಹೊಂದುತ್ತಾಳೆ. ಶ್ರೀಹರಿಯ ಅತಿಸಾಮೀಪ್ಯವೇ ಲಕ್ಷ್ಮೀದೇವಿಗೆ ಲಯವು. ಇದರಂತೆ ಪ್ರಕೃತಿಶಬ್ದವಾಚ್ಯಳಾದ ಗಾಯಿತ್ರಿಗೂ ಸಹ ತನ್ನ ಪತಿಯಾದ ಪುರುಷನಾಮಕ ಬ್ರಹ್ಮನ ಸಾಮೀಪ್ಯವೇ. ಏಕೆಂದರೆ ಚತುರ್ಮುಖ ಸರಸ್ವತಿಯರು ಸ್ಥೂಲದೇಹ ನಾಶವಾದಾಗ ಲಿಂಗದೇಹಭಂಗ ಹೊಂದಿ ಶ್ವೇತದ್ವೀಪದಲ್ಲಿ ಕೇವಲ ಜ್ಞಾನಸ್ವರೂಪರಾಗಿರುವರು. ಆದ ಕಾರಣ ಏಕಕಾಲದಲ್ಲಿ ಸ್ಥೂಲದೇಹದಲ್ಲಿ ಪರಿತ್ಯಾಗಕ್ಕಾಗಿ ಅತ್ಯಂತಸಾಮೀಪ್ಯ ಹೊಂದಿರುವರು. ಮುಕ್ತಿಯಲ್ಲಿ ಯಾವ ದೇವತೆಗಳಿಗೆ ಯಾವ ದೇವತೆಗಳಲ್ಲಿ ಪ್ರವೇಶ ಮಾಡಿದ ಭೋಗಮಾಡುವುದೆಂಬ ಸಾಯುಜ್ಯವಿದೆಯೋ ಅವರಿಗೆ ಆ ದೇವತೆಗಳಲ್ಲಿ ಲಯವು ಪ್ರಲಯಕಾಲದಲ್ಲಿ ಇರುವುದು. ಬ್ರಹ್ಮ-ಸರಸ್ವತಿಯರಾದರೂ ಮುಕ್ತಿಯಲ್ಲಿ ಬೇರೆ ಬೇರೆ ದೇಹದಿಂದ ಪರಸ್ಪರ ಸಮೀಪ ಇರುವರು. ಸರಸ್ವತಿಗೆ ಬ್ರಹ್ಮಪ್ರವೇಶರೂಪ ಸಾಯುಜ್ಯವಿಲ್ಲ. ಕಾರಣ ಪ್ರಲಯದಲ್ಲಿಯೂ ಪ್ರವೇಶವಿಲ್ಲ. ಪ್ರತ್ಯೇಕವಾಗಿ ಪ್ರಲಯದಲ್ಲಿಯೂ ಪ್ರವೇಶವಿಲ್ಲ. ಪ್ರತ್ಯೇಕವಾಗಿ ಜೊತೆಗೆ ಶ್ರೀಹರಿಯಲ್ಲಿ ಪ್ರವೇಶಿಸುವರು. ಅಲ್ಲಿಯೇ ಅವರೀರ್ವರ ದೇಹ ಲಯವಾಗುವುದು ಎಂದು ತಿಳಿಯಬೇಕು. ನಿರವಕಾಶ ಈ ವಾಕ್ಯದ ಪ್ರಕಾರವೇ-

'ಸಗಿರಂ ಚ ಸೈವ ವಾಯುಂ ವಿಶಂತ್ಯಂಜ ಇತೀಹ ನಿರ್ಣಯಃ' ಎಂಬ ಅನುವ್ಯಾಖ್ಯಾನಕ್ಕೂ ಸಾಮೀಪ್ಯರೂಪ ಪ್ರವೇಶವೆಂದೇ ಅರ್ಥ ತಿಳಿಯಬೇಕು. ಪುನ್ನಾಮಕಬ್ರಹ್ಮನಿಗಿಂತ ಮುಂಚೆ ವಾಸುದೇವನಿಂದ ಕಾಲನಾಮಕ ಬ್ರಹ್ಮ ಜನಿಸಿದನು ಎಂದೂ ತಿಳಿಯಬೇಕು.

**ಏವಮನ್ವೀಕ್ಷಮಾಣಸ್ಯ ಕಥಂ ವೈಕಲ್ಪಿಕೋ ಭ್ರಮಃ ।**
**ಮನಸೋ ಹೃದಿ ತಿಷ್ಠೇತ ವ್ಯೋಮ್ನೀವಾರ್ಕೋದಯೇ ತಮಃ ॥೨೮॥**

**ಏವಂ** ಮೇಲೆ ಹೇಳಿದ ಪ್ರಕಾರ **ಅನ್ವೀಕ್ಷಮಾಣಸ್ಯ** ತಿಳಿಯುವವನಿಗೆ **ವೈಕಲ್ಪಿಕಃ** ವಿವಿಧ ದುಃಖ ಕಲ್ಪನೆಯಿಂದ ಬಂದ **ಭ್ರಮಃ** ತನ್ನಲ್ಲಿ ಚೇತನನಲ್ಲಿ ದುಃಖಿ ಮುಂತಾದ ಆರೋಪವು **ಮನಸಃ** ಮನಸ್ಸಿನಿಂದ ಹುಟ್ಟಿ **ಹೃದಿ ಕಥಂ ತಿಷ್ಠೇತ** ಬುದ್ಧಿಯಲ್ಲಿ ಹೇಗೆ ಉಳಿದೀತು? **ಅರ್ಕೋದಯೇ** ಸೂರ್ಯೋದಯ-ವಾದಾಗ **ವ್ಯೋಮ್ನಿ** ಆಕಾಶದಲ್ಲಿ **ತಮಃ ಇವ** ಕತ್ತಲಿನಂತೆ ಹೇಗೆ ನಿಲ್ಲಲು ಸಾಧ್ಯ? ನಿಲ್ಲಲಾರದೆಂದರ್ಥ.॥೨೮॥

**ಏಷ ಸಾಂಖ್ಯವಿಧಿಃ ಪ್ರೋಕ್ತಃ ಸಂಶಯಗ್ರಂಥಿಹೇತಿಕಃ ।**
**ಪ್ರತಿಲೋಮಾನುಲೋಮಾಭ್ಯಾಂ ಪರಾವರದೃಶಾ ಮಯಾ ॥೨೯॥**

**ಪರಾವರದೃಶಾ** ಚೇತನಾಚೇತನಗಳನ್ನು ಅಶೇಷ ವಿಶೇಷಸಹಿತವಾಗಿ ತಿಳಿದ **ಮಯಾ** ನನ್ನಿಂದ **ಸಾಂಖ್ಯವಿಧಿಃ ಪ್ರೋಕ್ತಃ** ಸಾಂಖ್ಯಶಾಸ್ತ್ರದಲ್ಲಿ ಹೇಳಿದ **ಏಷಃ** ಸೃಷ್ಟಿ ಮತ್ತು ಸಂಹಾರವು **ಪ್ರತಿಲೋಮಾನುಲೋಮಾಭ್ಯಾಂ** ವಿಪರೀತ-ಕ್ರಮದಿಂದ ಸಂಹಾರಕ್ರಮವಾಗಿ ಸೃಷ್ಟಿಯೂ **ಪ್ರೋಕ್ತಃ** ಹೇಳಲ್ಪಟ್ಟಿದೆ.॥೨೯॥

ಇಲ್ಲಿ ೨೧ನೇ ಶ್ಲೋಕದಿಂದ ೨೭ನೇ ಶ್ಲೋಕದ ವರೆಗಿನ ಲಯ ಕ್ರಮ ಹೇಳಿದೆ.

ತಮ್ಮ ತಮ್ಮ ಕಾರಣದಲ್ಲಿ ಆ ಕಾರ್ಯಗಳಿಗೆ ಲಯವಾಗುವುದು. ಜಡಕ್ಕೂ ಚೇತನಕ್ಕೂ ಇದು ಸಮಾನ. ಯಾರು ಯಾರಿಂದ ಜನಿಸುವರೋ ಅವರು ಅವರಲ್ಲಿ ಪ್ರವೇಶ ಮಾಡುವರು. ಅಲ್ಲಿ ಅವರ ಸ್ಥೂಲ ದೇಹ ನಾಶವಾಗುವುದು. ಇನ್ನು ಭೂತಗಳ ಲಯ ಹೇಳುವಾಗ 'ಆಪಶ್ಚ ಸ್ವಗುಣೇ ರಸೇ' ಎಂದಿದ್ದಾರೆ. ಕಾರಣ ಸಂದೇಹ ಬರುವುದು. ಕಾರಣ ಈ ರೀತಿ ವಿವರವನ್ನು ತಿಳಿಯಬೇಕು.

**॥ ಇತಿ ಶ್ರೀಮದ್ಭಾಗವತೇ ಏಕಾದಶಸ್ಕಂಧೇ ಚತುರ್ವಿಂಶೋಽಧ್ಯಾಯಃ ॥**

★★★

## ಅಥ ಪಂಚವಿಂಶೋಽಧ್ಯಾಯಃ

ಹಿಂದಿನ ಅಧ್ಯಾಯದಲ್ಲಿ ಹೇಳಿದ ತತ್ವಜ್ಞಾನಕ್ಕೆ ಅಧಿಕಾರಿಯು ಸಾತ್ವಿಕನೇ ಎಂಬ ಅಭಿಪ್ರಾಯದಿಂದ ಸತ್ವಾದಿಗುಣಗಳ ಕಾರ್ಯವನ್ನು ಈ ಅಧ್ಯಾಯದಲ್ಲಿ ಹೇಳುವರು. ಮೊದಲಿಗೆ ಅಮಿಶ್ರ ಗುಣಗಳ ಕಾರ್ಯ ಹೇಳುವನು-

ಭಕ್ತಿಯ ಹೆಚ್ಚಳಕ್ಕಾಗಿ ಅಹಂಕಾರಾದಿಗಳನ್ನು ಕಳೆದುಕೊಳ್ಳುವ ಉಪಾಯ-ವನ್ನು ಹೇಳಿ ರಜೋಗುಣಾದಿಗಳನ್ನು ಕಳೆದುಕೊಳ್ಳುವ ಉಪಾಯವನ್ನು ತಿಳಿಸಲು ಅವುಗಳ ವ್ಯಾಪಾರ ಹೇಳುವನು.

**ಶ್ರೀಭಗವಾನುವಾಚ-**

(ಗುಣಾನಾಮಥ ಮಿಶ್ರಾಣಾಂ ಎಂದು ಸುಧೀಂದ್ರರ ಪಾಠ)

**ಗುಣಾನಾಮಪ್ಯಮಿಶ್ರಾಣಾಂ ಪುಮಾನ್ ಯೇನ ಯಥಾ ಭವೇತ್ ।**
**ತನ್ಮೇ ಪುರುಷವರ್ಯೇದಮುಪಧಾರಯ ಶಂಸತಃ ॥೧॥**

**ಹೇ ಪುರುಷವರ್ಯ** ಉದ್ಧವನೇ **ಶಂಸತಃ** ಉಪದೇಶಿಸುತ್ತಿರುವ **ಮೇ** ನನ್ನಿಂದ (ಗುಣಗಳು ಅಮಿಶ್ರ, ಮಿಶ್ರ, ಶುದ್ಧ, ಹೀಗೆ ಮೂರು ರೀತಿಯಾಗಿವೆ) ಅವುಗಳಲ್ಲಿ **ಅಮಿಶ್ರಾಣಾಂ ಗುಣಾನಾಂ ಅಪಿ** ಶಬ್ದದಿಂದ ಮಿಶ್ರಗುಣಗಳ ಮಧ್ಯದಲ್ಲಿ **ಯೇನ** ಯಾವ ಗುಣದಿಂದ **ಪುಮಾನ್** ಮನುಷ್ಯನು **ಯಥಾ ಭವೇತ್** ಹೇಗಾಗುತ್ತಾನೆ **ತದಿದಂ** ಅದನ್ನು **ಉಪಧಾರಯ** ತಿಳಿದುಕೋ.॥೧॥

ಪಾಠಾಂತರದಲ್ಲಿ **ಮಿಶ್ರಾಣಾಂ** ಮಿಶ್ರಗುಣಗಳು **ಅಥ** ಅವುಗಳಿಂದ ಭಿನ್ನವಾದ ಅಮಿಶ್ರಗುಣಗಳ ಮಧ್ಯದಲ್ಲಿ ಎಂದರ್ಥ.॥೧॥

ಮೊದಲಿಗೆ ಅಮಿಶ್ರ ಸತ್ವಗುಣದ ಕಾರ್ಯ ಹೇಳುವನು-

**ಶಮೋ ದಮಸ್ತಿತಿಕ್ಷೇಕ್ಷಾ ತಪಃ ಸತ್ಯಂ ದಯಾ ಸ್ಮೃತಿಃ ।**
**ತುಷ್ಟಿಸ್ತ್ಯಾಗೋಽಸ್ಪೃಹಾ ಶ್ರದ್ಧಾ ಹ್ರೀಃ ಕ್ಷಮಾ ನಿಸ್ತುತಿರ್ಧೃತಿಃ ॥೨॥**

**ಶಮಃ** ಕೇವಲ ಭಗವನ್ನಿಷ್ಠಬುದ್ಧಿಯು **ದಮಃ** ಇಂದ್ರಿಯನಿಗ್ರಹವು **ತಿತಿಕ್ಷಾ** ದ್ವಂದ್ವಸಹಿಷ್ಣುತೆ **ಈಕ್ಷಾ** ಶಾಸ್ತ್ರಾರ್ಥಜ್ಞಾನ **ತಪಃ** ಕಾಯಕ್ಲೇಶವು **ಸತ್ಯಂ** ಯಥಾರ್ಥವಚನವು **ದಯಾ** ಪರೋಪಕಾರ ಬುದ್ಧಿ **ಸ್ಮೃತಿಃ** ಶಾಸ್ತ್ರಾರ್ಥ ಸ್ಮರಣ **ತುಷ್ಟಿಃ** ವಿಷಯಾಲಂಬುದ್ಧಿ **ತ್ಯಾಗಃ** ನಿಷಿದ್ಧವನ್ನು ಬಿಡುವುದು **ಅಸ್ಪೃಹಾ**

ನಿಷಿದ್ಧ ವಿಷಯೇಚ್ಛೆ ಇಲ್ಲದಿರುವುದು **ಶ್ರದ್ಧಾ** ಅಸ್ತಿಕಬುದ್ಧಿಯು **ಹ್ರೀಃ** ನಿಷಿದ್ಧಾಚರಣ ಮಾಡಲು ಲಜ್ಜೆ **ಕ್ಷಮಾ** ಸಿಟ್ಟಿಗೆ ಬಾರದಿರುವುದು **ನಿಸ್ತುತಿಃ** ತನ್ನ ಪ್ರಶಂಸೆ ಮಾಡಿಕೊಳ್ಳದಿರುವುದು **ಧೃತಿಃ** ಎಂಥ ವಿಪತ್ತಿನಲ್ಲಿಯೂ ಹರಿಯ ಆರಾಧನೆ ಮಾಡುವ ಮನಃಸ್ಥೈರ್ಯ ಸತ್ವಕಾರ್ಯವಾದ ಇವುಗಳು ಯಾರಿಗೆ ಇರುವವೋ ಅವನು ಸಾತ್ವಿಕನು. ಸಾಂಖ್ಯಜ್ಞಾನಾಧಿಕಾರಿಯು ಎಂದು ತಿಳಿಯಬೇಕು.॥೨॥

**ಕಾಮ ಈಹಾ ಮದಸ್ತೃಷ್ಣಾ ಸ್ತಂಭ ಆಶೀರ್ಭಿದಾಽಸುಖಮ್ ।**
**ಮನೋತ್ಸಾಹೋ ಯಶಃ ಪ್ರೀತಿರ್ಧಾಷ್ಟ್ರ್ಯವೀರ್ಯಬಲೋದ್ಯಮಾಃ ॥**

**ಕಾಮಃ** ವಿಷಯಾಭಿಲಾಷೆಯು **ಈಹಾ** ನಿಷಿದ್ಧಾಚರಣೆಯು **ಮದಃ** ಸೊಕ್ಕು **ತೃಷ್ಣಾ** ಅಲಂಬುದ್ಧಿರಾಹಿತ್ಯ **ಸ್ತಂಭಃ** ಹೇಳಿದ್ದನ್ನು ಒಪ್ಪದಿರುವುದು **ಆಶೀಃ** ವ್ಯರ್ಥವಾಗಿ ಎಂದೋ ಬರುವ ಹಣದ ಆಸೆ **ಭಿದಾ** ಸೌಹಾರ್ದ ಪರಿತ್ಯಾಗ ಮಿತ್ರಭೇದ, ವಿರೋಧ, ಅಥವಾ ಅನ್ಯಥಾಜ್ಞಾನ **ಅಸುಖಂ** ದುಃಖವು **ಮನಃ** ಕಾಮಭೋಗ ಮಾಡುವುದರಲ್ಲಿ **ಉತ್ಸಾಹಃ** ಹರ್ಷವು **ಯಶಃ** ಅಪಾತ್ರರಾದ ನಟ ಮುಂತಾದವರಿಗೆ ಹಣ ಪಾರಿತೋಷಕಾದಿಗಳನ್ನು ಕೊಟ್ಟು ಕೀರ್ತಿಗಳಿಸುವುದು **ಪ್ರೀತಿಃ** ವಿಷಯ ಭೋಗದಲ್ಲಿ ''ಇದಂ ಅದ್ಯ ಮಯಾ ಲಬ್ಧಂ ಇಮಂ ಪ್ರಾಪ್ಸ್ಯೇ ಮನೋರಥಂ'' ಎಂದು ಹೇಳಿದಂತೆ ಸಂತೋಷಿಸುವುದು. **ಧಾಷ್ಟ್ರ್ಯ** ತನ್ನ ಪಕ್ಷವನ್ನು ಬಿಡದಿರುವುದು ದಯಾಭಾವವಾಗಲಿ, ವೀರ್ಯ ದುರ್ಬಲರಲ್ಲಿ ಬಲ ಪ್ರಯೋಗವು **ಉದ್ಯಮಾಃ** ವ್ಯರ್ಥ ಮಹಾಪ್ರಯತ್ನ ಮಾಡುವುದು ಇವು ರಜೋಗುಣಕಾರ್ಯಗಳು.

ಇಲ್ಲಿ ಅಸುಖಂ ಎಂದು ದುಃಖ ರಜೋಗುಣಕಾರ್ಯವೆಂದು ಹೇಳಿದೆ. ಆದರೆ ಅದು ತಮೋಗುಣ ಕಾರ್ಯವೆಂದು ಬೇರೆಡೆ ಹೇಳಿದೆ. ಕಾರಣ ಅಭಿಪ್ರಾಯ ಹೇಳುವರು-

**ತಾತ್ಪರ್ಯ-** ರಾಜಸೇಽಪಿ ಯದಾ ದುಃಖಂ ತಾಮಸೇ ಕಿಮುತೇತಿ ತತ್ ।
ರಾಜಸೇ ದುಃಖವಚನಂ ತಾಮಸೇಽತಿವಿವಕ್ಷಯಾ॥ ಇತಿ ಪ್ರದ್ಯೋತೇ ।

ರಾಜಸನಲ್ಲಿಯೇ ದುಃಖವಿದ್ದ ಮೇಲೆ ತಾಮಸನಿಗೆ ಕೇಳಬೇಕೇ? ಅದಕ್ಕೂ ಹೆಚ್ಚು ದುಃಖ ತಾಮಸನಿಗೆ ಎಂದು ಕೈಮುತ್ಯ ಹೇಳಲು ಹೇಳಿದ್ದು ಎಂದು ತಿಳಿಯಬೇಕು.॥೩॥

ತಮೋಗುಣಕಾರ್ಯ ಹೇಳುವರು-

**ಕ್ರೋಧೋ ಲೋಭೋಽನೃತಂ ಹಿಂಸಾ ಮಾಯಾ ದಂಭೋಽಕ್ಷಮಾ ಕಲಿಃ ।**
**ಶೋಕಮೋಹೌ ವಿಷಾದಾರ್ತೀ ನಿದ್ರಾಽಽಶಾ ಭೀರನುದ್ಯಮಃ ॥೪॥**

**ಕ್ರೋಧಃ** ಕೋಪವು **ಲೋಭಃ** ಯಾವುದಕ್ಕೂ ಹಣ ಖರ್ಚು ಮಾಡದಿರುವುದು **ಅನೃತಂ** ಸುಳ್ಳು ಮಾತನಾಡುವುದು **ಹಿಂಸಾ** ಹಿಂಸೆ ಕೊಡುವುದು **ಮಾಯಾ** ಕಪಟತನವು **ದಂಭಃ** ಇಲ್ಲದಿರುವ ತನ್ನ ಮಾಹಾತ್ಮ್ಯೆಯನ್ನು ಹೇಳಿಕೊಳ್ಳುವುದು **ಅಕ್ಷಮಾ** ಅಲ್ಪ ಅಪರಾಧಕ್ಕೆ ಭಾರಿ ದಂಡ ವಿಧಿಸುವುದು **ಕಲಿಃ** ಕಲಹ (ಜಗಳವಾಡುವುದು) **ಶೋಕಃ** ಕಳೆದು ಹೋದವರ ವಿಷಯದಲ್ಲಿ ಉಪದ್ರವ ಮಾಡಿದ್ದರೆಂದು ಮನಸ್ಸಿನ ಖೇದವು **ಮೋಹಃ** ಅನ್ಯಥಾಜ್ಞಾನವು **ವಿಷಾದ** ಉದ್ವೇಗ ಮನೋದೌರ್ಬಲ್ಯ **ಆರ್ತಿ** ವ್ಯಾಧಿಯಿಂದ ಪೀಡೆ **ನಿದ್ರಾ** ನಿದ್ದೆ **ಆಶಾ** ಅಶಕ್ಯವಾದ ವಿಷಯದಲ್ಲಿ ಪ್ರಬಲ ಇಚ್ಛೆ **ಭೀಃ** ಭಯವು **ಅನುದ್ಯಮಃ** ಆಲಸ್ಯದಿಂದ ಕರ್ಮದಲ್ಲಿ ಪ್ರಯತ್ನಿಸದಿರುವುದು ತಾಮಸರ ಸ್ವಭಾವ ಎಂದರ್ಥ.॥೪॥

**ಸತ್ವಸ್ಯ ರಜಸಶ್ಚೈತಾಃ ತಮಸಶ್ಚಾನುಪೂರ್ವಶಃ ।**
**ವೃತ್ತಯೋ ವರ್ಣಿತಪ್ರಾಯಾಃ ಸನ್ನಿಪಾತಮಥೋ ಶೃಣು ॥೫॥**

**ಸತ್ವಸ್ಯ** ಸತ್ವಗುಣದ **ಚ** ಮತ್ತು **ರಜಸಃ** ರಜೋಗುಣದ **ಚ** ಮತ್ತು **ತಮಸಃ** ತಮೋಗುಣದ **ವೃತ್ತಯಃ** ಕಾರ್ಯಗಳು **ಅನುಪೂರ್ವಶಃ** ಕ್ರಮವಾಗಿ **ವರ್ಣಿತಪ್ರಾಯಾಃ** ಹೇಳಿದಂತಾದವು **ಅಥೋ** ನಂತರ **ಸನ್ನಿಪಾತಂ ಶೃಣು** ಗುಣಗಳ ಮಿಶ್ರಣವನ್ನು ಅರ್ಥಾತ್ ಮಿಶ್ರ ಗುಣಗಳ ಕಾರ್ಯವನ್ನು ಕೇಳು.॥೫॥

**ಸನ್ನಿಪಾತಸ್ತ್ವಹಮಿತಿ ಮಮೇತ್ಯುದ್ಧವ ಯಾ ಮತಿಃ ।**
**ವ್ಯವಹಾರಃ ಸನ್ನಿಪಾತೇ ಮನೋಮಾತ್ರೇಂದ್ರಿಯಾಸುಭಿಃ ॥೬॥**

**ಹೇ ಉದ್ಧವ** ಎಲೋ ಉದ್ಧವನೇ **ಅಹಂ ಇತಿ ಮಮ ಇತಿ ಯಾ ಮತಿಃ ಸಾ ಸನ್ನಿಪಾತಃ** ಹೆಂಡತಿ, ಮಕ್ಕಳು, ಮನೆಗಳಲ್ಲಿ,ನನ್ನದೆಂದು ನಾನು ಮಾಡುವವನೆಂದು ಬರುವ ಜ್ಞಾನವು ಮಿಶ್ರಗುಣದ ಕಾರ್ಯವು **ಸನ್ನಿಪಾತೇ ಸತಿ** ಗುಣಗಳ ಮಿಶ್ರಣವಾದಾಗಲೇ **ಮನೋಮಾತ್ರೇಂದ್ರಿಯಾಸುಭಿಃ**

ಮನಸ್ಸು, ವಿಷಯಗಳು, ಇಂದ್ರಿಯಗಳು, ಪ್ರಾಣಗಳಿಂದ, **ವ್ಯವಹಾರಃ** ವಿಷಯಾನುಭವವಾಗಲಿ ಸ್ವೀಕಾರ ತ್ಯಾಗಗಳಾಗಲಿ ನಡೆಯುವವು.।।೬।।

**ಧರ್ಮೇ ಚಾರ್ಥೇ ಚ ಕಾಮೇ ಚ ಯದಾಽಸೌ ಪರಿನಿಷ್ಠಿತಃ ।**
**ಗುಣಾನಾಂ ಸನ್ನಿಕರ್ಷೋಽಯಂ ಶ್ರದ್ಧಾರತಿಧನಾವಹಃ ।।೭।।**

**ಅಯಂ ಗುಣಾನಾಂ ಸನ್ನಿಕರ್ಷಃ** ಈ ಗುಣಗಳ ಮಿಶ್ರಣವು **ಯದಾ** ಯಾವಾಗ **ಅಸೌ** ಮನುಷ್ಯನು **ಧರ್ಮೇ ಪರಿನಿಷ್ಠಿತಃ** ಧರ್ಮದಲ್ಲಿ ಆಸಕ್ತಿ ಉಳ್ಳವನಾಗುವನೋ **ತದಾ** ಆಗ **ಶ್ರದ್ಧಾವಹಃ** ಆಸ್ತಿಕ್ಯ ಬುದ್ಧಿಯನ್ನು ಉಂಟುಮಾಡುವುದು **ಯದಾ ಅರ್ಥೇ ಪರಿನಿಷ್ಠಿತಃ ತದಾ ಧನಾವಹಃ** ಅರ್ಥಾಭಿಲಾಷೆ ಇದ್ದವರಿಗೆ ಧನ ತಂದು ಕೊಡುವುದು. **ಯದಾ ಕಾಮೇ ಪರಿನಿಷ್ಠಿತಃ ತದಾ ರತ್ಯಾವಹಃ** ಕಾಮ ನಿಷ್ಠೆ ಇರುವಾಗ, ರತಿ ಸಂಪಾದಕವಾಗುವುದು.।।೭।।

**ಪ್ರವೃತ್ತಿಲಕ್ಷಣಾಂ ನಿಷ್ಠಾಂ ಪುಮಾನ್ ಯರ್ಹಿ ಗೃಹಾಶ್ರಮೇ ।**
**ಸ್ವಧರ್ಮೇ ಚಾನುತಿಷ್ಠೇತ ಗುಣಾನಾಂ ಸಮಿತಿರ್ಹಿ ಸಾ ।।೮।।**

**ಯರ್ಹಿ** ಯಾವಾಗ **ಪುಮಾನ್** ಮನುಷ್ಯನು **ಗೃಹಾಶ್ರಮೇ** ಗೃಹಸ್ಥಾಶ್ರಮದಲ್ಲಿ **ಪ್ರವೃತ್ತಿಲಕ್ಷಣಾಂ ನಿಷ್ಠಾಂ ಅನುತಿಷ್ಠೇತ** ಪ್ರವೃತ್ತಧರ್ಮಾಸಕ್ತನಾಗುವನೋ **ಸ್ವಧರ್ಮೇ ಚ** ತನಗೆ ವಿಹಿತ ಧರ್ಮದಲ್ಲಿಯೂ **ಅನುತಿಷ್ಠೇತ** ಆಸಕ್ತನಾಗುವನೋ **ಸಾ** ಅದು **ಗುಣಾನಾಂ ಸಮಿತಿಃ** ಗುಣಗಳ ಸಮೂಹವು ಅಂದರೆ ಈ ರೀತಿ ಮಾಡುವುದು ಮಿಶ್ರಗುಣದ ಕಾರ್ಯವೆಂದರ್ಥ.।।೮।।

**ಪುರುಷಂ ಸತ್ವಸಂಯುಕ್ತಮನುಮಾಯಾಚ್ಛಮಾದಿಭಿಃ ।**
**ಕಾಮಾದಿಭೀ ರಜೋಯುಕ್ತಂ ಕ್ರೋಧಾದ್ಯೈಸ್ತಮಸಾಽವೃತಮ್ ।।೯।।**

**ಶಮಾದಿಭಿಃ** ಶಮದಮಾದಿಗಳಿಂದ **ಪುರುಷಂ** ಮನುಷ್ಯನನ್ನು **ಸತ್ವಸಂಯುಕ್ತಂ ಅನುಮಾಯಾತ್** ಸಾತ್ವಿಕನೆಂದು ಗುರುತಿಸಬಹುದು. **ಕಾಮಾದಿಭಿಃ** ಕಾಮಾದಿಗಳಿಂದ **ರಜೋಯುಕ್ತಂ ಅನುಮಾಯಾತ್** ರಜೋಗುಣಯುಕ್ತವೆಂದು ಅನುಮಾನಿಸಬಹುದು. **ಕ್ರೋಧಾದ್ಯೈಃ** ಸಿಟ್ಟು ಮುಂತಾದವುಗಳಿಂದ **ತಮಸಾ ಆವೃತಂ ಅನುಮಾಯಾತ್** ತಮೋಗುಣದಿಂದ ಕೂಡಿದವನೆಂದು ಅನುಮಾನದಿಂದ ತಿಳಿಯಬಹುದಾಗಿದೆ.।।೯।।

**ಯದಾ ಭಜತಿ ಮಾಂ ಭಕ್ತ್ಯಾ ನಿರಪೇಕ್ಷಃ ಸ್ವಕರ್ಮಭಿಃ ।**
**ತಂ ಸತ್ತ್ವಪ್ರಕೃತಿಂ ವಿದ್ಯಾತ್ ಪುರುಷಂ ಸ್ತ್ರಿಯಮೇವ ವಾ ॥೧೦॥**

**ಯದಾ** ಯಾವಾಗ **ಮಾಂ** ನನ್ನನ್ನು **ನಿರಪೇಕ್ಷಃ** ಫಲದ ಆಸೆಯಿಲ್ಲದೇ **ಸ್ವಕರ್ಮಭಿಃ** ತನಗೆ ವಿಹಿತವಾದ ಕರ್ಮಗಳಿಂದ **ಭಜತಿ** ಸೇವಿಸುವನೋ **ತಂ ಪುರುಷಂ** ಆ ಪುರುಷನನ್ನು **ಸ್ತ್ರಿಯಂ ವಾ** ಸ್ತ್ರೀಯಳನ್ನೇ ಆಗಲಿ **ಸತ್ತ್ವಂ ಪ್ರಕೃತಿಂ ವಿದ್ಯಾತ್** ಸಾತ್ವಿಕ ಸ್ವಭಾವದವರೆಂದು ತಿಳಿಯಬೇಕು.॥೧೦॥

**ಯದಾ ಆಶಿಷ ಆಶಾಸ್ಯ ಮಾಂ ಯಜೇತ ಸ್ವಕರ್ಮಭಿಃ ।**
**ತಂ ರಜಃ ಪ್ರಕೃತಿಂ ವಿದ್ಯಾತ್ ಹಿಂಸಾಮಾಶಾಸ್ಯ ತಾಮಸಮ್ ॥೧೧॥**

**ಯದಾ** ಯಾವಾಗ **ಆಶಿಷಃ ಆಶಾಸ್ಯ** ಸಂಪತ್ತು ಮೊದಲಾದವುಗಳನ್ನು ಅಪೇಕ್ಷಿಸಿ **ಸ್ವಕರ್ಮಭಿಃ ಮಾಂ ಯಜೇತ** ತನ್ನ ಕರ್ಮಗಳಿಂದ ಪೂಜಿಸುವನೋ **ತಂ** ಅವನನ್ನು **ರಜಃಪ್ರಕೃತಿಂ ವಿದ್ಯಾತ್** ರಾಜಸ ಸ್ವಭಾವದವನೆಂದು ತಿಳಿಯಬೇಕು. **ಹಿಂಸಾಂ ಆಶಾಸ್ಯ ಯಃ ಯಜೇತ ತಂ ತಾಮಸಂ ವಿದ್ಯಾತ್** ಇನ್ನೊಬ್ಬರಿಗೆ ಹಿಂಸೆ ಆಗಲಿಯೆಂದು ಪೂಜಿಸುವವನು ತಾಮಸಸ್ವಭಾವದವನೆಂದು ತಿಳಿಯಬೇಕು.॥೧೧॥

ಈ ರೀತಿ ವಿಭಾಗವು ಗುಣಗಳಿಂದ ಆಗುವುದಾದರೆ ನಿನಗೂ ಆಗುವುದೇ ಎಂದರೆ ಇಲ್ಲವೆಂದು ಉತ್ತರಿಸುವನು-

**ಸತ್ತ್ವಂ ರಜಸ್ತಮ ಇತಿ ಗುಣಾ ಜೀವಸ್ಯ ನೈವ ಮೇ ।**
**ಚಿತ್ತಜಾ ಯೈಸ್ತು ಭೂತಾನಾಂ ಸಜ್ಜಮಾನೋ ನಿಬಧ್ಯತೇ ॥೧೨॥**

**ಭೂತಾನಾಂ ಸಕಾಶಾತ್** ಪಂಚ ಮಹಾಭೂತಗಳಿಂದ ಉತ್ಪನ್ನವಾದ **ಚಿತ್ತಜಾಃ** ಮನಸ್ಸಿನಲ್ಲಿ ಅಭಿವ್ಯಕ್ತವಾದ **ಯೈಃ** ಯಾವ ಗುಣಗಳಿಂದ **ಸಜ್ಜಮಾನಃ** ಕೂಡಿದವನಾಗಿ **ನಿಬಧ್ಯತೇ** ಅತ್ಯಂತ ಬಂಧಿತನಾಗುವನೋ ಅಂಥ **ಸತ್ತ್ವಂ ರಜಃ ತಮಃ ಇತಿ ಗುಣಾಃ** ಸತ್ತ್ವ,ರಜಸ್ಸು,ತಮಸ್ಸು ಎಂಬ ಗುಣಗಳು **ಜೀವಸ್ಯೈವ** ಜೀವನಿಗೆ ಮಾತ್ರವೇ ಹೊರತು **ಮೇ ನೈವ** ನನಗೆ ಇಲ್ಲವೇ ಇಲ್ಲ . ಕಾರಣ ಗುಣಕೃತ ಅನರ್ಥವನ್ನು ನನ್ನಲ್ಲಿ ಶಂಕಿಸಬೇಡ.॥

**ಯದೇತರೌ ಜಯೇತ್ ಸತ್ತ್ವಂ ಭಾಸ್ವರಂ ವಿಶದಂ ಶಿವಮ್ ।**
**ತದಾ ಸುಖೇನ ಯುಜ್ಯೇತ ಧರ್ಮಜ್ಞಾನಾದಿಭಿಃ ಪುಮಾನ್ ॥೧೩॥**

**ಯದಾ** ಯಾವಾಗ **ಭಾಸ್ವರಂ** ಶುಕ್ಲಭಾಸ್ವರ ರೂಪವುಳ್ಳ (ಬಿಳಿಯ) **ವಿಶದಂ** ನಿರ್ಮಲವಾದ **ಶಿವಂ** ಮಂಗಲಪ್ರದವಾದ **ಸತ್ವಂ** ಸತ್ವಗುಣವು **ಇತರೌ** ರಜೋಗುಣತಮೋಗುಣಗಳನ್ನು **ಜಯೇತ್** ಗೆಲ್ಲುವುದೋ **ತದಾ** ಆಗ **ಪುಮಾನ್** ಮನುಷ್ಯನು **ಧರ್ಮಜ್ಞಾನಾಧಿಭಿಃ** ಧರ್ಮಾಚರಣೆ ಜ್ಞಾನಸಂಪಾದನೆ ಮುಂತಾದ ಒಳ್ಳೆಯ ಕಾರ್ಯಗಳಿಂದ **ಸುಖೇನ** ಸುಖದಿಂದಲೂ **ಯುಜ್ಯೇತ** ಯುಕ್ತನಾಗುವನು.।।೧೩।।

**ಯದಾ ಜಯೇತ್ ತಮಸ್ಸತ್ವೇ ರಜಃ ಸಂಗಭಿದಾಚಲಮ್ ।**
**ತದಾ ದುಃಖೇನ ಯುಜ್ಯೇತ ಕರ್ಮಣಾ ಯಶಸಾ ಶ್ರಿಯಾ ।।೧೪।।**

**ಯದಾ** ಯಾವಾಗ **ಸಂಗಭಿದಾಚಲಂ** ವಿಷಯಾಸಕ್ತವಾದ್ದರಿಂದ ಮನಸ್ಸಿನಲ್ಲಿ ಭೇದಭಾವನೆ ಚಾಂಚಲ್ಯವನ್ನುಂಟು ಮಾಡುವ **ರಜಃ** ರಜೋಗುಣವು **ತಮಸ್ಸತ್ವೇ ಜಯೇತ** ತಮೋಗುಣ ಸತ್ವಗುಣಗಳನ್ನು ಅಭಿಭವಗೊಳಿಸುವುದೋ **ತದಾ** ಆಗ **ದುಃಖೇನ** ಸ್ವಲ್ಪ ದುಃಖದಿಂದಲೂ **ಕರ್ಮಣಾ** ಕಾಮ್ಯಕರ್ಮ-ದಿಂದಲೂ **ಯಶಸಾ** ಕೀರ್ತಿಯಿಂದಲೂ **ಶ್ರಿಯಾ** ಸಂಪತ್ತಿನಿಂದಲೂ **ಯುಜ್ಯೇತ** ಯುಕ್ತನಾಗುವನು.।।೧೪।।

ದುಃಖವು ತಮೋಗುಣದ ಕಾರ್ಯವಾಗಿದೆ. ಇಲ್ಲಿ ರಜೋಗುಣದ ಕಾರ್ಯವೆಂದು ಹೇಳುವುದರ ಅಭಿಪ್ರಾಯ ಹೇಳುವರು-

**ತಾತ್ಪರ್ಯ**- ರಾಜಸೇಽಪಿ ಯದಾ ದುಃಖಂ ತಾಮಸೇ ಕಿಮುತೇತಿ ತತ್ ।
ರಾಜಸೇ ದುಃಖವಚನಂ ತಾಮಸೇಽತಿವಿವಕ್ಷಯಾ ।। ಇತಿ ಪ್ರದ್ಯೋತೇ ।

ರಾಜಸನಿಗೆ ದುಃಖವಿದೆ ಎಂದ ಮೇಲೆ ತಾಮಸನಿಗೆ ಇನ್ನೆಷ್ಟು ಇರಬೇಡ. ಅತಿಯಾಗಿ ದುಃಖವಿದೆ ಎಂಬ ಅಭಿಪ್ರಾಯದಿಂದ ರಾಜಸನಿಗೆ ದುಃಖ ಹೇಳಿದ್ದು. ಈ ಅಭಿಪ್ರಾಯದಿಂದಲೇ ೩ನೇ ಶ್ಲೋಕದಲ್ಲಿ ಅಸುಖಂ ಎಂದು ದುಃಖವನ್ನು ರಜೋಗುಣಕಾರ್ಯವೆಂದು ಹೇಳಿದೆ. ತಮೋಗುಣ ಕಾರ್ಯಹೇಳುವ ೪ನೇ ಶ್ಲೋಕದಲ್ಲಿ ದುಃಖ ಹೇಳಿಲ್ಲ ಅದರಿಂದ ತಮೋಗುಣಕ್ಕಿಂತ ರಜೋಗುಣ ನೀಚವೆಂದು ತಿಳಿಯಬಾರದು. ।।೩-೪।।

**ಯದಾ ಜಯೇದ್ ರಜಸ್ಸತ್ವೇ ತಮೋ ಮೂಢೋ ಹ್ಯಯಂ ಜನಃ ।**
**ಯುಜ್ಯತೇ ಶೋಕಮೋಹಾಭ್ಯಾಂ ನಿದ್ರಯಾ ಹಿಂಸಯಾಽಶಯಾ ।।೧೫।।**

**ಮೂಢಃ ತಮಃ** ಮೌಢ್ಯಾಪಾದಕವಾದ ತಮೋಗುಣವು **ಯದಾ** ಯಾವಾಗ **ರಜಸ್ಸತ್ತ್ವೇ** ರಜೋಗುಣ ತಮೋಗುಣಗಳನ್ನು **ಜಯೇತ್** ಗೆಲ್ಲುವುದೋ **ತದಾ** ಆಗ **ಅಯಂ ಜನಃ** ತಮೋಗುಣಪ್ರಚುರನಾದವನು **ಶೋಕಮೋಹಾಭ್ಯಾಂ** ಅತಿಯಾದ ದುಃಖದಿಂದಲೂ ಮಿಥ್ಯಾಜ್ಞಾನದಾರ್ಢ್ಯ-ದಿಂದಲೂ **ನಿದ್ರಯಾ** ನಿದ್ದೆಯಿಂದ **ಹಿಂಸಯಾ** ಪರರಿಗೆ ಹಿಂಸಿಸುವುದರಿಂದಲೂ **ಆಶಯಾ** ಅತಿ ಆಸೆಯಿಂದಲೂ **ಯುಜ್ಯತೇ** ಕೂಡಿದವನಾಗುವನು.॥೧೫॥

ಸಾತ್ವಿಕಮನಸ್ಸಿನ ಗುಣವನ್ನು ಹೇಳುವರು-

**ಯದಾ ಚಿತ್ತಂ ಪ್ರಸೀದೇತ ಇಂದ್ರಿಯಾಣಾಂ ಚ ನಿರ್ವೃತಿಃ ।**
**ದೇಹೇಽಭಯಂ ಮನೋಽಸಂಗಂ ತತ್ ಸತ್ವಂ ವಿದ್ಧಿ ಮತ್ಪದಮ್॥೧೬॥**

**ಯದಾ** ಯಾವಾಗ **ಚಿತ್ತಂ** ಮನಸ್ಸು **ಪ್ರಸೀದೇತ್** ಪ್ರಸನ್ನವಾಗುವುದೋ **ಇಂದ್ರಿಯಾಣಾಂ ನಿವೃತ್ತಿಃ** ಇಂದ್ರಿಯಗಳಿಗೆ ಆಹ್ಲಾದವಾಗುವುದೋ **ದೇಹೇ** ದೇಹವಿಷಯದಲ್ಲಿ **ಅಭಯಂ** ಭಯ ಇಲ್ಲದಿರುವುದೋ **ಮನಃ** ಮನಸ್ಸು **ಅಸಂಗಂ** ಸಂಗರಹಿತವಾಗುವುದೋ **ತದಾ** ಆಗ **ಮತ್ಪದಂ ವಿದ್ಧಿ** ನನ್ನ ಸನ್ನಿಧಾನ ಪಾತ್ರವಾಗುವುದೆಂದು ತಿಳಿ (ಜೀವನನ್ನು ನನ್ನಡೆಗೆ ಸೇರಿಸುವುದು ಎಂದು ಭಾವ.)॥೧೬॥

**ವಿಕುರ್ವನ್ ಕ್ರಿಯಯಾ ಚಾಧೀರ(ಅಧೀರಮ್)ನಿವೃತ್ತಿಶ್ಚ ಚೇತಸಃ ।**
**ಗಾತ್ರಾಸ್ವಾಸ್ಥ್ಯಂ ಮನೋ ಭ್ರಾಂತಂ ರಜ ಏತೈರ್ನಿಶಾಮಯ ॥೧೭॥**

**ಯದಾ** ಯಾವಾಗ **ಕ್ರಿಯಾ** ಕರ್ಮೇಂದ್ರಿಯದಿಂದ **ವಿಕುರ್ವನ್ ಭವತಿ** ವಿರುದ್ಧ ಕೆಲಸ ಮಾಡುವನೋ ವಿವಿಧ ಕಾಮ್ಯ ಕರ್ಮ ಮಾಡುವನೋ, **ಚೇತಃ** ಮನಸ್ಸು **ಅಧೀರಂ** ಸ್ಥೈರ್ಯರಹಿತವಾಗುವುದೋ ಅಥವಾ **ಅಧೀರಂ ಚೇತಸಃ ವಿಷಯೇಭ್ಯಃ ಅನಿವೃತ್ತಿಃ** ಚಂಚಲವಾಗಿ ಮನಸ್ಸಿಗೆ ವಿಷಯಗಳಿಂದ ನಿವೃತ್ತಿ ಆಗುವುದಿಲ್ಲವೋ **ಗಾತ್ರಾಸ್ವಾಸ್ಥ್ಯಂ** ದೇಹದಲ್ಲಿ ದೃಢತೆ ಹೋಗುವುದೋ **ಮನಃ ಭ್ರಾಂತಃ** ಮನಸ್ಸು ಸಂಶಯ ಸ್ವಭಾವದ್ದಾಗು-ವುದೋ **ಏತೈಃ** ಇವುಗಳಿಂದ **ರಜಃ ನಿಶಾಮಯ** ರಜೋಗುಣವನ್ನು ತಿಳಿ ಊಹಿಸು, 'ಕ್ರಿಯಾಯಾ ಚಾಧೀರನಿವೃತ್ತಿಃ' ಎಂದು ಶ್ರೀನಿವಾಸತೀರ್ಥರು ಮತ್ತು ವಿಜಯಧ್ವಜಿಪಾಠ **ಅಧೀಃ** ಮನೋವ್ಯಥೆಯು ಅನಿವೃತ್ತದುಃಖವು ಎಂದರ್ಥ.॥೧೭॥

**ಸೀದಚ್ಚಿತ್ತಂ ವಿಲೀಯೇತ ಚೇತಸೋ ಗ್ರಹಣೇಽಕ್ಷಮಮ್ ॥**
**ಮನೋ ನಷ್ಟಂ ತಮೋ ಗ್ಲಾನಿಸ್ತಮಸ್ತದುಪಧಾರಯ ॥೧೮॥**

**ಯದಾ** ಯಾವಾಗ **ಚಿತ್ತಂ** ಸ್ಮರಣಕಾರಣವಾದ ಅಂತಃಕರಣವು **ಸೀದತ್** ನಾಶವಾಗುವುದೋ ಅಥವಾ **ವಿಲೀಯೇತ** ಉತ್ಸಾಹರಹಿತವಾಗುವುದೋ **ಮನಃ** ಮನಸ್ಸು **ಚೇತಸಃ** ತನಗಿರುವ ಬಹು ಸ್ಮರಣಶಕ್ತಿಯಿಂದ **ಗ್ರಹಣೇ** (ವಿಷಯೀಕರಿಸಲು) ಸ್ಮರಿಸಲು **ಅಕ್ಷಮಂ** ಅಸಮರ್ಥವಾಗುವುದೋ ಅಥವಾ **ಮನಃ ಚೇತಸಃ ಗ್ರಹಣೇ ಅಕ್ಷಮಂ ಸತ್** ಮನಸ್ಸು ನಿಗ್ರಹಿಸಲಾರದೇ **ನಷ್ಟಂ ಭವತಿ** ನಾಶವಾಗುವುದೋ **ಯದಾ** ಯಾವಾಗ **ತಮಃ** ಅಜ್ಞಾನವು **ಗ್ಲಾನಿಃ** ಮ್ಲಾನವಾಗುವುದೋ (ಬಾಡುವುದು) **ತದಾ** ಆಗ **ತಮಃ ಉಪಧಾರಯ** ತಮೋಗುಣ ಪ್ರವರ್ತಿಸಿರುವುದು ಎಂದು ತಿಳಿ.॥೧೮॥

**ಏಧಮಾನೇ ಗುಣೇ ಸತ್ತ್ವೇ ದೇವಾನಾಂ ಬಲಮೇಧತೇ ।**
**ಅಸುರಾಣಾಂ ಚ ರಜಸಿ ತಮಸ್ಯುದ್ಧವ ರಕ್ಷಸಾಮ್ ॥೧೯॥**

**ಸತ್ತ್ವೇ ಗುಣೇ ಏಧಮಾನೇ** ಸ್ವತ್ವಗುಣವು ಅಭಿವೃದ್ಧವಾದಾಗ **ದೇವಾನಾಂ ಬಲಂ ಏಧತೇ** ದೇವತೆಗಳ ಬಲ ಅಭಿವೃದ್ಧವಾಗುವುದು. **ರಜಸಿ ಏಧಮಾನೇ** ರಜೋಗುಣ ವೃದ್ಧಿಯಾದಾಗ **ಅಸುರಾಣಾಂ ಬಲಂ ಏಧತೇ** ಅಸುರರ ಬಲ ಅಭಿವೃದ್ಧವಾಗುವುದು **ಹೇ ಉದ್ಧವ** ಉದ್ಧವನೇ! **ತಮಸಿ ಏಧಮಾನೇ** ತಮೋಗುಣ ಅಭಿವೃದ್ಧವಾದಾಗ **ರಕ್ಷಸಾಂ ಬಲಂ ಏಧತೇ** ರಾಕ್ಷಸರ ಬಲ ಅಭಿವೃದ್ಧವಾಗುವುದು.॥೧೯॥

**ಸತ್ತ್ವಾಜ್ಜಾಗರಣಂ ವಿದ್ಯಾದ್ ರಜಸಾ ಸ್ವಪ್ನಮಾದಿಶೇತ್ ।**
**ಪ್ರಸ್ವಾಪಂ ತಮಸಾ ಜಂತೋಸ್ತುರೀಯಂ ತ್ರಿಷ್ವಸಂಗತಮ್ ॥೨೦॥**

**ಸತ್ತ್ವಾತ್** ಸತ್ವಗುಣದಿಂದ **ಜಾಗರಣಂ** ಜಾಗ್ರದವಸ್ಥೆಯು (ಹೆಚ್ಚುತ್ತಿರುವುದು) **ರಜಸಾ** ರಜೋಗುಣದಿಂದ **ಸ್ವಪ್ನಂ** ಸ್ವಪ್ನಾವಸ್ಥೆಯನ್ನು (ಕನಸು ಕಾಣುವುದು) **ತಮಸಾ** ತಮೋಗುಣದಿಂದ **ಪ್ರಸ್ವಾಪಂ** ಗಾಢನಿದ್ರೆಯು **ಜಂತೋಃ** ಜೀವರಿಗೆ **ಭವಂತಿ** ಆಗುವವು ಎಂದು **ವಿದ್ಯಾತ್** ತಿಳಿಯಬೇಕು **ತುರೀಯಂ** ಅಸಂಪ್ರಜ್ಞಾತ-ಸಮಾಧ್ಯವಸ್ಥೆಯು **ತ್ರಿಷು ಅಸಂಗತಂ** ಮೂರು ಗುಣಗಳಿಂದ ಸಂಗತವಲ್ಲ. **ತುರೀಯಂ** ಸರ್ವಾವಸ್ಥಾನಿಯಾಮಕ ಭಗವದ್ರೂಪವು **ತ್ರಿಷು ಅಸಂಗತಂ**

ಗುಣತ್ರಯಗಳು ಸಂಬದ್ಧವಿಲ್ಲದ್ದು.

**ಉಪರ್ಯುಪರಿ ಗಚ್ಛಂತಿ ಸತ್ವೇನಾಬ್ರಹ್ಮಣೋ ಜನಾಃ ।**
**ತಮಸಾಧೋಽಧ ಆಮುಖ್ಯಾದ್ ರಜಸಾಂಽತರಚಾರಿಣಃ ॥೨೧॥**

**ಜನಾಃ** ಜನರು **ಸತ್ವೇನ** ಸತ್ವಗುಣದಿಂದ ಮಾಡಿದ ಜ್ಞಾನಾದಿಸಾಧನದಿಂದ ಸ್ವರ್ಗದಿಂದ **ಆಬ್ರಾಹ್ಮಣಃ** ಸತ್ಯಲೋಕದವರೆಗೆ **ಉಪರಿ ಉಪರಿ ಗಚ್ಛಂತಿ** ಮೇಲೆ ಮೇಲೆ ಹೋಗುವರು **ತಮಸಾ** ತಮೋಗುಣದಿಂದ ಮಾಡಿದ ಹಿಂಸಾದಿಗಳಿಂದ ರೌರವಾದಿ ನರಕದಿಂದ **ಆಮುಖ್ಯಾತ್** ಮುಖ್ಯ ಅಂಧಂತಮ ಪರ್ಯಂತ **ಅಧೋಽಧಃ ಗಚ್ಛಂತಿ** ಕೆಳಗೆ ಹೋಗುವರು. **ರಜಸಾ** ರಜೋಗುಣದಿಂದ ಯಜ್ಞಾದಿಗಳಿಂದ **ಅಂತರಚಾರಿಣಃ** ಸ್ವರ್ಗಾದಿಗಳಲ್ಲಿ ಸಂಚರಿಸುವರು.॥೨೧॥

**ಸತ್ವೇ ಪ್ರಲೀನಾಃ ಸ್ವರ್ಯಾಂತಿ ನರಲೋಕಂ ರಜೋಲಯಾಃ ।**
**ತಮೋಲಯಾಸ್ತು ನಿರಯಂ ಯಾಂತಿ ಮಾಮೇವ ನಿರ್ಗುಣಾಃ ॥೨೨॥**

**ಸತ್ವೇ ಪ್ರಲೀನಾಃ** ಸತ್ವಗುಣ ಅಭಿವೃದ್ಧವಾದಾಗ ಮೃತರಾದವರು **ಸ್ವರ್ಯಾಂತಿ** ಸ್ವರ್ಗಕ್ಕೆ ಹೋಗುವರು. **ರಜೋಲಯಾಃ** ರಜೋಗುಣ ಅಭಿವೃದ್ಧವಾದಾಗ ಮೃತರಾದವರು **ನರಲೋಕಂ** ಮನುಷ್ಯಲೋಕವನ್ನು **ತಮೋಲಯಾಃ** ತಮೋಗುಣ ಅಭಿವೃದ್ಧವಾದಾಗ ಮೃತರಾದವರು **ನಿರಯಂ** ನರಕವನ್ನು **ಯಾಂತಿ** ಹೊಂದುವರು **ನಿರ್ಗುಣಾಃ** ಮೋಕ್ಷಸಾಧನ ಮಾಡಿದವರು **ಮಾಂ ಏವ ಯಾಂತಿ** ನನ್ನನ್ನೇ ಹೊಂದುವರು.

**ತಾತ್ಪರ್ಯ-** ನೈರ್ಗುಣ್ಯಂ ಸಾಧನಂ ಯತ್ತನ್ನಿರ್ಗುಣಂ ಪರೀಕೀರ್ತಿತಮ್ ॥
-ಇತಿ ಚ ।

ಗುಣತ್ರಯಕಾರ್ಯರಹಿತನಾದ ಮೋಕ್ಷಸಾಧನಕ್ಕೆ ನಿರ್ಗುಣವೆನ್ನುವರು ಎಂದರ್ಥ.

**ಮದರ್ಪಣಂ ನಿಷ್ಫಲಂ ವಾ ಸಾತ್ವಿಕಂ ನಿಜಕರ್ಮ ತತ್ ।**
**ರಾಜಸಂ ಫಲಸಂಕಲ್ಪಂ ಹಿಂಸಾಪ್ರಾಯಾದಿ ತಾಮಸಮ್ ॥೨೩॥**

**ಮದರ್ಪಣಂ** ನನ್ನ ಅರ್ಪಣಪೂರ್ವಕವಾದ **ನಿಷ್ಫಲಂ** ಫಲಕಾಮನಾ-ರಹಿತವಾದ **ಯತ್ ನಿಜಕರ್ಮ** ಯಾವುದು ತನಗೆ ವಿಹಿತವಾದ ಕರ್ಮವೋ **ತತ್** ಅದು **ಸಾತ್ವಿಕಂ** ಸಾತ್ವಿಕವಾದುದು **ಫಲಸಂಕಲ್ಪಂ** ಫಲಾಪೇಕ್ಷೆಯಿಂದ

ಮಾಡುವ ಕರ್ಮವು **ರಾಜಸಂ** ರಾಜಸವು **ಹಿಂಸಾಪ್ರಾಯಾದಿ** ಬಹಳ ಹಿಂಸೆಯಿಂದ ಕೂಡಿದ ಕರ್ಮವು **ತಾಮಸಂ** ತಾಮಸವು ಎಂದು ತಿಳಿಯಬೇಕು.

**ಕೈವಲ್ಯಂ ಸಾತ್ವಿಕಂ ಜ್ಞಾನಂ ಕರ್ಮನಿಷ್ಠಂ ತು ರಾಜಸಮ್ ।**
**ಪ್ರಾಕೃತಂ ತಾಮಸಂ ಜ್ಞಾನಂ ಮನ್ನಿಷ್ಠಂ ನಿರ್ಗುಣಂ ಸ್ಮೃತಮ್ ॥೨೪॥**

**ಕೈವಲ್ಯಂ ಜ್ಞಾನಂ ಸಾತ್ವಿಕಂ** ಶಾಸ್ತ್ರದಲ್ಲಿ ಹೇಳಿದ ಪ್ರಕಾರ ತಿಳಿದ ತತ್ವಜ್ಞಾನವು ಸಾತ್ವಿಕ ಜ್ಞಾನವೆನಿಸುವುದು. **ಕರ್ಮನಿಷ್ಠಂ** ಅಗ್ನಿಹೋತ್ರಾದಿ ಕರ್ಮನಿಷ್ಠ ಜ್ಞಾನವು **ರಾಜಸಂ** ರಾಜಸಜ್ಞಾನವು **ಪ್ರಾಕೃತಂ** ಬಹಿರ್ಮುಖ ಜನಪ್ರಿಯ ವಿಷಯಕ ಜ್ಞಾನವು **ತಾಮಸಂ** ತಾಮಸವು (ಮಿಥ್ಯಾಜ್ಞಾನ) **ಮನ್ನಿಷ್ಠಂ ಜ್ಞಾನಂ ನಿರ್ಗುಣಂ** ನನ್ನಲ್ಲಿ ನಿಷ್ಠೆಯುಳ್ಳ ಜ್ಞಾನವು ಮೋಕ್ಷಸಾಧನವು ಎಂದರ್ಥ.

**ತಾತ್ಪರ್ಯ- ಯಥಾಶಾಸ್ತ್ರೋಕ್ತವಿಜ್ಞಾನಂ ಕೇವಲಂ ಜ್ಞಾನಮುಚ್ಯತೇ ।**
**ಸ್ವದೃಷ್ಟಶಾಸ್ತ್ರಾನುಕೂಲ್ಯಾದದೃಷ್ಟಾನಾಂ ಚ ಭಕ್ತಿತಃ ॥**

**ಗುಣಾನಾಂ ತು ಹರೌ ಭಾವಂ ವಿನಿಶ್ಚಿತ್ಯೈತದಾಶ್ರಯಾತ್ ।**
**ಯಥಾಶಾಸ್ತ್ರಾನುಸಂಧಾನಂ ಜ್ಞಾನಂ ತು ಹರಿಸಂಶ್ರಯಮ್ ॥ ಇತಿ ಚ ।**

ತಾನು ಕೇಳಿದ ಶಾಸ್ತ್ರದಲ್ಲಿ ಹೇಳಿದ ಪ್ರಕಾರವಷ್ಟೇ ಊಹಾಪೋಹವಿಲ್ಲದೇ ಉಂಟಾದ ಜ್ಞಾನ ಕೇವಲಜ್ಞಾನ. ತಾನು ತಿಳಿದ ಶಾಸ್ತ್ರಕ್ಕೆ ವಿರೋಧವಿಲ್ಲದೇ ಶಾಸ್ತ್ರದಲ್ಲಿ ಹೇಳಿದ ನ್ಯಾಯವನ್ನು ಅನುಸರಿಸಿ ಭಕ್ತಿಯಿಂದ ಇನ್ನು ಅನಂತ ಗುಣಗಳು ಹರಿಯಲ್ಲಿವೆ, ನಾನು ನೋಡಿದ ಶಾಸ್ತ್ರದಲ್ಲಿಯಂತೆ ಇತರ ಶಾಸ್ತ್ರದಲ್ಲಿಯೂ ಹರಿಯ ಗುಣಗಳೇ ಹೇಳಲ್ಪಟ್ಟಿವೆ ಎಂದು ತಿಳಿಯುವ ಸರ್ವ ಶಾಸ್ತ್ರಾರ್ಥಜ್ಞಾನವೇ ಮನ್ನಿಷ್ಠಜ್ಞಾನ. ಇದು ಮೋಕ್ಷಸಾಧನ ಜ್ಞಾನ. ಇದಕ್ಕೆ ನಿರ್ಗುಣ ಎನ್ನುವರು. ಅಧಿಕಾರಿಗಳು ಎರಡು ವಿಧ. ಕರ್ಮಯೋಗಿಗಳು, ಭಕ್ತಿಯೋಗಿಗಳು, ಎಂದು ಕರ್ಮಯೋಗಿಗಳ ಜ್ಞಾನ ತಾವು ನೋಡಿದನ್ನಷ್ಟೇ ತಿಳಿಯುವುದು ಭಕ್ತಿಯೋಗಿಗಳ ಜ್ಞಾನ ಮನ್ನಿಷ್ಠಜ್ಞಾನ.

**ವನಂ ತು ಸಾತ್ವಿಕೋ ವಾಸೋ ಗ್ರಾಮೋ ರಾಜಸ ಉಚ್ಯತೇ ।**
**ತಾಮಸಂ ದ್ಯೂತಸದನಂ ಮನ್ನಿಕೇತಂ ತು ನಿರ್ಗುಣಮ್ ॥೨೫॥**

**ಸಾತ್ವಿಕಃ ಆವಾಸಃ ವನಂ** ವನದಲ್ಲಿ ವಾಸ ಮಾಡುವುದು ಸಾತ್ವಿಕವು **ಗ್ರಾಮಃ** ಗ್ರಾಮದಲ್ಲಿ ವಾಸಿಸುವುದು **ರಾಜಸಃ ಉಚ್ಯತೇ** ರಾಜಸವೆನಿಸುವುದು

**ದ್ಯೂತಸದನಂ ತಾಮಸಂ** ಕ್ರೀಡಾಸ್ಥಳಗಳಲ್ಲಿ ವಾಸವು ತಾಮಸವು (ಜೂಜೂಗಟ್ಟೆ ಮುಂತಾದಲ್ಲಿ) **ಮನ್ನಿಕೇತಂ ತು** ದೇವಾಲಯದಲ್ಲಿಯಾದರೂ **ನಿರ್ಗುಣಂ** ಮೋಕ್ಷಸಾಧನವಾಸವು.।।೨೫।।

**ಸ್ವಾತ್ವಿಕಃ ಕಾರಕೋಽಸಂಗೀ ರಾಗಾಂಧೋ ರಾಜಸಃ ಸ್ಮೃತಃ ।**
**ತಾಮಸಃ ಸ್ಮೃತಿವಿಭ್ರಷ್ಟೋ ನಿರ್ಗುಣೋ ಮದಪಾಶ್ರಯಃ ।।೨೬।।**

**ಅಸಂಗೀ ಕಾರಕಃ** ವಿಷಯಾಸಕ್ತಿ ಇಲ್ಲದೇ ಕರ್ಮ ಮಾಡುವವನು **ಸಾತ್ವಿಕಃ** ಸಾತ್ವಿಕನು **ರಾಗಾಂಧಃ** ವಿಷಯಾಭಿಲಾಷೆಯಿಂದ ಮಾಡುವವನು **ರಾಜಸಃ ಸ್ಮೃತಃ** ರಾಜಸನು ಎಂದು ಹೇಳಲ್ಪಡುವನು **ಸ್ಮೃತಿವಿಭ್ರಷ್ಟಃ** ಶ್ರುತಿ-ಸ್ಮೃತಿಗಳಲ್ಲಿ ಹೇಳಿದ್ದನ್ನು ಸ್ಮರಿಸದೇ ಆಚಾರಭ್ರಷ್ಟನಾಗಿ ಕರ್ಮ ಮಾಡುವವನು (ತನ್ನ ಮನಬಂದಂತೆ) **ತಾಮಸಃ** ತಾಮಸನು **ಮದಪಾಶ್ರಯಃ** ನನ್ನಲ್ಲಿ ಅರ್ಪಣ ಮಾಡುತ್ತ ನಿಷ್ಕಾಮಕರ್ಮ ಮಾಡಿ ನನ್ನ ಅಪರೋಕ್ಷ ಪಡೆದವನು **ನಿರ್ಗುಣಃ** ಮೋಕ್ಷ ಹೊಂದುವನು.।।೨೬।।

**ಸಾತ್ವಿಕಾಧ್ಯಾತ್ಮಿಕೀ ಶ್ರದ್ಧಾ ಕರ್ಮಶ್ರದ್ಧಾ ತು ರಾಜಸೀ ।**
**ತಾಮಸ್ಯಧರ್ಮೇ ಯಾ ಶ್ರದ್ಧಾ ಮತ್ಸೇವಾಯಾಂ ತು ನಿರ್ಗುಣಾ ।।೨೭।।**

**ಆಧ್ಯಾತ್ಮಿಕೀ ಶ್ರದ್ಧಾ ಸಾತ್ವಿಕಾ** ಶಾಸ್ತ್ರದಲ್ಲಿ ಹೇಳಿದಂತೆ ಪರಮಾತ್ಮನಲ್ಲಿ ಮಾಡುವ ಶ್ರದ್ಧೆಯು ಸಾತ್ವಿಕವಾದುದು **ಕರ್ಮಶ್ರದ್ಧಾ ತು ರಾಜಸೀ** ವಿಹಿತಕರ್ಮಗಳಲ್ಲಿ ಶ್ರದ್ಧೆಯು ರಾಜಸವು **ಅಧರ್ಮೇ ಯಾ ಶ್ರದ್ಧಾ ಸಾ ತಾಮಸೀ** ಅಧರ್ಮದಲ್ಲಿ ಇರುವ ಶ್ರದ್ಧೆಯು ತಾಮಸವು **ಮತ್ಸೇವಾಯಾಂ ಯಾ ಶ್ರದ್ಧಾ ಸಾ ನಿರ್ಗುಣಾ** ನನ್ನ ಸೇವೆಯಲ್ಲಿರುವ ಶ್ರದ್ಧೆಯು ಮೋಕ್ಷಸಾಧನವಾದುದು.

ಸಾತ್ವಿಕಶ್ರದ್ಧೆಗೂ ನಿರ್ಗುಣಶ್ರದ್ಧೆಗೂ ವ್ಯತ್ಯಾಸ ತಿಳಿಸುವರು-

**ತಾತ್ಪರ್ಯ-** ಶ್ರುತಶಾಸ್ತ್ರಾನುಸಾರೇಣ ಯಾ ಶ್ರದ್ಧಾ ಪರಮಾತ್ಮನಿ ।
ಸಾ ಸಾತ್ವಿಕೀ ತದನ್ಯಸ್ಯಾಪ್ಯನುಸಾರೇಣ ನಿರ್ಗುಣಾ ।।

ಅಶ್ರುತ್ವಾಽಪಿ ಪ್ರಮಾಣಂ ಯೋ ವಾಸುದೇವೈಕಸಂಶ್ರಯಃ ।
ಸ ನಿರ್ಗುಣೋ ಭಾಗವತಃ ಸಮುದ್ದಿಷ್ಟೋ ಮನೀಷಿಭಿಃ ।। ಇತಿ ಚ ।।

ತಾನು ಕೇಳಿದ ಶಾಸ್ತ್ರಕ್ಕೆ ಅನುಸಾರವಾಗಿ ಪರಮಾತ್ಮನಲ್ಲಿ ಇರುವ ಶ್ರದ್ಧೆಯು ಸಾತ್ವಿಕಶ್ರದ್ಧೆಯು. ಶ್ರವಣ ಮಾಡದೇ ಸ್ವಾಭಾವಿಕವಾಗಿಯೇ ಪರಮಾತ್ಮನಲ್ಲಿ ಬರುವ ಶ್ರದ್ಧೆಯು ನಿರ್ಗುಣ ಶ್ರದ್ಧೆಯು. ಶಾಸ್ತ್ರವನ್ನು ಕೇಳದೆಯೇ ಶ್ರೀಹರಿಯಲ್ಲಿಯೇ ಆಸಕ್ತನಾಗಿ ಮೋಕ್ಷಸಾಧನ ಜ್ಞಾನವುಳ್ಳವನು ನಿರ್ಗುಣ ಭಗವದ್ಭಕ್ತನು. ಶಾಸ್ತ್ರವನ್ನು ಕೇಳಿ ಕೇವಲ ಪರಮಾತ್ಮನಲ್ಲಿಯೇ ಆಸಕ್ತನಾದವನಾಗಿ ನಿಷ್ಕಾಮನಾಗಿ ಶಾಸ್ತ್ರೋಕ್ತಕರ್ಮ ಮಾಡುವವನು ಸಾತ್ವಿಕಕಾರಕನು.॥೨೬-೨೭॥

**ಪಥ್ಯಂ ಯುಕ್ತಮನಾಯಸ್ತಮಾಹಾರ್ಯಂ ಸಾತ್ವಿಕಂ ಸ್ಮೃತಮ್ ।**
**ರಾಜಸಂ ಚೇಂದ್ರಿಯಪ್ರೇಷ್ಠಂ ತಾಮಸಂ ಚಾರ್ತಿದಾಶುಚಿ ॥೨೮॥**

**ಮೇಧ್ಯಂ** ಶುದ್ಧವಾದ **ಪಥ್ಯಂ** ಹಿತವಾದ **ಯುಕ್ತಂ** (ಎಷ್ಟು ಬೇಕೋ ಅಷ್ಟು) ಯೋಗ್ಯವಾದ **ಅನಾಯಸ್ತಂ** ಆಯಾಸವಿಲ್ಲದೇ ಪ್ರಾಪ್ತವಾದ (ಪರಪೀಡೆ-ಯಿಲ್ಲದೇ) **ಆಹಾರ್ಯಂ** ತಿನ್ನುವ ಅನ್ನಾದಿಗಳು **ಸಾತ್ವಿಕಂ ಸ್ಮೃತಂ** ಸಾತ್ವಿಕವೆಂದು ಹೇಳಿದೆ. **ಇಂದ್ರಿಯಪ್ರೇಷ್ಠಂ** ಇಂದ್ರಿಯಗಳಿಗೆ ಪ್ರಿಯವಾದುದು **ರಾಜಸಂ** ರಾಜಸವು **ಆರ್ತಿದಾಶುಚಿ** ದುಃಖದಾಯಕವಾದ ಅಶುದ್ಧವಾದುದು **ತಾಮಸಂ** ತಾಮಸವು.

**ಸಾತ್ವಿಕಂ ಸುಖಮಾತ್ಮೋತ್ಥಂ ವಿಷಯೋತ್ಥಂ ತು ರಾಜಸಮ್ ।**
**ತಾಮಸಂ ಮೋಹದೈನ್ಯೋತ್ಥಂ ನಿರ್ಗುಣಂ ಮದಪಾಶ್ರಯಮ್ ॥೨೯॥**

**ಆತ್ಮೋತ್ಥಂ** ಶಾಸ್ತ್ರದಿಂದ ಬರುವ ಪರೋಕ್ಷಜ್ಞಾನದಿಂದ ಉಂಟಾಗುವ **ಸುಖಂ** ಸುಖವು **ಸಾತ್ವಿಕಂ** ಸಾತ್ವಿಕವಾದುದು **ವಿಷಯೋತ್ಥಂ ತು ರಾಜಸಂ** ವಿಷಯಾನುಭವದಿಂದ ಬರುವ ಸುಖವು ರಾಜಸವು **ಮೋಹದೈನ್ಯೋತ್ಥಂ** ದುಡ್ಡು ಮುಂತಾದವುಗಳಲ್ಲಿ ನನ್ನದೆಂಬ ಭ್ರಮ ಮತ್ತು ಹೆಂಡತಿ ಮಕ್ಕಳ ಸವಿಮಾತಿನಿಂದ ಆಗುವ ಸುಖ **ತಾಮಸಂ** ತಾಮಸವು **ಮದಪಾಶ್ರಯಂ ನಿರ್ಗುಣಂ** ನನ್ನ ಅಪರೋಕ್ಷಜ್ಞಾನದಿಂದ ಆಗುವ ಸುಖವು ಮೋಕ್ಷಸುಖವು.

**ತಾತ್ಪರ್ಯ**- ಪರೋಕ್ಷಜ್ಞಾನಮಾತ್ಮೋತ್ಥಮಾಪರೋಕ್ಷೇಣ ದರ್ಶನಮ್ ।
ವಿಷ್ಣ್ವಾಶ್ರಯಂ ಸುಖಂ ನಿತ್ಯಂ ಗಮಯೇತ್ ತತ್ಪ್ರಸಾದತಃ ॥

ನ ತು ವಿಷ್ಣೋಃ ಸ್ವರೂಪಂ ತು ಸುಖಂ ಕೇನಚಿದಾಪ್ಯತೇ ।

**ತಸ್ಯೈವ ವಿಷಯತ್ವಾತ್ತು ತತ್ಸುಖಂ ಚೇತಿ ಭಣ್ಯತೇ ॥**

**ಪರೋಕ್ಷಜ್ಞಾನಗೋ ಯಸ್ಮಾದ್ವಿಷಯಃ ಸ್ವಮನೋಗತಃ ।**
**ಅತ ಆತ್ಮೋತ್ಥಮಿತ್ಯೇವ ಸುಖಮಾಹುರ್ವಿಪಶ್ಚಿತಃ ॥ ಇತಿ ಚ ।**

ಶಾಸ್ತ್ರಶ್ರವಣರೂಪ ಪರೋಕ್ಷಜ್ಞಾನವು ಮಾನಸಸುಖವನ್ನು ಜೀವನಿಗೆ ನೀಡುವುದು (ಆತ್ಮೋತ್ಥ ಎಂದರೆ ಮನೋಜನ್ಯ ಎಂದರ್ಥ) ಭಗವಂತನ ಅಪರೋಕ್ಷಜ್ಞಾನವು ಅವನ ಪ್ರಸಾದದಿಂದ ನಿತ್ಯವಾದ ಸುಖವನ್ನು ಹೊಂದಿಸುವುದು. ಶ್ರೀಹರಿಯ ಸುಖವೂ ಯಾರಿಂದಲೂ ಹೊಂದಲ್ಪಡುವುದಿಲ್ಲ. ಅಪರೋಕ್ಷಜ್ಞಾನದಲ್ಲಿ ಶ್ರೀಹರಿಯು ವಿಷಯನಾದ್ದರಿಂದ ಅದರಿಂದಾಗುವ ಸುಖಕ್ಕೆ ತತ್ಸುಖ ಎನ್ನುವರು. (ತದ್ವಿಷಯಕಜ್ಞಾನಜನ್ಯಸುಖ ಎಂದರ್ಥ) ಪರೋಕ್ಷಜ್ಞಾನವಿಷಯನಾದ ಹರಿಯು ಮನಸ್ಸಿಗೂ ವಿಷಯನಾಗುವುದರಿಂದ ಆ ಸುಖಕ್ಕೆ ಆತ್ಮೋತ್ಥ ಎನ್ನುವರು. ಎರಡು ಸುಖ ಭಗವಂತನ ಜ್ಞಾನದಿಂದ ಜನ್ಯವಾದರೂ ಅಪರೋಕ್ಷಜನ್ಯವಾದ ಸುಖ ಮದಪಾಶ್ರಯ ವಿಷ್ಣ್ವಾಶ್ರಯ. ಪರೋಕ್ಷಜ್ಞಾನದಿಂದ ಬಂದ ಸುಖ ಆತ್ಮೋತ್ಥವೆನಿಸುವುದು. ಅಂದರೆ ಜಗತ್ತಿನಲ್ಲಿ ಅಪರೋಕ್ಷವಾಗಿ ವಿಷಯಾನುಭವದಿಂದ ಸುಖವಾಗುವುದು. ಉದಾಹರಣೆಗೆ ಒಳ್ಳೆಯ ಗಂಧರಸಗಳ ಸಾಕ್ಷಾತ್ಕಾರದಿಂದ, ಕೆಲವು ಸಲ ನಿನಗೆ ಮಗನು ಜನಿಸಿದನು ಎಂದು ಕೇಳಿದಾಗ ಮಗುವನ್ನು ನೋಡದೇ ಪರೋಕ್ಷವಾಗಿ ತಿಳಿದಾಗ ಸುಖವಾಗುವುದು. ಅಪರೋಕ್ಷವಾಗಿ ಅನುಭವವಾದಾಗ ಅನುಭೂತ ವಿಷಯವೇ ಸುಖಕಾರಣವು. ಅದು ಬುದ್ಧಿಸ್ಥವಾಗಿ ಸುಖಕಾರಣವಾಗುವುದು. ಪ್ರಕೃತದಲ್ಲಿ ಅಪರೋಕ್ಷಜ್ಞಾನದಿಂದ ಉಂಟಾದ ಸುಖಕ್ಕೆ ಎದುರಿಗೆ ಇರುವ ಹರಿಯೇ ಸುಖಜನಕನು ಆದ್ದರಿಂದ ಮದಪಾಶ್ರಯ ಎಂದಿರುವರು. ಪರೋಕ್ಷಜ್ಞಾನಜನ್ಯವಾದ ಸುಖದಲ್ಲಿ ಶ್ರವಣಾದಿಗಳಿಂದ ಬುದ್ಧಿಸ್ಥನಾದ ಹರಿಯು ಸುಖಪ್ರಾಪಕವಿಷಯನು. ಹರಿಯು ಮನೋಗತವಾಗಿ ಸುಖಕಾರಣನಾದ್ದರಿಂದ ಆತ್ಮೋತ್ಥಮನಃಪ್ರಾಪಿತ ಎನ್ನುವರು.॥೨೯॥

ಎಲ್ಲ ಪದಾರ್ಥಗಳು ತ್ರಿಗುಣಸಂಬಂಧದಿಂದ ತ್ರಿವಿಧವೆಂದು ಹೇಳುವರು-

**ದ್ರವ್ಯಂ ದೇಶಃ ಫಲಂ ಕಾಲೋ ಜ್ಞಾನಂ ಕರ್ಮ ಚ ಕಾರಕಃ ।**
**ಶ್ರದ್ಧಾऽವಸ್ಥಾ ಕೃತಿರ್ನಿಷ್ಠಾ ತ್ರೈಗುಣ್ಯಾಃ ಸರ್ವ ಏವ ಹಿ ॥೩೦॥**

**ದ್ರವ್ಯಂ** ದ್ರವ್ಯವು **ದೇಶಃ** ದೇಶವು **ಫಲಂ** ಸ್ವರ್ಗಾದಿಗಳು **ಕಾಲಃ** ಪ್ರಾತಃ-ಕಾಲ, ಸಾಯಂಕಾಲ, ಮಧ್ಯಾಹ್ನ, ಮುಂತಾದವು **ಜ್ಞಾನಂ** ಜ್ಞಾನವು **ಕರ್ಮ** ಅದೃಷ್ಟವು **ಕಾರಕಃ** ಇಂದ್ರಿಯಸಮೂಹವು **ಶ್ರದ್ಧಾ** ಶ್ರದ್ಧೆಯು (ಆಸಿಕ್ಯಬುದ್ಧಿ) **ಕೃತಿಃ** ಕ್ರಿಯೆಯು **ಅವಸ್ಥಾ** ಜಾಗ್ರತ್, ಸ್ವಪ್ನ, ಸುಷುಪ್ತಿ ಮುಂತಾದವು **ನಿಷ್ಠಾ** ವ್ರತವು **ಸರ್ವ ಏವ** ಎಲ್ಲವೂ **ತ್ರೈಗುಣ್ಯಾಃ** ಸತ್ವರಜಸ್ತಮೋಗುಣಗಳ ಕಾರ್ಯಗಳು.||೩೦||

**ಸರ್ವೇ ಗುಣಮಯಾ ಭಾವಾಃ ಪುರುಷಾವ್ಯಕ್ತನಿಷ್ಠಿತಾಃ |**
**ದೃಷ್ಟಂ ಶ್ರುತಮನುಧ್ಯಾಯೇದ್ ಬುಧ್ಯಾ ವಾ ಪುರುಷರ್ಷಭ ||೩೧||**

**ಪುರುಷರ್ಷಭ** ಪುರುಷ ಶ್ರೇಷ್ಠನೇ **ಸರ್ವೇ ಭಾವಾಃ** ಎಲ್ಲ ಪದಾರ್ಥಗಳು **ಪುರುಷಾವ್ಯಕ್ತನಿಷ್ಠಿತಾಃ** ಪುರುಷಶಬ್ದವಾಚ್ಯನಾದ ವಿಷ್ಣುವಿನಿಂದ, ಅವ್ಯಕ್ತ-ಶಬ್ದವಾಚ್ಯಳಾದ ಲಕ್ಷ್ಮೀಯಿಂದ ಸ್ಥಾಪಿತವಾದವು. (ಬ್ರಹ್ಮ-ಸರಸ್ವತಿಯ-ರಿಂದಲೂ ಸ್ಥಾಪಿತ) **ದೃಷ್ಟಂ** ಕಣ್ಣಿಂದ ನೋಡಿದ್ದು **ಶ್ರುತಂ** ಕಿವಿಯಿಂದ ಕೇಳಿದ್ದು **ಬುದ್ಧ್ಯಾ ದೃಷ್ಟಂ ಚ** ಮನಸ್ಸಿನಿಂದ ವಿಷಯೀಕೃತವಾದದ್ದಕ್ಕೆ ಅನುಸರಿಸಿ **ಪರಂ ಬ್ರಹ್ಮ** ಪರಮಾತ್ಮನನ್ನು **ಧ್ಯಾಯೇತ್** ಧ್ಯಾನ ಮಾಡಬೇಕು.

ಮೇಲಿನ ಶ್ಲೋಕದಲ್ಲಿ ಬುದ್ಧ್ಯಾ ಎಂಬುದಕ್ಕೆ ಅನ್ವಯ ತೋರುವುದಿಲ್ಲ. ಮತ್ತು ಏನನ್ನು ಧ್ಯಾನ ಮಾಡಬೇಕು? ಎಂದು ಜಿಜ್ಞಾಸೆ ಬರುವುದು. ಕಾರಣ ಅಧ್ಯಾಹಾರ ಮಾಡಿ ಯೋಜಿಸುವರು.

**ತಾತ್ಪರ್ಯ-** ದೃಷ್ಟಂ ಶ್ರುತಂ ಬುದ್ಧ್ಯಾ ದೃಷ್ಟಂ ಚ ಅನು ಪರಂ ಬ್ರಹ್ಮ ಧ್ಯಾಯೇತ್|

ದೃಷ್ಟಂ ಶ್ರುತಂ ಎಂದು ಪ್ರತೀಕಗ್ರಹಣ ಮಾಡಿ ಪರಂ ಬ್ರಹ್ಮ ಎಂದು ಅಧ್ಯಾಹಾರ ಮಾಡಿ ಶ್ರುತಂ ಬುದ್ಧ್ಯಾ ಅದೃಷ್ಟಂ ಅನು ಪರಂ ಬ್ರಹ್ಮ ಧ್ಯಾಯೇತ್ ಎಂದು ಯೋಜನಾ ಮಾಡಿದಂತಾಯಿತು. ಸಮಸ್ತವಸ್ತುಗಳು ಲಕ್ಷ್ಮೀನಾರಾಯಣರಿಂದ ವ್ಯವಸ್ಥಾಪಿತವಾದ್ದರಿಂದ ಶಾಸ್ತ್ರದಲ್ಲಿ ಕೇಳಿದ ಬುದ್ಧಿಯಿಂದ ವಿಚಾರ ಮಾಡಿ ತಿಳಿದ ಪರಬ್ರಹ್ಮನನ್ನು ಎಲ್ಲ ಸ್ಥಳದಲ್ಲಿ ಇದ್ದಾನೆಂದು ಧ್ಯಾನ ಮಾಡಬೇಕು.

ನಿರ್ಗುಣಜ್ಞಾನ, ನಿರ್ಗುಣವಾಸ, ನಿರ್ಗುಣಕಾರಕ, ನಿರ್ಗುಣಶ್ರದ್ಧಾ, ನಿರ್ಗುಣಸುಖ ಇವುಗಳು ಸತ್ವಗುಣಜನ್ಯವಾದದ್ದರಿಂದ ಸಾತ್ವಿಕಂ ನಿರ್ಗುಣಂ ಎಂದು ಭೇದೇನ ಹೇಳಲು ಕಾರಣ ಹೇಳುವರು-

**ತಾತ್ಪರ್ಯ- ಸತ್ವಾದ್ಗುಣಾಜ್ಜಾತಮಪಿ ವ್ಯವಧಾನಂ ವಿನೈವ ತು ।**
**ಮುಕ್ತಿದಂ ನಿರ್ಗುಣಂ ಪ್ರೋಕ್ತಂ ವ್ಯವಧಾನೇನ ಸಾತ್ವಿಕಮ್ ॥ ಇತಿ ಬ್ರಾಹ್ಮೇ ।**

ಪರೋಕ್ಷಜ್ಞಾನ ಸತ್ವಗುಣಜನ್ಯವಾದರೂ ಅಪರೋಕ್ಷಜ್ಞಾನದ ವ್ಯವಧಾನದಿಂದ ಮುಕ್ತಿಜನಕವಾದದ್ದರಿಂದ ಸಾತ್ವಿಕವೆಂದೂ ಅಪರೋಕ್ಷಜ್ಞಾನ ನೇರವಾಗಿ ಮೋಕ್ಷಸಾಧನವಾದ್ದರಿಂದ ನಿರ್ಗುಣವೆಂದು ಕರೆದಿದೆ ಎಂದು ಭಾವ.

**ಏತಾಃ ಸಂಸೃತಯಃ ಪುಂಸಾಂ ಗುಣಕರ್ಮನಿಬಂಧನಾಃ ।**
**ಯೇನೈತೇ ನಿರ್ಜಿತಾಃ ಸೌಮ್ಯ ಗುಣಾ ಜೀವೇನ ಚಿತ್ತಜಾಃ ।**
**ಭಕ್ತಿಯೋಗೇನ ಮನ್ನಿಷ್ಠೋ ಮದ್ಭಾವಾಯ ಪ್ರಪದ್ಯತೇ ॥೩೨॥**

**ಹೇ ಸೌಮ್ಯ** ಉದ್ಧವನೇ! **ಪುಂಸಾಂ** ಜನರಿಗೆ **ಏತಾಃ ಸಂಸೃತಯಃ** ಅನುಭವಿಸುತ್ತಿರುವ ಜನನ, ಮರಣ, ಗರ್ಭವಾಸ, ನರಕವಾಸ, ಮುಂತಾದ ಸಂಸಾರಗಳು **ಗುಣಕರ್ಮನಿಬಂಧನಾಃ** ಸತ್ವರಜಸ್ತಮೋಗುಣಗಳು ಮತ್ತು ಪುಣ್ಯ ಪಾಪರೂಪ ಕರ್ಮದಿಂದ ಬರುವವು. **ಯೇನ** ಯಾವ ಮನುಷ್ಯನಿಂದ **ಚಿತ್ತಜಾಃ** ಮನಸ್ಸಿನಲ್ಲಿ ವ್ಯಕ್ತವಾಗುವ **ಗುಣಾಃ** ಸತ್ವಾದಿಗುಣಕಾರ್ಯವಾದ ಕಾಮಾದಿಗಳು **ನಿರ್ಜಿತಾಃ** ಗೆಲ್ಲಲ್ಪಟ್ಟಿವೆಯೋ **ತೇನ** ಅವನಿಂದ **ಇಮೇ** ಉಕ್ತರೂಪ **ಸಂಸೃತಯಃ** ಸಂಸಾರಗಳು **ನಿವೃತ್ತಾ ಭವಂತಿ** ತೊಲಗುವವು. ಮತ್ತು **ಭಕ್ತಿಯೋಗೇನ** ಗುಣಗಳ ನಿರಾಸದಿಂದ ಪ್ರಾಪ್ತವಾದ ಭಕ್ತಿರೂಪವಾದ ಉಪಾಯದಿಂದ **ಮನ್ನಿಷ್ಠಃ** ನನ್ನಲ್ಲಿ ಆಸಕ್ತನಾಗಿ **ಮದ್ಭಾವಾಯ** ನನ್ನಿಂದ ಬರುವ ಜ್ಞಾನಾನಂದಾದಿಗಳಿಗಾಗಿ **ಮಾಂ** ನನ್ನನ್ನು **ಪ್ರಪದ್ಯತೇ** ಹೊಂದುವನು.

**ಸತ್ವಂ ಚಾಭಿಜಯೇದ್ಯುಕ್ತೋ ನೈರಪೇಕ್ಷ್ಯೇಣ ಶಾಂತಧೀಃ ।**
**ಸಂಪದ್ಯತೇ ಗುಣೈರ್ಮುಕ್ತೋ ಜೀವಂ ಜೀವೋ ವಿಹಾಯ ಮಾಮ್॥೩೩॥**

**ನೈರಪೇಕ್ಷ್ಯೇಣ** ಫಲಾಪೇಕ್ಷೆ ಇಲ್ಲದೇ ಸಾಧನ ಮಾಡುವುದರಿಂದ ಉಂಟಾದ **ಶಾಂತಧೀಃ** ಸುಖಮರ್ಯಾದಾಭೂಮಿಯಾದ್ದರಿಂದ ಶಾಂತನೆನಿಸಿದ ಶ್ರೀಹರಿಯ ಅಪರೋಕ್ಷಜ್ಞಾನ ಉಳ್ಳ **ಯುಕ್ತಃ** ಯೋಗಯುಕ್ತನಾದ **ಜೀವಃ** ಜೀವನು **ಸತ್ವಂ ಜಯೇತ್** ಸತ್ವಗುಣವನ್ನು ಗೆಲ್ಲುವನು. **ಗುಣೈಃ ಮುಕ್ತಃ** ಗುಣಗಳಿಂದ ಮುಕ್ತನಾದವನಾಗಿ **ಜೀವಂ ಮಾಂ** ಪ್ರಾಣಧಾರಕನಾದ ನನ್ನನ್ನು **ಸಂಪದ್ಯತೇ** ಹೊಂದುವನು ಎಂದರ್ಥ.

**ತಸ್ಮಾದ್ ದೇಹಮಿಮಂ ಲಬ್ಧ್ವಾ ಜ್ಞಾನವಿಜ್ಞಾನಸಂಭವಮ್ ।**
**ಮಯ್ಯೆವ ಬ್ರಹ್ಮಣಾ ಪೂರ್ಣೋ ನ ಬಹಿರ್ನಾಽಂತರಶ್ಚರೇತ್ ॥೩೪॥**

**ತಸ್ಮಾತ್** ಭಕ್ತಿಯೋಗದಿಂದ ಭಗವನ್ನಿಷ್ಠನಾದವನಿಗೆ ಮೋಕ್ಷವಾಗುವುದರಿಂದ **ಜ್ಞಾನವಿಜ್ಞಾನಸಂಭವಂ** ಸಾಮಾನ್ಯಜ್ಞಾನ, ಸ್ವಯೋಗ್ಯಜ್ಞಾನಗಳಿಗೆ ಕಾರಣವಾದ **ಇಮಂ ದೇಹಂ ಲಬ್ಧ್ವಾ** ಈ ಮನುಷ್ಯದೇಹವನ್ನು ಪಡೆದು **ಬ್ರಹ್ಮಣಾ** ಪೂರ್ಣನಾದ **ಮಯಾ ಏವ** ನನ್ನಿಂದಲೇ **ಪೂರ್ಣಃ** ತೃಪ್ತನಾದವನಾಗಿ **ನಾ** ಪುರುಷನು **ಬಹಿಃ** ವಿಷಯಗಳಲ್ಲಿ **ನ ಚರೇತ್** ಸಂಚರಿಸಬಾರದು ಆಸಕ್ತನಾಗಬಾರದು. **ಅಂತರಂ ಚರೇತ್** ಒಳಗಿದ್ದು ಆನಂದ ಪಡುವ ಬಿಂಬರೂಪಿಯಲ್ಲಿಯೇ ಮನಸಾ ಸಂಚರಿಸಬೇಕು.॥೩೪॥

**॥ ಇತಿ ಶ್ರೀಮದ್ಭಾಗವತೇ ಏಕಾದಶಸ್ಕಂಧೇ ಪಂಚವಿಂಶೋಽಧ್ಯಾಯಃ ॥**

★★★



## ಅಥ ಷಡ್ವಿಂಶೋಽಧ್ಯಾಯಃ

**ಶ್ರೀಭಗವಾನುವಾಚ -**

ಹಿಂದಿನ ಅಧ್ಯಾಯದಲ್ಲಿ ಹೇಳಿದ ವಿಷಯವೈರಾಗ್ಯದಿಂದ ಸಹಿತವಾದ ಭಗವನ್ನಿಷ್ಠೆಯೇ ಮೋಕ್ಷಕ್ಕೆ ಮುಖ್ಯಸಾಧನವೆಂಬುದನ್ನು ಇತಿಹಾಸದ ಮೂಲಕ ವಿವರಿಸುವರು. ಈ ಅಧ್ಯಾಯದಲ್ಲಿ ಮೊದಲಿಗೆ ಹಿಂದೆ ಹೇಳಿದ್ದರೂ ಬ್ರಹ್ಮ ಜ್ಞಾನದ ಫಲವನ್ನು ವಿಶ್ವಾಸ ಹುಟ್ಟಿಸಲು ಮತ್ತೆ ಹೇಳುವರು-

**ಮಲ್ಲಕ್ಷಣಮಿಮಂ ಕಾಯಂ ಲಬ್ಧ್ವಾ ಮದ್ಧರ್ಮಮಾಸ್ಥಿತಃ ।**
**ಆನಂದಂ ಪರಮಾತ್ಮಾನಮಾತ್ಮಸ್ಥಂ ಸಮುಪೈತಿ ಮಾಮ್ ॥೧॥**

**ಮಲ್ಲಕ್ಷಣಂ** ನನ್ನ ಜ್ಞಾನಸಾಧನವಾದ (ಮಾಂ ಲಕ್ಷಯತೀತಿ ಮಲ್ಲಕ್ಷಣಂ) ಅಥವಾ ನನ್ನ ಲಕ್ಷಣಗಳಾದ ಶಂಖ, ಚಕ್ರಾದಿ, ಲಕ್ಷಣಗಳನ್ನು ಧರಿಸಿದ (ಮಮ ಲಕ್ಷಣಾನಿ ಯಸ್ಮಿನ್) **ಇಮಂ ಕಾಯಂ** ಈ ಮನುಷ್ಯದೇಹವನ್ನು **ಲಬ್ಧ್ವಾ** ಹೊಂದಿ **ಮದ್ಧರ್ಮಂ ಆಸ್ಥಿತಃ** ಭಾಗವತಧರ್ಮವನ್ನು ಅನುಷ್ಠಾನ ಮಾಡುವವನು, **ಆತ್ಮಸ್ಥಂ** ಹೃದಯದಲ್ಲಿರುವ **ಆನಂದಂ** ಆನಂದರೂಪನಾದ **ಪರಂ** ಪೂರ್ಣನಾದ **ಆತ್ಮಾನಂ** ಸ್ವಾಮಿಯಾದ ಮಾಂ ನನ್ನನ್ನು **ಸಮುಪೈತಿ** ಹೊಂದುವನು. ಅಪರೋಕ್ಷೀಕರಿಸುವನು.

ಜೀವನ್ಮುಕ್ತನ ಸ್ಥಿತಿ ಪ್ರಕಾರವನ್ನು ಹೇಳುವರು.

**ಗುಣಮಯ್ಯಾ ಜೀವಯೋನ್ಯಾ ವಿಮುಕ್ತೋ ಜ್ಞಾನನಿಷ್ಠಯಾ ।**
**ಗುಣೇಷು ಮಾಯಾಮಾತ್ರೇಷು ದೃಶ್ಯಮಾನೇಷ್ವವಸ್ತುತಃ ।**
**ವರ್ತಮಾನೋಽಪಿ ನ ಪುಮಾನ್ ಯುಜ್ಯತೇಽವಸ್ತುಭಿರ್ಗುಣೈಃ ॥೨॥**

**ಅವಸ್ತುತಃ** ಅಸ್ವತಂತ್ರವಾಗಿ **ದೃಶ್ಯಮಾನೇಷು** ಅನುಭವಿಸಲ್ಪಡುವ **ಮಾಯಾಮಾತ್ರೇಷು** ಭಗವಂತನ ಇಚ್ಛೆಯಿಂದ ನಿರ್ಮಿತಗಳಾದ **ಗುಣೇಷು** ಗುಣತ್ರಯಕಾರ್ಯವಾದ ದೇಹೇಂದ್ರಿಯಾದಿಗಳಲ್ಲಿ **ವರ್ತಮಾನೋಽಪಿ** ಇದ್ದರೂ ಸಹ **ಪುಮಾನ್** ಅಪರೋಕ್ಷಜ್ಞಾನಿಯು **ಜ್ಞಾನನಿಷ್ಠಯಾ** ಅಪರೋಕ್ಷ-ಜ್ಞಾನದ ಮಹಿಮೆಯಿಂದ **ಗುಣಮಯ್ಯಾ** ಸತ್ವಾದಿಗುಣಾತ್ಮಕವಾದ ಅವಿದ್ಯೆಯಿಂದ **ಜೀವಯೋನ್ಯಾ** ಜೀವರಿಗೆ ತಿರ್ಯಗಾದಿ ಯೋನಿಯಲ್ಲಿ ಜನಿಸಲು ಕಾರಣವಾದ ಲಿಂಗಶರೀರದಿಂದ **ವಿಮುಕ್ತಃ** ಅಭಿಮಾನರಹಿತನಾದವನಾಗಿ

**ಅವಸ್ತುಭಿಃ** ಅಸ್ವತಂತ್ರಗಳಾದ ಅಮಂಗಲಗಳಾದ **ಗುಣೈಃ** ದೇಹಕಾರ್ಯ ಕಾಮ, ಕ್ರೋಧಾದಿಗಳಿಂದ **ನ ಯುಜ್ಯತೇ** ಕೂಡಿದವನಾಗುವುದಿಲ್ಲ. ಅಭಿಮಾನವಿಲ್ಲದ್ದರಿಂದ ಕ್ರೋಧಾದಿಗಳುಂಟಾಗುವುದಿಲ್ಲ ಎಂದು ಅರ್ಥ.

ಇಲ್ಲಿ ಅವಸ್ತುತ್ವವನ್ನು ಹೇಳುವುದರಿಂದ ಮಿಥ್ಯಾತ್ವವು ತೋರುತ್ತದೆ. ಅದರ ನಿವಾರಣೆಗಾಗಿ ಅವಸ್ತು ಶಬ್ದವನ್ನು ವ್ಯಾಖ್ಯಾನಿಸುವರು-

**ತಾತ್ಪರ್ಯ- ವಸ್ತು ಸ್ವತಂತ್ರಮುದ್ದಿಷ್ಟಮಸ್ವತಂತ್ರಮವಸ್ತು ಚ । ಇತಿ ಮಾಹಾತ್ಮ್ಯೇ ।**

ಸ್ವತಂತ್ರವಾದ ಪದಾರ್ಥಕ್ಕೆ ವಸ್ತು ಎಂದು ಅಸ್ವತಂತ್ರವಾದ ಪದಾರ್ಥಕ್ಕೆ ಅವಸ್ತು ಎಂದು ಕರೆಯುವುದುಂಟು ಎಂದು ಮಹಾತ್ಮ್ಯದಲ್ಲಿದೆ.

ಜ್ಞಾನಿಯಾದವನೂ ಸಹ ವಿಷಯಸೇವನೆ ಮಾಡಕೂಡದು. ಎಂದು ಹೇಳಲಾಗಿತ್ತು. ಅಂದ ಮೇಲೆ ಜ್ಞಾನಾರ್ಥಿಯು ಕೂಡಾ ಮಾಡಬಾರದೆಂದು ಹೇಳುವರು-

**ಸಂಗಂ ನ ಕುರ್ಯಾದಸತಾಂ ಶಿಶ್ನೋದರತೃಪಾಂ ಕ್ವಚಿತ್ ।**
**ತಸ್ಯಾನುಗಸ್ತಮಸ್ಯಂಧೇ ಪತತ್ಯಂಧಾನುಗೋಽಂಧವತ್ ॥೩॥**

**ಶಿಶ್ನೋದರತೃಪಾಂ** ಗುಹ್ಯೇಂದ್ರಿಯ ಮತ್ತು ಹೊಟ್ಟೆಯನ್ನು ಮಾತ್ರ ತೃಪ್ತಿಪಡಿಸುವ **ಅಸತಾಂ** ನಾಸ್ತಿಕರ ವಿಷ್ಣುದ್ವೇಷಿಗಳ **ಸಂಗಂ** ಸಹವಾಸವನ್ನು ಮೈತ್ರಿಯನ್ನು **ನ ಕುರ್ಯಾತ್** ಮಾಡಬಾರದು. **ತಸ್ಯ** ಅಸಜ್ಜನರ (ಜಾತ್ಯೇಕ-ವಚನ) **ಅನುಗಃ** ಅನುಸರಿಸಿ ನಡೆಯುವವನು **ಅಂಧಾನುಗಃ ಅಂಧವತ್** ಕುರುಡನನ್ನು ಅನುಸರಿಸುವ ಕುರುಡನಂತೆ **ಅಂಧೇ ತಮಸಿ ಪತತಿ** ಅಂಧಂತಮಸ್ಸಿನಲ್ಲಿ ಬೀಳುವನು.॥೩॥

ವಿಷಯಸಂಗದಿಂದ ಯಾರಿಗೆ ಅನರ್ಥವಾಯಿತು, ಯಾರಿಗೆ ಸುಖಕರ ವೈರಾಗ್ಯ ಜನಿಸಿತು. ಎಂಬ ಉದ್ಧವನ ಮನಸ್ಸಿನ ಆಶಂಕೆಯನ್ನು ಹೋಗಲಾಡಿಸಲು ಐಲೋಪಾಖ್ಯಾನ ಹೇಳುವರು-

**ಐಲಃ ಸಮ್ರಾಡಿಮಾಂ ಗಾಥಾಮಗಾಯತ ಬೃಹಚ್ಛ್ರವಾಃ ।**
**ಉರ್ವಶೀವಿರಹಾನ್ಮುಹ್ಯನ್ ನಿರ್ವಿಣ್ಣಃ ಶೋಕಸಂಯುತಃ ॥೪॥**

**ಐಲಃ** ರುದ್ರದೇವರ ಶಾಪದಿಂದ ಸುದ್ಯುಮ್ನನು ಇಲಾ ಎಂಬ ಹೆಣ್ಣಾದಾಗ ಬುಧನಿಂದ ಜನಿಸಿದ ಪುರೂರವರಾಜನು **ಬೃಹಚ್ಛ್ರವಾಃ** ಮಹಾಕೀರ್ತಿ ಶಾಲಿಯಾದ **ಸಾಮ್ರಾಟ್** ರಾಜನು **ಇಮಾಂ** ಮುಂದೆ ಹೇಳುವ **ಗಾಥಾಂ** ಹಿತವಚನಗಳನ್ನು **ಉರ್ವಶೀವಿರಹಾತ್** ಉರ್ವಶಿಯ ವಿರಹದಿಂದ **ಮುಹ್ಯನ್** ಚಿತ್ತವಿಕ್ಷೋಭಕ್ಕೆ ಒಳಗಾಗಿ **ಶೋಕಸಂಯುತಃ** ದುಃಖಿತನಾಗಿ ನಂತರ **ನಿರ್ವಿಣ್ಣಃ** ವಿರಕ್ತನಾಗಿ **ಅಗಾಯತ** ಹೇಳಿದನು.।।೪।।

**ತ್ಯಕ್ತ್ವಾತ್ಮಾನಂ ವ್ರಜಂತೀಂ ತಾಂ ನಗ್ನ ಉನ್ಮತ್ತವನ್ನೃಪಃ ।**
**ವಿಲಪನ್ನನ್ವಗಾಜ್ಜಾಯೇ ಘೋರೇ ತಿಷ್ಠೇತಿ ವಿಕ್ಲವಃ ।।೫।।**

**ನೃಪಃ** ಪುರೂರವರಾಜನು **ಆತ್ಮಾನಂ** ತನ್ನನ್ನು **ತ್ಯಕ್ತ್ವಾ** ಬಿಟ್ಟು **ವ್ರಜಂತೀಂ** ಹೋಗುತ್ತಿರುವ **ತಾಂ** ಉರ್ವಶಿಯನ್ನು **ಉನ್ಮತ್ತವತ್** ಹುಚ್ಚನಂತೆ **ಘೋರೇ** ಕಠಿಣಳಾದವಳೇ **ಜಾಯೇ** ಪತ್ನಿಯೇ **ತಿಷ್ಠ** ನಿಲ್ಲು **ಇತಿ** ಎಂದು **ವಿಕ್ಲವಃ** ಚಿತ್ತಸ್ಥೈರ್ಯವಿಲ್ಲದೇ **ವಿಲಪನ್** ಅರಚುತ್ತ **ನಗ್ನಃ** ವಿವಸ್ತ್ರನಾಗಿಯೇ **ಅನ್ವಗಾತ್** (ಬೆನ್ನಟ್ಟಿದನು) ಹಿಂಬಾಲಿಸಿದನು.।।

ಜಾಯೇ ಘೋರೇ ಎಂದದ್ದರಿಂದ 'ಹಯೇ ಜಾಯೇ ಮನಸಾ ತಿಷ್ಠ ಘೋರೇ ವಚಾಂಸಿ ಮಿಶ್ರಾ ಕೃಣವಾವಹೈ' ಮುಂತಾದ ಶ್ರುತಿಯನ್ನು ಆಗ ಕಂಡನು ಎಂದು ಸೂಚಿಸುವರು.

ಹಿಂಬಾಲಿಸಲು ನಿಮಿತ್ತ ಹೇಳುವರು.

**ಕಾಮಾನತೃಪ್ತೋಽನುಜುಷನ್ ಕ್ಷುಲ್ಲಕಾನ್ ವರ್ಷಯಾಮಿನೀಃ ।**
**ನ ವೇದ ಗಣನಾಂ ಯಾಂತೀಮುರ್ವಶ್ಯಾಽಽಕೃಷ್ಟಚೇತನಃ ।।೬।।**

**ಉರ್ವಶ್ಯಾ** ಉರ್ವಶಿಯಿಂದ **ಆಕೃಷ್ಟಚೇತನಃ** ವಶೀಕೃತವಾದ ಮನಸ್ಸುಳ್ಳವನಾಗಿ **ಕ್ಷುಲ್ಲಕಾನ್** ಅಲ್ಪವಾದ **ಕಾಮಾನ್** ವಿಷಯಗಳನ್ನು **ಜುಷನ್** ಸೇವಿಸುತ್ತ **ಅತೃಪ್ತಃ** ತೃಪ್ತಿಪಡದೇ **ವರ್ಷಯಾಮಿನೀಃ ಉದ್ದಿಶ್ಯ ಯಾಂತೀಂ ಗಣನಾಂ** ಕಳೆದು ಹೋಗುತ್ತಿರುವ ರಾತ್ರಿಗಳ ಮೊತ್ತವನ್ನು **ನ ವೇದ** ತಿಳಿಯಲಿಲ್ಲ. ಎಷ್ಟೋ ರಾತ್ರಿಗಳು ಕಳೆದರೂ ತಿಳಿಯಲಿಲ್ಲವೆಂದು ಅರ್ಥ.

**ಐಲ ಉವಾಚ -**

**ಅಹೋ ಮೇ ಮೋಹವಿಸ್ತಾರಃ ಕಾಮಕಶ್ಮಲಚೇತಸಃ ।**
**ದೇವ್ಯಾ ಗೃಹೀತಕಂಠಸ್ಯ ನಾಯುಃ ಖಂಡಾ ಅನುಸ್ಮೃತಾಃ ॥೭॥**

**ದೇವ್ಯಾ** ಉರ್ವಶಿಯಿಂದ **ಗೃಹೀತಕಂಠಸ್ಯ** ಆಲಿಂಗಿತವಾದ ಕಂಠವುಳ್ಳ **ಕಾಮಕಶ್ಮಲಚೇತಸಃ** ಕಾಮದಿಂದ ದೂಷಿತವಾದ ಮನಸ್ಸುಳ್ಳ **ಮೇ** ನನ್ನ **ಮೋಹವಿಸ್ತಾರಃ** ಅಜ್ಞಾನದ ಅತಿರೇಕವು **ಅಹೋ** ಆಶ್ಚರ್ಯಪಡುವಂತಹದು **ಆಯುಃಖಂಡಾಃ** ಆಯುಷ್ಯದ ಭಾಗವಾದ ಹಗಲು ರಾತ್ರಿಗಳು **ನ ಅನುಸ್ಮೃತಾಃ** ಕಳೆದದ್ದು ತಿಳಿಯಲೇ ಇಲ್ಲ॥೭॥

**ನಾಹಂ ವೇದಾಭಿನಿರ್ಮುಕ್ತಃ ಸೂರ್ಯೋ(ರ್ಯೇ)ಣಾಭ್ಯುದಿತೋ ಮೃಷಾ ।**
**ಮುಷಿತೋ ವರ್ಷಪೂಗಾನಾಂ ಬತಾಹಾನಿ ಗತಾನ್ಯುತ ॥೮॥**

**ಸೂರ್ಯೇಣ ಅಭ್ಯುದಿತಃ** ಸೂರ್ಯನು ಉದಿಸಿದ ಕಾಲವು ಹಗಲು **ಸೂರ್ಯೇಣ ಅಭಿನಿರ್ಮುಕ್ತಃ** ಸೂರ್ಯನಿಂದ ರಹಿತವಾದ ಕಾಲವು ರಾತ್ರಿಯು ಎಂಬ **ಮೃಷಾ** ವಿವೇಕಜ್ಞಾನವಿಲ್ಲದ್ದರಿಂದ **ಮುಷಿತಃ** ಉರ್ವಶಿಯಿಂದ ಮೋಹಿತನಾಗಿ **ವರ್ಷಪೂಗಾನಾಂ ಗತಾನಿ ಅಹಾನಿ** ಎಷ್ಟೋ ವರ್ಷ ಸಮೂಹಗಳ ದಿನಗಳು ಕಳೆದವು ಎಂಬುದನ್ನು **ಅಹಂ ನ ವೇದ** ನಾನು ತಿಳಿಯಲಿಲ್ಲ ಎಂಬುದು **ಬತ** ಆಶ್ಚರ್ಯವು ಖೇದವು.॥೮॥

**ಅಹೋ ಮೇ ಆತ್ಮಸಮ್ಮೋಹೋ ಯೇನಾತ್ಮಾ ಯೋಷಿತಾ ಕೃತಃ (ಹೃತಃ) ।**
**ಕ್ರೀಡಾಮೃಗಶ್ಚಕ್ರವರ್ತೀ ನರದೇವಶಿಖಾಮಣಿಃ ॥೯॥**

**ಮೇ** ನನ್ನ **ಆತ್ಮಸಮ್ಮೋಹಃ** ಮನಸ್ಸಿನ ಮೋಹವು ಧೃತಿಗೇಡಿತನವು, **ಅಹೋ** ಆಶ್ಚರ್ಯವು **ಯೇನ** ಮೋಹದಿಂದ **ಆತ್ಮಾ** ನಾನು (ನನ್ನ ದೇಹವು) **ಯೋಷಿತಾ** ಹೆಣ್ಣುಮಗಳಿಂದ **ನರದೇವಶಿಖಾಮಣಿಃ** ರಾಜಶ್ರೇಷ್ಠನಾದ **ಚಕ್ರವರ್ತೀ** ಚಕ್ರವರ್ತಿಯು **ಕ್ರೀಡಾಮೃಗಃ ಕೃತಃ** ಆಟದ ಮೃಗವನ್ನಾಗಿ ಮಾಡಲ್ಪಟ್ಟೆನು.॥೯॥

**ಸಪರಿಚ್ಛದಮಾತ್ಮಾನಂ ಹಿತ್ವಾ ತೃಣಮಿವೇಶ್ವರಮ್ ।**
**ಯಾಂತೀಂ ಸ್ತ್ರಿಯಂ ಚಾನ್ವಗಮಂ ನಗ್ನ ಉನ್ಮತ್ತವದ್ ರುದನ್ ॥೧೦॥**

**ಸಪರಿಚ್ಛದಂ** ಆನೆ-ಕುದುರೆ ಮುಂತಾದ ಪರಿಕರದಿಂದ ಕೂಡಿದ **ಈಶ್ವರಂ** ಐಶ್ವರ್ಯ ಯುಕ್ತವಾದ **ಆತ್ಮಾನಂ** (ನನ್ನ ದೇಹವನ್ನು ನನ್ನನ್ನು) ದೇಹಾಭಿ-ಮಾನವನ್ನು **ತೃಣಮಿವ** ಹುಲ್ಲು ಕಡ್ಡಿಯಂತೆ **ಹಿತ್ವಾ** ಬಿಟ್ಟು **ಯಾಂತೀಂ** ಹೋಗುತ್ತಿರುವ **ಸ್ತ್ರಿಯಂ** ಹೆಣ್ಣನ್ನು **ಉನ್ಮತ್ತವತ್** ಹುಚ್ಚನಂತೆ **ರುದನ್** ಅಳುತ್ತ **ನಗ್ನಃ** ವಸ್ತ್ರವಿಲ್ಲದೇ **ಅನ್ವಗಮಂ** ಬೆನ್ನುಹತ್ತಿದೆನು.।।೧೦।।

**ಕುತಸ್ತಸ್ಯಾನುಭಾವಃ ಸ್ಯಾತ್ ತೇಜ ಈಶಿತ್ವಮೇವ ವಾ ।**
**ಯೋಽನ್ವಗಚ್ಛಂ ಸ್ತ್ರಿಯಂ ಯಾಂತೀಂ ಸ್ಮರಬಾಣವಿತಾಡಿತಃ ।।೧೧।।**

**ಸ್ಮರಬಾಣವಿತಾಡಿತಃ** ಕಾಮನ ಬಾಣದಿಂದ ಪೀಡಿತರಾಗಿ **ಯಃ** ಯಾವನು **ಯಾಂತೀಂ** ಹೋಗುತ್ತಿರುವ **ಸ್ತ್ರಿಯಂ** ಹೆಣ್ಣನ್ನು **ಅನ್ವಗಚ್ಛನ್** ಅನುಸರಿಸಿ ಹೋಗುವನೋ **ತಸ್ಯ** ಅವನಿಗೆ **ಅನುಭಾವಃ** ತತ್ವನಿಶ್ಚಯಸಾಮರ್ಥ್ಯವು **ತೇಜಃ** ಮನೋನಿಗ್ರಹಸಾಮರ್ಥ್ಯವು **ಈಶೀತ್ವಂ ವಾ** ಅಷ್ಟೈಶ್ವರ್ಯದಲ್ಲಿ ಒಂದಾದ ಈಶಿತ್ವವೆಂಬ ಸಾಮರ್ಥ್ಯವಾದರೂ **ಕುತಃ ಸ್ಯಾತ್** ಹೇಗೆ ಬಂದೀತು.।।೧೧।।

**ಕಿಂ ವಿದ್ಯಯಾ ಕಿಂ ತಪಸಾ ಕಿಂ ತ್ಯಾಗೇನ ಶ್ರುತೇನ ವಾ ।**
**ಕಿಂ ವಿವಿಕ್ತೇನ ಮೌನೇನ ಸ್ತ್ರೀಭಿರ್ಯಸ್ಯ ಮನೋ ಹೃತಮ್ ।।೧೨।।**

**ಸ್ತ್ರೀಭಿಃ** ಸ್ತ್ರೀಯರಿಂದ **ಯಸ್ಯ** ಯಾವನ **ಮನಃ** ಮನಸ್ಸು **ಹೃತಂ** ಸೆಳೆಯಲ್ಪಟ್ಟಿದೆಯೋ **ತಸ್ಯ** ಅವನಿಗೆ **ವಿದ್ಯಯಾ** ವಿದ್ಯೆಯಿಂದಾಗಲಿ **ತಪಸಾ** ತಪಸ್ಸಿನಿಂದಾಗಲಿ **ತ್ಯಾಗೇನ** ತ್ಯಾಗದಿಂದ **ಶ್ರುತೇನ** ಶ್ರವಣದಿಂದಾಗಲಿ **ವಿವಿಕ್ತೇನ** ಜಪಾದಿಗಳಿಗಾಗಿ ಏಕಾಂತದಲ್ಲಿರುವುದರಿಂದಾಗಲಿ **ಕಿಂ** ಏನು ಪ್ರಯೋಜನ? ಸ್ತ್ರೀಜಿತನಾದವನಿಗೆ (ಹೆಣ್ಣಿನಿಂದ ಸೋತವನಿಗೆ) ಎಲ್ಲ ಗುಣಗಳು ವ್ಯರ್ಥವಾಗುವವು ಎಂದು ಭಾವ.।।೧೨।।

**ಸ್ವಾರ್ಥಸ್ಯಾಕೋವಿದಂ ಧಿಙ್ ಮಾಂ ಮೂರ್ಖಂ ಪಂಡಿತಮಾನಿನಮ್ ।**
**ಯೋಽಹಮೀಶ್ವರತಾಂ ಪ್ರಾಪ್ಯ ಸ್ತ್ರೀಭಿರ್ಗೋಖರವಜ್ಜಿತಃ ।।೧೩।।**

**ಸ್ವಾರ್ಥಸ್ಯ ಅಕೋವಿದಂ** ಸ್ವಾರ್ಥವನ್ನು ಸಾಧಿಸುವ ಬಗೆಯನ್ನು ಅರಿಯದ **ಮೂರ್ಖಂ** ಮೂರ್ಖನಾದ **ಪಂಡಿತಮಾನಿನಂ** ಪಂಡಿತನೆಂದು ತಿಳಿದ **ಯಃ ಅಹಂ** ಯಾವ ನಾನು **ಈಶ್ವರತಾಂ ಪ್ರಾಪ್ಯ** ರಾಜಪದವಿಯನ್ನು ಪಡೆದೂ

**ಸ್ತ್ರೀಭಿಃ** ಸ್ತ್ರೀಯರಿಂದ **ಗೋಖರವತ್** ದನದಂತೆ ಕತ್ತೆಯಂತೆ **ಜಿತಃ** ಗೆಲ್ಲಲ್ಪಟ್ಟೆನು. ಇಂಥ **ಮಾಂ** ನನಗೆ **ಧಿಕ್** ಧಿಕ್ಕಾರವು.।।೧೩।।

**ಸೇವತೋ ವರ್ಷಪೂಗಾನ್ಮೇ ಉರ್ವಶ್ಯಾ ಅಧರಾಸವಮ್ ।**
**ನ ತೃಪ್ತ ಆತ್ಮಭೂಃ ಕಾಮೋ ವಹ್ನಿರಾಹುತಿಭಿರ್ಯಥಾ ।।೧೪।।**

**ವರ್ಷಪೂಗಾನ್** ಅನೇಕವರ್ಷಗಳಿಂದ **ಉರ್ವಶ್ಯಾಃ** ಉರ್ವಶಿಯ **ಅಧರಾಸವಂ** ಅಧರಾಮೃತವನ್ನು **ಸೇವತಃ** ಪಾನಮಾಡುವ **ಮೇ** ನನ್ನ **ಆತ್ಮಭೂಃ** ಮನಸ್ಸಿನಿಂದ ಜನಿಸಿದ **ಕಾಮಃ** ಕಾಮವು **ಆಹುತಿಭಿಃ** ಆಹುತಿಗಳಿಂದ **ವಹ್ನಿರಿವ** ಅಗ್ನಿಯಂತೆ **ನ ತೃಪ್ತಂ** ಶಾಂತವಾಗಲಿಲ್ಲ.

**ಪುಂಶ್ಚಲ್ಯಾಽಪಹೃತಂ ಚಿತ್ತಂ ಕೊ ನ್ವನ್ಯೋ ಮೋಚಿತುಂ ಪ್ರಭುಃ ।**
**ಆತ್ಮಾರಾಮೇಶ್ವರಮೃತೇ ಭಗವಂತಮಧೋಕ್ಷಜಮ್ ।।೧೫।।**

**ಪುಂಶ್ಚಲ್ಯಾ** ವ್ಯಭಿಚಾರಿಣಿಯಿಂದ **ಅಪಹೃತಂ** ಅಪಹರಿಸಲ್ಪಟ್ಟ **ಚಿತ್ತಂ** ಮನಸ್ಸನ್ನು **ಅಧೋಕ್ಷಜಂ** ಪ್ರತ್ಯಕ್ಷ ಅವಿಷಯನಾದ **ಆತ್ಮಾರಾಮಂ** ಸ್ವರಮಣನಾದ **ಈಶ್ವರಂ** ಸರ್ವಸಮರ್ಥನಾದ **ಭಗವಂತಂ** ನರನಾರಾಯಣನನ್ನು **ಋತೇ** ಬಿಟ್ಟು **ಅನ್ಯಃ ಕಃ ನು** ಯಾವನು ತಾನೇ **ಮೋಚಿತಂ ಪ್ರಭುಃ** ಬಿಡಿಸಲು ಸಮರ್ಥನು ಯಾವನೂ ಇಲ್ಲ.।।೧೫।।

**ಬೋಧಿತಸ್ಯಾಪಿ ದೇವ್ಯಾ ಮೇ ಸೂಕ್ತವಾಕ್ಯೇನ ದುರ್ಮತೇಃ ।**
**ಮನೋಗತೋ ಮಹಾಮೋಹೋ ನಾಪಯಾತ್ಯಜಿತಾತ್ಮನಃ ।।೧೬।।**

**ದೇವ್ಯಾ** ಉರ್ವಶಿಯಿಂದ **ಸೂಕ್ತವಾಕ್ಯೇನ** ಕಿಮೇತಯಾ ವಾಚಾ ಎಂಬ ಋಗ್ವೇದ ದಶಮ ಮಂಡಲ ೯೫ನೇ ಸೂಕ್ತದಿಂದ **ಬೋಧಿತಸ್ಯಾಪಿ** ತಿಳಿ ಹೇಳಲ್ಪಟ್ಟವನಾದರೂ **ದುರ್ಮತೇಃ** ದುಷ್ಟಬುದ್ಧಿಯವನಾದ **ಅಜಿತಾತ್ಮನಃ** ಮನೋನಿಗ್ರಹವಿಲ್ಲದ ನನ್ನ **ಮನೋಗತಃ** ಮನಸ್ಸಿನಲ್ಲಿರುವ **ಮಹಾಮೋಹಃ** ಕಾಮವಾಸನೆಯು **ನ ಅಪಯಾತಿ** ಹೋಗಲಾರದು.।।೧೬।।

**ಕಿಂ ನ್ವೇತಯಾ ಮ ಏಕಾಂತೇ ರಜ್ಜ್ವಾಂ ವೈ ಸರ್ಪಚೇತಸಃ ।**
**ದ್ರಷ್ಟುಃ ಸ್ವರೂಪಾವಿದುಷೋ ಯೋಽಹಂ ಯದಜಿತೇಂದ್ರಿಯಃ ।।೧೭।।**

**ಯತ್** ಯಾವ ಕಾರಣ **ಅಜಿತೇಂದ್ರಿಯಃ** ಇಂದ್ರಿಯಜಯವಿಲ್ಲದವನೋ

ಮತ್ತು **ದ್ರಷ್ಟುಃ** ಶ್ರೀಹರಿಯ **ಸ್ವರೂಪಾವಿದುಷಃ** ಸ್ವರೂಪವನ್ನು ತಿಳಿಯದಿರುವ **ಯಃ ಅಹಂ** ನಾನು ಯಾವ ಸ್ವರೂಪವುಳ್ಳವನು ಎಂಬ ನನ್ನ ಸ್ವರೂಪವನ್ನೂ ತಿಳಿಯದವನು ಕಾರಣ **ರಜ್ಜ್ವಾಂ** ಹಗ್ಗದಲ್ಲಿ **ಸರ್ಪಚೇತಸಃ** ಹಾವೆಂದು ತಿಳಿದವನು ಭ್ರಾಂತನೆಂದರ್ಥ ಇಂಥವನಿಗೆ **ಏಕಾಂತೇ ಏತಯಾ ಕಿಂ** ಏಕಾಂತದಲ್ಲಿ ಈ ಉರ್ವಶಿಯಿಂದ ಸುಖವಾದೀತೇ? ವಿಪರೀತವಾಗಿ ದುಃಖವೇ ಆಗುವುದು ಎಂದು ಭಾವ.।।೧೭।।

**ಕ್ವಾಯಂ ಮಲೀಮಸಃ ಕಾಯೋ ದೌರ್ಗಂಧಾದ್ಯಾತ್ಮಕೋಽಶುಚಿಃ ।**
**ಕ್ವ ಗುಣಾಃ ಸೌಮನಸ್ಯಾದ್ಯಾ ಹ್ಯಧ್ಯಾಸೋಽವಿದ್ಯಯಾ ಕೃತಃ ।।೧೮।।**

**ಅಯಂ** ಈ ಮೇಲಿನ **ಮಲೀಮಸಃ** ಮಲಿನವಾದ, ಕ್ಷುದ್ರ, ನೀಚವಾದ **ದೌರ್ಗಂಧಾದ್ಯಾತ್ಮಕಃ** ದುರ್ಗಂಧಯುತವಾದ **ಅಶುಚಿಃ** ಅಪವಿತ್ರವಾದ **ಕಾಯಃ** ದೇಹವು **ಕ್ವ** ಎಲ್ಲಿ? ಇಂಥದರಲ್ಲಿ **ಸೌಮನಸ್ಯಾದ್ಯಾಃ ಗುಣಾಃ ಕ್ವ** ಸೌಂದರ್ಯ ಮುಂತಾದ ಗುಣಗಳೆಲ್ಲಿ? (ವಿರುದ್ಧ ದುರ್ಗಂಧಾದಿಗಳಿರುವಾಗ ಸುಗುಣಗಳಿರುವುದೇ ಹೇಗೆ ಸಾಧ್ಯ?) **ಅವಿದ್ಯಯಾ** ಅನಾದಿಯಾದ ಭಗವಂತನ ಅಜ್ಞಾನದಿಂದ **ಅಧ್ಯಾಸಃ ಕೃತಃ** ಅಮಂಗಲವಾದ ದೇಹದಲ್ಲಿ ಮಂಗಲವೆಂಬ ಬುದ್ಧಿ ಮಾಡಲ್ಪಟ್ಟಿತು.।।೧೮।।

ಸರ್ವಸಾಧಾರಣವಾದ ದೇಹದಲ್ಲಿ ಇದು ನನ್ನದೇ ಎಂಬ ಭ್ರಮವನ್ನೂ ತ್ಯಜಿಸಬೇಕು ಎಂದು ಹೇಳುವರು-

**ಪಿತ್ರೋಃ ಕಿಂಸ್ವಿನ್ನು ಭಾರ್ಯಾಯಾಃ ಸ್ವಾಮಿನೋಽಗ್ನೇಃ ಶ್ವಗೃಧ್ರಯೋಃ ।**
**ಕಿಮಾತ್ಮನಃ ಕಿಂ ಸುಹೃದಾಮಿತಿ ಯೋ ನಾವಸೀಯತೇ ।।೧೯।।**

**ತಸ್ಮಿನ್ ಕಲೇವರೇಽಮೇಧ್ಯೇ ತುಚ್ಛನಿಷ್ಠೇ ವಿಷಜ್ಜತೇ ।**
**ಅಹೋ ಸುಭದ್ರಂ ಸುನಸಂ ಸುಸ್ಮಿತಂ ಚ ಮುಖಂ ಸ್ತ್ರಿಯಃ ।।೨೦।।**

**ಯಃ** ಯಾವ ದೇಹವು **ಕಿಂ ಪಿತ್ರೋಃ** ತಂದೆ-ತಾಯಿಗಳ ಅಧೀನವೋ? (ಅವರ ಕೆಲಸಾದಿಗಳನ್ನು ಮಾಡುವುದರಿಂದ) **ಕಿಂಸ್ವಿತ್ ಭಾರ್ಯಾಯಾಃ** ಅಥವಾ ಭೋಗಯೋಗ್ಯವಾದ್ದರಿಂದ ಹೆಂಡತಿಯದೋ? **ಕಿಂ ಸ್ವಾಮಿನಃ** ರಾಜ ಮುಂತಾದವರದೋ? **ಅಗ್ನೇಃ** ದಹನ ಮಾಡುವುದರಿಂದ ಅಗ್ನಿಯದೋ? **ಕಿಂ ಶ್ವಗೃಧ್ರಯೋಃ** ದಿಕ್ಕಿಲ್ಲದವರದು ನಾಯಿ, ನರಿ, ಹದ್ದು,

ಕಾಗೆಗಳದೋ, **ಕಿಂ ಆತ್ಮನಃ** ತನ್ನದೋ? **ಕಿಂ ಸುಹೃದಾಂ** ಸ್ನೇಹಿತರದೋ? **ಇತಿ** ಎಂದು **ನ ಅವಸೀಯತೇ** ನಿಶ್ಚಯಿಸಲಾಗದೋ **ತಸ್ಮಿನ್** ಅಂಥ **ಕಲೇವರೇ** ದೇಹದಲ್ಲಿ **ಅಮೇಧ್ಯೇ** ಅಶುಚಿಯಾದ **ತುಚ್ಛನಿಷ್ಠೇ** ತುಚ್ಛಗಳಾದ ಪಂಚಭೂತಗಳ ಬಾಹುಲ್ಯವುಳ್ಳ ಅಥವಾ ಅನಿಷ್ಟವಾದ ಅವಸ್ಥೆಯುಳ್ಳ ಶರೀರದಲ್ಲಿ **ಸುಭದ್ರಂ** ಮಂಗಲಕರವಾದುದು **ಸುನಸಂ** ಅಂದವಾದ ಮೂಗು **ಸುಸ್ಮಿತಂ** ಮಂದಹಾಸಯುತವು ಆದ **ಸ್ತ್ರಿಯಃ ಮುಖಂ** ಸ್ತ್ರೀಯ ಮುಖವು ಎಂದು **ವಿಷಜ್ಜತೇ** ಆಸಕ್ತನಾಗುವನು.॥೧೯-೨೦॥

**ತ್ವಙ್ಮಾಂಸರುಧಿರಸ್ನಾಯುಮೇದೋಮಜ್ಜಾಸ್ಥಿಸಂಹತೌ ।**
**ವಿಣ್ಮೂತ್ರಪೂಯೇ ರಮತಾಂ ಕೃಮೀಣಾಂ ಕಿಯದಂತರಮ್ ॥೨೧॥**

**ತ್ವಕ್** ಚರ್ಮ, **ಮಾಂಸ** ಮಾಂಸ, **ರುಧಿರ** ರಕ್ತಸ್ನಾಯುಗಳು **ಮಜ್ಜಾ** ಎಲಬಿನೊಳಗಿನ ಸಾರ **ಮೇದ** ಕೊಬ್ಬು ಮಾಂಸದಿಂದ ಉಂಟಾದುದು ಎಲುಬುಗಳ ಸಮೂಹವಾದ ದೇಹದಲ್ಲಿ **ರಮತಾಂ** ಆನಂದಿಸುವವರಿಗೂ **ವಿಣ್ಮೂತ್ರಪೂಯೇ** ಮಲಮೂತ್ರಕೀವುಗಳಲ್ಲಿ ಹೊರಳಾಡುವ **ಕೃಮೀಣಾಂ** ಹುಳುಗಳಿಗೂ ಏನು ಅಂತರವಿದೆ. ಏನೂ ಇಲ್ಲವೆಂದು ಭಾವ.॥೨೧॥

**ಅಥಾಪಿ ನೋ ವಿಷಜ್ಜೇತ ಸ್ತ್ರೀಷು ಸ್ತ್ರೈಣೇಷು ಚಾರ್ಥವಿತ್ ।**
**ವಿಷಯೇಂದ್ರಿಯಸಂಯೋಗಾನ್ಮನಃ ಕ್ಷುಭ್ಯತಿ ನಾನ್ಯದಾ ॥೨೨॥**

**ವಿಷಯೇಂದ್ರಿಯಸಂಯೋಗಾತ್** ಪದಾರ್ಥಗಳಿಗೂ ಇಂದ್ರಿಯಗಳಿಗೂ ಸಂಬಂಧವಾದಾಗ **ಮನಃ** ಮನಸ್ಸು **ಕ್ಷುಭ್ಯತಿ** ಕ್ಷೋಭೆಗೊಳ್ಳುವುದು **ಅನ್ಯದಾ** ವಿಷಯಸಂಬಂಧವಿಲ್ಲದಾಗ ನಮಗೆ ಕ್ಷೋಭವಾಗುವುದಿಲ್ಲ **ಅಥ** ಆದಕಾರಣ **ಅರ್ಥವಿತ್** ತನಗೆ ಒಳ್ಳೆಯ ಪ್ರಯೋಜನವಾಗಬೇಕೆಂಬ ತಿಳುವಳಿಕೆಯುಳ್ಳವನು **ಸ್ತ್ರೀಷು** ಸ್ತ್ರೀಯರಲ್ಲಾಗಲಿ **ಸ್ತ್ರೈಣೇಷು** ಲೋಲುಪರಲ್ಲಿ ಆಗಲಿ **ನೋ ವಿಷಜ್ಜೇತ** ಆಸಕ್ತನಾಗಬಾರದು.॥೨೨॥

**ಅದೃಷ್ಟಾದಶ್ರುತಾದ್ ಭಾವಾನ್ನ ಭಾವ ಉಪಜಾಯತೇ ।**
**ಅಸಂಪ್ರಯುಂಜತಃ ಪ್ರಾಣಾನ್ ಶಾಮ್ಯತಿ ಸ್ತಿಮಿತಂ ಮನಃ ॥೨೩॥**

**ಅದೃಷ್ಟಾತ್** ನೋಡದಿರುವ **ಅಶ್ರುತಾತ್** ಕೇಳದಿರುವ **ಭಾವಾತ್** ಪದಾರ್ಥಗಳಿಂದ **ಭಾವಃ** ಸಂಸ್ಕಾರವಾಗಲಿ ರಾಗದ್ವೇಷವಾಗಲಿ **ನ ಉಪಜಾಯತೇ**

ಹುಟ್ಟುವುದಿಲ್ಲ. ವಿಷಯಗಳ ಜ್ಞಾನವಾದಾಗಲೇ ಸಂಸ್ಕಾರಾದಿಗಳು ರಾಗಾದಿಗಳು ಉಂಟಾಗಿ ಮನಸ್ಸಿಗೆ ಕ್ಷೋಭವಾಗುವುದು. **ಪ್ರಾಣಾನ್** ಇಂದ್ರಿಯಗಳನ್ನು **ಅಸಂಪ್ರಯುಂಜತಃ** ವಿಷಯಗಳ ಕಡೆಗೆ ಹರಿಬಿಡದೇ ತನ್ನ ವಶದಲ್ಲಿ ಇಟ್ಟುಕೊಂಡಾಗ **ಸ್ಥಿಮಿತಂ ಮನಃ** ನಿಶ್ಚಲವಾದ ಮನಸ್ಸು **ಶಾಮ್ಯತಿ** ಭಗವನ್ನಿಷ್ಠವಾಗುವುದು.।।೨೩।।

**ತಸ್ಮಾತ್ಸಂಗೋ ನ ಕರ್ತವ್ಯಃ ಸ್ತ್ರೀಷು ಸ್ತ್ರೈಣೇಷು ಚೇಂದ್ರಿಯೈಃ ।**
**ವಿದುಷಾಂ ಚಾಪ್ಯವಿಶ್ರಭ್ಯಃ ಷಡ್ವರ್ಗಃ ಕಿಮು ಮಾದೃಶಾಮ್ ।।೨೪।।**

**ತಸ್ಮಾತ್** ವಿಷಯಸಂಗದಿಂದ ಮನೋವಿಕಾರವಾಗುವ **ಮಾದೃಶಾಂ** ಮತ್ಸದೃಶರಾದ **ಸ್ತ್ರೀಷು** ಸ್ತ್ರೀಯರಲ್ಲಿ **ಸ್ತ್ರೈಣೇಷು** ಸ್ತ್ರೀಲೋಲುಪರಲ್ಲಿಯೂ **ಇಂದ್ರಿಯೈಃ** ಇಂದ್ರಿಯಗಳಿಂದ **ಸಂಗಃ ನ ಕರ್ತವ್ಯಃ** ನೋಡಬಾರದು, ಕೇಳಬಾರದು, ಮುಟ್ಟಬಾರದು, ಆಸ್ವಾದಿಸಬಾರದು **ವಿದುಷಾಂ ಅಪಿ** ವಿಷಯಗಳ ದೋಷಜ್ಞಾನವಿರುವ ವಿದ್ವಾಂಸರಿಂದಲೂ ಕೂಡ **ಷಡ್ವರ್ಗಃ** ಆರು ಇಂದ್ರಿಯಗಳ ಸಮೂಹವು **ಅವಿಶ್ರಭ್ಯಃ** ನನ್ನಿಂದ ಗೆಲ್ಲಲ್ಪಟ್ಟಿವೆ ಎಂದು ವಿಶ್ವಸನೀಯವಲ್ಲ ಅಂದಮೇಲೆ **ಕಿಮು ಮಾದೃಶಾಂ** ನನ್ನಂಥವರ ಪಾಡೇನು?।।೨೪।।

**ಶ್ರೀಭಗವಾನುವಾಚ -**

**ಏವಂ ಪ್ರಗಾಯನ್ ನೃಪದೇವದೇವಃ**
**ಸ ಉರ್ವಶೀಲೋಕಮಥೋ ವಿಹಾಯ ।**
**ಆತ್ಮಾನಮಾತ್ಮನ್ಯವಗಮ್ಯ ಮಾಂ ವೈ**
**ಉಪಾರಮದ್ ಜ್ಞಾನವಿಧೂತಮೋಹಃ ।।೨೫।।**

**ಏವಂ** ಈ ರೀತಿಯಾಗಿ **ಪ್ರಗಾಯನ್** ಹೇಳುತ್ತ **ನೃಪದೇವದೇವಃ** ರಾಜರಿಂದ ಪೂಜ್ಯರಾದವರಿಂದಲೂ ಪೂಜ್ಯನಾದ **ಸಃ** ಪೂರೂರವನು **ಉರ್ವಶೀಲೋಕಂ** ಉರ್ವಶಿಯ ಚಿಂತೆಯನ್ನು (ದೇಹವನ್ನು) **ವಿಹಾಯ** ಬಿಟ್ಟು **ಆತ್ಮನಿ** ತನ್ನ ಹೃದಯದಲ್ಲಿ **ಆತ್ಮಾನಂ ಮಾಂ** ಅಂತರ್ಯಾಮಿಯಾದ ನನ್ನನ್ನು **ಅವಗಮ್ಯ** ಕಂಡು **ಜ್ಞಾನವಿಧೂತಮೋಹಃ** ನನ್ನ ಅಪರೋಕ್ಷಜ್ಞಾನದಿಂದ ಅಹಂಕಾರ ಮಮಕಾರಗಳನ್ನು ತೊರೆದು **ಉಪಾರಮತ್** ಸಮಾಧಿಯನ್ನು ಪಡೆದನು.

ಹುಟ್ಟಿದಾಗಿನಿಂದ ಅಭ್ಯಾಸವಾದ ದುಃಸಂಗವನ್ನು ಬಿಡುವುದು ಸಾಧ್ಯವಿಲ್ಲ ಎನ್ನಬೇಡ. ಸತ್ಸಂಗದಿಂದ ತನ್ನಷ್ಟಕ್ಕೆ ತಾನೇ ಶಿಥಿಲವಾದ ದುಃಸಂಗತ್ಯಾಗವು ಸುಲಭವೇ ಆಗಿದೆ ಎಂದು ಹೇಳುವನು.

**ತತೋ ದುಃಸಂಗಮುತ್ಸೃಜ್ಯ ಸತ್ಸು ಸಜ್ಜೇತ ಬುದ್ಧಿಮಾನ್ ।**
**ಸಂತ ಏವಾಸ್ಯ ಛಿಂದಂತಿ ಮನೋವ್ಯಾಸಂಗಮುಕ್ತಿಭಿಃ ॥೨೬॥**

**ತತಃ** ಹುಲ್ಲಿನಿಂದ ಮುಚ್ಚಿದ್ದ, ಮೇಲೆ ಬರಲು ಹಿಡಿದುಕೊಳ್ಳಲೂ ಅವಕಾಶವಿಲ್ಲದ ಬಾವಿಯಲ್ಲಿ ಬಿದ್ದಂತೆ ದುಃಸಂಗವು ದುಃಖಕರವಾದುದರಿಂದ, **ದುಃಸಂಗಂ ಉತ್ಸೃಜ್ಯ** ದುಷ್ಟಸಹವಾಸವನ್ನು ಬಿಟ್ಟು **ಬುದ್ಧಿಮಾನ್** ಬುದ್ಧಿವಂತನಾದವನು **ಸತ್ಸು** ಸಜ್ಜನರಲ್ಲಿ **ಸಜ್ಜೇತ** ಸಂಗವನ್ನು ಬೆಳೆಸಬೇಕು. **ಸಂತಃ ಏವ** ಸಜ್ಜನರೇ **ಅಸ್ಯ** ಮನಸ್ಸು-ಮಾತು-ಮೈಗಳಿಂದ ಶರಣಾಗತನಾದ-ವನಿಗೆ **ಉಕ್ತಿಭಿಃ** ವಿಷಯಗಳಲ್ಲಿ ದೋಷಗಳನ್ನು ತಿಳಿಸುವ ವಚನಗಳಿಂದ **ಮನೋವ್ಯಾಸಂಗಂ ಛಿಂದಂತಿ** ದುಷ್ಟಸಂಗವನ್ನು (ಭಗವಂತನ ಮಾಹಾತ್ಮ್ಯ ಕೇಳದಿರುವುದೆಂಬ ದೋಷವನ್ನು ನಾಶಮಾಡುವರು.॥೨೬॥

ಸಜ್ಜನರ ಲಕ್ಷಣ ಹೇಳುವರು-

**ಸಂತೋಽನಪೇಕ್ಷಾ ಮಚ್ಚಿತ್ತಾಃ ಪ್ರಶಾಂತಾ ಸಮದರ್ಶನಾಃ ।**
**ನಿರ್ಮಮಾ ನಿರಹಂಕಾರಾ ನಿರ್ದ್ವಂದ್ವಾ ನಿಷ್ಪರಿಗ್ರಹಾಃ ॥೨೭॥**

**ಅನಪೇಕ್ಷಃ** ವಿಷಯಾಭಿಲಾಷೆ ಇಲ್ಲದವರೂ **ಮಚ್ಚಿತ್ತಾಃ** ನನ್ನಲ್ಲಿ ಆಸಕ್ತವಾದ ಮನಸ್ಸುಳ್ಳವರು **ಪ್ರಶಾಂತಾಃ** ಅತ್ಯಂತ ಕ್ರೋಧರಹಿತರೂ **ಸಮದರ್ಶಿನಃ** ಗೀತೆಯಲ್ಲಿ ಹೇಳಿದಂತೆ ಸರ್ವತ್ರ ಶ್ರೀಹರಿಯನ್ನು ಕಾಣುವವರೂ **ನಿರ್ಮಮಾಃ** ನನ್ನದೆಂಬ ಭಾವವಿಲ್ಲದವರು **ನಿರಹಂಕಾರಾಃ** ನಾನೇ ಮಾಡುವೆನು ಎಂಬ ಭಾವವಿಲ್ಲದವರು.(ಕರ್ತೃತ್ವಾಭಿಮಾನ, ಸ್ವಾಮಿತ್ವಾಭಿಮಾನ ಇಲ್ಲದವರು) **ನಿರ್ದ್ವಂದ್ವಾಃ** ಮಾನಾವಮಾನ ಮುಂತಾದ ದ್ವಂದ್ವಗಳನ್ನು ಸಹನೆ ಮಾಡುವವರು **ನಿಷ್ಪರಿಗ್ರಹಾಃ** ಹರಿಪೂಜಾವಿರುದ್ಧವಾದ ಪದಾರ್ಥಗಳನ್ನು ಸ್ವೀಕರಿಸದವರು **ಸಂತಃ** ಸಜ್ಜನರು.॥೨೭॥

**ತೇಷು ನಿತ್ಯಂ ಮಹಾಭಾಗ ಮಹಾಭಾಗೇಷು ಮತ್ಕಥಾಃ ।**
**ಸಂಭವಂತಿ ಹಿತಾ ನೃಣಾಂ ಜುಷತಾಂ ಪ್ರಪುನಂತ್ಯಘಮ್ ॥೨೮॥**

**ಹೇ ಮಹಾಭಾಗ** ಅತ್ಯುಪಾದೇಯನಾದ ಉದ್ಧವನೇ! **ಮಹಾಭಾಗೇಷು ತೇಷು** ಮಹಾತ್ಮರಾದ ಸಜ್ಜನರಲ್ಲಿ **ನಿತ್ಯಂ** ಯಾವಾಗಲೂ **ನೃಣಾಂ** ಜನರಿಗೆ **ಹಿತಾಃ** ಮಂಗಲದಾಯಕಗಳಾದ **ಮತ್ಕಥಾಃ** ನನ್ನ ಕಥಾಗಳು **ಸಂಭವಂತಿ** ನಡೆಯುವವು **ಜುಷತಾಂ** ಅವುಗಳನ್ನು ಕೇಳುವವರ **ಅಘಂ** ಪಾಪವನ್ನು **ಪ್ರಘುನಂತಿ** ನಾಶಗೊಳಿಸುವವು.।।೨೮।।

**ತಾ ಯೇ ಶೃಣ್ವಂತಿ ಗಾಯಂತಿ ಹ್ಯನುಮೋದಂತಿ ಚಾದೃತಾಃ ।**
**ಮತ್ಪರಾಃ ಶ್ರದ್ದಧಾನಾಶ್ಚ ಭಕ್ತಿಂ ವಿಂದಂತಿ ತೇ ಮಯಿ ।।೨೯।।**

**ಯೇ** ಯಾರು **ತಾಃ** ನನ್ನ ಕಥೆಗಳನ್ನು **ಶೃಣ್ವಂತಿ** ಕೇಳುವರು **ಗಾಯಂತಿ** ಹೇಳುವರು **ಆದೃತಾಃ** ಆದರದಿಂದ **ಅನುಮೋದಂತಿ ಚ** ಶ್ಲಾಘಿಸುವರೋ **ತೇ** ಅವರು **ಮತ್ಪರಾಃ** ನನ್ನ ಸರ್ವೋತ್ತಮತ್ವವನ್ನು ಅರಿತವರಾಗಿ **ಶ್ರದ್ದಧಾನಾಃ** ಶ್ರದ್ಧೆಯುಳ್ಳವರಾಗಿ **ಮಯಿ** ನನ್ನಲ್ಲಿ **ಭಕ್ತಿಂ ವಿಂದಂತಿ** ಭಕ್ತಿಯನ್ನು ಪಡೆಯುವರು.।।೨೯।।

**ಭಕ್ತಿಂ ಲಬ್ಧವತಃ ಸಾಧೋ ಕಿಮನ್ಯದವಶಿಷ್ಯತೇ ।**
**ಮಯ್ಯನಂತಗುಣೇ ಬ್ರಹ್ಮಣ್ಯಾನಂದಾನುಭವಾತ್ಮನಿ ।।೩೦।।**

**ಅನಂತಗುಣೇ** ಅಸಂಖ್ಯ ಗುಣಗಳಿಂದ ಪೂರ್ಣನಾದ **ಆನಂದಾನುಭವಾತ್ಮನಿ** ಸುಖಜ್ಞಾನಸ್ವರೂಪನಾದ **ಬ್ರಹ್ಮಣಿ** ಪೂರ್ಣನಾದ **ಮಯಿ** ನನ್ನಲ್ಲಿ **ಭಕ್ತಿಂ ಲಬ್ಧವತಃ** ಭಕ್ತಿಯನ್ನು ಪಡೆದವನಿಗೆ **ಹೇ ಸಾಧೋ** ಉದ್ಧವನೇ **ಅನ್ಯತ್ ಕಿಂ ಅವಶಿಷ್ಯತೇ** ಸಾಧಿಸಬೇಕಾದುದು ಯಾವುದು ಉಳಿದೀತು? ಯಾವುದು ಉಳಿಯಲಾರದು? ಭಕ್ತಿಯೇ ಪುರುಷಾರ್ಥಸಾಧನಗಳಲ್ಲಿ ಶ್ರೇಷ್ಠವಾದುದರಿಂದ ಎಲ್ಲ ಅಭೀಷ್ಟ ನೆರವೇರುವುದು ಎಂದು ಭಾವ.।।೩೦।।

**ಯಥೋಪಾಶ್ರಯಮಾಣಸ್ಯ ಭಗವಂತಂ ವಿಭಾವಸುಮ್ ।**
**ಶೀತಂ ಭಯಂ ತಮೋ ವ್ಯೇತಿ ಸಾಧುಂ ಸಂಸೇವತಸ್ತಥಾ ।।೩೧।।**

**ಭಗವಂತಂ** ಪೂಜ್ಯನಾದ **ವಿಭಾವಸುಂ** ಅಗ್ನಿಯನ್ನು **ಉಪಾಶ್ರಯಮಾಣಸ್ಯ** ಆಶ್ರಯಿಸಿದವನಿಗೆ **ಯಥಾ** ಹೇಗೆ **ಶೀತಂ** ಚಳಿಯೂ **ಭಯಂ** ಅಡವಿಯಲ್ಲಿ ಹಾವು ಮುಂತಾದ ಪ್ರಾಣಭಯವೂ **ತಮಃ** ಕತ್ತಲೆಯೂ **ವ್ಯೇತಿ** ಹೋಗುವವೋ **ತಥಾ** ಹಾಗೆಯೇ **ಸಾಧುಂ ಸಂಸೇವತಃ** ಸಜ್ಜನರನ್ನು ಸೇವಿಸುವವನಿಗೆ ಮನೋವ್ಯಾಸಂಗಾದಿಗಳು ದೂರವಾಗುವವು.।।೩೧।।

**ನಿಮಜ್ಜ್ಯೋನ್ಮಜ್ಜತಾಂ ಘೋರೇ ಭವಾಬ್ಧೌ ತೇ ಪರಾಯಣಮ್ ।**
**ಸಂತೋ ಬ್ರಹ್ಮವಿದಃ ಶಾಂತಾ ನೌರ್ದೃಢೇವಾಪ್ಸು ಮಜ್ಜತಾಮ್ ॥೩೨॥**

**ಘೋರೇ** ಕಠಿಣವಾದ **ಭವಾಬ್ಧೌ** ಸಂಸಾರಸಾಗರದಲ್ಲಿ **ನಿಮಜ್ಜ್ಯ ಉನ್ಮಜ್ಜತಾಂ** ಮುಳುಗಿ ಏಳುವವರಿಗೆ **ಅಪ್ಸು ಮಜ್ಜತಾಂ** ನೀರಲ್ಲಿ ಮುಳುಗುವವರಿಗೆ **ದೃಢಾ ನೌರಿವ** ಗಟ್ಟಿಯಾದ ದೋಣಿಯಂತೆ **ಶಾಂತಾಃ** ಭಗವನ್ನಿಷ್ಠರಾದ **ಬ್ರಹ್ಮವಿದಃ** ಬ್ರಹ್ಮ ಜ್ಞಾನಿಗಳಾದ **ತೇ ಸಂತಃ** ಆ ಸಜ್ಜನರು **ಪರಾಯಣಂ** ಆಶ್ರಯರಾಗಿದ್ದಾರೆ. (ನರಕಪ್ರಾಪ್ತಿಯು ನಿಮಜ್ಜನವೆಂದು ಅಲ್ಲಿಂದೇಳುವುದು ಸ್ವರ್ಗಪ್ರಾಪ್ತಿಯು ಉನ್ಮಜ್ಜನವು ಎಂದು ತಿಳಿಯಬಹುದು.)

**ಅನ್ನಂ ಹಿ ಪ್ರಾಣಿನಾಂ ಪ್ರಾಣ ಆರ್ತಾನಾಂ ಶರಣಂ ತ್ವಹಮ್ ।**
**ಧರ್ಮೋವಿತ್ತಂನೃಣಾಂಪ್ರೇತ್ಯ ಸಂತೋಽತೋಬಿಭ್ಯತೋಽರಣಮ್॥೩೩॥**

(ಲುಪ್ತೋಪಮಾ) ಹೇಗೆ **ಪ್ರಾಣಿನಾಂ** ಹಸಿದ ಜನರಿಗೆ **ಅನ್ನಂ** ಅನ್ನವು **ಪ್ರಾಣಂ** ಚೇಷ್ಟಾಪ್ರದವೋ **ಆರ್ತಾನಾಂ** ದುಃಖಿತರಿಗೆ **ಅಹಂ** ನಾನು **ಶರಣಂ** ರಕ್ಷಕನೋ **ಪ್ರೇತ್ಯ** ಮರಣಾನಂತರ **ಧರ್ಮಃ** ಪುಣ್ಯವು **ವಿತ್ತಂ** ಸುಖಸಾಧನವೋ ಹಾಗೆ **ಅತಃ** ಸಂಸಾರದಿಂದ **ಬಿಭ್ಯತಃ** ಹೆದರುವ **ನೃಣಾಂ** ಜನರಿಗೆ **ಸಂತಃ** ಸಜ್ಜನರು **ಅರಣಂ** ರಕ್ಷಕರು.॥೩೩॥

**ಸಂತೋ ದಿಶಂತಿ ಚಕ್ಷೂಂಷಿ ಬಹಿರರ್ಕಃ ಸಮುತ್ಥಿತಃ ।**
**ದೇವತಾ ಬಾಂಧವಾಃ ಸಂತಃ ಪಿತಾ ಮಾತಾಽಹಮೇವ ಚ ॥೩೪॥**

**ಸಮುತ್ಥಿತಃ ಅರ್ಕಃ** ಉದಯಿಸಿದ ಸೂರ್ಯನು **ಬಹಿಃ ಚಕ್ಷೂಂಷಿ ದಿಶತಿ** ಪ್ರಕಾಶವನ್ನು ನೀಡವುದರ ಮೂಲಕ ಕಣ್ಣಿಗೆ ಕಾಣಲು 'ಯೋಗ್ಯವಾದ ಪದಾರ್ಥ ಜ್ಞಾನವನ್ನು ಮಾಡಿಕೊಡುವನು **ಸಂತಃ** ಸಜ್ಜನರು **ಚಕ್ಷೂಂಷಿ** ಪರಾಪರ ತತ್ವಜ್ಞಾನವನ್ನು **ದಿಶಂತಿ** ಕೊಡುವರು. ಸೂರ್ಯನಗಿಂತ ವಿಲಕ್ಷಣರು ಸಜ್ಜನರು. **ದೇವತಾ** ದೇವತೆಯು **ಬಾಂಧವಾಃ** ಬಂಧುಗಳು **ಸಂತಃ** ಸಜ್ಜನರು **ಪಿತಾ** ತಂದೆಯು **ಮಾತಾ ಚ** ತಾಯಿಯೂ **ಅಹಮೇವ** ನಾನೇ ಎಂದರ್ಥ.

ಯದ್ಯಪಿ ಹಿಂದೆ ''ಸಂತೋಽನಪೇಕ್ಷಾಃ'' ಮುಂತಾಗಿ ಸಜ್ಜನರನ್ನು ನಿರೂಪಿಸುವರು. ವಸ್ತುತಃ ಮುಖ್ಯವಾಗಿ ದೇವತಾ, ಬಾಂಧವ, ತಂದೆ,

ತಾಯಿ ಹೇಗೋ ಹಾಗೆ ನಾನೇ ಮುಖ್ಯ ಸಜ್ಜನನೆಂದು ಈ ಶ್ಲೋಕದ ಉತ್ತರಾರ್ಧದ ಅಭಿಪ್ರಾಯ ಆದರೆ,

**ಅಧಿದೈವಂ ಸ ಏವೈಕ ಆಧಿಕ್ಯಾತ್ ಪುರುಷೋತ್ತಮಃ ।**
**ದೇವಮಾತ್ರಾಸ್ತದನ್ಯೇ ತು,**
**ಮಾಂ ರಕ್ಷತು ವಿಭುರ್ನಿತ್ಯಂ ಪುತ್ರೋಽಹಂ ಪರಮಾತ್ಮನಃ ।**
**ಪುತ್ರಭ್ರಾತೃಸಖಿತ್ವೇನ ಸ್ವಾಮಿತ್ವೇನ ಯತೋ ಹರಿಃ ।**

ಮುಂತಾದ ವಚನಗಳಿಂದ ಕೃಷ್ಣನು ಕೆಲವರಿಗೆ ದೇವತಾ, ಕೆಲವರಿಗೆ ಬಾಂಧವನು, ತಂದೆಯು, ತಾಯಿಯು, ಆಗಬಹುದು. ಸಜ್ಜನನು ನಾನೇ ಎಂದು ಸಜ್ಜನರಿಂದ ಭಗವಂತನಿಗೆ ಅಭೇದ ಹೇಳಿದುದು ಬಾಧಿತವಾದುದರಿಂದ ಆಯುಕ್ತ ಎಂದರೆ, ಹೇಳುವರು-

**ತಾತ್ಪರ್ಯ- ಭಗವತೋಽಪಿ ಸತಾಂ ಮಧ್ಯೇ ಪ್ರಧಾನತ್ವಾತ್**
**ಸಂತೋಽಹಮೇವ ಚೇತ್ಯುಕ್ತಮ್ ।**

**ವಿಷ್ಣೋಶ್ಚ ಸತ್ಪ್ರಧಾನತ್ವಾನ್ನ ಸತಾಂ ವಿದ್ಯತೇ ಪರಮ್ ।**
**ಇತ್ಯಾಹುರ್ವೇದವಿದುಷಃ ಸ ಹಿ ಸರ್ವೇಶ್ವರೇಶ್ವರಃ ॥ ಇತಿ ಚ ।**

ಸಜ್ಜನರಲ್ಲಿ ಭಗವಂತನು ಪ್ರಧಾನನಾದುದರಿಂದ ರಾಜಾ ರಾಷ್ಟ್ರಂ ಅಯಮೇವ ಗ್ರಾಮಃ ಎಂಬಂತೆ ಪ್ರಾಧಾನ್ಯನಿಮಿತ್ತಕವಾಗಿ ಸಂತಃ ಅಹಂ ಎಂದು ಅಭೇದ ಹೇಳಿದ್ದು ಯುಕ್ತವೇ ಆಗಿದೆ.

ಇಲ್ಲಿ ಹೀಗೆ ಹೇಳಬಹುದು. ಹಲವು ಸ್ಥಳದಲ್ಲಿ ಸಜ್ಜನರಿಗಿಂತ ಉತ್ತಮವಸ್ತು ಬೇರೆ ಇಲ್ಲವೆಂದು ಹೇಳಲ್ಪಟ್ಟಿರುತ್ತದೆ. ಅಂಥ ಸ್ಥಳದಲ್ಲಿ ಅವಶ್ಯವಾಗಿ ಭಗವದಭೇದ ಸಂತರಿಗೆ ಹೇಳಬೇಕಲ್ಲ? ಅದರಂತೆ ಇಲ್ಲಿಯೂ ಏಕೆ ಹೇಳಬಾರದು? ಎಂದರೆ ಆ ಮಾತುಗಳಿಗೂ ಇದೇ ಅರ್ಥ ಎಂದು ಪ್ರಮಾಣ ಹೇಳಿರುವರು. ವಿಷ್ಣುವು ಸತ್ಪ್ರಧಾನನಾದುದರಿಂದ ಸಜ್ಜನರ ಮಧ್ಯದಲ್ಲಿ ಪ್ರಧಾನನಾದುದರಿದ ಸಜ್ಜನರಿಗಿಂತಲೂ ಉತ್ತಮ ಎಂದು ಹೇಳಲಾಗಿದೆ. ಸಜ್ಜನರಿಗೂ ಭಗವಂತನಿಗೂ ಅಭೇದವಿದ್ದುದರಿಂದಾಗಿ ಅಲ್ಲ. ಹರ್ಯಭೇದವು ಸಜ್ಜನರಿಗೆ ಬಾಧಿತವಾದುದು ಎಂದು ಭಾವ.

ಸಂತಃ ಅಹಮೇವ ಎಂದು ಅನುವಾದ ಮಾಡಿದ್ದರಿಂದ ಈ ರೀತಿ ಯೋಜನಾ ಸೂಚಿತವಾಗುವುದು **ಸಂತಃ** ಸಜ್ಜನರು **ದೇವತಾಃ** ದೇವನಿಗೆ ಅಧಿಷ್ಠಾನ-ರಾದ್ದರಿಂದ ದೇವತೆಗಳೆನಿಸುವರು. ನಿರುಪಾಧಿಕಸ್ನೇಹವಿರುವುದರಿಂದ ಬಾಂಧವರು, ಪಾಲಕರಾದ್ದರಿಂದ **ಪಿತಾ** ಸ್ವರೂಪನಿರ್ಮಾತೃವಾದ್ದರಿಂದ **ಮಾತಾ** (ಉದ್ದೇಶ್ಯ ವಿಧೇಯಭಾವವಿರುವುದರಿಂದ ಲಿಂಗವ್ಯತ್ಯಾಸ ದೋಷವಿಲ್ಲ. ಅಂತಹ ಸಂತಃ ಅಹಮೇವ ಎಂದು ಯೋಜನಾ.

ತಾನು ಹೇಳಿದ್ದನ್ನು ಇತಿಹಾಸದಿಂದ ಜೋಡಿಸುವನು-

**ಚೇತಸೇಲಾಸುತೋಽಪ್ಯೇವಮುರ್ವಶ್ಯಾ ಲೋಕನಿಃಸ್ಪೃಹಃ ।**
**ಮುಕ್ತಸಂಗೋ ಮಹೀಮೇತಾಮಾತ್ಮಾರಾಮಶ್ಚಚಾರ ಹ ॥೩೫॥**

**ಇಲಾಸುತಃ** ಪುರೂರವನು **ಚೇತಸಾ** ಮನಸ್ಸಿನಿಂದ **ಏವಂ** ಈ ರೀತಿ ವಿಚಾರ ಮಾಡಿ **ಉರ್ವಶ್ಯಾಃ** ಉರ್ವಶಿಯ **ಲೋಕನಿಸ್ಪೃಹಃ** ದೇಹದಲ್ಲಿ ವಿರಕ್ತನಾಗಿ **ಮುಕ್ತಸಂಗಃ** ವಿಷಯಾಸಕ್ತಿರಹಿತನಾಗಿ **ಆತ್ಮಾರಾಮಃ** ಭಗವಂತನಲ್ಲಿಯೇ ಸುಖಿಸುತ್ತ **ಏತಾಂ ಮಹೀಂ ಚಚಾರ** ಈ ಭೂಮಂಡಲವನ್ನು ಸಂಚರಿಸಿದನು. ಆದ ಕಾರಣ ಮುಮುಕ್ಷು ಆದವನು ಮುಕ್ತಸಂಗನು ಆತ್ಮಾರಾಮನು ಆಗಿರಬೇಕು ಎಂದು ಭಾವ.॥೩೫॥

**॥ ಇತಿ ಶ್ರೀಮದ್ಭಾಗವತೇ ಏಕಾದಶಸ್ಕಂಧೇ ಷಡ್ವಿಂಶೋಽಧ್ಯಾಯಃ ॥**

★★★

## ಅಥ ಸಪ್ತವಿಂಶೋಽಧ್ಯಾಯಃ

ಕರ್ಮಾನುಷ್ಠಾನ ಪ್ರಕಾರವನ್ನು ಈ ಅಧ್ಯಾಯದಲ್ಲಿ ವಿಸ್ತರಿಸುವರು. ಉದ್ಧವನು ಸಂಕ್ಷೇಪವಾಗಿ ಹೇಳಿದ ಕ್ರಿಯಾಯೋಗವನ್ನು ವಿಸ್ತಾರವಾಗಿ ತಿಳಿಯಲು ಪ್ರಶ್ನಿಸುವನು-

**ಕ್ರಿಯಾಯೋಗಂ ಸಮಾಚಕ್ಷ್ವ ಭವದಾರಾಧನಂ ಪ್ರಭೋ ।**
**ಯೇನ ತ್ವಾಂ ಯೇ ಯಥಾಽರ್ಚಂತಿ ಸಾತ್ವತಾಃ ಸಾತ್ವತರ್ಷಭ ॥೧॥**

**ಏತದ್ವದಂತಿ ಮುನಯೋ ಮುಹುರ್ನಿಃಶ್ರೇಯಸಂ ನೃಣಾಮ್ ।**
**ನಾರದೋ ಭಗವಾನ್ ವ್ಯಾಸ ಆಚಾರ್ಯೋಽಂಗಿರಸಾಂ ಸುತಃ ॥೨॥**

**ಸಾತ್ವತರ್ಷಭ** ಯಾದವಶ್ರೇಷ್ಠನಾದ ಶ್ರೀಕೃಷ್ಣನೇ **ಪ್ರಭೋ** ಸ್ವಾಮಿಯೇ **ಸಾತ್ವತಾಃ** ಪಂಚರಾತ್ರವನ್ನು ತಿಳಿದವರು **ಯೇನ** ಯಾವ ಕರ್ಮದಿಂದ **ಯಥಾ** ಹೇಗೆ **ಅರ್ಚಂತಿ** ಪೂಜಿಸುವರೋ ಅಂಥ **ಭವದಾರಾಧನಂ** ನಿನ್ನ ಪೂಜಾ ರೂಪವಾದ **ಕ್ರಿಯಾಯೋಗಂ** ಕ್ರಿಯಾರೂಪವಾದ ಉಪಾಯವನ್ನು **ಸಮಾಚಕ್ಷ್ವ** ಹೇಳು.

ಕ್ರಿಯಾ ತು ನಿಷ್ಕೃತೌ ಶಿಕ್ಷಾಚಿಕಿತ್ಸೋಪಾಯಕರ್ಮಸು ।
ಕರಣಾರಂಭಪೂಜಾಸು ಸಂಪ್ರಧಾರಯ ಚೇಷ್ಟಯೋಃ ॥

ಎಂದು ಕ್ರಿಯಾಶಬ್ದಕ್ಕೆ ಅನೇಕ ಅರ್ಥಗಳಿರುವುದರಿಂದ ತನಗೆ ಬೇಕಾದ ಕ್ರಿಯೆಯನ್ನು ಭವದಾರಾಧನಂ ಎಂಬುದರಿಂದ ವಿವರಿಸಿರುವನು.

''ಸಾತ್ವತೌ ತೌ ಪರಿಜ್ಞೇಯೌ ಪಂಚರಾತ್ರಜ್ಞಯಾದವೌ'' ಎಂದು ವಚನವಿರುವುದು. ॥೧॥

ಇದನ್ನೇ ಏಕೆ ಹೇಳಬೇಕು? ಬೇರೆದನ್ನು ಏಕೆ ಹೇಳಬಾರದು? ಎಂದರೆ ಕಾರಣ ಹೇಳುವನು-

**ನಾರದಃ** ನಾರದರು **ಭಗವಾನ್ ವ್ಯಾಸಃ** ಷಡ್ಗುಣಪೂರ್ಣರಾದ ವ್ಯಾಸರು **ಅಂಗಿರಸಾಂ ಸುತಃ ಆಚಾರ್ಯಃ** ಅಂಗಿರಸಪುತ್ರರಾದ ನಮ್ಮ ಗುರುವಾದ ಬೃಹಸ್ಪತ್ಯಾಚಾರ್ಯರು ಮುಂತಾದ **ಮುನಯಃ** ಮುನಿಗಳು **ಏತತ್** ನಿನ್ನ ಆ

ಭಗವದರ್ಚನೆಯನ್ನು **ಮುಹುಃ** ಮತ್ತೆ ಮತ್ತೆ **ನೃಣಾಂ ನಿಃಶ್ರೇಯಸಂ ವದಂತಿ** ಜನರಿಗೆ ಮೋಕ್ಷಸಾಧನವೆಂದು ಹೇಳುವರು.।।೨।।

ಮುಂದೆ ಹೇಳುವ ಕಾರಣದಿಂದಲೂ ಭಗವದಾರಾಧನರೂಪಕ್ರಿಯಾ ಯೋಗವನ್ನೇ ಕೇಳಬೇಕು ಎಂದು ಹೇಳುವನು-

**ನಿಸ್ಸೃತಂ ತೇ ಮುಖಾಂಭೋಜಾದ್ಯದಾಹ ಭಗವಾನಜಃ ।**
**ಪುತ್ರೇಭ್ಯೋ ಭೃಗುಮುಖ್ಯೇಭ್ಯೋ ದೇವ್ಯೈ ಚ ಭಗವಾನ್ ಭವಃ ।।೩।।**

**ಏತದ್ವೈ ಸರ್ವವರ್ಣಾನಾಮಾಶ್ರಮಣಾಂ ಚ ಸಮ್ಮತಮ್ ।**
**ಶ್ರೇಯಸಾಮುತ್ತಮಂ ಮನ್ಯೇ ಸ್ತ್ರೀಶೂದ್ರಾಣಾಂ ಚ ಮಾನದ ।।೪।।**

**ಏತತ್ಕಮಲಪತ್ರಾಕ್ಷ ಕರ್ಮಬಂಧವಿಮೋಚನಮ್ ।**
**ಭಕ್ತಾಯ ಚಾನುರಕ್ತಾಯ ಬ್ರೂಹಿ ವಿಶ್ವೇಶ್ವರೇಶ್ವರ ।।೫।।**

**ತೇ** ನಿನ್ನ **ಮುಖಾಂಭೋಜಾತ್** ಮುಖಕಮಲದಿಂದ **ನಿಸ್ಸೃತಂ** ಹೊರಟ **ಯತ್** ಯಾವುದನ್ನು **ಭಗವಾನ್ ಅಜಃ** ಪೂಜ್ಯನಾದ ಚತುರ್ಮುಖನು **ಭೃಗುಮುಖ್ಯೇಭ್ಯಃ** ಭೃಗುವೇ ಮೊದಲಾದ **ಪುತ್ರೇಭ್ಯಃ** ಮಕ್ಕಳಿಗೆ **ಚ** ಮತ್ತು **ಭಗವಾನ್ ಭವಃ** ಪೂಜ್ಯನಾದ ಶಂಕರನು **ದೇವ್ಯೈ** ಪಾರ್ವತಿಗೆ **ಆಹ** ಹೇಳಿದರೋ।।೩।।

**ಏತತ್** ಇದು **ಸರ್ವವರ್ಣಾನಾಂ** ಎಲ್ಲ ಜಾತಿಯವರಿಗೂ **ಆಶ್ರಮಾಣಾಂ ಚ** ಆಶ್ರಮದವರಿಗೂ (ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಿಗೂ, ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿಗಳಿಗೂ) **ಸಮ್ಮತಂ** ಸಾಧಾರಣವಾದುದು **ಮಾನದ** ಮರ್ಯಾದಾಪ್ರದನೇ **ಸ್ತ್ರೀಶೂದ್ರಾಣಾಂ ಚ** ಹೆಣ್ಣುಮಕ್ಕಳಿಗೂ, ಶೂದ್ರರಿಗೂ **ಏತತ್** ಈ ಭಗವದಾರಾಧನವು **ಶ್ರೇಯಸಾಂ** ಶ್ರೇಯಃ-ಸಾಧನಗಳಲ್ಲಿ **ಉತ್ತಮಂ** ಶ್ರೇಷ್ಠವಾದುದು **ಕರ್ಮಬಂಧವಿಮೋಚನಂ** ಕರ್ಮಬಂಧನವನ್ನು ಬಿಡಿಸುವುದು.।।೪।।

**ಹೇ ಕಮಲಪತ್ರಾಕ್ಷ** ಕಮಲದಲನಯನನೇ! **ವಿಶ್ವೇಶ್ವರೇಶ್ವರ** ಜಗದೊಡೆಯರಾದ ಬ್ರಹ್ಮಾದಿಗಳ ಒಡೆಯನೇ! **ಭಕ್ತಾಯ** ಭಕ್ತನಾದ **ಅನುರಕ್ತಾಯ** ಆಸಕ್ತನಾದ ನನಗೆ **ಕರ್ಮಬಂಧವಿಮೋಚನಂ** ಕರ್ಮಬಂಧ-

ದಿಂದ ಬಿಡುಗಡೆಯನ್ನು **ಬ್ರೂಹಿ** ಹೇಳು.।।೫।।

**ಶ್ರೀಭಗವಾನುವಾಚ -**

**ನ ಹ್ಯಂತೋಽನಂತಪಾರಸ್ಯ ಕರ್ಮ ಕಾಂಡಸ್ಯ ಚೋದ್ಧವ ।**
**ಸಂಕ್ಷಿಪ್ತಂ ವರ್ಣಯಿಷ್ಯಾಮಿ ಯಥಾವದನುಪೂರ್ವಶಃ ।।೬।।**

**ಹೇ ಉದ್ಧವ** ಎಲೋ ಉದ್ಧವನೇ! **ಅನಂತಪಾರಸ್ಯ** ಸಂಖ್ಯಾ ಮತ್ತು ಮರ್ಯಾದಾರಹಿತವಾದ **ಕರ್ಮಕಾಂಡಸ್ಯ** ಕರ್ಮಕಾಂಡಕ್ಕೆ **ಅಂತಃ ನ ಹಿ** ಕೊನೆ ಇಲ್ಲ. ಆದ್ದರಿಂದ ಪೂರ್ಣವಾಗಿ ಹೇಳುವುದು ಸಾಧ್ಯವಿಲ್ಲ. ಆದರೂ **ಅನುಪೂರ್ವಶಃ** ಕ್ರಮವಾಗಿ **ಯಥಾವತ್** ನಿಜವಾಗಿ **ಸಂಕ್ಷಿಪ್ತಂ** ಸಂಕ್ಷೇಪವಾಗಿ **ವರ್ಣಯಿಷ್ಯಾಮಿ** ಹೇಳುವೆನು।।೬।।

**ವೈದಿಕಸ್ತಾಂತ್ರಿಕೋ ಮಿಶ್ರ ಇತಿ ಮೇ ತ್ರಿವಿಧೋ ಮಖಃ ।**
**ತ್ರಯಾಣಾಮೀಪ್ಸಿತೇನೈವ ವಿಧಿನಾ ಮಾಂ ಸಮಾಚರೇತ್ ।।೭।।**

**ವೈದಿಕಃ** ವೇದಾಧಿಕಾರವುಳ್ಳವರಿಗೆ ವೇದೋಕ್ತ ಜ್ಯೋತಿಷ್ಟೋಮಾದಿಗಳು **ತಾಂತ್ರಿಕಃ** ಪಂಚರಾತ್ರಾಧಿಕಾರಿಗಳಿಗಾಗಿ ದೇವಪೂಜಾ, ಪುಷ್ಪಾಂಜಲಿ ಮುಂತಾದವು **ಮಿಶ್ರಃ** ಸ್ತ್ರೀಶೂದ್ರಾದಿವಿಷಯಕವಾದ, (ಸರ್ವವರ್ಣ-ಸಾಧಾರಣವಾದ) ನಾಮ-ಸಂಕೀರ್ತನಾದಿಗಳು **ಇತಿ** ಹೀಗೆ **ಮೇ** ನನ್ನ **ಮಖಃ** ಪೂಜಾರೂಪವಾದ ಯಾಗವು **ತ್ರಿವಿಧಃ** ಮೂರು ರೀತಿಯದು **ತ್ರಯಾಣಾಂ** ಮೂರರ ಮಧ್ಯದಲ್ಲಿ **ಈಪ್ಸಿತೇನೈವ** ಅವರವರಿಗೆ ಯೋಗ್ಯವಾದ (ವಿಹಿತವಾದ) **ವಿಧಿನಾ** ರೀತಿಯಿಂದ **ಮಾಂ** ನನ್ನನ್ನು **ಸಮರ್ಚಯೇತ್** ಪೂಜಿಸಬೇಕು.।।೭।।

**ಯಥಾ ಸ್ವನಿಗಮೇನೋಕ್ತಂ ದ್ವಿಜತ್ವಂ ಪ್ರಾಪ್ಯ ಪೂರುಷಃ ।**
**ಯಥಾ ಯಜೇತ ಮಾಂ ಭಕ್ತ್ಯಾ ಶ್ರದ್ಧಯಾ ತಂ ನಿಭೋಧ ಮೇ ।।೮।।**

**ಸ್ವನಿಗಮೇನ ಉಕ್ತಂ ಯಥಾ ತಥಾ** ತನ್ನ ಶಾಖಾದಲ್ಲಿ ಹೇಳಿದ ರೀತಿಯಿಂದ **ದ್ವಿಜತ್ವಂ ಪ್ರಾಪ್ಯ** ಉಪನಯವನ್ನು ಮಾಡಿಕೊಂಡು **ಪೂರುಷಃ** ಮನುಜನು **ಮಾಂ** ನನ್ನನ್ನು **ಶ್ರದ್ಧಯಾ** ಆಸ್ತಿಕ್ಯಬುದ್ಧಿಯಿಂದ **ಭಕ್ತ್ಯಾ** ಭಕ್ತಿಯಿಂದಲೂ **ಯಥಾ** ಹೇಗೆ **ಯಜೇತ** ಪೂಜಿಸಬೇಕೋ **ತಂ** ಆ ರೀತಿಯನ್ನು **ಮೇ** ನನ್ನಿಂದ **ನಿಭೋಧ** ತಿಳಿದುಕೋ.।।೮।।

**ಅರ್ಚಾಯಾಂ ಸ್ಥಂಡಿಲೇಽಗ್ನೌ ವಾ ಸೂರ್ಯೇಽಪ್ಸು ಹೃದಿ ವಾ ದ್ವಿಜೇ ।**
**ದ್ರವ್ಯೇಣ ಭಕ್ತಿಯುಕ್ತೋಽರ್ಚೇತ್ ಸ್ವಗುರುಂ ಮಾಮಮಾಯಯಾ ॥೯॥**

**ಅರ್ಚಾಯಾಂ** ಪ್ರತಿಮೆಗಳಲ್ಲಿ **ಸ್ಥಂಡಿಲೇ** ಶುಚಿಯಾದ ಭೂಮಿಯಲ್ಲಿ **ಅಗ್ನೌ** ಅಗ್ನಿಯಲ್ಲಿ **ಸೂರ್ಯೇ** ಸೂರ್ಯನಲ್ಲಿ **ಅಪ್ಸು** ನೀರಿನಲ್ಲಿ **ಹೃದಿ** ಹೃದಯದಲ್ಲಿ **ದ್ವಿಜೇ** ಬ್ರಾಹ್ಮಣನಲ್ಲಿ **ಸ್ವಗುರುಂ** ತನಗೆ ಗುರುವಾದ **ಮಾಂ** ನನ್ನನ್ನು **ಅಮಾಯಯಾ** ಕಾಪಟ್ಯವಿಲ್ಲದೇ **ಭಕ್ತಿಯುಕ್ತಃ** ಭಕ್ತಿಯಿಂದ ಕೂಡಿದವನಾಗಿ **ದ್ರವ್ಯೇಣ** ಪೂಜಾಸಾಧನಗಳಿಂದ **ಅರ್ಚೇತ್** ಪೂಜಿಸಬೇಕು.॥೯॥

ಮೇಲೆ ಹೇಳಿದ ಅಧಿಷ್ಠಾನಗಳು ಮುಂದಿನ ಮುಂದಿನವು ಪ್ರಶಸ್ತವಾದವು ಎಂದು ತಿಳಿಯಬೇಕು.

ಪೂಜೆಗೆ ಬೇಕಾದ ಕೆಲವು ನಿಯಮಗಳನ್ನು ಹೇಳುವರು-

**ಪೂರ್ವಂ ಸ್ನಾನಂ ಪ್ರಕುರ್ವೀತ ಧೌತದಂತೋಽಂಗಶುದ್ಧಯೇ ।**
**ಉಭಯೈರಪಿ ಚ ಸ್ನಾನಂ ಮಂತ್ರೈರ್ಮೃದ್ಗ್ರಹಣಾದಿಭಿಃ ॥೧೦॥**

**ಅಂಗಶುದ್ಧಯೇ** ದೇಹಶುದ್ಧಿಗಾಗಿ **ಧೌತದಂತಃ** ಹಲ್ಲನ್ನು ತೊಳೆದವನಾಗಿ **ಪೂರ್ವಂ** ಪೂಜೆಗೆ ಮೊದಲು **ಉಭಯೈಃ ಮಂತ್ರೈಃ** ವೈದಿಕ ಮತ್ತು ತಾಂತ್ರಿಕ ಮಂತ್ರಗಳಿಂದ (ಉದ್ಧೃತಾಸಿ ವರಾಹೇಣ ಮುಂತಾದ) **ಮೃದ್ಗ್ರಹಣಾದಿಭಿಃ** ಮಣ್ಣನ್ನು ಹಚ್ಚಿಕೊಂಡು **ಸ್ನಾನಂ** ಸ್ನಾನವನ್ನು **ಪ್ರಕುರ್ವೀತ** ಮಾಡಬೇಕು.॥೧೦॥

**ಸಂಧ್ಯೋಪಾಸ್ತ್ಯಾದಿಕರ್ಮಾಣಿ ವೇದತಂತ್ರೋದಿತಾನಿ ಮೇ ।**
**ಪೂಜಾಂ ತೈಃ ಕಲ್ಪಯೇತ್ ಸಮ್ಯಕ್ ಸಂಕಲ್ಪಃ ಕರ್ಮಪಾವನಃ ॥೧೧॥**

**ವೇದತಂತ್ರೋದಿತಾನಿ** ವೇದ-ಪಂಚರಾತ್ರಗಳಲ್ಲಿ ಹೇಳಿದ **ಸಂಧ್ಯೋಪಾಸ್ತ್ಯಾದಿ ಕರ್ಮಾಣಿ** ಸಂಧ್ಯಾವಂದನ-ಉಪಾಸನ ಮುಂತಾದ ಕರ್ಮಗಳೆನಿವೆಯೋ **ತೈಃ** ಅವುಗಳಿಂದ **ಮೇ ಪೂಜಾಂ ಕಲ್ಪಯೇತ್** ನನ್ನ ಪೂಜೆಯೆಂದು ಭಾವಿಸಬೇಕು. **ಸಮ್ಯಕ್ ಸಂಕಲ್ಪಃ** ನನ್ನ ಪೂಜಾರೂಪವೆಂದು ಸಂಕಲ್ಪಿಸುವುದು **ಕರ್ಮಪಾವನಃ** ಕರ್ಮಗಳಿಗೆ ಶುದ್ಧಿಪ್ರದವು.॥೧೧॥

ಅರ್ಚಾಯಾಂ ಎಂದು ಹೇಳಿದ ಪ್ರತಿಮೆಗಳನ್ನು ವಿವರಿಸುವರು-

**ಶೈಲೀ ದಾರುಮಯೀ ಲೌಹೀ ಲೇಪ್ಯಾ ಲೇಖ್ಯಾ ಚ ಸೈಕತೀ ।**
**ಮನೋಮಯೀ ಮಣಿಮಯೀ ಪ್ರತಿಮಾऽಷ್ಟವಿಧಾ ಸ್ಮೃತಾ ॥೧೨॥**

**ಶೈಲೀ** ಕಲ್ಲಿನಿಂದ ನಿರ್ಮಿಸಿದ್ದು **ದಾರುಮಯೀ** ಕಟ್ಟಿಗೆಯಿಂದ ನಿರ್ಮಿತವಾದುದು. **ಲೌಹೀ** ತಾಮ್ರ-ಹಿತ್ತಾಳೆ ಮುಂತಾದ ಲೋಹಗಳಿಂದ ಮಾಡಿದ್ದು **ಲೇಪ್ಯಾ** ಗೋಡೆ ಮುಂತಾದ ಸ್ಥಳದಲ್ಲಿ ಧಾತು ಮುಂತಾದವನ್ನು ಹಚ್ಚಿ ಮಾಡಿದ ಪ್ರತಿಮಾ **ಲೇಖ್ಯಾ** ಬಟ್ಟೆ ಕಾಗದ ಮೇಲೆ ಬರೆದ ಚಿತ್ರಗಳು **ಸೈಕತೀ** ಉಸಿಕಿನಿಂದ ನಿರ್ಮಿತವಾದುದು **ಮನೋಮಯೀ** ಧ್ಯಾನಕಾಲದಲ್ಲಿ ಮನಸ್ಸಿನಲ್ಲಿ ಮೂಡಿದ ವಾಸನಾಮಯವಾದುದು **ಮಣಿಮಯೀ** ರತ್ನಮುಂತಾದವುಗಳಿಂದ ನಿರ್ಮಿತವಾದುದು ಹೀಗೆ **ಪ್ರತಿಮಾ ಅಷ್ಟವಿಧಾ ಸ್ಮೃತಾ** ಪ್ರತಿಮೆ ಎಂಟು ವಿಧವಾಗಿವೆ.॥೧೨॥

**ಚಲಾಚಲೇತಿ ದ್ವಿವಿಧಾ ಪ್ರತಿಷ್ಠಾ ಜೀವಮಂದಿರಮ್ ।**
**ಉದ್ವಾಸಾವಾಹನೇ ನ ಸ್ತಃ ಸ್ಥಿರಾಯಾಮುದ್ಧವಾರ್ಚನೇ ॥೧೩॥**

**ಚಲ** ಉತ್ಸವಾದಿಗಳಲ್ಲಿಯಾಗಲಿ ಪೆಟ್ಟಿಗೆಯಲ್ಲಿಟ್ಟು ಬೇರೆಡೆಗೆ ಕೊಂಡು ಹೋಗಲು ಬರುವುದು **ಅಚಲಾ** ಬೇರೆಡೆಗೆ ಒಯ್ಯಲು ಬರದಿರುವುದು ಹೀಗೆ **ಪ್ರತಿಮಾ ದ್ವಿವಿಧಾ** ಪ್ರತಿಮೆಗಳು ಎರಡು ವಿಧವಾಗಿವೆ. **ಜೀವಮಂದಿರಂ** ದೇಹವು ಒಂದು ಚಲ ಪ್ರತಿಮೆಯೇ. **ಹೇ ಉದ್ಧವ** ಉದ್ಧವನೇ **ಸ್ಥಿರಾಯಾಂ** ಸ್ಥಿರ ಪ್ರತಿಮೆಯಲ್ಲಿ **ಅರ್ಚನೇ** ಪೂಜಿಸುವಾಗ **ಉದ್ವಾಸಾವಾಹನೇ ನ ಸ್ತಃ** ಉದ್ವಾಸನ ಆವಾಹನೆಗಳು ಇರುವುದಿಲ್ಲ. ಮೊದಲು ಪ್ರತಿಮೆಯಲ್ಲಿ ಆವಾಹಿಸಿದ ತನ್ನ ಬಿಂಬರೂಪವನ್ನು ಹೃದಯದಲ್ಲಿ ಸ್ಥಾಪಿಸುವುದೇ ಉದ್ವಾಸನೆ. ॥೧೩॥

**ಅಸ್ಥಿರಾಯಾಂ ವಿಕಲ್ಪಃ ಸ್ಯಾತ್ ಸ್ಥಂಡಿಲೇ ತು ಭವೇದ್ ದ್ವಯಮ್ ।**
**ಸ್ನಪನಂ ತು ವಿಲೇಪ್ಯಾಯಾಮನ್ಯತ್ರ ಪರಿಮಾರ್ಜನಮ್ ॥೧೪॥**

**ಅಸ್ಥಿರಾಯಾಂ** ಚಲಪ್ರತಿಮೆಗಳಲ್ಲಿ **ವಿಕಲ್ಪಃ ಸ್ಯಾತ್** ಅಂದರೆ ಸಾಲಿಗ್ರಾಮ ಮುಂತಾದವು ಸ್ವಯಂವ್ಯಕ್ತಚಲಪ್ರತಿಮೆಗಳಿಗೆ ಆವಾಹನ ವಿಸರ್ಜನಗಳಿಲ್ಲ ಪ್ರತಿಷ್ಠಿತವಾದ ಚಲಪ್ರತಿಮೆಗಳಲ್ಲಿ ಉಂಟು. ಬ್ರಾಹ್ಮಣಾದಿಗಳಲ್ಲಿ ಕೆಲವೆಡೆ ಉಂಟು ಇಲ್ಲಿ ಹೀಗೆ ವಿಕಲ್ಪ. **ಸ್ಥಂಡಿಲೇ** ಸ್ಥಂಡಿಲದಲ್ಲಿ **ದ್ವಯಂ ಭವೇತ್** ಆವಾಹನ ವಿಸರ್ಜನ ಉಂಟು.

**ವಿಲೇಪ್ಯಾಯಾಃ ಅನ್ಯತ್ರ** ಶಿಲಾದಿ ಪ್ರತಿಮೆಗಳಿಗೆ **ಸ್ನಪನಂ** ಅಭಿಷೇಕ-ಮಾಡುವುದು **ಅನ್ಯತ್ರ** ವಿಲೇಪ್ಯ, ವಿಲೇಖ್ಯ, ಸೈಕತ ಮುಂತಾದವುಗಳಲ್ಲಿ **ಪರಿಮಾರ್ಜನಂ** ತುಳಸಿಯಿಂದ ನೀರು ಸಿಂಪಡಿಸುವುದೇ ಅಭಿಷೇಕವಿದ್ದಂತೆ ಎಂದು ತಿಳಿಯಬೇಕು.।।೧೪।।

**ದ್ರವ್ಯೈಃ ಪ್ರಸಿದ್ಧೈರ್ಮದ್ಯಾಗಃ ಪ್ರತಿಮಾದಿಷ್ವಮಾಯಿನಃ ।**
**ಭಕ್ತ್ಯಾ ಚೈವ ಯಥಾಲಬ್ಧೈರ್ಹೃದಿ ಭಾವೇನ ಚೈವ ಹಿ ।।೧೫।।**

**ಪ್ರತಿಮಾದಿಷು** ಪ್ರತಿಮೆ ಮುಂತಾದವುಗಳಲ್ಲಿ **ಅಮಾಯಿನಃ** ಅವಂಚಕನಾದ ಮನುಷ್ಯನಿಗೆ **ಪ್ರಸಿದ್ಧೈಃ** ಪಂಚರಾತ್ರಾದಿಗಳಲ್ಲಿ ಪೂಜೆಗೆ ಪ್ರಶಸ್ತವೆಂದು ಪ್ರಸಿದ್ಧವಾದ **ಯಥಾಲಬ್ಧೈಃ** ಸಂಪೂರ್ಣ ದೊರೆಯದಿರುವಾಗ ಎಷ್ಟು ಸಿಗುವವೋ ಅಷ್ಟರಿಂದಲೇ **ಭಕ್ತ್ಯಾ ಚ** ಭಕ್ತಿಯಿಂದಲೂ **ಹೃದಿ ಭಾವೇನ** ಮನಸ್ಸಿನಲ್ಲಿ ಧ್ಯಾನ ಮಾಡುತ್ತಲೂ **ಮದ್ಯಾಗಃ** ನನ್ನ ಪೂಜೆಯು ವಿಹಿತವಾದುದು. ।।೧೫।।

ಏವ ಹಿ ಎಂಬುದರಿಂದ ಭಕ್ತಿ-ಧ್ಯಾನಗಳ ಅವಶ್ಯಕತೆಯನ್ನು ಸೂಚಿಸಿದ್ದಾರೆ. ಹಿಂದೆ ಹೇಳಿದ ಎಂಟು ಪ್ರತಿಮೆಗಳಲ್ಲಿ ಮಾಡುವ ಪೂಜೆಯಲ್ಲಿ ಪ್ರಭೇದ ಹೇಳುವರು-

**ಸ್ನಾನಾಲಂಕರಣಂ ಪ್ರೇಷ್ಠಮರ್ಚಾಯಾಮೇವ ತೂದ್ಧವ ।**
**ಸ್ಥಂಡಿಲೇ ತತ್ತ್ವವಿನ್ಯಾಸೋ ವಹ್ನಾವಾಜ್ಯಪ್ಲುತಂ ಹವಿಃ ।।೧೬।।**

**ಸೂರ್ಯೇ ಚಾಭ್ಯರ್ಹಣಂ ಪ್ರೇಷ್ಠಂ ಸಲಿಲೇ ಸಲಿಲಾದಿಭಿಃ ।**
**ಶ್ರದ್ಧಯೋಪಹೃತಂ ಶ್ರೇಷ್ಠಂ ಭಕ್ತೇನ ಮಮ ವಾರ್ಯಪಿ ।**
**ಗಂಧೋ ಧೂಪಃ ಸುಮನಸೋ ದೀಪೋಽನ್ನಾದ್ಯಂ ಚ ಕಿಂ ಪುನಃ ।।೧೭।।**

**ಹೇ ಉದ್ಧವ** ಉದ್ಧವನೇ **ಅರ್ಚಾಯಾಂ** ಶಿಲಾದಿ ಪ್ರತಿಮೆಗಳಲ್ಲಿ **ಸ್ನಾನಲಂಕರಣಂ** ಅಭಿಷೇಕ ಮಾಡಿಸಿ ಅಲಂಕಾರ ಮಾಡುವುದು **ಪ್ರೇಷ್ಠಂ** ಪ್ರಿಯಕರವು **ಸ್ಥಂಡಿಲೇ** ಶುದ್ಧೀಕೃತವಾದ ಸ್ಥಳದಲ್ಲಿ **ತತ್ತ್ವವಿನ್ಯಾಸಃ** ಸಚ್ಚಿದಾನಂದಾತ್ಮಕನಾದ ಪರಮಾತ್ಮನ ತತ್ತ್ವವನ್ನು ಸ್ಥಾಪಿಸುವುದು ಅಥವಾ ತತ್ತ್ವಮಂತ್ರಗಳಿಂದ ನ್ಯಾಸ ಮಾಡುವುದು ''ಪ್ರತಿಮಾಯಾಮಾತ್ಮನಿ ಚ ನ್ಯಾಸೋ ಯಂ ಸನ್ನಿಧಾನಕೃತ್'' ಎಂದು ತಂತ್ರಸಾರವಿದೆ. **ವಹ್ನೌ** ಅಗ್ನಿಯಲ್ಲಿ

**ಆಜ್ಯಪ್ಲುತಂ ಹವಿಃ** ತುಪ್ಪದಿಂದ ಕೂಡಿದ ಹವಿಸ್ಸನ್ನು ಹಾಕುವದು **ಸೂರ್ಯೇ** ಸೂರ್ಯನಲ್ಲಿ **ಅಭ್ಯರ್ಹಣಂ** ಹೂಗಳನ್ನೇರಿಸಿ ನಮಸ್ಕರಿಸಿ ಪೂಜಿಸುವುದು **ಅರ್ಘ್ಯಾರ್ಹಣಂ** ಎಂಬ ಪಾಠದಲ್ಲಿ ಅರ್ಘ್ಯ ಪ್ರದಾನಮಾಡಿ ಪೂಜಿಸುವುದು **ಸಲಿಲೇ** ನೀರಿನಲ್ಲಿ **ಸಲಿಲಾದಿಭಿಃ** ನೀರು ಮುಂತಾದವುಗಳಿಂದ ಪೂಜಿಸುವುದು ಪ್ರಿಯಕರವು **ಭಕ್ತೇನ** ಭಕ್ತಿ ಉಳ್ಳವನಿಂದ **ಶ್ರದ್ಧಯಾ ಉಪಹೃತಂ** ಶ್ರದ್ಧೆಯಿಂದ ತಂದ **ವಾರಿ ಅಪಿ** ನೀರೂ ಕೂಡ **ಪ್ರೇಷ್ಠಂ** ಪ್ರೀತಿಜನಕವು ಕಿಂ ಪುನಃ **ಗಂಧಃ ಧೂಪಃ ಸುಮನಸಃ ದೀಪಃ ಅನ್ನಾದ್ಯಂ** ಶ್ರೀಗಂಧ, ಧೂಪ, ಹೂಗಳು, ದೀಪ, ಅನ್ನ ಮುಂತಾದ ಪದಾರ್ಥಗಳು ಶ್ರದ್ಧಾ-ಭಕ್ತಿಗಳಿಂದ ತಂದಿದ್ದರೇ ಪ್ರೀತಿಜನಕವೆಂದು ಬೇರೆ ಹೇಳಬೇಕೇ?।।೧೬-೧೭।।

**ಶುಚಿಃ ಸಂಭೃತಸಂಭಾರಃ ಪ್ರಾಗ್ದರ್ಭೈಃ ಕಲ್ಪಿತಾಸನಃ ।**
**ಆಸೀನಃ ಪ್ರಾಗುದಗ್ವಾಽರ್ಚೇದರ್ಚಾಯಾಂ ತ್ವಥ ಸಮ್ಮುಖಃ ।।೧೮।।**

**ಶುಚಿಃ** ಸ್ನಾನಾದಿಗಳಿಂದ ದೇಹಶುದ್ಧಿಯುಳ್ಳವನಾಗಿ **ಪ್ರಾಗ್ದರ್ಭೈಃ** ಪೂರ್ವಾಭಿಮುಖವಾದ ದರ್ಭಗಳಿಂದ **ಕಲ್ಪಿತಾಸನಃ** ಆಸನವನ್ನು ಸಿದ್ಧಪಡಿಸಿಕೊಂಡು **ಪ್ರಾಕ್ ಉದಗ್ ವಾ** ಪೂರ್ವಕ್ಕಾಗಲಿ ಉತ್ತರಕ್ಕಾಗಲಿ **ಸಮ್ಮುಖಃ** ಪ್ರತಿಮೆಗಳ ಅಭಿಮುಖವಾಗಿ **ಆಸೀನಃ** ಕುಳಿತು **ಅರ್ಚಾಯಾಂ** ಪ್ರತಿಮೆಯಲ್ಲಿ **ಅರ್ಚೇತ್** ಪೂಜಿಸಬೇಕು.।।೧೮।।

**ಕೃತನ್ಯಾಸೋ ಮದರ್ಚಾಂ ಚ ಪಾಣಿನಾಽಭಿಮೃಜೇದ್ ಬುಧಃ ।**
**ಕಲಶಂ ಪ್ರೋಕ್ಷಣೀಯಂ ಚ ಯಥಾವದುಪಸಾದಯೇತ್ ।।೧೯।।**

**ಕೃತನ್ಯಾಸಃ** ಷಡಂಗನ್ಯಾಸ-ತತ್ವನ್ಯಾಸ-ಮಾತೃಕಾನ್ಯಾಸಾದಿಗಳನ್ನು ಮಾಡಿದವನಾಗಿ **ಮದರ್ಚಾಂ** ನನ್ನ ಪ್ರತಿಮೆಯನ್ನು **ಪಾಣಿನಾ** ತನ್ನ ಕೈಯಿಂದ **ಅಭಿಮೃಜೇತ್** ಮಂತ್ರಪೂರ್ವಕವಾಗಿ ಮುಟ್ಟಬೇಕು. **ಬುಧಃ** ಬ್ರಾಹ್ಮಣನು **ಕಲಶಂ** ಅಗ್ರ್ಯೋದಕವನ್ನು **ಪ್ರೋಕ್ಷಣೀಯಂ** ಪುಷ್ಪವಿಡುವ ಪಾತ್ರ ಮುಂತಾದವನ್ನು **ಯಥಾವದುಪಸಾದಯೇತ್** ಯಥಾಯೋಗ್ಯವಾಗಿ ಸಂಪಾದಿಸಿಡಬೇಕು.।।೧೯।।

**ತದದ್ಭಿರ್ದೇವಯಜನಂ ದ್ರವ್ಯಾಣ್ಯಾತ್ಮನಮೇವ ಚ ।**
**ಪ್ರೋಕ್ಷ್ಯ ಪಾತ್ರಾಣಿ ತ್ರೀಣ್ಯದ್ಭಿಸ್ತೈಸ್ತೈರ್ದ್ರವ್ಯೈಶ್ಚ ಸಾದಯೇತ್ ।।೨೦।।**

**ಪಾದ್ಯಾರ್ಘ್ಯಾಚಮನೀಯಾರ್ಥಂ ತ್ರೀಣಿ ಪಾತ್ರಾಣಿ ದೇಶಿಕಃ ।**
**ಹೃದಾ ಶೀರ್ಷ್ಣಾಽಥ ಶಿಖಯಾ ಗಾಯತ್ರ್ಯಾ ವಾಽಭಿಮಂತ್ರಯೇತ್॥೨೧॥**

**ತದದ್ಭಿಃ** ಪ್ರೋಕ್ಷಣೀಯಪಾತ್ರದಲ್ಲಿರುವ ನೀರಿನಿಂದ **ದೇವಯಜನಂ** ದೇವರ ಮನೆಯನ್ನು **ದ್ರವ್ಯಾಣಿ** ತುಲಸಿ, ಗಂಧ, ಪುಷ್ಪಾದಿಗಳನ್ನು **ಆತ್ಮಾನಂ** ತನ್ನನ್ನು **ಪ್ರೋಕ್ಷ್ಯ** ಪ್ರೋಕ್ಷಿಸಿಕೊಂಡು **ದೇಶಿಕಃ** ಮಂತ್ರಜ್ಞನಾದ ಪೂಜಕನು **ಪಾದ್ಯಾರ್ಘ್ಯಾಚಮನೀಯಾರ್ಥಂ** ಪಾದ್ಯ, ಅರ್ಘ್ಯ, ಆಚಮನಗಳಿಗಾಗಿ, **ತ್ರೀಣಿ ಪಾತ್ರಾಣಿ** ಮೂರು ಪಾತ್ರೆಗಳನ್ನು **ಅದ್ಭಿಃ** ನೀರಿನಿಂದ **ತೈಃ ತೈಃ** ಪಾದ್ಯ, ಅರ್ಘ್ಯ, ಆಚಮನಗಳಿಗೆ ಉಪಯುಕ್ತವಾದ ಚಂಪಕ, ಉಸೀರ, ಕರ್ಪೂರ, ಕುಂಕುಮ, ಅಗರು, ಮುಂತಾದವುಗಳಿಂದ ಪೂರ್ಣವಾದವುಗಳನ್ನು **ಸಾದಯೇತ್** ಸಿದ್ಧಪಡಿಸಬೇಕು. **ಹೃದಾ** ಹೃದಯದಲ್ಲಿ ಕೃದ್ಧೋಲ್ಕಾಯ ನಮಃ ಎಂಬ, **ಶೀರ್ಷ್ಣಾ** ಶಿರಸ್ಸಿನಲ್ಲಿ ಮಹೋಲ್ಕಾಯ ನಮಃ ಎಂಬ **ಶಿಖಯಾ** ಶಿಖೆಯಲ್ಲಿ ವೀರೋಲ್ಕಾಯ ನಮಃ ಎಂಬ ಮಂತ್ರಗಳಿಂದ **ಗಾಯತ್ರ್ಯಾ ವಾ** ಅಥವಾ ಗಾಯತ್ರೀಮಂತ್ರದಿಂದ **ಅಭಿಮಂತ್ರಯೇತ್** ಅಭಿಮಂತ್ರಣ ಮಾಡಬೇಕು. ''**ಕೃದ್ಧವೀರಮಹೋದ್ಯುಲ್ಕಸಹಸ್ರಸಹಿತೋಲ್ಕಕಾಃ। ಚತುರ್ಥ್ಯಂತಾ** ಹೃದಾದೀನಿ'' ಎಂದು ತಂತ್ರಸಾರದಲ್ಲಿ ಹೇಳಿದೆ.

ಪೂಜೆಯನ್ನು ಪ್ರಾರಂಭಿಸುವಾಗ ಧ್ಯಾನಮಾಡುವ ಅಧಿಷ್ಠಾನ ಹೇಳುವರು-

**ಪಿಂಡೇ ವಾಯ್ವಗ್ನಿಸಂಶುದ್ಧೇ ಹೃತ್ಪದ್ಮಸ್ಥಾಂ ಪರಾಂ ಮಮ ।**
**ಅಣ್ವೀಂ ಜೀವಕಲಾಂ ಧ್ಯಾಯೇನ್ನಾದಾಂತೇ ಸಿದ್ಧಭಾವಿತಾಮ್ ॥೨೨॥**

**ವಾಯ್ವಗ್ನಿಸಂಶುದ್ಧೇ** ಪ್ರಾಣಾಯಾಮದಿಂದ ಪ್ರಜ್ವಲಿತವಾದ ವಾಯುವಿನಿಂದ ಪಾಪಪುರುಷನನ್ನು ಶೋಷಣ ಮಾಡಿ, ಅಗ್ನಿಯಿಂದ ಆ ಪಾಪಪುರುಷನನ್ನು ದಹನಮಾಡಿರುವುದರಿಂದ ಪರಿಶುದ್ಧವಾದ **ಪಿಂಡೇ** ದೇಹದಲ್ಲಿ (ಉಪಲಕ್ಷಣಯಾ ವರುಣ ಬೀಜದಿಂದ ಆಪ್ಲಾವಿತವಾದುದರಿಂದಲೂ ಪರಿಶುದ್ಧವಾದ) **ಹೃತ್ಪದ್ಮಸ್ಥಾಂ** ಹೃದಯಕಮಲದಲ್ಲಿರುವ **ಪರಾಂ** ಸರ್ವೋತ್ತಮವಾದ ಜೀವ-ಭಿನ್ನವಾದ **ಮಮ** ನನ್ನ **ಅಣ್ವೀಂ** ಸೂಕ್ಷ್ಮವಾದ **ಸಿದ್ಧಭಾವಿತಾಂ** ಬ್ರಹ್ಮಾದಿಗಳು ಸನಕಾದಿಗಳಿಂದ ಧ್ಯಾನಿಸಲ್ಪಟ್ಟ **ನಾದಾಂತೇ** (ಸ್ಥಿತಾಂ) ವೇದರೂಪಶಬ್ದಗಳನ್ನು ಅತಿಕ್ರಮಿಸಿ ಇರುವ **ಜೀವಕಲಾಂ** ಜೀವನೇ ಪ್ರತಿಬಿಂಬವಾಗಿ ಉಳ್ಳ ಬಿಂಬರೂಪವನ್ನು **ಧ್ಯಾಯೇತ್** ಧ್ಯಾನ ಮಾಡಬೇಕು.

ಜೀವಕಲಾಂ ಎಂಬುದಕ್ಕೆ ಜೀವಸ್ವರೂಪಭೂತವಾದ ಅಂಶ ಎಂಬ ವಿಪರೀತಾರ್ಥ ನಿವಾರಿಸಲು ಆಚಾರ್ಯರು ಅಭಿಪ್ರೇತಾರ್ಥವನ್ನು ಹೇಳುವರು-

**ತಾತ್ಪರ್ಯ-** ಜೀವಃ ಕಲಾ ಯಸ್ಯಾಃ ಸಾ ಜೀವಕಲಾ ಭಗವನ್ಮೂರ್ತಿಃ ।

ಜೀವನೇ ಪ್ರತಿಬಿಂಬವಾಗಿ ಉಳ್ಳ ಭಗವನ್ಮೂರ್ತಿ ಎಂದರ್ಥ. ಈ ವಿಷಯದಲ್ಲಿ ಪ್ರಮಾಣ ಹೇಳುವರು.

**ತಾತ್ಪರ್ಯ-** ಹೃದಿಸ್ಥಾ ಯಾ ಹರೇರ್ಮೂರ್ತಿರ್ಜೀವೊ ಯತ್ಪ್ರತಿಬಿಂಬಕಃ ।
ಯದ್ವಶೇ ವರ್ತತೇ ಜೀವಃ ಸಾ ತು ಜೀವಕಲಾ ಸ್ಮೃತಾ ॥

ಯಾರ ಪ್ರತಿಬಿಂಬನಾದ ಜೀವನು ಯಾರ ಅಧೀನದಲ್ಲಿ ಇರುವನೋ ಆ ಭಗವನ್ಮೂರ್ತಿಯು ಜೀವಕಲಾ ಎನಿಸುತ್ತದೆ.

ನಾದಾಂತೇ ಎಂಬ ಪದವನ್ನು ವ್ಯಾಖ್ಯಾನಿಸುವರು-

**ತಾತ್ಪರ್ಯ-** ಶಬ್ದೈಃ ಸರ್ವಾತ್ಮನಾಽನುಕ್ತೇರ್ನಾದಾಂತಸ್ಥಾ ಚ ಸಾ ಮತಾ''
-ಇತಿ ವಿವೇಕೇ

ಸಾಕಲ್ಯೇನ ಶಬ್ದಾಗೋಚರವಾದುದರಿಂದ ನಾದಂತಸ್ಥಾ ಎನಿಸುವುದು ಎಂದರ್ಥ.॥೨೨॥

**ತಯಾಽಽತ್ಮ ಭೂತಯಾ ಪಿಂಡೇ ವ್ಯಾಪ್ತೇ ಸಂಪದ್ಯ ತನ್ಮಯಃ ।**
**ಆವಾಹ್ಯಾರ್ಚಾದಿಷು ಸ್ಥಾಪ್ಯ ನ್ಯಸ್ತಾಂಗಂ ಮಾಂ ಪ್ರಪೂಜಯೇತ್ ॥೨೩॥**

**ಆತ್ಮಭೂತಯಾ** ವ್ಯಾಪ್ತವಾಗಿ ನಿತ್ಯದಲ್ಲಿಯೂ ಇರುವ ಯಾವ ಜೀವಕಲಾ ಉಂಟೋ **ತಯಾ** ಆ ಭಗವನ್ಮೂರ್ತಿಯಿಂದ **ವ್ಯಾಪ್ತೇ** ವ್ಯಾಪ್ತವಾದ **ಪಿಂಡೇ** ದೇಹದಲ್ಲಿ **ಸಂಪದ್ಯ** ಧ್ಯಾನಮಾಡಿ **ತನ್ಮಯಃ** ಎಲ್ಲ ವ್ಯಾಪಾರಗಳಲ್ಲಿಯೂ ಭಗವಂತನೇ ಪ್ರಧಾನನೆಂದು ತಿಳಿದು **ಅರ್ಚಾದಿಷು** ಪ್ರತಿಮೆ ಮುಂತಾದವುಗಳಲ್ಲಿ **ಆವಾಹ್ಯ** ಆವಾಹನ ಮಾಡಿ **ಸ್ಥಾಪ್ಯ** ಸ್ಥಾಪನ ಮಾಡಿ **ನ್ಯಸ್ತಾಂಗಂ** ಮಾತೃಕಾನ್ಯಾಸಾದಿಗಳನ್ನು ಮಾಡಲ್ಪಟ್ಟ **ಮಾಂ** ನನ್ನನ್ನು **ಪ್ರಪೂಜಯೇತ್** ಪೂಜಿಸಬೇಕು.॥೨೩॥

ಆತ್ಮಭೂತಯಾ ತಯಾ ಸಂಪದ್ಯ ಎನ್ನುವುದರಿಂದಲೇ ಶ್ರೀಹರಿಯ ವ್ಯಾಪ್ತಿ ತಿಳಿಯುವುದರಿಂದ ಪಿಂಡೇ ವ್ಯಾಪ್ತೇ ಎಂಬ ಪದಗಳು ವ್ಯರ್ಥವೆನಿಸುವವು. ಆದ್ದರಿಂದ ಅಭಿಪ್ರಾಯ ತಿಳಿಸುವರು-

**ತಾತ್ಪರ್ಯ**- ವ್ಯಾಪ್ತೋ ಭೂತಶ್ಚ ನಿತ್ಯಂ ಯದಾತ್ಮಭೂತೋ ಹರಿಸ್ತತಃ ।
ಜೀವಸ್ಯ ತತ್ಪ್ರಧಾನತ್ವಂ ತನ್ಮಯತ್ವಮುದಾಹೃತಮ್ । ಇತಿ ತಂತ್ರಭಾಗವತೇ ।

ವ್ಯಾಪ್ತೋಽಪಿ ಭಗವಾನ್ ವಿಷ್ಣುರ್ದೇಹೇ ಸರ್ವಗತಸ್ತತಃ ।
ಭಕ್ತಸ್ಯ ಫಲದೋ ಯಸ್ಮಾದ್ ವ್ಯಾಪ್ತಿಕೃತ್ ತಸ್ಯ ತೇನ ಸಃ ॥'' ಇತಿ ಚ ।

ಶ್ರೀಹರಿಯು ಸರ್ವತ್ರ ವ್ಯಾಪ್ತನಾಗಿ ಸರ್ವದಾ ಇರುವುದರಿಂದ ಆತ್ಮಭೂತ ಎನ್ನುತ್ತಾರೆ. ಜೀವನಿಗೆ ಶ್ರೀಹರಿಯೇ ಪ್ರಧಾನನಾಗಿರುವುದರಿಂದ ಜೀವನಿಗೆ ತನ್ಮಯನೆಂದು ಕರೆಯುವುದು ಎಂದು ತಂತ್ರಭಾಗವತದಲ್ಲಿ ಹೇಳಿದೆ.

ಯದ್ಯಪಿ ಶ್ರೀಹರಿಯು ವ್ಯಾಪ್ತನಾದುದರಿಂದ ಸರ್ವಗತನಾದ ಮೇಲೆ ದೇಹದಲ್ಲಿ ವ್ಯಾಪ್ತನಾಗಿದ್ದರೂ ದೇಹದಲ್ಲಿ ವ್ಯಾಪ್ತಿಯನ್ನು ತಿಳಿದ ಭಕ್ತನಿಗೆ ಫಲ ಕೊಡುವುದರಿಂದ ಸಃ ಜೀವನು ತಸ್ಯ ವಿಷ್ಣುವಿಗೆ ವ್ಯಾಪ್ತಿಕೃತ್ ಎನಿಸುತ್ತಾನೆ. ಇದರಿಂದ ಮೂಲದಲ್ಲಿ ಸ್ಥಾಪ್ಯ ಎನ್ನುವುದಕ್ಕೆ ಸ್ಥಿತಿಪ್ರಯುಕ್ತ ಫಲವನ್ನು ಸಂಪಾದಿಸಿ ಎಂದರ್ಥ ಮಾಡಿದಂತಾಯಿತು.

ಆತ್ಮಭೂತಯಾ ಎಂಬುದರಿಂದ ವ್ಯಾಪ್ತಿ ತಿಳಿದರೂ ದೇಹವ್ಯಾಪ್ತಿಯನ್ನು ವಿಶಿಷ್ಯ ತಿಳಿಯುವುದು ಆವಶ್ಯಕ ಎಂದು ತಿಳಿಸಲು ಪಿಂಡೇ ವ್ಯಾಪ್ತೇ ಎಂದು ಹೇಳಿರುವುದು ಎಂದಂತಾಯಿತು.॥೨೩॥

**ಪಾದ್ಯೋಪಸ್ಪರ್ಶನಾರ್ಘ್ಯಾದೀನುಪಚಾರಾನ್ ಪ್ರಕಲ್ಪಯೇತ್ ।**
**ಧರ್ಮಾದಿಭಿಶ್ಚ ನವಭಿಃ ಕಲ್ಪಯಿತ್ವಾಽಽಸನಂ ಮಮ ॥೨೪॥**

**ಪದ್ಮಮಷ್ಟದಲಂ ತತ್ರ ಕರ್ಣಿಕಾಕೇಸರೋಜ್ಜ್ವಲಮ್ ।**
**ಉಭಾಭ್ಯಾಂ ವೇದತಂತ್ರಾಭ್ಯಾಂ ಮಹ್ಯಂ ತೂಭಯಸಿದ್ಧಯೇ ॥೨೫॥**

**ಪಾದ್ಯ** ಪಾದ ತೊಳೆಯುವುದು, **ಉಪಸ್ಪರ್ಶನ** ಆಚಮನ, **ಅರ್ಘ್ಯಾದೀನ್** ಮಧುಪರ್ಕ ಮುಂತಾದ **ಉಪಚಾರಾನ್** ಉಪಚಾರಗಳನ್ನು **ಪ್ರಕಲ್ಪಯೇತ್**

ನೀಡಬೇಕು. ಧರ್ಮಾದಿಭಿಃ ''ಧರ್ಮೋ ಜ್ಞಾನಂ ಚ ವೈರಾಗ್ಯಮೈಶ್ವರ್ಯಂ ಚೈವ ಕೋಣಗಾನ್'' ಎಂದು ಹೇಳಿದ ನಾಲ್ಕು ಪೀಠದೇವತೆಗಳಿಂದ **ನವಭಿಃ** ''ವಿಮಲೋತ್ಕರ್ಷಣೀ ಜ್ಞಾನಾ ಕ್ರಿಯಾ ಯೋಗಾ ತಥೈವ ಚ । ಪ್ರಹ್ವಿ ಸತ್ಯಾ ತಥೇಶಾನಾನುಗ್ರಹಾಶ್ಚ'' ಎಂದು ಹೇಳಿದ ಒಂಭತ್ತು ಶಕ್ತಿಗಳಿಂದ ತನ್ನ ಮೂರ್ತಿಗಳಿಂದ **ಆಸನಂ ಕಲ್ಪಯಿತ್ವಾ** ಪೀಠವನ್ನು ಸಿದ್ಧಪಡಿಸಿ **ತತ್ರ** ಪೀಠದಲ್ಲಿ **ಕರ್ಣಿಕಾಕೇಸರೋಜ್ವಲಂ** ನಾಳ ಮತ್ತು ಪರಾಗಗಳಿಂದ ಕಂಗೊಳಿಸುವ **ಅಷ್ಟದಲಂ ಪದ್ಮಂ** ಎಂಟು ದಳಗಳ ಪದ್ಮವನ್ನು **ಉಭಾಭ್ಯಾಂ** ವೇದ-ತಂತ್ರಗಳಿಂದ **ಉಭಯಸಿದ್ಧಯೇ** ವೇದ-ತಂತ್ರೋಕ್ತ ಫಲ ಬರುವುದಕ್ಕಾಗಿ, ಐಹಿಕ-ಆಮುಷ್ಮಿಕ ಫಲಕ್ಕಾಗಿಯೂ **ಮಹ್ಯಂ** ಪೂಜನೀಯನಾದ **ಮಾಂ** ನನ್ನನ್ನು **ಪೂಜಯೇತ್** ಪೂಜಿಸಬೇಕು.।।೨೪-೨೫।।

ಆವರಣ ಪೂಜಾ ವಿಶೇಷವನ್ನು ಹೇಳುವರು-

**ಸುದರ್ಶನಂ ಪಾಂಚಜನ್ಯಂ ಗದಾಸೀಷುಧನುರ್ಹಲಾನ್ ।**
**ಮುಸಲಂ ಕೌಸ್ತುಭಂ ಮಾಲಾಂ ಶ್ರೀವತ್ಸಂ ಚಾನುಪೂಜಯೇತ್ ।।೨೬।।**

**ನಂದಂ ಸುನಂದಂ ಗರುಡಂ ಪ್ರಚಂಡಂ ಚಂಡಮೇವ ಚ ।**
**ಮಹಾಬಲಂ ಬಲಂ ಚೈವ ಕುಮುದಂ ಕುಮುದೇಕ್ಷಣಮ್ ।।೨೭।।**

**ದುರ್ಗಾಂ ವಿನಾಯಕಂ ವ್ಯಾಸಂ ವಿಷ್ವಕ್ಸೇನಂ ಗುರೂನ್ ಸುರಾನ್ ।**
**ಸ್ವೇ ಸ್ವೇ ಸ್ಥಾನೇ ತ್ವಭಿಮುಖಾನ್ ಪೂಜಯೇತ್ ಪ್ರೋಕ್ಷಣಾದಿಭಿಃ ।।೨೮।।**

**ಅನು** ಅನಂತರ **ಸುದರ್ಶನಂ** ಚಕ್ರವನ್ನು **ಪಾಂಚಜನ್ಯಂ** ಶಂಖವನ್ನು **ಗದಾ** ಗದೆಯನ್ನು **ಅಸಿ** ಖಡ್ಗವನ್ನು **ಇಷು** ಬಾಣವನ್ನು **ಧನು** ಬಿಲ್ಲನ್ನು **ಹಲಾನ್** ನೇಗಿಲನ್ನು **ಮುಸಲ** ಒನಕೆಯನ್ನು ಅಂದರೆ ಆಯುಧಾಭಿಮಾನಿ ದೇವತೆಗಳನ್ನು **ಕೌಸ್ತುಭಂ** ಮಣಿಯನ್ನು **ಮಾಲಾಂ** ವೈಜಯಂತಿಯನ್ನು **ಶ್ರೀವತ್ಸಂ** ಶ್ರೀವತ್ಸನೆಂಬ ಆಭರಣಾಭಿಮಾನಿಗಳನ್ನು **ಪೂಜಯೇತ್** ಪೂಜಿಸಬೇಕು.

ನಂದ, ಸುನಂದ, ಗರುಡ, ಪ್ರಚಂಡ, ಚಂಡ ಮಹಾಬಲ, ಬಲ, ಕುಮುದ ಕುಮುದಾಕ್ಷ, ದುರ್ಗಾ, ವಿನಾಯಕ, ವ್ಯಾಸ, ವಿಷ್ವಕ್ಸೇನ, ಗುರು, ಮುಂತಾದ **ಸುರಾನ್** ದೇವತೆಗಳನ್ನು **ಸ್ವೇ ಸ್ವೇ ಸ್ಥಾನೇ** ತಮ್ಮ ತಮ್ಮ ಸ್ಥಳದಲ್ಲಿ **ಅಭಿಮುಖಾನ್** ಮಧ್ಯದಲ್ಲಿ ಆವಾಹಿಸಿದ ಪ್ರಧಾನದೇವತೆಗೆ ಸಮ್ಮುಖವಾಗಿ

ಆತ್ಮಭೂತಯಾ ತಯಾ ಸಂಪದ್ಯ ಎನ್ನುವುದರಿಂದಲೇ ಶ್ರೀಹರಿಯ ವ್ಯಾಪ್ತಿ ತಿಳಿಯುವುದರಿಂದ ಪಿಂಡೇ ವ್ಯಾಪ್ತೇ ಎಂಬ ಪದಗಳು ವ್ಯರ್ಥವೆನಿಸುವವು. ಆದ್ದರಿಂದ ಅಭಿಪ್ರಾಯ ತಿಳಿಸುವರು-

**ತಾತ್ಪರ್ಯ-** ವ್ಯಾಪ್ತೋ ಭೂತಶ್ಚ ನಿತ್ಯಂ ಯದಾತ್ಮಭೂತೋ ಹರಿಸ್ತತಃ ।
ಜೀವಸ್ಯ ತತ್ಪ್ರಧಾನತ್ವಂ ತನ್ಮಯತ್ವಮುದಾಹೃತಮ್ । ಇತಿ ತಂತ್ರಭಾಗವತೇ ।

ವ್ಯಾಪ್ತೋಽಪಿ ಭಗವಾನ್ ವಿಷ್ಣುರ್ದೇಹೇ ಸರ್ವಗತತ್ವತಃ ।
ಭಕ್ತಸ್ಯ ಫಲದೋ ಯಸ್ಮಾದ್ ವ್ಯಾಪ್ತಿಕೃತ್ ತಸ್ಯ ತೇನ ಸಃ ॥'' ಇತಿ ಚ ।

ಶ್ರೀಹರಿಯು ಸರ್ವತ್ರ ವ್ಯಾಪ್ತನಾಗಿ ಸರ್ವದಾ ಇರುವುದರಿಂದ ಆತ್ಮಭೂತ ಎನ್ನುತ್ತಾರೆ. ಜೀವನಿಗೆ ಶ್ರೀಹರಿಯೇ ಪ್ರಧಾನನಾಗಿರುವುದರಿಂದ ಜೀವನಿಗೆ ತನ್ಮಯನೆಂದು ಕರೆಯುವುದು ಎಂದು ತಂತ್ರಭಾಗವತದಲ್ಲಿ ಹೇಳಿದೆ.

ಯದ್ಯಪಿ ಶ್ರೀಹರಿಯು ವ್ಯಾಪ್ತನಾದುದರಿಂದ ಸರ್ವಗತನಾದ ಮೇಲೆ ದೇಹದಲ್ಲಿ ವ್ಯಾಪ್ತನಾಗಿದ್ದರೂ ದೇಹದಲ್ಲಿ ವ್ಯಾಪ್ತಿಯನ್ನು ತಿಳಿದ ಭಕ್ತನಿಗೆ ಫಲ ಕೊಡುವುದರಿಂದ ಸಃ ಜೀವನು ತಸ್ಯ ವಿಷ್ಣುವಿಗೆ ವ್ಯಾಪ್ತಿಕೃತ್ ಎನಿಸುತ್ತಾನೆ. ಇದರಿಂದ ಮೂಲದಲ್ಲಿ ಸ್ಥಾಪ್ಯ ಎನ್ನುವುದಕ್ಕೆ ಸ್ಥಿತಿಪ್ರಯುಕ್ತ ಫಲವನ್ನು ಸಂಪಾದಿಸಿ ಎಂದರ್ಥ ಮಾಡಿದಂತಾಯಿತು.

ಆತ್ಮಭೂತಯಾ ಎಂಬುದರಿಂದ ವ್ಯಾಪ್ತಿ ತಿಳಿದರೂ ದೇಹವ್ಯಾಪ್ತಿಯನ್ನು ವಿಶಿಷ್ಯ ತಿಳಿಯುವುದು ಆವಶ್ಯಕ ಎಂದು ತಿಳಿಸಲು ಪಿಂಡೇ ವ್ಯಾಪ್ತೇ ಎಂದು ಹೇಳಿರುವುದು ಎಂದಂತಾಯಿತು.॥೨೩॥

**ಪಾದ್ಯೋಪಸ್ಪರ್ಶನಾರ್ಘ್ಯಾದೀನುಪಚಾರಾನ್ ಪ್ರಕಲ್ಪಯೇತ್ ।**
**ಧರ್ಮಾದಿಭಿಶ್ಚ ನವಭಿಃ ಕಲ್ಪಯಿತ್ವಾಽಽಸನಂ ಮಮ ॥೨೪॥**

**ಪದ್ಮಮಷ್ಟದಲಂ ತತ್ರ ಕರ್ಣಿಕಾಕೇಸರೋಜ್ಜ್ವಲಮ್ ।**
**ಉಭಾಭ್ಯಾಂ ವೇದತಂತ್ರಾಭ್ಯಾಂ ಮಹ್ಯಂ ತೂಭಯಸಿದ್ಧಯೇ ॥೨೫॥**

**ಪಾದ್ಯ** ಪಾದ ತೊಳೆಯುವುದು, **ಉಪಸ್ಪರ್ಶನ** ಆಚಮನ, **ಅರ್ಘ್ಯಾದೀನ್** ಮಧುಪರ್ಕ ಮುಂತಾದ **ಉಪಚಾರಾನ್** ಉಪಚಾರಗಳನ್ನು **ಪ್ರಕಲ್ಪಯೇತ್**

ನೀಡಬೇಕು. ಧರ್ಮಾದಿಭಿಃ ''ಧರ್ಮೋ ಜ್ಞಾನಂ ಚ ವೈರಾಗ್ಯಮೈಶ್ವರ್ಯಂ ಚೈವ ಕೋಣಗಾನ್'' ಎಂದು ಹೇಳಿದ ನಾಲ್ಕು ಪೀಠದೇವತೆಗಳಿಂದ **ನವಭಿಃ** ''ವಿಮಲೋತ್ಕರ್ಷಣೀ ಜ್ಞಾನಾ ಕ್ರಿಯಾ ಯೋಗಾ ತಥೈವ ಚ । ಪ್ರಹ್ವಿ ಸತ್ಯಾ ತಥೇಶಾನಾನುಗ್ರಹಾಶ್ಚ'' ಎಂದು ಹೇಳಿದ ಒಂಭತ್ತು ಶಕ್ತಿಗಳಿಂದ ತನ್ನ ಮೂರ್ತಿಗಳಿಂದ **ಆಸನಂ ಕಲ್ಪಯಿತ್ವಾ** ಪೀಠವನ್ನು ಸಿದ್ಧಪಡಿಸಿ **ತತ್ರ** ಪೀಠದಲ್ಲಿ **ಕರ್ಣಿಕಾಕೇಸರೋಜ್ವಲಂ** ನಾಳ ಮತ್ತು ಪರಾಗಗಳಿಂದ ಕಂಗೊಳಿಸುವ **ಅಷ್ಟದಲಂ ಪದ್ಮಂ** ಎಂಟು ದಳಗಳ ಪದ್ಮವನ್ನು **ಉಭಾಭ್ಯಾಂ** ವೇದ-ತಂತ್ರಗಳಿಂದ **ಉಭಯಸಿದ್ಧಯೇ** ವೇದ-ತಂತ್ರೋಕ್ತ ಫಲ ಬರುವುದಕ್ಕಾಗಿ, ಐಹಿಕ-ಆಮುಷ್ಮಿಕ ಫಲಕ್ಕಾಗಿಯೂ **ಮಹ್ಯಂ** ಪೂಜನೀಯನಾದ **ಮಾಂ** ನನ್ನನ್ನು **ಪೂಜಯೇತ್** ಪೂಜಿಸಬೇಕು.।।೨೪-೨೫।।

ಆವರಣ ಪೂಜಾ ವಿಶೇಷವನ್ನು ಹೇಳುವರು-

**ಸುದರ್ಶನಂ ಪಾಂಚಜನ್ಯಂ ಗದಾಸೀಷುಧನುರ್ಹಲಾನ್ ।**
**ಮುಸಲಂ ಕೌಸ್ತುಭಂ ಮಾಲಾಂ ಶ್ರೀವತ್ಸಂ ಚಾನುಪೂಜಯೇತ್ ।।೨೬।।**

**ನಂದಂ ಸುನಂದಂ ಗರುಡಂ ಪ್ರಚಂಡಂ ಚಂಡಮೇವ ಚ ।**
**ಮಹಾಬಲಂ ಬಲಂ ಚೈವ ಕುಮುದಂ ಕುಮುದೇಕ್ಷಣಮ್ ।।೨೭।।**

**ದುರ್ಗಾಂ ವಿನಾಯಕಂ ವ್ಯಾಸಂ ವಿಷ್ವಕ್ಸೇನಂ ಗುರೂನ್ ಸುರಾನ್ ।**
**ಸ್ವೇ ಸ್ವೇ ಸ್ಥಾನೇ ತ್ವಭಿಮುಖಾನ್ ಪೂಜಯೇತ್ ಪ್ರೋಕ್ಷಣಾದಿಭಿಃ ।।೨೮।।**

**ಅನು** ಅನಂತರ **ಸುದರ್ಶನಂ** ಚಕ್ರವನ್ನು **ಪಾಂಚಜನ್ಯಂ** ಶಂಖವನ್ನು **ಗದಾ** ಗದೆಯನ್ನು **ಅಸಿ** ಖಡ್ಗವನ್ನು **ಇಷು** ಬಾಣವನ್ನು **ಧನು** ಬಿಲ್ಲನ್ನು **ಹಲಾನ್** ನೇಗಿಲನ್ನು **ಮುಸಲ** ಒನಕೆಯನ್ನು ಅಂದರೆ ಆಯುಧಾಭಿಮಾನಿ ದೇವತೆಗಳನ್ನು **ಕೌಸ್ತುಭಂ** ಮಣಿಯನ್ನು **ಮಾಲಾಂ** ವೈಜಯಂತಿಯನ್ನು **ಶ್ರೀವತ್ಸಂ** ಶ್ರೀವತ್ಸನೆಂಬ ಆಭರಣಾಭಿಮಾನಿಗಳನ್ನು **ಪೂಜಯೇತ್** ಪೂಜಿಸಬೇಕು.

ನಂದ, ಸುನಂದ, ಗರುಡ, ಪ್ರಚಂಡ, ಚಂಡ ಮಹಾಬಲ, ಬಲ, ಕುಮುದ ಕುಮುದಾಕ್ಷ, ದುರ್ಗಾ, ವಿನಾಯಕ, ವ್ಯಾಸ, ವಿಷ್ವಕ್ಸೇನ, ಗುರು, ಮುಂತಾದ **ಸುರಾನ್** ದೇವತೆಗಳನ್ನು **ಸ್ವೇ ಸ್ವೇ ಸ್ಥಾನೇ** ತಮ್ಮ ತಮ್ಮ ಸ್ಥಳದಲ್ಲಿ **ಅಭಿಮುಖಾನ್** ಮಧ್ಯದಲ್ಲಿ ಆವಾಹಿಸಿದ ಪ್ರಧಾನದೇವತೆಗೆ ಸಮ್ಮುಖವಾಗಿ

**ಪ್ರೋಕ್ಷಣಾದಿಭಿಃ** ಅರ್ಘ್ಯಾದಿಗಳಿಂದ **ಪೂಜಯೇತ್** ಪೂಜಿಸಬೇಕು. ।।೨೬-೨೭-೨೮।।

**ಚಂದನೋಶೀರಕರ್ಪೂರಕುಂಕುಮಾಗುರುವಾಸಿತೈಃ ।**
**ಸಲಿಲೈಃ ಸ್ನಾಪಯೇನ್ಮಂತ್ರೈರ್ನಿತ್ಯದಾ ವಿಭವೇ ಸತಿ ।।೨೯।।**

**ಸ್ವಸ್ಯ ಘರ್ಮಾನುವಾಕೇನ ಮಹಾಪುರುಷವಿದ್ಯಯಾ ।**
**ಪೌರುಷೇಣಾಪಿ ಸೂಕ್ತೇನ ಧಾಮನೀರಾಜನಾದಿಭಿಃ ।।೩೦।।**

**ವಿಭವೇ ಸತಿ** ಐಶ್ವರ್ಯವಿದ್ದಾಗ **ನಿತ್ಯದಾ** ದಿನವೂ **ಚಂದನೋಶೀರ-ಕರ್ಪೂರಕುಂಕುಮಾಗುರುವಾಸಿತೈಃ** ಚಂದನ, ಗಂಧ, ಉಶೀರ, ಬಾಳದ ಬೇರು, ಕರ್ಪೂರ, ಕುಂಕುಮ, ಕೇಶರ, ಅಗರು ಇವುಗಳಿಂದ ಸುಗಂಧ-ಯುಕ್ತವಾದ **ಸಲಿಲೈಃ** ನೀರಿನಿಂದ **ಸ್ವಸ್ಯ ಸೂಕ್ತೇನ** ವಿಷ್ಣುಸೂಕ್ತದಿಂದ **ಘರ್ಮಾನುವಾಕೇನ** ಘರ್ಮಸೂಕ್ತದಿಂದ **ಮಹಾಪುರುಷವಿದ್ಯಯಾ** ಜಿಂತಂ ತೇ ಸ್ತೋತ್ರದಿಂದ, ಸಹಸ್ರನಾಮದಿಂದ, ವಿಶ್ವಕರ್ಮಸೂಕ್ತದಿಂದ **ಪೌರುಷೇಣ ಸೂಕ್ತೇನ** ಪೂರುಷಸೂಕ್ತದಿಂದ **ಧಾಮನಿರಾಜನಾದಿಭಿಃ ಮಂತ್ರೈಃ** ಧಾಮಂ ತೇ ಎಂಬ ಮಂತ್ರವು ಕೊನೆಯಲ್ಲಿ ಇರುವ ಸಮುದ್ರಸೂಕ್ತದಿಂದ, ನಿರಾಜನಸೂಕ್ತ, ಪವಮಾನಸೂಕ್ತ, ಇವೇ ಮೊದಲಾದ ಮಂತ್ರಗಳಿಂದ **ಸ್ನಾಪಯೇತ್** ಅಭಿಷೇಕ ಮಾಡಬೇಕು.

ಈ ಮೇಲಿನ ಶ್ಲೋಕಗಳಲ್ಲಿ ಸ್ವಸ್ಯ ಎಂಬುದು ಅನನ್ವಿತವಾಗಿ ತೋರುವುದು ನಿರಾಜನ ಶಬ್ದಾರ್ಥವಾಗದು. ಕಾರಣ ವ್ಯಾಖ್ಯಾನ ಮಾಡುವರು-

**ತಾತ್ಪರ್ಯ- ಸ್ವಸ್ಯ ವಿಷ್ಣುಸೂಕ್ತೇನ । ಧಾಮ ಸೂಕ್ತಂ ಸಮುದ್ರಾದೂರ್ಮಿರಿತಿ ।**

**ನಿತರಾಂ ರಂಜಯೇದ್ಯಸ್ಮಾತ್ ಪಾವಮಾನಂ ತು ಮಂಡಲಮ್ ।**
**ವಿಷ್ಣುನೀರಾಜಾನಂ ತಸ್ಮಾದ್ವಿದ್ವದ್ಭಿಃ ಸಮುದಾಹೃತಮ್ ।।** ಇತಿ ಚ ।

ತನ್ನ ಅನುವಾಕ ಅಂದರೆ ವಿಷ್ಣುಸೂಕ್ತವು, ಧಾಮಸೂಕ್ತವೆಂದರೆ ಸಮುದ್ರಾದೂರ್ಮಿ ಎಂಬ ಸೂಕ್ತವು, ಚೆನ್ನಾಗಿ ಶ್ರೀವಿಷ್ಣುವನ್ನು ರಂಜಿಸುವುದ-ರಿಂದ ಪ್ರತಿಪಾದಿಸುವುದರಿಂದ, ಪವಮಾನಸೂಕ್ತವನ್ನು ನೀರಾಜನ ಎಂದು ವಿದ್ವಾಂಸರು ಕರೆಯುವರು ಎಂದು ಭಾವ.।।೩೦।।

**ವಸ್ತ್ರೋಪವೀತಾಭರಣಪತ್ರಸ್ರಗ್ಗಂಧಲೇಪನೈಃ ।**
**ಅಲಂಕುರ್ವೀತ ಸಪ್ರೇಮ ಮದ್ಭಕ್ತೋ ಮಾಂ ಯಥೋಚಿತೈಃ ॥೩೧॥**

**ಮದ್ಭಕ್ತಃ** ನನ್ನ ಭಕ್ತನು **ಸಪ್ರೇಮ** ಸ್ನೇಹಪೂರ್ವಕವಾಗಿ **ಮಾಂ** ನನ್ನನ್ನು **ಯಥೋಚಿತೈಃ** ಯೋಗ್ಯವಾದ **ವಸ್ತ್ರೋಪವೀತಾಭರಣಪತ್ರಸ್ರಗ್ಗಂಧಲೇಪನೈಃ ವಸ್ತ್ರ** ಉಟ್ಟುಕೊಳ್ಳುವ ವಸ್ತ್ರ, **ಉಪವೀತ** ಹೊದ್ದುಕೊಳ್ಳುವ ಮಡಿ ಅಥವಾ ಯಜ್ಞೋಪವೀತ **ಆಭರಣ** ಆಭರಣಗಳು **ಪತ್ರ** ತುಲಸೀ ಮುಂತಾದ ಎಲೆಗಳು **ಸ್ರಕ್** ಮಾಲೆ **ಗಂಧಲೇಪನೈಃ** ಗಂಧವನ್ನು ಹಚ್ಚುವುದರಿಂದ **ಅಲಂಕುರ್ವೀತ** ಅಲಂಕಾರ ಮಾಡಬೇಕು.॥೩೧॥

**ಪಾದ್ಯಮಾಚಮನೀಯಂ ಚ ಗಂಧಂ ಸುಮನಸೋಜ್ವಲಮ್ ।**
**ಧೂಪದೀಪೋಪಹಾರಾಣಿ ದದ್ಯಾನ್ಮೇ ಶ್ರದ್ಧಯಾಽರ್ಚಕಃ ॥೩೨॥**

**ಪಾದ್ಯಂ** ಪಾದಪ್ರಕ್ಷಾಲನಕ್ಕೆ ನೀರನ್ನು **ಆಚಮನೀಯಂ** ಆಚಮನೋದಕ-ವನ್ನು **ಸುಮನಸೋಜ್ವಲಂ** ಹೂಗಳಿಂದ ಸಹಿತವಾದ **ಗಂಧಂ** ಶ್ರೀಗಂಧವನ್ನು **ಧೂಪ** ಧೂಪವನ್ನು **ದೀಪ** ದೀಪಗಳನ್ನು **ಉಪಹಾರ್ಯಾಣಿ** ಉಡುಗೊರೆಗಳನ್ನು ಕಾಣಿಕೆಗಳನ್ನು **ಅರ್ಚಕಃ** ಪೂಜಕನು **ಶ್ರದ್ಧಯಾ** ಶ್ರದ್ಧೆಯಿಂದ **ದದ್ಯಾತ್** ಅರ್ಪಿಸಬೇಕು.॥೩೨॥

**ಗುಡಪಾಯಸಸರ್ಪೀಂಷಿ ಶಷ್ಕುಲ್ಯಾಪೂಪಮೋದಕಾನ್ ।**
**ಸಂಯಾವಂ ದಧಿಸೂಪಾಂಶ್ಚ ನೈವೇದ್ಯಂ ಸತಿ ಕಲ್ಪಯೇತ್ ॥೩೩॥**

**ಸತಿ** ಐಶ್ವರ್ಯವಿದ್ದಾಗ **ಗುಡಪಾಯಸ** ಬೆಲ್ಲದ ಪಾಯಸ **ಸರ್ಪೀಂಷಿ** ತುಪ್ಪ **ಶಷ್ಕುಲೀ** ಚಕ್ಕುಲಿ **ಅಪೂಪ** ಅನಾರಸ **ಮೋದಕಾನ್** ಮೋದಕಗಳನ್ನು **ಸಂಯಾವಂ** ಗೋಧಿಹಿಟ್ಟಿನ ಪಾಯಸವನ್ನು **ದಧಿ** ಮೊಸರನ್ನು **ಸೂಪಾನ್** ತೊವ್ವೆಯನ್ನು **ನೈವೇದ್ಯಂ ಕಲ್ಪಯೇತ್** ನೈವೇದ್ಯವನ್ನು ಮಾಡಬೇಕು.॥೩೩॥

**ಅಭ್ಯಂಗೋನ್ಮರ್ದನಾದರ್ಶದಂತಧಾವಾಭಿಷೇಚನಮ್ ।**
**ಅನ್ನಾದಿ ನೃತ್ಯಗೀತಾದಿ ಪರ್ವಣಿ ಸ್ಯುಸ್ತಥಾನ್ವಹಮ್ ॥೩೪॥**

**ಅಭ್ಯಂಗ** ಎಣ್ಣೆಯನ್ನು ಹಚ್ಚುವುದು, **ಉನ್ಮರ್ದನ** ಸೀಗೆಕಾಯಿ, ಮುಂತಾದವುಗಳಿಂದ ಉಜ್ಜುವುದು **ಆದರ್ಶ** ಕನ್ನಡಿಯನ್ನು ತೋರಿಸುವುದು,

**ದಂತಧಾವ** ಹಲ್ಲುಜ್ಜುವುದು **ಅಭಿಷೇಚನಂ** ಅಭಿಷೇಕ ಮಾಡಿಸುವುದು, **ಅನ್ನಾದಿ** ಅನ್ನ ಮುಂತಾದ ನೈವೇದ್ಯ **ನೃತ್ಯಗೀತಾದಿ** ನರ್ತನ ಮಾಡುವುದು ಹಾಡು ಹೇಳುವುದು **ಸರ್ವಾಣಿ** ಎಲ್ಲವು **ಅನ್ವಹಂ ಸ್ಯುಃ** ಪ್ರತಿದಿನವೂ ನಡೆಯಬೇಕು.

ಅನುಯಾಗದ ರೀತಿಯನ್ನು ಹೇಳುವರು-

**ವಿಧಿನಾ ವಿಹಿತೇ ಕುಂಡೇ ಮೇಖಲಾವರ್ತವೇದಿಭಿಃ ।**
**ಅಗ್ನಿಮಾಧಾಯ ಪರಿತಃ ಸಮೂಹೇತ್ ಪಾಣಿನೋದಿತಮ್ ॥೩೫॥**

**ಮೇಖಲಾವರ್ತವೇದಿಭಿಃ ಸಹ** ಮೇಖಲಾವರ್ತನಗಳಿಂದ ವಿಹಿತವಾದ ಯಜ್ಞಸ್ಥಾನದಲ್ಲಿ **ವಿಧಿನಾ ವಿಹಿತೇ** ವೇದವಿಹಿತವಾದ **ಕುಂಡೇ** ಕುಂಡದಲ್ಲಿ **ಅಗ್ನಿಂ ಆಧಾಯ** ಅಗ್ನಿಯನ್ನು ಪ್ರತಿಷ್ಠಾಪಿಸಿ **ಉದಿತಂ** ಪ್ರಜ್ವಲಿಸುವ **ಅಗ್ನಿಯನ್ನು ಪರಿತಃ** ಸುತ್ತಲೂ **ಪಾಣಿನಾ** ಕೈಯಲ್ಲಿ ಹಾಕಿಕೊಂಡಿರುವ ನೀರಿನಿಂದ **ಸಮೂಹೇತ್** ಸ್ಥಳಶುದ್ಧಿ ಮಾಡಬೇಕು.॥೩೫॥

**ಪರಿಸ್ತೀರ್ಯಾಥ ಪರ್ಯುಕ್ಷೇದನ್ವಾಧಾಯ ಯಥಾವಿಧಿ ।**
**ಪ್ರೋಕ್ಷಣೀಯಾನಿ ದ್ರವ್ಯಾಣಿ ಪ್ರೋಕ್ಷ್ಯಾಗ್ನಾವಾವಹೇತ ಮಾಮ್॥೩೬॥**

**ಅಥ** ಸ್ಥಳಶುದ್ಧಿಯ ನಂತರ **ಪರಿಸ್ತೀರ್ಯ** ದರ್ಭೆಗಳನ್ನು ಹಾಕಿ **ಯಥಾವಿಧಿ** ವಿಧಿಪೂರ್ವಕವಾಗಿ **ಅನ್ವಾಧಾಯ** ಅನ್ವಾಧಾನ ಮಾಡಿ **ಪ್ರೋಕ್ಷಣೀಯಾನಿ ದ್ರವ್ಯಾಣಿ** ಪ್ರೋಕ್ಷಿಸಬೇಕಾದ ದ್ರವ್ಯಗಳನ್ನು **ಪ್ರೋಕ್ಷ್ಯ** ಮಂತ್ರಪೂತವಾದ ಜಲದಿಂದ ಸಿಂಪಡಿಸಿ **ಪರ್ಯುಕ್ಷೇತ್** ಪರ್ಯುಕ್ಷಣ-ಪರಿಸಮೂಹನ-ಪರಿಸ್ತರಣಗಳನ್ನು ಮಾಡಬೇಕು. **ಅಗ್ನೌ** ಅಗ್ನಿಯಲ್ಲಿ **ಮಾಂ** ನನ್ನನ್ನು **ಆವಹೇತ** ಆವಾಹಿಸಬೇಕು.॥೩೬॥

**ತಪ್ತಜಾಂಬೂನದಪ್ರಖ್ಯಂ ಶಂಖಚಕ್ರಗದಾಂಬುಜೈಃ ।**
**ಲಸಚ್ಚತುರ್ಭುಜಂ ಶಾಂತಂ ಪದ್ಮಕಿಂಜಲ್ಕವಾಸಸಮ್ ॥೩೭॥**

**ತಪ್ತಜಾಂಬೂನದಪ್ರಖ್ಯಂ** ಪುಟಕ್ಕೆ ಹಾಕಿದ ಚಿನ್ನದಂತೆ ಇರುವ **ಶಂಖಚಕ್ರ-ಗದಾಂಬುಜೈಃ** ಶಂಖ, ಚಕ್ರ, ಗದಾ, ಪದ್ಮಗಳಿಂದ, **ಲಸಚ್ಚತುರ್ಭುಜಂ** ಶೋಭಿಸುವ ನಾಲ್ಕು ಕೈಗಳುಳ್ಳ **ಶಾಂತಂ** ಶಾಂತಸ್ವರೂಪನಾದ **ಪದ್ಮಕಿಂಜಲ್ಕವಾಸಸಂ** ಕಮಲದ ಕೇಸರದಂತಿರುವ ವಸ್ತ್ರವನ್ನು ಧರಿಸಿದ॥೩೭॥

**ಸ್ಫುರತ್ಕಿರೀಟಕಟಕಕಟಿಸೂತ್ರವರಾಂಗದಮ್ ।**
**ಶ್ರೀವತ್ಸವಕ್ಷಸಂ ಭ್ರಾಜತ್ಕೌಸ್ತುಭಂ ವನಮಾಲಿನಮ್ ॥೩೮॥**

**ಸ್ಫುರತ್** ಹೊಳೆಯುವ **ಕಿರೀಟ** ಕಿರೀಟ, **ಕಟಕ** ಕಡಗಗಳು **ಕಟಿಸೂತ್ರ** ಉಡುದಾರ **ವರ** ಶ್ರೇಷ್ಠವಾದ **ಅಂಗದಂ** ಭುಜಕೀರ್ತಿ ಉಳ್ಳ **ಶ್ರೀವತ್ಸವಕ್ಷಸಂ** ಹೃದಯದಲ್ಲಿ ಶ್ರೀವತ್ಸವೆಂಬ ಚಿಹ್ನ ಉಳ್ಳ **ಭ್ರಾಜತ್ಕೌಸ್ತುಭಂ** ಪ್ರಕಾಶಮಾನವಾದ ಕೌಸ್ತುಭಮಣಿಯನ್ನು ಧರಿಸಿದ **ವನಮಾಲಿನಂ** ವನಮಾಲೆಯನ್ನು ಧರಿಸಿದ ಪರಮಾತ್ಮನನ್ನು॥೩೮॥

**ಧ್ಯಾಯನ್ನಭ್ಯರ್ಚ್ಯ ದಾರೂಣಿ ಹವಿಷಾಽಭಿಯುತಾನಿ ಚ ।**
**ಪ್ರಾಸ್ಯಾಜ್ಯ ಭಾಗಾವಾಘಾರ್ಯ ದತ್ವಾ ಚಾಜ್ಯಪ್ಲುತಂ ಹವಿಃ ॥೩೯॥**

**ಧ್ಯಾಯನ್** ಧ್ಯಾನಮಾಡುತ್ತ **ಅಭ್ಯರ್ಚ್ಯ** ಷೋಡಶೋಪಚಾರ ಪೂಜೆಯನ್ನು ಮಾಡಿ **ಹವಿಷಾ** ತುಪ್ಪದಿಂದ **ಅಭಿಯುತಾನಿ** ಯುಕ್ತವಾದ ಅಭ್ಯಕ್ತವಾದ **ದಾರೂಣಿ** ಸಮಿತ್ತುಗಳನ್ನು **ಪ್ರಾಸ್ಯ** ಹೋಮ ಮಾಡಿ **ಅಘಾರ್ಯ** ಕುಂಡದ ಮೇಲೆ ಆಹುತಿ ಶೇಷವನ್ನು ಕೊಟ್ಟು **ಆಜ್ಯಭಾಗೌ ಆಘಾರ್ಯ** ಕೋಣದಿಂದ ಕೋಣದ ವರೆಗೆ ತುಪ್ಪದ ಆಹುತಿಯನ್ನು ಹಾಕಿ **ಆಜ್ಯಪ್ಲುತಂ ಹವಿಃ** ತುಪ್ಪವನ್ನು ಬೆರಿಸಿದ ಅನ್ನ ಮೊದಲಾದ ದ್ರವ್ಯವನ್ನು॥೩೯॥

**ಜುಹುಯಾನ್ಮೂಲಮಂತ್ರೇಣ ಷೋಡಷಾರ್ಚಾವಿಧಾನತಃ ।**
**ಧರ್ಮಾದಿಭ್ಯೋ ಯಥಾನ್ಯಾಯಂ ಮಂತ್ರೈಃ ಸ್ವಿಷ್ಟಕೃತಂ ಬುಧಃ ॥೪೦॥**

**ಮೂಲಮಂತ್ರೇಣ** ನಾರಾಯಣಾಷ್ಟಾಕ್ಷರಮಂತ್ರದಿಂದ **ಷೋಡಶ** ಹದಿನಾರು ಬಾರಿ **ಜುಹುಯಾತ್** ಹೋಮ ಮಾಡಬೇಕು. **ಅರ್ಚಾವಿಧಾನತಃ** ಪೂಜಾಕ್ರಮದಿಂದ **ಧರ್ಮಾದಿಭ್ಯಃ** ಪೀಠದೇವತೆಗಳಿಗೆ **ಮಂತ್ರೈಃ** ಆ ದೇವತಾ ಮಂತ್ರಗಳಿಂದ **ಯಥಾನ್ಯಾಯಂ** ನ್ಯಾಯಪ್ರಕಾರ **ಹವಿಃ ಜುಹುಯಾತ್** ಹವಿಸ್ಸನ್ನು ಕೊಡಬೇಕು. **ಬುಧಃ** ಜ್ಞಾನಿಯು **ಸ್ವಿಷ್ಟಕೃತಂ ಜುಹುಯಾತ್** ನಂತರ ಸ್ವಿಷ್ಟಕೃತ್ ಹೋಮ ಮಾಡಬೇಕು.॥೪೦॥

**ಅಭ್ಯರ್ಚ್ಯಾಗ್ನಿಂ ನಮಸ್ಕೃತ್ಯ ಪಾರ್ಷದೇಭ್ಯೋ ಬಲಿಂ ಹರೇತ್ ।**
**ಮೂಲಮಂತ್ರಂ ಜಪೇದ್ ಬ್ರಹ್ಮ ಸ್ಮರನ್ ನಾರಾಯಣಾತ್ಮಕಮ್ ॥೪೧॥**

**ಅಗ್ನಿಂ** ಅಗ್ನಿಯನ್ನು **ಅಭ್ಯರ್ಚ್ಯ** ಪೂಜಿಸಿ **ನಮಸ್ಕೃತ್ಯ** ನಮಸ್ಕರಿಸಿ ಪುನಃ ಧೂಪವನ್ನರ್ಪಿಸಿ **ಪಾರ್ಷದೇಭ್ಯಃ** ಸನಕಾದಿಗಳಿಗೆ **ಬಲಿಂ ಹರೇತ್** ಬಲಿಯನ್ನು ಕೊಡಬೇಕು. **ಅಭ್ಯರ್ಚಾಯಾಂ** ಎಂಬ ಪಾಠವಿದ್ದಾಗ **ಅಭಿ** ಅಭಿಮುಖನಾಗಿ **ಅರ್ಚಾಯಾಂ** ಪ್ರತಿಮೆಯಲ್ಲಿ ಸನ್ನಿಹಿತನಾದ ಭಗವಂತನನ್ನು ನಮಸ್ಕರಿಸಿ ಎಂದರ್ಥ. **ಪಾರ್ಷದೇಭ್ಯಃ ಬಲಿಂ ಹರೇತ್** ಎಂಬುದಕ್ಕೆ ತಂತ್ರಸಾರಸಂಗ್ರಹ ವ್ಯಾಖ್ಯಾನವಾದ ನಾರಾಯಣಪಂಡಿತಾಚಾರ್ಯಕೃತ ಯೋಗದೀಪಿಕಾ ಪ್ರಕಾರ ವೈಶ್ವದೇವ ಬಲಿಹರಣ ಮಾಡಬೇಕೆಂದರ್ಥ. **ನಾರಾಯಣಾತ್ಮಕಂ** ಗುಣಪೂರ್ಣನಾದ **ಬ್ರಹ್ಮ** ಶ್ರೀಹರಿಯನ್ನು **ಸ್ಮರನ್** ಸ್ಮರಿಸುತ್ತ **ಮೂಲಮಂತ್ರಂ** ನೈವೇದ್ಯಾಂಗವಾದ ನಾರಾಯಣಮಂತ್ರವನ್ನು **ಜಪೇತ್** ಜಪಿಸಬೇಕು.।।೪೧।।

**ದತ್ವಾಽಽಚಮನಮುಚ್ಛೇಷಂ ವಿಷ್ವಕ್ಸೇನಾಯ ಕಲ್ಪಯೇತ್ ।**
**ಮುಖವಾಸಂ ಸುರಭಿಮತ್ತಾಂಬೂಲಾದ್ಯಮಥಾರ್ಹಯೇತ್ ।।೪೨।।**

**ಆಚಮನಂ ದತ್ವಾ** ಆಚಮನವನ್ನು ಕೊಟ್ಟು **ಉಚ್ಛೇಷಂ** ಉಚ್ಛಿಷ್ಟವನ್ನು **ವಿಷ್ವಕ್ಸೇನಾಯ ಕಲ್ಪಯೇತ್** ವಿಷ್ವಕ್ಸೇನನಿಗೆ ಕೊಡಬೇಕು. **ಸುರಭಿಮತ್** ಸುಗಂಧಯುತವಾದ **ಮುಖವಾಸಂ** ಮುಖ ಒರಿಸುವ ವಸ್ತ್ರ ತಾಂಬೂಲ, ಎಲೆ, ಅಡಿಕೆ ಮುಂತಾದ ದಶವಿಧ ತಾಂಬೂಲವನ್ನು ಕೊಟ್ಟು **ಅಥ** ನಂತರ **ಅರ್ಹಯೇತ್** ಚಾಮರಾದಿಗಳಿಂದ ಪೂಜಿಸಬೇಕು.।।೪೨।।

**ಉಪಗಾಯನ್ ಗೃಣನ್ ನೃತ್ಯನ್ ಕರ್ಮಾಣ್ಯಭಿನಯನ್ ಮಮ ।**
**ಮತ್ಕಥಾಃ ಶ್ರಾವಯನ್ ಶೃಣ್ವನ್ ಮುಹೂರ್ತಕ್ಷಣಿಕೋ ಭವೇತ್ ।।೪೩।।**

**ಮಮ ಕರ್ಮಾಣಿ** ನಾನು ಮಾಡಿದ ಕ್ರಿಯೆಗಳನ್ನು **ಉಪಗಾಯನ್** ಗಾನ ಮಾಡುತ್ತ **ನೃತ್ಯನ್** ಕುಣಿಯುತ್ತ **ಗೃಣನ್** ಬೇರೆಯವರಿಂದಲೂ ಹೇಳಿಸುತ್ತ **ಅಭಿನಯನ್** ಎಲ್ಲರಿಗೂ ತಿಳಿಯಪಡಿಸುತ್ತ ಇದರ ಅಭಿಪ್ರಾಯವೇ ಉತ್ತರಾರ್ಧ **ಮತ್ಕಥಾಃ** ನನ್ನ ಕಥಾಗಳನ್ನು **ಶ್ರಾವಯನ್** ಜನರಿಗೆ ಕೇಳಿಸುತ್ತ **ಶೃಣ್ವನ್** ಅನ್ಯರಿಂದ ತಾನು ಕೇಳುತ್ತ **ಮೂಹರ್ತಕ್ಷಣಿಕಃ ಭವೇತ್** ಮೂಹೂರ್ತವನ್ನು ಕ್ಷಣದಂತೆ ಕಳೆಯಬೇಕು. ಅಥವಾ ಎಲ್ಲ ಮೂಹೂರ್ತಗಳಲ್ಲಿ ಕ್ಷಣಗಳಲ್ಲಿ ಹರಿಕಥಾ ಶ್ರವಣ ಮಾಡುತ್ತ ಕಾಲ ಕಳೆಯಬೇಕು ಎಂದು ಭಾವ.

ಮೇಲಿನ ಶ್ಲೋಕದಲ್ಲಿ ಉಪಗಾಯನ್ ಮತ್ತು ಗೃಣನ್ ಎಂಬ ಪದಗಳ ಅರ್ಥ ವ್ಯತ್ಯಾಸ ತಿಳಿಯಲಾರದು. ಮತ್ತು ಅಭಿನಯನವೆಂದರೆ ಅನುಕರಣ

ಮಾಡುವುದು ಎಂದು ಅರ್ಥ. ನಟಿಸುವುದು ಎಂದರ್ಥ ಮಾಡಿದರೆ ಶ್ರೀಹರಿಗೆ ಅವಮಾನ ಮಾಡಿದಂತಾಗುವುದು. ಬೇರೆಡೆ ಒಯ್ಯುವುದು ಎಂದರ್ಥವನ್ನು ಮಾಡಲಾಗದು. ಕಂಸಹರಣಾದಿಗಳನ್ನು ಬೇರೆಡೆ ಒಯ್ಯುವದು ಹೇಗೆ ಮುಂತಾದ ಶಂಕೆಗಳಿಗೆ ಉತ್ತರಿಸುತ್ತ ವ್ಯಾಖ್ಯಾನಿಸುವರು-

**ತಾತ್ಪರ್ಯ- ಮಮ ಕರ್ಮಾಣಿ ಕೀರ್ತಯಿತ್ವಾಽಭಿತೋ ನಯನ್ ಸರ್ವೇಷಾಂ ಪ್ರಕಾಶಯನ್ । ಮತ್ಕಥಾಃ ಶ್ರಾವಯನ್ ಇತಿ ಅಭಿನಯಶಬ್ದಾರ್ಥಃ ।**

ಕೀರ್ತಯಿತ್ವಾ ಎಂಬುದರಿಂದ ಗೃಣನ್ ಎಂಬ ಶಬ್ದವನ್ನು ವ್ಯಾಖ್ಯಾನಿಸಿದಂತಾಯಿತು. ಅಭಿ ಎಂಬುದಕ್ಕೆ ಅಭಿತಃ ಎಂದರ್ಥ. ನಯನ್ ಎಂಬುದಕ್ಕೆ ಪ್ರಕಾಶಯನ್ ಎಂದರ್ಥ. ಮಮ ಕರ್ಮಾಣಿ ಗೃಣನ್ ಅಭಿನಯನ್ ಎಂಬುದಕ್ಕೆ ನನ್ನ ಕರ್ಮಗಳನ್ನು ಕೀರ್ತನ ಮಾಡಿ ಎಲ್ಲರಿಗೂ ತಿಳಿಯಪಡಿಸಿ ಎಂದರ್ಥ. ಇದನ್ನೇ ಮತ್ಕಥಾಂ ಶ್ರಾವಯನ್ ಎಂದು ವಿವರಿಸಿದ್ದಾರೆ. ಕಾರಣ ಪುನರುಕ್ತಿ ಇಲ್ಲ ಎಂದು ತಿಳಿಯಬೇಕು.।।೪೩।।

**ಸ್ತವೈರುಚ್ಚಾವಚೈಃ ಶ್ರೌತೈಃ ಪೌರಾಣೈಃ ಪ್ರಾಕೃತೈರಪಿ ।**
**ಸ್ತುತ್ವಾ ಪ್ರಸೀದ ಭಗವನ್ನಿತಿ ವಂದೇತ ದಂಡವತ್ ।।೪೪।।**

**ಉಚ್ಚಾವಚೈಃ** ಬಹುಶಬ್ದಗಳಿಂದ ಕೂಡಿದ್ದರಿಂದ **ಉಚ್ಚ** ಶ್ರೇಷ್ಠವಾದ ಕಡಿಮೆ ಶಬ್ದಗಳಿರುವುದರಿಂದ **ಅವಚ** ಕನಿಷ್ಠವಾದ **ಶ್ರೌತೈಃ** ಶ್ರುತಿಗಳಲ್ಲಿರುವ **ಪೌರಾಣೈಃ** ಪುರಾಣಗಳಲ್ಲಿರುವ **ಪ್ರಾಕೃತೈಃ** ಜಗದುದ್ಧಾರಕ್ಕಾಗಿಯೇ ಪ್ರಕೃತರಾದ ಶ್ರೀಮದಾಚಾರ್ಯರೇ ಮೊದಲಾದವರಿಂದ ರಚಿತವಾದ್ದರಿಂದ ಪ್ರಾಕೃತಗಳಾದ **ಸ್ತವೈಃ** ಸ್ತೋತ್ರಗಳಿಂದ **ಸ್ತುತ್ವಾ** ಸ್ತೋತ್ರಮಾಡಿ **ಭಗವನ್** ಶ್ರೀಹರಿಯೇ **ಪ್ರಸೀದ** ಪ್ರಸನ್ನನಾಗು **ಇತಿ** ಎಂದು **ದಂಡವತ್ ವಂದೇತ** ಸಾಷ್ಟಾಂಗ ನಮಸ್ಕರಿಸಬೇಕು.

ಪ್ರಕೃತರಿಂದ ರಚಿತ ಪ್ರಾಕೃತ ಎಂದು ಅರ್ಥ ಮಾಡಿದ್ದರಿಂದ ಜ್ಞಾನಿಗಳು ಮಾಡಿದ ಸ್ತೋತ್ರಗಳನ್ನೇ ಹೇಳಬೇಕು ಎಂಬ ನಿಯಮದ ವಿರುದ್ಧ ಪ್ರಾಕೃತರು ಮೂರ್ಖರು ಮಾಡಿದ ಪ್ರಾಕೃತಸ್ತೋತ್ರಗಳಿಂದ ಎಂದು ಹೇಳುವುದು ಸರಿಯಲ್ಲ ಎಂದು ಹೇಳಿದಂತಾಯಿತು.।।೪೪।।

**ಶಿರೋ ಮತ್ಪಾದಯೋಃ ಕೃತ್ವಾ ಬಾಹುಭ್ಯಾಂ ಚ ಪರಸ್ಪರಮ್ ।**
**ಪ್ರಪನ್ನಂ ಪಾಹಿ ಮಾಮೀಶ ಭೀತಂ ಮೃತ್ಯುಗ್ರಹಾರ್ಣವಾತ್ ।।೪೫।।**

**ಪರಸ್ಪರಂ (ಬದ್ಧಾಭ್ಯಾಂ) ಬಾಹುಭ್ಯಾಂ ಸಹ** ಜೋಡಿಸಿದ ಕೈಗಳಿಂದ ಸಹಿತವಾಗಿ **ಶಿರಃ** ತಲೆಯನ್ನು **ಮತ್ಪಾದಯೋಃ ಕೃತ್ವಾ** ನನ್ನ ಕಾಲುಗಳಲ್ಲಿರಿಸಿ **ಈಶ** ಸ್ವಾಮಿಯೇ **ಮೃತ್ಯುಗ್ರಹಾರ್ಣವಾತ್** ಸಂಸಾರಸಮುದ್ರದಿಂದ **ಭೀತಂ** ಭಯಗೊಂಡ **ಪ್ರಪನ್ನಂ** ಶರಣಾಗತನಾದ **ಮಾಂ** ನನ್ನನ್ನು **ಪಾಹಿ** ರಕ್ಷಿಸು ಎಂದು ಪ್ರಾರ್ಥಿಸಬೇಕು।।೪೫।।

**ತತಃ ಶೇಷಾಂ ಮಯಾ ದತ್ತಾಂ ಶಿರಸ್ಯಾಧಾಯ ಸಾದರಮ್ ।**
**ಉದ್ವಾಸಯೇಚ್ಚೇದುದ್ವಾಸ್ಯಂ ಜ್ಯೋತಿರ್ಜ್ಯೋತಿಷಿ ತತ್ಪುನಃ ।।೪೬।।**

**ತತಃ** ನಂತರ **ಮಯಾ ದತ್ತಾಂ** ಪ್ರಸನ್ನನಾದ ನನ್ನಿಂದ ಕೊಡಲ್ಪಟ್ಟ **ಶೇಷಾಂ** ನಿರ್ಮಾಲ್ಯವನ್ನು **ಸಾದರಂ** ಭಕ್ತಿಯಿಂದ **ಶಿರಸಿ ಆಧಾಯ** ತಲೆಯಲ್ಲಿಟ್ಟುಕೊಂಡು **ಉದ್ವಾಸಯೇತ್ ಚೇತ್** ಉಪಸಂಹಾರ ಮಾಡಬೇಕಿದ್ದರೆ **ಯತ್ ಜ್ಯೋತಿಃ** ಪ್ರತಿಮೆಯಲ್ಲಿ ಸ್ಥಾಪಿತವಾದ ಬಿಂಬರೂಪಾಂಶವೇನಿದೆಯೋ **ತತ್ ಆ ಬಿಂಬರೂಪಾಂಶವನ್ನು ಜ್ಯೋತಿಷಿ** ತನ್ನ ಬಿಂಬದಲ್ಲಿ **ತತ್** ಅದನ್ನು **ಉದ್ವಾಸಯೇತ್** ಉಪಸಂಹಾರ ಮಾಡಬೇಕು.।।೪೬।।

**ಅರ್ಚಾದಿಷು ಯಥಾ ಯತ್ರ ಶ್ರದ್ಧಾ ಮಾಂ ತತ್ರ ಚಾರ್ಚಯೇತ್ ।**
**ಸರ್ವಭೂತೇಷ್ವಾತ್ಮನಿ ಚ ಸರ್ವಾತ್ಮಾಽಹಮವಸ್ಥಿತಃ ।।೪೭।।**

**ಅರ್ಚಾದಿಷು** ಪ್ರತಿಮೆಗಳಲ್ಲಿ **ಯತ್ರ** ಯಾವ ಪ್ರತಿಮೆಯಲ್ಲಿ **ಯಥಾ ಶ್ರದ್ಧಾ** ಹೇಗೆ ಶ್ರದ್ಧೆ ಇದೆಯೋ **ತತ್ರ** ಅಲ್ಲಿ **ಮಾಂ** ನನ್ನನ್ನು **ಅರ್ಚಯೇತ್** ಪೂಜಿಸಬೇಕು. **ಸರ್ವಭೂತೇಷು** ಎಲ್ಲ ಚರಾಚರಪದಾರ್ಥಗಳಲ್ಲಿ **ಆತ್ಮನಿ ಚ** ತನ್ನಲ್ಲಿಯೂ **ಅಹಂ** ನಾನು **ಸರ್ವಾತ್ಮಾ** ಎಲ್ಲರ ಅಂತರ್ಯಾಮಿಯಾಗಿ **ಅವಸ್ಥಿತಃ** ಇರುವೆನು. ಅಂದರೆ ರಾಮ-ಕೃಷ್ಣ-ಹಯಗ್ರೀವ-ನೃಸಿಂಹ-ವೇದವ್ಯಾಸಾದಿಗಳಲ್ಲಿ ಎಲ್ಲಿ ಬೇಕಾದರೂ ಪೂಜಿಸಬಹುದು ಅಥವಾ ಚಲಪ್ರತಿಮಾಗಳಾದ ಬ್ರಾಹ್ಮಣಾದಿಗಳಲ್ಲಿಗೋ ಮುಂತಾದವು, ಸ್ಥಂಡಿಲಾದಿಗಳು, ಅಗ್ನಿ ಮುಂತಾದ ಎಂಟು ವಿಧ ಪೂಜಾಸ್ಥಳಗಳಲ್ಲಿ ಎಲ್ಲಿ ವಿಶ್ವಾಸವಿದೆಯೋ ಅಲ್ಲಿ ಪೂಜಿಸಬೇಕು ಎಂದು ಭಾವ.।।೪೭।।

**ಏವಂ ಕ್ರಿಯಾಯೋಗಪಥೈಃ ಪುಮಾನ್ ವೈದಿಕತಾಂತ್ರಿಕೈಃ ।**
**ಅರ್ಚಾನುಭಾವತಃ ಸಿದ್ಧಿಂ ಮತ್ತೋ ವಿಂದತ್ಯಭಿಪ್ಸಿತಾಮ್ ।।೪೮।।**

**ಏವಂ** ಈ ರೀತಿಯಾಗಿ **ಪುಮಾನ್** ಅಧಿಕಾರಿಯು **ವೈದಿಕತಾಂತ್ರಿಕೈಃ** ವೇದ ಮತ್ತು ತಂತ್ರ (ಪಂಚರಾತ್ರಾದಿಗಳು) ಗಳಲ್ಲಿ ಹೇಳಿದ **ಕ್ರಿಯಾಯೋಗಪಥೈಃ** ಪೂಜೆ ಮುಂತಾದ ಕ್ರಿಯೆಗಳಲ್ಲಿ ಭಕ್ತಿಸಹಿತವಾದ ಧ್ಯಾನರೂಪ ಯೋಗವೆಂಬ ಶ್ರೇಷ್ಠ ಪ್ರಾಪ್ತಿಯ ಕಾರಣವಾದ ಉಪಾಯಗಳಿಂದ **ಅರ್ಚಾನುಭಾವತಃ** ಪ್ರತಿಮೆಯಲ್ಲಿರುವ ಸಾನ್ನಿಧ್ಯದಿಂದ **ಮತ್ತಃ** ನನ್ನಿಂದ **ಅಭೀಪ್ಸಿತಾಂ ಸಿದ್ಧಿಂ** ಇಷ್ಟವಾದ ಫಲವನ್ನು **ವಿಂದತಿ** ಹೊಂದುವನು.

ಸುಧೀಂದ್ರರು ''ಪ್ರತಿಮಾಯಾ ಆಭಿರೂಪ್ಯಾದ್ವಾ'' ಎಂದಿದ್ದಾರೆ. ಇದು ಅಸ್ಪಷ್ಟವೆಂದು ಅಡಿಟಿಪ್ಪಣಿಯಲ್ಲಿ ಇದೆ. ಇದು ಅಸ್ಪಷ್ಟವೇನಲ್ಲ. ಸ್ಪಷ್ಟವೇ ಆಗಿದೆ. ಇದರ ಭಾವ ಹೀಗಿದೆ.

**ಅರ್ಚಕಸ್ಯ ತಪೋಯೋಗಾದರ್ಚನಸ್ಯಾತಿಶಾಯನಾತ್ ।**
**ಆಭಿರೂಪ್ಯಾಚ್ಚ ಬಿಂಬಾನಾಂ ದೇವಃ ಸಾನಿಧ್ಯಮೃಚ್ಛತಿ ॥**

ಎಂದು ಪ್ರಮಾಣವಚನಾನುಸಾರ ಅರ್ಚಕ ಎಂದರೆ ಪ್ರತಿಷ್ಠಾಪಕರ ತಪಸ್ಸು ಭಕ್ತಿಯಿಂದಲೂ ವಿಶೇಷಪೂಜೆಯಿಂದಲೂ **ಬಿಂಬಾನಾಂ** ಪ್ರತಿಮೆಗಳ **ಆಭಿರೂಪ್ಯಾತ್** ಸೌಂದರ್ಯದಿಂದಲೂ ಶ್ರೀಹರಿಯು ಸಾನ್ನಿಧ್ಯವನ್ನು ಹೊಂದುವನು ಎಂದು ತಿಳಿಯಬೇಕು ಬಿಂಬಶಬ್ದವು ಪ್ರತಿಮೆ ಎಂಬರ್ಥದಲ್ಲೂ ಇದೆ. ಅಭಿರೂಪ್ಯಪದಕ್ಕೆ ಸೌಂದರ್ಯವೆಂದರ್ಥವಿದೆ.।।೪೮।।

**ಮದರ್ಚಾಂ ಸಂಪ್ರತಿಷ್ಠಾಪ್ಯ ಮಂದಿರಂ ಕಾರಯೇದ್ದೃಢಮ್ ।**
**ಪುಷ್ಪೋದ್ಯಾನಾನಿ ರಮ್ಯಾಣಿ ಪೂಜಾಂ ತತ್ರೋತ್ಸವಾಶ್ರಿತಾಮ್ ॥೪೯॥**

**ಮದರ್ಚಾಂ ಸಂಪ್ರತಿಷ್ಠಾಪ್ಯ** ನನ್ನ ಪ್ರತಿಮೆಯನ್ನು ವಿಧಾನಪೂರ್ವಕವಾಗಿ ಪ್ರತಿಷ್ಠೆ ಮಾಡಿ **ದೃಢಂ ಮಂದಿರಂ** ಬಲವಾದ ಗುಡಿಯನ್ನು **ಕಾರಯೇತ್** ನಿರ್ಮಿಸಬೇಕು. **ರಮ್ಯಾಣಿಪುಷ್ಪೋದ್ಯಾನಾನಿಕಾರಯೇತ್** ಮನೋಹರಗಳಾದ ಹೂತೋಟಗಳನ್ನು ಸಿದ್ಧಪಡಿಸಬೇಕು. **ತತ್ರ** ಆ ಹೂತೋಟದಲ್ಲಿ **ಉತ್ಸವಾಶ್ರಿತಾಂ ಪೂಜಾಂ ಕುರ್ಯಾತ್** ಆಯಾ ಉತ್ಸವಗಳಲ್ಲಿ ಪೂಜೆಯನ್ನು ಮಾಡಬೇಕು.।।೪೯।।

**ಪೂಜಾದೀನಾಂ ಪ್ರವಾಹಾರ್ಥೇ ಮಹಾಪರ್ವಸು ಚಾನ್ವಹಮ್ ।**
**ಕ್ಷೇತ್ರಾಪಣಪುರೋಗ್ರಾಮಾನ್ ದತ್ವಾ ಮತ್ಸಾರ್ಷ್ಟಿತಾಮಿಯಾತ್ ॥೫೦॥**

**ಪೂಜಾದೀನಾಂ** ಪೂಜಾದಿಗಳು **ಪ್ರವಾಹಾರ್ಥೇ** ನಿರಂತರವಾಗಿ ನಡೆಯಲು **ಮಹಾಪರ್ವಸು** ಪರ್ವಕಾಲಗಳಲ್ಲಿ **ಅನ್ವಹಂ** ಪ್ರತಿದಿನವೂ ದೇವರಿಗೆ **ಕ್ಷೇತ್ರ** ಭೂಮಿಯನ್ನು **ಆಪಣ** ಅಂಗಡಿಗಳನ್ನು **ಪುರಃ** ಪಟ್ಟಣಗಳನ್ನು **ಗ್ರಾಮಾನ್** ಹಳ್ಳಿಗಳನ್ನೂ **ದತ್ವಾ** ದಾನವಾಗಿ ಕೊಡುವುದರಿಂದ **ಮತ್ಸಾರ್ಷ್ಟಿತಾಂ ಇಯಾತ್** ನಿರ್ದುಃಖತ್ವೇನ ನನ್ನ ಸಾಮ್ಯವನ್ನು ಹೊಂದುವನು.।।೫೦।।

**ಪ್ರತಿಷ್ಠಯಾ ಸಾರ್ವಭೌಮಂ ಸದ್ಮನಾ ಭುವನತ್ರಯಮ್ ।**
**ಪೂಜಾದಿನಾ ಬ್ರಹ್ಮಲೋಕಂ ತ್ರಿಭಿರ್ಮತ್ಸಾಮ್ಯತಾಮಿಯಾತ್।।೫೧।।**

**ಪ್ರತಿಷ್ಠಯಾ** ಭಕ್ತಿಯಿಂದ ಭಗವನ್ಮೂರ್ತಿಯನ್ನು ಪ್ರತಿಷ್ಠೆ ಮಾಡುವುದರಿಂದ **ಸಾರ್ವಭೌಮಂ** ರಾಜ್ಯದ ಆಧಿಪತ್ಯವನ್ನು ಹೊಂದುವನು **ಸದ್ಮನಾ** ಶ್ರೇಷ್ಠಭಕ್ತಿಯಿಂದ ದೇವಸ್ಥಾನವನ್ನು ಕಟ್ಟಿಸುವುದರಿಂದ **ಭುವನತ್ರಯಂ** ಇಂದ್ರಪದವಿಗೆ ಯೋಗ್ಯನಾದವನು ತ್ರಿಲೋಕಾಧಿಪತ್ಯವನ್ನು ಅಂದರೆ ಇಂದ್ರಪದವಿಯನ್ನು ಯೋಗ್ಯನಾಗದವನು ಮೂರು ಲೋಕದಲ್ಲಿ ಪೂಜ್ಯತೆಯನ್ನು **ಪೂಜಾದಿನಾ** ಇನ್ನೂ ಹೆಚ್ಚು ಭಕ್ತಿಯಿಂದ ಪರಮಾತ್ಮನನ್ನು ಪೂಜಿಸುವುದರಿಂದ **ಬ್ರಹ್ಮಲೋಕಂ** ಸತ್ಯಲೋಕ ಪ್ರಾಪ್ತಿಯು, ಯೋಗ್ಯರಿಗೆ ಬ್ರಹ್ಮಪದವಿಯೂ ಆಗುವುದು. **ತ್ರಿಭಿಃ** ಪ್ರತಿಷ್ಠೆ, ಮಂದಿರ, ಪೂಜಾಗಳಿಂದ, **ಮತ್ಸಾಮ್ಯತಾಂ ಇಯಾತ್** ನಿರ್ದುಃಖತ್ವೇನ ಸಾಮ್ಯ ರೂಪವಾದ ಮುಕ್ತಿಯನ್ನು ಪಡೆಯುವನು.।।೫೧।।

ಹಿಂದಿನ ಶ್ಲೋಕದಲ್ಲಿ ಜ್ಞಾನಭಕ್ತಿಗಳಿಲ್ಲದೇ ಪ್ರತಿಷ್ಠಾದಿಗಳಿಂದ ಇಂದ್ರಪದವಿ, ತ್ರಿಲೋಕಪೂಜ್ಯತ್ವ, ಸತ್ಯಲೋಕ ಮುಕ್ತಿಗಳಾಗುವವು ಎಂದು ಹೇಳಿದಂತೆ ತೋರುವುದು. ಅದು ಹೇಗೆ ಸಾಧ್ಯ? ಕಾರಣ ಈ ಶ್ಲೋಕ ಹೊರಟಿದೆ.

**ಮಾಮೇವ ನೈರಪೇಕ್ಷೇಣ ಭಕ್ತಿಯೋಗೇನ ವಿಂದತಿ ।**
**ಸ ಭಕ್ತಿಯೋಗಂ ಲಭತೇ ಏವಂ ಯಃ ಪೂಜಯೇತ ಮಾಮ್ ।।೫೨।।**

**ಯಃ** ಯಾವನು **ಏವಂ** ಈ ರೀತಿಯಾಗಿ **ಮಾಂ** ನನ್ನನ್ನು **ಪೂಜಯೇತ್** ಪೂಜಿಸುವನೋ **ಸಃ** ಅವನು **ಭಕ್ತಿಯೋಗಂ** ಭಕ್ತಿರೂಪವಾದ ಉಪಾಯವನ್ನು **ಲಭತೇ** ಹೊಂದುವನು **ನೈರಪೇಕ್ಷೇಣ ಭಕ್ತಿಯೋಗೇನ ಏವಂ** ನಿಷ್ಕಾಮವಾದ ಭಕ್ತಿಯೋಗದಿಂದಲೇ **ಮಾಂ ವಿಂದತೇ** ನನ್ನನ್ನು ಹೊಂದುವನು. ಪ್ರತಿಷ್ಠಾದಿಗಳು ಜ್ಞಾನ-ಭಕ್ತಿದ್ವಾರಾ ಭಗವತ್ಪ್ರಾಪ್ತಿಸಾಧನವೆಂದು ಭಾವ.

ಮೇಲಿನ ಶ್ಲೋಕಗಳಲ್ಲಿ ತ್ರಿಭಿಃ ಮತ್ಸಾಮ್ಯತಾಂ ಇಯಾತ್ ಎಂದು ಹೇಳಿ ನೈರಪೇಕ್ಷೇಣ ಭಕ್ತಿಯೋಗೇನ ಮಾಮೇವ ವಿಂದತಿ ಎಂದು ಹೇಳಿದರೇ ನನ್ನನ್ನು ಹೊಂದಲು ಭಕ್ತಿಯೋಗ ಬೇಕೇ ಹೊರತು ನನ್ನ ಸಾಮ್ಯ ಬರಲು ಭಕ್ತಿ ಬೇಕಿಲ್ಲವೆಂದು ತೋರುವುದು. ಮತ್ತು ಎರಡಕ್ಕೆ ಎರಡು ಸಾಧನ ಹೇಳಿದಂತಾಗಿ ಭಗವತ್ಸಾಮ್ಯ, ಭಗವತ್ಪ್ರಾಪ್ತಿ ಬೇರೆ ಎಂದು ಭ್ರಾಂತಿ ಬರುವುದು ಕಾರಣ ಅಭಿಪ್ರಾಯ ಹೇಳಿ ಯೋಜಿಸುವರು-

**ತಾತ್ಪರ್ಯ- ನೈರಪೇಕ್ಷೇಣ ಭಕ್ತಿಯೋಗೇನೈವ ಸಾಮ್ಯಮಿತ್ಯರ್ಥಃ ।**

ಎಂದರೆ **ತ್ರಿಭಿಃ ಮತ್ಸಾಮ್ಯತಾಂ ಇಯಾತ್** ಎಂಬುದಕ್ಕೂ ಅವುಗಳಿಂದ ನಿರಪೇಕ್ಷೇಣ ಭಕ್ತಿಯೋಗವನ್ನು ಪಡೆದುಕೊಂಡೇ ನನ್ನ ಸಾಮ್ಯವನ್ನು ಹೊಂದುವೆನೆಂದು ಹೇಳಲು ಮಾಮೇವ ಭಕ್ತಿಯೋಗೇನ ಎಂದು ಹೇಳಿದ್ದು. ಅಥವಾ ಏವ ಎಂಬುದು ಭಕ್ತಿಯೋಗೇನ ಎಂಬಲ್ಲಿ ಅನ್ವಿತವಾಗುವುದು. ಮತ್ತು ಮಾಂ ಎಂದರೆ ಮತ್ಸಾಮ್ಯ ಎಂದೇ ಅರ್ಥ ಎಂದು ಸೂಚಿಸುವರು. ಭಕ್ತಿಯೋಗೇನೈವ ಸಾಮ್ಯಂ ಎಂದದ್ದರಿಂದ ಸಾಮ್ಯವೆಂದರೆ ಭಗವಂತನ ಜ್ಞಾನಾನಂದಾದಿಗಳಿಂದ ಸಾದೃಶ್ಯವು ಅದರಿಂದ ಭಗವಂತನ ಸ್ವರೂಪಸುಖಸಮಾನಸುಖಪ್ರಾಪ್ತಿ ಹೇಳಿದೆ ಎಂದು ತೋರುವುದು. ಆದ್ದರಿಂದ ಪ್ರಮಾಣದಿಂದಲೇ ಅಭಿಪ್ರಾಯ ಹೇಳುವರು.

**ತಾತ್ಪರ್ಯ- ನಿರ್ದುಃಖತ್ವಂ ಹರೇಃ ಸಾಮ್ಯಂ ನ ತಾದೃಶಸುಖಾತ್ಮತಾ ।**
**ಸರ್ವೋತ್ತಮಃ ಸದಾನಂದಃ ಕಥಂ ಕಸ್ಯ ಕದಾಪ್ಯತೇ ॥**

ಭಗವಂತನ ಸಾಮ್ಯವೆಂದರೆ ದುಃಖಲೇಶವೂ ಇಲ್ಲದಿರುವುದು ಹೊರತು ಅವನ ಸುಖಸಮಾನ ಸುಖಪ್ರಾಪ್ತಿಯಲ್ಲ. ಅವನು ಸರ್ವೋತ್ತಮನು ಸದಾ ನಿರವಧಿಕ ಪೂರ್ಣಾನಂದನು ಈ ವಿಧ ಸಾಮ್ಯ ಯಾವನಿಗೆ ಯಾವ ಸಾಧನದಿಂದ ಯಾವಾಗಲೂ ಬರಲು ಸಾಧ್ಯವೇ ಇಲ್ಲವೆಂದು ಭಾವ.

''**ಸದ್ಮನಾ ಭುವನತ್ರಯೀ**'' ಎಂದು ಮಂದಿರನಿರ್ಮಾಣದಿಂದ ತ್ರೈಲೋಕ್ಯ ಆಗುವುದು ಎಂದು ಹೇಳಿದ್ದು ಸರಿಯಲ್ಲ. ತ್ರೈಲೋಕ್ಯವು ಇಂದ್ರನಿಗೆ ಮಾತ್ರ ಬರುವುದು. ಅಂದ ಮೇಲೆ ಮಂದಿರವನ್ನು ಕಟ್ಟಿದವರೆಲ್ಲ ಇಂದ್ರರಾಗುತ್ತಾರೆ ಎಂದಂತಾಯಿತು. ಅಯೋಗ್ಯರಿಗೆ ಪದಪ್ರಾಪ್ತಿ ಆಗುವುದು ಸಾಧ್ಯವಿಲ್ಲ. ಮತ್ತು ವಿದ್ಯಾಗಮ್ಯಂ ಫಲಂ ಯಸ್ಮಾತ್ ಎಂದಿರುವುದರಿಂದ ಕೇವಲ ನಿರ್ಮಾಣದಿಂದ ಆಗುವುದು ಹೇಗೆ? ಎಂದರೆ ಅಭಿಪ್ರಾಯ ಹೇಳುವರು-

**ತಾತ್ಪರ್ಯ-** **ಆಧಿಪತ್ಯಂ ತ್ರಿಲೋಕಸ್ಯ ಯೋಗ್ಯಾನಾಮಿಂದ್ರತಾ ಸ್ಮೃತಾ ।**
**ಅಯೋಗ್ಯಾನಾಂ ತ್ರಿಲೋಕೇಽಪಿ ಪೂಜ್ಯತ್ವಂ ಸಮುದಾಹೃತಮ್ ।**

**ತದ್ಭವೇತ್ ಪರಯಾ ಭಕ್ತ್ಯಾ ವಿಷ್ಣೋರಾಲಯಕಾರಿಣಃ ।**
**ತತೋಪ್ಯುದ್ರಿಕ್ತಯಾ ಭಕ್ತ್ಯಾ ವಿಷ್ಣುಂ ಪೂಜಯತಃ ಸದಾ ।**
**ಅವಾಪ್ಯತೇ ಬ್ರಹ್ಮಲೋಕಃ ತತೋದ್ರಿಕ್ತಶ್ಚ ಮುಚ್ಯತೇ ।। ಇತಿ ಚ ।**

ಇಂದ್ರಪದವಿಗೆ ಯೋಗ್ಯರಾದವರಿಗೆ ತ್ರಿಲೋಕಾಧಿಪತ್ಯ ಬರುವುದು ಎಂದರೆ ಇಂದ್ರರಾಗುವರು ಎಂದೇ ಅರ್ಥ. ಪದವಿಗೆ ಅಯೋಗ್ಯರಾದವರಿಗೆ ತ್ರಿಲೋಕಾಧಿಪತ್ಯವೆಂದರೆ ತ್ರಿಲೋಕಗಳಲ್ಲಿ ಪೂಜ್ಯತ್ವ ಬರುವುದು ಎಂದರ್ಥ. ಆ ಪೂಜ್ಯತ್ವವು ಶ್ರೇಷ್ಠವಾದ ಭಕ್ತಿಯಿಂದ ಆಲಯ ನಿರ್ಮಾಣ- ಮಾಡಿದವರಿಗೆ ಬರುವುದು ಯೋಗ್ಯರಿಗೆ ಇಂದ್ರ ಪದವಿ ಜ್ಞಾನ, ಭಕ್ತಿದ್ವಾರಾ, ಅದಕ್ಕೂ ಹೆಚ್ಚು ಭಕ್ತಿಯಿಂದ ಪೂಜಿಸುವವರಿಗೆ ಬ್ರಹ್ಮಲೋಕಪ್ರಾಪ್ತಿ (ಅಯೋಗ್ಯರಿಗೆ ಸತ್ಯಲೋಕವಾಸ ಯೋಗ್ಯರಿಗೆ ಬ್ರಹ್ಮಪದವಿ) ಅದಕ್ಕೂ ಹೆಚ್ಚು ಭಕ್ತಿಯಿಂದ ಮೂರನ್ನು ಮಾಡಿದವರಿಗೆ ಸಾಯುಜ್ಯವಾಗುವುದು ಎಂದು ಭಾವ.

ಇದಕ್ಕೆ ಆಚಾರ್ಯರೇ ಸಾಕ್ಷಿ. ಮಂದಿರವನ್ನು ನಿರ್ಮಾಣ ಮಾಡಿ ಕೃಷ್ಣ ಪ್ರತಿಷ್ಠೆಯನ್ನು ಮಾಡಿ ನಿರಂತರವಾಗಿ ಅತ್ಯುದ್ರಿಕ್ತವಾದ ಭಕ್ತಿಯಿಂದ ಪೂಜಿಸಿರುವರು. ಬ್ರಹ್ಮಪದವಿ ಪಡೆದು ಸಾಯುಜ್ಯವನ್ನು ಪಡೆಯುವರು.

**ಯಃ ಸ್ವದತ್ತಾಂ ಪರೈರ್ದತ್ತಾಂ ಹರೇತ ಸುರವಿಪ್ರಯೋಃ ।**
**ವೃತ್ತಿಂ ಸ ಜಾಯತೇ ವಿಡ್ಭುಗ್ವರ್ಷಾಣಾಮಯುತಾಯುತಮ್ ।।೫೩।।**

**ಯಃ** ಯಾರು **ಸ್ವದತ್ತಾಂ** ತನ್ನಿಂದ ಕೊಡಲ್ಪಟ್ಟ ಅಥವಾ **ಪರೈಃ ದತ್ತಾಂ** ಬೇರೆಯವರಿಂದ ಕೊಡಲ್ಪಟ್ಟ **ಸುರವಿಪ್ರಯೋಃ** ದೇವತೆಗಳು ಹಾಗೂ ಬ್ರಾಹ್ಮಣರ **ವೃತ್ತಿಂ** ಜೀವನೋಪಾಯವನ್ನು **ಹರೇತ** ಅಪಹರಿಸುವನೋ **ಸಃ** ಅವನು **ವರ್ಷಾಣಾಂ ಅಯುತಾಯುತಂ** ಹತ್ತುಲಕ್ಷವರ್ಷ ಪರ್ಯಂತ **ವಿಡ್ಭುಕ್ ಜಾಯತೇ** ಅಮೇಧ್ಯ ತಿನ್ನುವ ಕ್ರಿಮಿಯಾಗಿ ಜನಿಸುವನು.

ಕೇವಲ ಪ್ರತಿಮಾಪೂಜಾದಿಗಳನ್ನು ಮಾಡುವವರಿಗೆ ಮಾತ್ರವಲ್ಲ. ಅದಕ್ಕೆ ಸಹಾಯ ಮಾಡುವವರಿಗೂ ತಕ್ಕ ಫಲ ಉಂಟು ಎಂದು ಹೇಳುವರು-

**ಕರ್ತುಶ್ಚ ಸಾರಥೇರ್ಹೇತೋರನುಮೋದಿತುರೇವ ಚ ।**
**ಕರ್ಮಣಾಂ ಭಾಗಿನಃ ಪ್ರೇತ್ಯ ಭೂಯೋ ಭೂಯಸಿ ತತ್ಫಲಮ್ ।।೫೪।।**

**ಕರ್ಮಣಾಂ ಕರ್ತುಃ** ಕರ್ಮವನ್ನು ಮುಖ್ಯವಾಗಿ ಮಾಡುವವನಿಗೆ, **ಕರ್ಮಣಾಂ ಸಾರಥೇಃ** ಪ್ರತಿಬಂಧಕಗಳನ್ನು ಪರಿಹಾರ ಮಾಡಿ ಕಾರ್ಯ ಸಾಗುವಂತೆ ಸಹಾಯ ಮಾಡುವವನಿಗೆ (ಸದಾ ಪ್ರೇರಕನಿಗೆ) **ಕರ್ಮಣಾಂ ಹೇತೋಃ** ಋತ್ವಿಕ್ ಆಗಿ ಹವಿಸ್ತ್ಯಾಗಾದಿಗಳನ್ನು ಮಾಡಿ ಕರ್ಮಕಾರಣರಾದವರಿಗೆ **ಕರ್ಮಣಾಂ ಅನುಮೋದಿತುಃ** ಕರ್ಮಗಳನ್ನು ಮಾಡುವುದು ಯೋಗ್ಯ ಮಾಡಿರಿ ಎಂದು ಅನುಮೋದನ ಮಾಡಿದವರಿಗೂ **ಕರ್ಮಣಾಂ ಭಾಗಿನಃ** ಕರ್ಮಗಳ ಒಂದು ಭಾಗವನ್ನಾಚರಿಸಿದವರಿಗೂ **ತತ್** ಪುರುಷಾರ್ಥೋತ್ತಮ-ವೆಂದು ಪ್ರಮಾಣ ಸಿದ್ಧವಾದರೂ ಮೋಕ್ಷರೂಪ ಫಲವೂ ಇದೆ. ''ಪ್ರಾರಂಭಮಾತ್ರಮಿಚ್ಛಾವಾ ವಿಷ್ಣುರ್ಧರ್ಮೇ ನ ನಿಷ್ಫಲಾ'' ಎಂದಿದೆಯಷ್ಟೇ. ಈ ರೀತಿ ಫಲ ಬರಬೇಕಾದರೆ **ಭೂಯಸಿ** ಬಹುಗುಣಪೂರ್ಣನಾದ ಪರಮಾತ್ಮನಲ್ಲಿ **ಭೂಯಃ ಭೂಯಃ ಪ್ರೇತ್ಯ** ಪುನಃ ಪುನಃ ಕರ್ತೃತ್ವಾದಿಗಳು ಭಗವಂತನಿಗೇನೇ ಇದೆಯೆಂದು ತಿಳಿದು ಮಾಡುವವರಿಗೆ ಫಲವು ಸಿದ್ಧವೆಂದು ಭಾವ. ಈ ರೀತಿ ಅರ್ಥ ಮಾಡಿದ್ದರಿಂದ ಭಾಗಿನಃ ಎಂಬ ಪದ ವ್ಯರ್ಥವೆಂಬ ಶಂಕೆಗೆ ಅವಕಾಶವಿಲ್ಲ.

ಅಥವಾ **ಕರ್ಮಣಾಂ ಕರ್ತುಃ** ಕರ್ಮ ಮಾಡುವವನಿಗೆ **ಯತ್ ಫಲಂ ಉಕ್ತಂ ಅಸ್ತಿ** ಏನು ಫಲ ಹೇಳಿದೆಯೋ **ತದ್ಭಾಗಿನಃ** ಅದರಲ್ಲಿ ಪಾಲುಗಾರರು **ಏತೇ** ಮುಂದೆ ಹೇಳುವ ಸಾರಥಿ-ಹೇತು-ಅನುಮೋದಿತಾಗಳು ಹಾಗೂ **ಸಾರಥೇಃ ಯತ್ ಫಲಂ ಉಕ್ತಂ** ಸಹಕಾರಿಗೆ ಏನು ಫಲ ಹೇಳಿದೆಯೋ **ತದ್ಭಾಗಿನಃ ಅಪರೇ** ಅದರ ಪಾಲುಗಾರರು ಕರ್ತೃ ಮುಂತಾದ ಉಳಿದವರೆಲ್ಲರೂ ಅದರಂತೆ **ಹೇತೋಃ** ಕಾರಣರಾದವರಿಗೆ ಉಕ್ತವಾದ ಫಲದಲ್ಲಿ ಅನುಮೋದಿಸುವವನಿಗೆ ಹೇಳಿದ ಫಲದಲ್ಲಿಯೂ ಎಲ್ಲರಿಗೂ ಪಾಲು ಉಂಟು ಎಂದು ಭಾವ. ಆದರೆ **ಭೂಯಸಿ** ಮುಖ್ಯಕರ್ತೃವಿಗೆ **ಭೂಯಃ ಫಲಂ** ಬಹಳ ಫಲವು ಆಗುವುದು ಎಂದು ತಿಳಿಯಬೇಕು.

**।। ಇತಿ ಶ್ರೀಮದ್ಭಾಗವತೇ ಏಕಾದಶಸ್ಕಂಧೇ ಸಪ್ತವಿಂಶೋಽಧ್ಯಾಯಃ ।।**

★★★

# ಅಥ ಅಷ್ಟಾವಿಂಶೋऽಧ್ಯಾಯಃ

ಶ್ರೀಹರಿಯು ಮುಖ್ಯವಾಗಿ ಸ್ವತಂತ್ರನು. ಅವನು ಎಲ್ಲದರಲ್ಲಿಯೂ ಅಧೀನವಾದುದರಿಂದ ಜಗತ್ತು ಅತ್ಯಂತ ಅಸ್ವತಂತ್ರವು ಎಂಬ ಈ ತತ್ವಜ್ಞಾನದಿಂದಲೇ ಸತ್ಯವಾದ ಸಂಸಾರಬಂಧದ ನಿವೃತ್ತಿಯಾಗುವುದು. ಹೊರತು ಅಭೇದ ಜ್ಞಾನದಿಂದಲ್ಲವೆಂದು ಈ ಅಧ್ಯಾಯದಲ್ಲಿ ಉಪದೇಶಿಸುವರು. ಮೊದಲಿಗೆ ದುರ್ಜನರ ಸ್ವಭಾವ, ಅವರು ಮಾಡಿದ ಪಾಪಕರ್ಮಗಳನ್ನು ಪ್ರಶಂಸಿಸಬಾರದು. ಅಷ್ಟೇ ಅಲ್ಲ ನಿಂದಿಸಬೇಕು. ಮತ್ತು ಸಜ್ಜನರ ಸ್ವಭಾವ ಅವರು ಮಾಡಿದ ಪುಣ್ಯಕರ್ಮಗಳ ಸ್ತುತಿಯನ್ನು ಮಾಡುವುದು, ಅವರನ್ನು ನಿಂದಿಸದಿರುವುದು ಅವಶ್ಯ. ವಿಪರೀತವಾದರೆ ಅನರ್ಥವಿದೆ. ಎಂದು ಎರಡು ಶ್ಲೋಕಗಳಿಂದ ಹೇಳುವರು-

**ಶ್ರೀಭಗವಾನುವಾಚ-**

**ಪರಸ್ವಭಾವಕರ್ಮಾಣಿ ನ ಪ್ರಶಂಸೇನ್ನ ಗರ್ಹಯೇತ್ ।**
**ವಿಶ್ವಮೇಕಾತ್ಮಕಂ ಪಶ್ಯನ್ ಪ್ರಕೃತ್ಯಾ ಪುರುಷೇಣ ಚ ॥೧॥**

**ಪರಸ್ವಭಾವಕರ್ಮಾಣಿ ಯಃ ಪ್ರಶಂಸತಿ ನಿಂದತಿ ।।**
**ಸ ಆಶು ಭ್ರಂಶತೇ ಸ್ವಾರ್ಥಾದಸತ್ಯಾಭಿನಿವೇಶತಃ ॥೨॥**

ಇಲ್ಲಿ ಪರಶಬ್ದಕ್ಕೆ ನಿಂದಿಸಲು ಯೋಗ್ಯನಾದ ವ್ಯಕ್ತಿ ಮತ್ತು ಪ್ರಶಂಸಿಸಲು ಯೋಗ್ಯನಾದ ವ್ಯಕ್ತಿ ಎಂದು ಎರಡು ಅರ್ಥಗಳು.

**ಪರಸ್ವಭಾವಕರ್ಮಾಣಿ** 'ಪರೋऽರಿಪರಮಾತ್ಮನೋಃ' ಎಂದಿರುವುದರಿಂದ ಜೀವಬ್ರಹ್ಮವೈಲಕ್ಷಣ್ಯವು ಸತ್ಯವೆಂದು ಅಂಗೀಕರಿಸದ ಅರಿಗಳಾದ ಅರ್ಥಾತ್ ನಿಂದ್ಯರಾದವರ ಸ್ವಭಾವ ಮತ್ತು ಅವರು ಮಾಡಿದ (ಸ್ವಭಾವಾನುಸಾರ) ಪಾಪಕರ್ಮಗಳನ್ನಾಗಲಿ **ನ ಪ್ರಶಂಸೇತ್** ತಾನು ಸ್ತುತಿಸಬಾರದು ಅಥವಾ **ನ ಪ್ರಶಂಸಯೇತ್** ಬೇರೆಯವರಿಂದ ಸ್ತೋತ್ರ ಮಾಡಿಸಬಾರದು. **ಗರ್ಹಯೇತ್** ಬೇರೆಯವರಿಂದ ನಿಂದೆ ಮಾಡಿಸಬೇಕು ತಾನೂ ನಿಂದಿಸಬೇಕು. **ಪರಃ** ಅಂದರೆ ಪರಮಾತ್ಮನು ಅವನಲ್ಲಿ **ಸ್ವಭಾವಃ** ಆತ್ಮಾ ಮನಸ್ಸುಳ್ಳವನು ಪರಸ್ವಭಾವ ಅಥವಾ ಲೋಕಬಾಹ್ಯ ಉತ್ತಮನು ಆದ್ದರಿಂದ ಪರನೆನಿಸಿದವನು **ಪ್ರಕೃತ್ಯಾ** ಚೇತನಪ್ರಕೃತಿಯಾದ ಮಹಾಲಕ್ಷ್ಮೀದೇವಿ ಮತ್ತು **ಪುರುಷೇಣ** ಚತುರ್ಮುಖ-

ನಿಂದಲೂ ಸಹಿತವಾದ **ವಿಶ್ವಂ** ಜಗತ್ತು **ಏಕಾತ್ಮಕಂ** ಮುಖ್ಯನಾದ ಪರಮಾತ್ಮನಿಂದ ವ್ಯಾಪ್ತವಾದದ್ದೆಂದು **ಪಶ್ಯನ್** ತಿಳಿದವನಾಗಿ, ಜ್ಞಾನಿಯ ಸ್ವಭಾವ ಕರ್ಮಗಳನ್ನಾಗಲಿ ಸ್ವಭಾವಾನುಸಾರ ಮಾಡಿದ ಕರ್ಮಗಳನ್ನಾಗಲಿ **ನ ಗರ್ಹಯೇತ್ ನ ಗರ್ಹೇತ್** ಇತರರಿಂದ ನಿಂದನ ಮಾಡಿಸಬಾರದು. ತಾನೂ ನಿಂದನೆ ಮಾಡಬಾರದು. ಅಲ್ಲದೇ **ಪ್ರಶಂಸೇತ್ ಪ್ರಶಂಸಯೇತ್ ಚ** ತಾನು ಸ್ತುತಿಸಬೇಕು. ಇತರರಿಂದಲೂ ಸ್ತುತಿ ಮಾಡಿಸಬೇಕು.॥೧॥

ಈ ರೀತಿ ಮಾಡದಿದ್ದರೆ ಬಾಧಕ ಹೇಳುವರು-

**ಯಃ** ಯಾವನು **ಪರಸ್ವಭಾವಕರ್ಮಾಣಿ** ಹರಿವಿಮುಖನಾದ್ದರಿಂದ ನಿಂದ್ಯನಾದವನ ಸ್ವಭಾವ ಮತ್ತು ಕರ್ಮಗಳನ್ನು **ಪ್ರಶಂಸತಿ** ಸ್ತುತಿಸುವನೋ ಮತ್ತು **ಪರಸ್ವಭಾವಕರ್ಮಾಣಿ** ಶ್ರೀಹರಿಪರಾಯಣನಾದ್ದರಿಂದ ಸ್ತುತ್ಯನಾದವನ ಸ್ವಭಾವ ಮತ್ತು ಕರ್ಮಗಳನ್ನು **ನಿಂದತಿ** ನಿಂದಿಸುವನೋ **ಸಃ** ಅವನು **ಅಸತ್ಯಾಭಿನಿವೇಶತಃ** ಮಿಥ್ಯಾಜ್ಞಾನದಲ್ಲಿ ಆಗ್ರಹವಿದ್ದದ್ದರಿಂದ ಅಸತ್ಯಮಾತ-ನಾಡಿದ್ದರಿಂದ **ಆಶು** ಬೇಗನೇ **ಸ್ಥಾನಾತ್ ಭ್ರಂಶತೇ** ತನ್ನ ಸ್ಥಾನದಿಂದ ಭ್ರಷ್ಟನಾಗುವನು. ಅಂಧಂತಮಸ್ಸಿಗೆ ಹೋಗುವನು.

ಸ್ತುತ್ಯನಾದವನಲ್ಲಿ ನಿಂದ್ಯವು ಇರುವುದಿಲ್ಲ ಅದನ್ನು ಮಾಡಿದರೆ ಸುಳ್ಳು ಆಯಿತು. ನಿಂದ್ಯನಾದವನಲ್ಲಿ ಪ್ರಶಂಸ್ಯವಾದುದು ಇರುವುದಿಲ್ಲ. ಪ್ರಶಂಸೆ ಮಾಡಿದರೆ ಸುಳ್ಳು ಹೇಳಿದಂತಾಯಿತು. ''**ನಾನೃತಾತ್ಪಾತಕಂ ಪರಂ**'' ಎಂದಿರುವುದರಿಂದ ಅಧಃಪಾತವಾಗುವುದು.॥೨॥

**ಪ್ರಕೃತ್ಯಾ ಪುರುಷೇಣ ಸಹಿತಂ ವಿಶ್ವಂ ಏಕಾತ್ಮಕಂ ಪಶ್ಯನ್ ನಿಂದ್ಯಃ** (ಶೇಷಃ)

ಅಂದರೆ ''**ಏಕಃ ಆತ್ಮಾ ಸ್ವರೂಪಂ ಯಸ್ಯ ಏಕಾತ್ಮಕಮ್**'' ಎಂದು ವಿಗ್ರಹ ಮಾಡಿ ಪ್ರಪಂಚವು ಭಗವದಭಿನ್ನವು ಎಂದು ತಿಳಿಯುವವನು ನಿಂದ್ಯನು. ಮತ್ತು **ವಿಶ್ವಂ** ಪ್ರಪಂಚವು **ಏಕೇನ** ಪ್ರಧಾನನಾದ ನಾರಾಯಣನಿಂದ **ಆತ್ಮಕಂ** ವ್ಯಾಪ್ತವಾದದ್ದು ಎಂದು ತಿಳಿಯುವವನು **ಸ್ತುತ್ಯಃ** ಸ್ತುತಿಸಲು ಯೋಗ್ಯನು ಎಂದು ಭಾವ.॥೧-೨॥

ಮೇಲಿನ ಮೊದಲ ಶ್ಲೋಕದಲ್ಲಿ, ಸರ್ವವೂ ಏಕವಾಗಿರುವುದರಿಂದ ಪರರ ಸ್ವಭಾವ ಮತ್ತು ಕರ್ಮಗಳನ್ನು ನಿಂದಿಸಬಾರದು, ಪ್ರಶಂಸಿಸಬಾರದು.

ಎಂದು ಹೇಳಿ, ಎರಡನೆಯ ಶ್ಲೋಕದಲ್ಲಿ ಪ್ರಶಂಸೆ, ನಿಂದೆ, ಮಾಡುವವರಿಗೆ ಅನಿಷ್ಟವನ್ನು ಹೇಳುವುದು ಸರಿ ಕಾಣುವುದಿಲ್ಲ. ಮತ್ತು (ಗುರುಂ ಪ್ರಕಾಶಯೇತ್ ಧೀಮಾನ್) ಎಂದು ಗುರುಪ್ರಶಂಸೆ ಮಾಡಬೇಕೆಂದು ಹೇಳಿದೆ. ''**ತತೋಽಧಿಕಮಿವ ವ್ಯಕ್ತಂ ಯಾಂತಿ ತೇಷಾಮನಿಂದಕಃ**'' ಎಂದು ನಿಂದನವನ್ನು ಹೇಳಿದೆ. ಅದರ ವಿರೋಧ ಬರುತ್ತದೆ, ಮತ್ತು ಪರ ಶಬ್ದಾರ್ಥವಾಗುವುದಿಲ್ಲ ಆದ್ದರಿಂದ ಮೇಲಿನ ಶ್ಲೋಕಗಳ ಅಭಿಪ್ರಾಯವನ್ನು ಪ್ರಮಾಣದಿಂದಲೇ ಹೇಳುವರು-

**ನ ಪ್ರಶಂಸೇತ ನಿಂದ್ಯಾಂಸ್ತು ಪ್ರಶಂಸ್ಯಾನ್ನೈವ ನಿಂದಯೇತ್ ।**
**ಉಭಯಂ ಯಃ ಕರೋತ್ಯೇತದಸತ್ಯಾತ್ ಸ ಪತತ್ಯಧಃ ॥**

**ಯಃ ಪ್ರಶಂಸ್ಯಾನ್ನ ಪ್ರಶಂಸೇನ್ನಿಂದ್ಯೋ ಯೇನ ನ ನಿಂದ್ಯತೇ ।**
**ಸೋಽಪಿ ತದ್ವದಧೋ ಯಾತಿ ಯತೋಽರಿವದುದಾಸಕಃ । ಇತಿ ಸತ್ಕಾರೇ ।**

**ಪ್ರಕೃತ್ಯಾ ಪುರುಷೇಣ ಸಹ ಏಕೇನ ಪರಮಾತ್ಮನಾ ವ್ಯಾಪ್ತಂ ಏಕಾತ್ಮಕಮ್ । ತಥಾ ಪಶ್ಯತ ಏವ ಯಥಾರ್ಥಜ್ಞಾನಂ ಭವತಿ ॥**

ವಿಷ್ಣುದ್ವೇಷಿಗಳನ್ನು ಸ್ತುತಿಸಬಾರದು. ವಿಷ್ಣುಭಕ್ತರನ್ನು ನಿಂದಿಸಬಾರದು. ಈ ಎರಡನ್ನು ಮಾಡುವವನು ಅವರವರಲ್ಲಿ ಇಲ್ಲದಿರುವ ಪ್ರಶಂಸೆ-ನಿಂದೆಗಳನ್ನು ಹೇಳುವುದೆಂಬ ಅಸತ್ಯದಿಂದ ಅಂಧಂತಮಸ್ಸಿನಲ್ಲಿ ಬೀಳುತ್ತಾನೆ. ಯಾವನು ಹೊಗಳಿಕೆಗೆ ಅರ್ಹರಾದವರನ್ನು ಹೊಗಳುವುದಿಲ್ಲವೋ ಮತ್ತು ನಿಂದ್ಯನನ್ನು ನಿಂದಿಸುವುದಿಲ್ಲವೋ ಅಂತಹ ಉದಾಸೀನನು ಸಹ ಅರಿವತ್ ಭಕ್ತರನ್ನು ನಿಂದಿಸುವವನು, ನಿಂದ್ಯರನ್ನು ಸ್ತುತಿಸುವವನು ಹೇಗೆ ಅಧೋಲೋಕಕ್ಕೆ ಹೋಗುತ್ತಾನೋ ಹಾಗೆ ಅಧೋಲೋಕಕ್ಕೆ ಹೋಗುವನು. ಏಕೆಂದರೆ ಉದಾಸೀನನು ಶತ್ರುವಿನಂತೆ ತ್ಯಾಜ್ಯನೆಂದು ಸತ್ಕಾರವೆಂಬ ಗ್ರಂಥದಲ್ಲಿ ಹೇಳಿದೆ.

ರಮಾ-ಬ್ರಹ್ಮ-ಸರಸ್ವತ್ಯಾತ್ಮಕವಾದ ಸಮಸ್ತಪ್ರಪಂಚವು ಮುಖ್ಯನಾದ ಶ್ರೀಹರಿಯಿಂದ ವ್ಯಾಪ್ತವಾಗಿರುವುದರಿಂದ ಏಕಾತ್ಮಕವೆನಿಸುತ್ತದೆ. ಹೀಗೆ ತಿಳಿದರೇನೇ ಜ್ಞಾನವು ಯಥಾರ್ಥವಾಗುವುದು. ಚೇತನಾಚೇತನಾತ್ಮಕವಾದ ಪ್ರಪಂಚವು ಪರಮಾತ್ಮನಿಂದ ಅಭಿನ್ನ ಎಂದು ತಿಳಿದರೇ ಜ್ಞಾನವು ಭ್ರಮ-ವಾಗುವುದು ಎಂದು ಭಾವ. ಕಾರಣ ಹೀಗೆ ಅರ್ಥ ಮಾಡಬೇಕು.॥೧-೨॥

ಸುಷುಪ್ತಿ-ಸ್ವಪ್ನ-ಮರಣಗಳನ್ನು ಭಗವಂತನ ಅಧೀನವಾದುದರಿಂದ ಜಾಗ್ರತ್ ಎಂಬುದು ಅವಸ್ಥೆ ಆದುದರಿಂದಸರ್ವವೂಭಗವದದೀನವಾದ್ದರಿಂದ ಅವನಿಂದ ವ್ಯಾಪ್ತವಾಗಿದೆ ಎಂದು ತಿಳಿಸಲು ಸ್ವಪ್ನ, ಮರಣ, ನಿದ್ರಾ, ಅವಸ್ಥೆಗಳು ಭಗವಂತನ ಅಧೀನವೆಂದು ಹೇಳುವರು.

**ತೈಜಸೇ ನಿದ್ರಯಾಽಽಪನ್ನೇ ಪಿಂಡಸ್ಥೋ ನಷ್ಟಚೇತನಃ ।**
**ಮಾಯಾಂ ಪ್ರಾಪ್ನೋತಿ ಮೃತ್ಯುಂ ವಾ ತದ್ಧಿ ನಾನಾರ್ಥದಂ ಮನಃ ॥೩॥**

**ತೈಜಸೇ** ತೈಜಸಾಹಂಕಾರಕಾರ್ಯದಿಂದ ಉಪಚಿತಗಳಾದ ಇಂದ್ರಿಯ ಸಮೂಹವೂ (**ಪರಾತ್** ಪರಮಾತ್ಮನ ಪ್ರೇರಣೆಯಿಂದ ಉಂಟಾಗುವ) **ನಿದ್ರಯಾ** ದಿನವೂ ಬರುವ ನಿದ್ರೆಯಿಂದ (ವಶಂ) **ಆಪನ್ನೇ** ಉಪರತ-ವಾಗುತ್ತಿರಲು (ಕೆಲಸಮಾಡದಿರುವಾಗ) **ಪಿಂಡಸ್ಥಃ** ದೇಹದಲ್ಲಿರುವ ಜೀವನು **ನಷ್ಟಚೇತನಃ** ಹೊರಗಿನ ಜ್ಞಾನವಿಲ್ಲದಂತಾಗಿ ನಿದ್ರಿಸುವನು. ಆಗ **ಮಾಯಾಂ ಪ್ರಾಪ್ನೋತಿ** ಈಶ್ವರೇಚ್ಛಾಪ್ರಬೋಧಿತವಾದ ಸಂಸ್ಕಾರಮಯವಾದ, ವಾಸನಾಮಯವಾದ ಪದಾರ್ಥಗಳನ್ನು ನೋಡುವುದು ಎಂಬ ಸ್ವಪ್ನವನ್ನು ಹೊಂದುವನು **ಮೃತ್ಯುಂ ವಾ ತೈಜಸೇ ನಿದ್ರಯಾಪನ್ನೇ** ಪರಮಾತ್ಮನಿಂದ ಮರಣಕಾಲೀನವಾದರೆ ಸುನಿದ್ರೆಯಿಂದ (ದೀರ್ಘ) ಇಂದ್ರಿಯಗಳು ಉಪರತವಾದಾಗ ಪಿಂಡಸ್ಥಜೀವನು **ನಷ್ಟಚೇತನಃ ಸನ್** ಜ್ಞಾನರಹಿತನಾಗಿ ಮರಣವನ್ನು ಹೊಂದುವನು. **ತತ್ ಮನಃ** ಮನಸ್ಸು **ನಾನಾರ್ಥದಂ ಹಿ** ನಾನಾ ವಿಷಯಪ್ರದವಾಗಿದೆ.

ಈ ವಾಕ್ಯದಿಂದ ಎರಡುವಿಷಯವನ್ನು ತಿಳಿಸುವರು. ಇಂದ್ರಿಯಗಳು ಉಪರತವಾದಾಗ ಸ್ವಪ್ನಪದಾರ್ಥಗಳನ್ನು ನೋಡುವುದು ಹೇಗೆ ಅಂದರೆ ಈಶ್ವರನಿಂದ ಪ್ರೇರಿತವಾದ ಮನಸ್ಸು ತನ್ನಲ್ಲಿರುವ ಸಂಸ್ಕಾರಮೂಲಕವಾಗಿ ಆನೆ ಕುದುರೆಗಳನ್ನಾಗಿ ಪರಿಣಮಿಸಿ ಅದನ್ನು ಮನಸ್ಸಿನಿಂದಲೇ ನೋಡುವನು. (ಅರ್ಥಾತ್ ಮನಸ್ಸು ಉಪರತವಾಗುವುದಿಲ್ಲ ಎಂಬ ಭಾವ) ಹಿ ಶಬ್ದದಿಂದ ಕೈಮುತ್ಯದಿಂದ ಜಾಗ್ರತ್ಕಾಲದಲ್ಲಿಯೂ ಮನಸ್ಸೇ ಬಾಹ್ಯೇಂದ್ರಿಯ ದ್ವಾರಾ ನಾನಾ ವಿಷಯಗಳ ಜ್ಞಾನ ಮಾಡಿಕೊಡುವುದು ಪ್ರಸಿದ್ಧವೆಂದು ಭಾವ.॥

ಇಲ್ಲಿ ಈಶ್ವರನು ಮನಸ್ಸಿನಿಂದ ಸಹಿತವಾಗಿ ಎಲ್ಲ ಇಂದ್ರಿಯಗಳನ್ನು ಉಪರಮಗೊಳಿಸಿ ಸುಷುಪ್ತಿಯನ್ನು, ಗಾಢನಿದ್ರೆಯನ್ನು ಕೊಡುವನು.

ಮಧ್ಯದಲ್ಲಿ ವೈಕಾರಿಕವಾದ ಮನಸ್ಸನ್ನು ಬಿಟ್ಟು ತೈಜಸವಾದ ಎಲ್ಲ ಇಂದ್ರಿಯಗಳನ್ನು ಉಪರಮ ಮಾಡಿ ಸ್ವಪ್ನವನ್ನು ತೋರಿಸುವನು. ಆಗ ಮನಸ್ಸಿಗೆ ನಾನಾವಿಧ ಪದಾರ್ಥವಾಗಿ ಪರಿಣಮಿಸುವ ಶಕ್ತಿಯನ್ನು ಕೊಟ್ಟು ಮನಸ್ಸಿನಿಂದಲೇ ಅವುಗಳನ್ನು ನೋಡುವಂತೆ ಮಾಡುವನು. ಮತ್ತು ಸುನಿದ್ರೆ ಇತ್ತು ಮರಣ ಕೊಡುವನು. ಹೀಗೆ ಅವಸ್ಥಾತ್ರಯಗಳು ಪರಮಾತ್ಮನ ಅಧೀನವಾಗಿವೆ. ಎಂದು ತಿಳಿಯಬೇಕು.

ಕಠಿಣಾರ್ಥಕವಾದದ್ದರಿಂದ ವ್ಯಾಖ್ಯಾನಿಸುವರು-

**ತಾತ್ಪರ್ಯ-** ತೈಜಸಾಹಂಕೃತೇರ್ಜಾತ ಇಂದ್ರಿಯಗ್ರಾಮಕೇ ಪರಾತ್ ।
ನಿದ್ರಯಾ ವಶಮಾಪನ್ನೇ ಜೀವಃ ಸ್ಯಾನ್ನಷ್ಟಚೇತನಃ ॥
ಅತೋ ವಿಷ್ಣೋರ್ವಶೇ ಸರ್ವಂ ತೇನ ವ್ಯಾಪ್ತಮಿತಿ ಸ್ಮರೇತ್ । ಇತಿ ಚ ।

ನಿದ್ರಾ ಚೈವ ಸುನಿದ್ರಾ ಚ ದ್ವಿಧಾ ನಿದ್ರಾ ಪ್ರಕೀರ್ತಿತಾ ।
ತತ್ರ ನಿದ್ರಾ ಭವೇನ್ನಿತ್ಯಾ ಸುನಿದ್ರಾ ಮೃತಿಕಾಲಗಾ । ಇತಿ ಪಾದ್ಮೇ ।

ಮನೋಮಾತ್ರಸ್ವರೂಪತ್ವಾತ್ ಸ್ವಪ್ನೋ ಮಾಯೇತಿ ಕಥ್ಯತೇ । ಇತಿ ಚ ।

ತಥಾ ನಾನಾವಿಷಯದಂ ಮನ ಏವ । ಮನಸಾ ಹಿ ವಿಷಯಾಃ ಪ್ರತೀಯಂತೇ ॥

**ಭಾವಾರ್ಥ**

ತೈಜಸಾಹಂಕಾರದಿಂದ ಜನಿಸಿದ ಇಂದ್ರಿಯಗಳ ಸಮೂಹವು ಪರಮಾತ್ಮನ ಪ್ರೇರಣೆಯಿಂದ ಉಂಟಾದ ನಿದ್ರೆಯಿಂದ ವ್ಯಾಪಾರವಿಲ್ಲದ್ದಾಗುತ್ತಿರಲು ದೇಹದಲ್ಲಿದ್ದ ಜೀವನು ಬಾಹ್ಯಜ್ಞಾನಶೂನ್ಯನಾಗುತ್ತಾನೆ. (ಆಗ ಶ್ರೀಹರಿಯು ಮನಸ್ಸಿನಲ್ಲಿರುವ ಸಂಸ್ಕಾರವನ್ನು ಗಜಾದಿ ರೂಪದಿಂದ ಬದಲಾಯಿಸಿ ಜೀವನಿಗೆ ಮನಸ್ಸಿನಿಂದ ತೋರಿಸುವನು) ಆದ ಕಾರಣ ಸರ್ವ ಜಗತ್ತು ಅವನ ಅಧೀನದಲ್ಲಿದೆ. ಅವನಿಂದ ವ್ಯಾಪ್ತವಾಗಿದೆ ಎಂದು ತಿಳಿಯಬೇಕು. ನಿದ್ರಾ ಸುನಿದ್ರಾ ಎಂದು ನಿದ್ರೆಯು ಎರಡು ವಿಧವು. ನಿತ್ಯದಲ್ಲಿರುವುದು ನಿದ್ರಾ ಮರಣಕಾಲದಲ್ಲಿರುವುದು ಸುನಿದ್ರಾ ಎಂದು ತಿಳಿಯಬೇಕು.

ಮನಸ್ಸಿನ ಸಂಸ್ಕಾರೋಪಾದನಕವಾದುದರಿಂದ ಸ್ವಪ್ನಕ್ಕೆ ಮಾಯಾ ಎಂದು ಕರೆಯುವರು. ಸ್ವಪ್ನಾವಸ್ಥೆಯಲ್ಲಿ ಶ್ರೀಹರಿಯ ಪ್ರೇರಣೆಯಿಂದ ಮನಸ್ಸೇ ತನ್ನಲ್ಲಿರುವ ಸಂಸ್ಕಾರದ್ವಾರಾ ಪದಾರ್ಥಗಳನ್ನು ನಿರ್ಮಿಸುತ್ತದೆ. ಮನಸ್ಸಿನಿಂದಲೇ

ಆ ಪದಾರ್ಥಗಳು ಕಾಣುವವು. ಜಾಗ್ರತ್ ಕಾಲದಲ್ಲಿಯಂತು ಮನಸ್ಸಿನ ಸಹಾಯದಿಂದಲೇ ಎಲ್ಲ ವಿಷಯಗಳ ಜ್ಞಾನವಾಗುವುದು ಸುಪ್ರಸಿದ್ಧ ಕಾರಣ ಪ್ರತ್ಯೇಕ ಹೇಳಬೇಕಿಲ್ಲ.।।೩।।

ಮೇಲಿನ ಶ್ಲೋಕಗಳಲ್ಲಿ ನಿಂದ್ಯರನ್ನು ನಿಂದಿಸಬೇಕು ಪ್ರಶಂಸ್ಯರನ್ನು ಪ್ರಶಂಸಿಸಬೇಕು ಎಂದು ಹೇಳಿದ್ದರಷ್ಟೇ, ಅದು ಸರಿಯಲ್ಲ. ನಿಂದ್ಯರಲ್ಲಿಯೂ ಪ್ರಶಂಸನೀಯ ಶುಭಗುಣಗಳು ಇದ್ದೇ ಇರುವವು ಎಂದರೆ ನಿಜ. ಸರ್ವದಾ ಅಶುಭರೂಪರಾದ ಅವರಲ್ಲಿ ಯಾವುದೊಂದು ಗುಣವಿದ್ದರೂ ಇಲ್ಲದಂತೆಯೇ. ಆದ್ದರಿಂದ ನಿಂದನೆ ಮಾಡುವುದು ಯೋಗ್ಯವೇ ಎಂದು ಹೇಳುವರು.

**ಕಿಂ ಭದ್ರಂ ಕಿಮಭದ್ರಂ ವಾ ದ್ವೈತಸ್ಯಾವಸ್ತುನಃ ಕಿಯತ್ ।**
**ವಾಚೋದಿತಂ ತದನೃತಂ ಮನಸಾ ಧ್ಯಾತಮೇವ ಚ ।।೪।।**

**ದ್ವೈತಸ್ಯ** ಅಶುಭನಾದ **ಅವಸ್ತುನಃ** ಅಸ್ವತಂತ್ರನಾದ (ನಿತ್ಯಾಪ್ರತಿಹತ-ವಸ್ತುವನ್ನು ತಿಳಿಯದ) ಮಿಥ್ಯಾಜ್ಞಾನಿಯಾದ ಮನುಷ್ಯನಿಗೆ **ಭದ್ರಂ ಕಿಂ ಅಸ್ತಿ** ಆಶೀರ್ವಾದಾದಿಗಳಿಂದ ಏನು ಮಂಗಲವಾದೀತು? ಯಾವುದೂ ಆಗಲಾರದು. **ಯದ್ಯಸ್ತಿ ತತ್ ಕಿಯತ್** ಆಗುವುದಾದರೂ ಎಷ್ಟಾದೀತು? ಅತ್ಯಲ್ಪವೇ ಆಗುವುದು. **ಅಭ್ರದಂ ಚ ಕಿಮಸ್ತಿ** ನಿತ್ಯದಲ್ಲಿಯೂ ಅಮಂಗಲ-ಸ್ವರೂಪನಾದವನಿಗೆ ಹೆಚ್ಚಿನ ಅಮಂಗಲವಾಗುವುದೇನಿದೆ? ಪ್ರಯತ್ನ-ಮಾಡಿದರೂ ಆಗುವುದಿಲ್ಲ. ಆದ್ದರಿಂದ **ವಾಚಾ ಉದಿತಂ** ಅಯೋಗ್ಯ ಮನುಷ್ಯನಿಗೆ ಒಳ್ಳೆಯದಾಗಲಿ ಎಂದು ಹೇಳಿದ ಮಾತಾಗಲೀ ಮತ್ತು **ಮನಸಾ ಧ್ಯಾತಂ** ಮನಸ್ಸಿನಲ್ಲಿ ಇವನಿಗೆ ಶುಭವಾಗಲಿ ಎಂದು ಅಂದುಕೊಂಡದ್ದು ಸಹ **ಅನೃತಂ** ಸುಳ್ಳೇ ಆಗುವುದು. ಅಂದರೆ ವೈಷ್ಣವನು ಅವೈಷ್ಣವನನ್ನು ಪ್ರಶಂಸೆ ಮಾಡಬಾರದು ಎಂದು ಹೇಳಿದಂತೆ ಆಶೀರ್ವಾದವನ್ನೂ ಮಾಡಬಾರದು ಎಂದು ಹೇಳಿದಂತಾಯಿತು. ಅಷ್ಟೇ ಅಲ್ಲ. ಏನೋ ಹಣದ ಆಶೆಗಾಗಿ ಅಶುಭನಾದವನಿಗೆ ಶುಭವಾಗಲಿ ಎಂದು ಇಚ್ಛಿಸಿದರೂ ಅದು ಆಗುವುದಿಲ್ಲ. ಅಶುಭನಾದವನು ಏನೇ ಪ್ರಯತ್ನ ಮಾಡಿದರೂ ತನ್ನ ಅಶುಭ ಕಳೆದುಕೊಳ್ಳುವಲ್ಲಿ ಅಸ್ವತಂತ್ರನಾದುದರಿಂದ ಅಶುಭನಾಗಿಯೇ ಉಳಿಯುವನು ಎಂದು ಭಾವ.

ಮೇಲಿನ ಶ್ಲೋಕಕ್ಕೆ **ಅವಸ್ತುನಃ** ಮಿಥ್ಯಾ ಸುಳ್ಳಾದ **ದ್ವೈತಸ್ಯ** ಭೇದದ ನಿವೃತ್ತಿ ಆಗಲು **ಕಿಯತ್** ಎಷ್ಟು ಹೊತ್ತು ಬೇಕಾಗಿದೆ. **ಕಿಂ ಭದ್ರಂ ಕಿಂ ಅಭದ್ರಂ** ಯಾವುದು ಶುಭಾಶುಭಪದಾರ್ಥಗಳಾಗಿವೆ ಯಾವುವೂ ಇಲ್ಲ. ಎಂದು ಹೇಳಿ ಭೇದ ಸುಳ್ಳು ಎಂದು ಹೇಳಿದರೇ, ಉತ್ತರಾರ್ಧದಲ್ಲಿ ಪ್ರಮಾಣ ಹೇಳುವರು. ತದನ್ಯತಂ ಎಂಬುದನ್ನು ಭಾವಪ್ರಧಾನನಿರ್ದೇಶವೆಂದಿಟ್ಟುಕೊಂಡು ತದನ್ಯತತ್ವಂ ಭೇದಕ್ಕೆ ಅಸತ್ಯತ್ವವು **ವಾಚಾ** ಆಗಮದಿಂದ **ಉದಿತಂ** ಹೇಳಲ್ಪಟ್ಟಿದೆ. **ಮನಸಾ ಧ್ಯಾತಂ** ಪ್ರತ್ಯಕ್ಷದಿಂದ ಚಿಂತಿತವಾಗಿದೆ. ಮುಂತಾಗಿ ಭೇದಾದಿಪ್ರಪಂಚಕ್ಕೆ ಮಿಥ್ಯಾತ್ವ ಹೇಳಿದೆ ಎನ್ನುವಂತೆ ಕಾಣುವುದು. ಆದ್ದರಿಂದ ಪ್ರಮಾಣದಿಂದಲೇ ತಾತ್ಪರ್ಯ ಹೇಳುವರು-

**ತಾತ್ಪರ್ಯ-** ಏಕಂ ತು ಶುಭಮುದ್ದಿಷ್ಟಮಶುಭಂ ದ್ವೈತಮುಚ್ಯತೇ ।
ಪುಂಸೋಽಶುಭಸ್ಯ ಕಿಂ ಭದ್ರಂ ಕಿಮಭದ್ರಂ ವಿಶೇಷತಃ ॥
ಸರ್ವದಾಽಶುಭರೂಪತ್ವಾದ್ವಿಶೇಷೋಽತ್ಯಲ್ಪ ಏವ ಹಿ । ಇತಿ ಭಾರತೇ ।

ದ್ವೈತಸ್ಯ ಅಶುಭಸ್ಯ ಪುರುಷಸ್ಯ ಕಿಯದಲ್ಪಮೇವ ಹಿ ಭದ್ರಂ ಅಭದ್ರಂ ವಾ ಸ್ವಯೋಗ್ಯಾಧಿಕ್ಯೇನ ನ ಭವತಿ ಯತ್ನವತೋಽಪಿ ಇತ್ಯರ್ಥಃ। ಅತಃ ತದ್ವಿಷಯೇ ಧ್ಯಾತಂ ಉಕ್ತಂ ಚ ಶುಭಂ ಅನೃತಮೇವ ।

ಉಚ್ಯತೇ ಧ್ಯಾಯತೇ ವಾಪಿ ಕುನರಂ ಪ್ರತಿ ಯಚ್ಛುಭಮ್ ।
ಅಸತ್ಯಮೇವ ಭವತಿ ಸ್ವಭಾವೋಽಸತ್ಯಮೇವ ಯತ್ ॥ ಇತಿ ಪ್ರದ್ಯೋತೇ ॥

ಜ್ಞಾನಾರ್ಥಗಳಿಗೆ ಐಕ್ಯವಿರುವುದರಿಂದ ಏಕ ಎಂದರೆ ಯಥಾರ್ಥಜ್ಞಾನವು ಅದು ಉಳ್ಳವನು **ಏಕಃ** ಶುಭನು. ಜ್ಞಾನಾರ್ಥಗಳಿಗೆ ದ್ವಿಧತೆ ಇರುವ ಅಯಥಾರ್ಥಜ್ಞಾನವು ದ್ವೈತವು ಅದು ಉಳ್ಳವನು ಅಶುಭನು. ಸರ್ವದಾ ಅಶುಭರೂಪನಾದುದರಿಂದ ಅಶುಭನಿಗೆ ಮಂಗಲವೂ ಇಲ್ಲವೇ ಇಲ್ಲ. ಇದ್ದರೂ ಅಲ್ಪವೇ ಅಮಂಗಲವೂ ಸಹ ಅವರ ಸ್ವರೂಪಕ್ಕಿಂತ ಹೆಚ್ಚಿನದೇನಾಗುವುದಿದೆ? ಎಂದು ಭಾರತದಲ್ಲಿ ಹೇಳಿದೆ. ದ್ವೈತಸ್ಯ ಎಂಬುದರಿಂದ ಸ್ವಯಂ ವ್ಯಾಖ್ಯಾನಿಸುವರು.

ಸ್ವಭಾವತಃ ಅಶುಭನಾದ ಮನುಷ್ಯನಿಗೆ ಎಷ್ಟು ಪ್ರಯತ್ನ ಮಾಡಿದರೂ ಮಂಗಲವು, ಸ್ವರೂಪಕ್ಕಿಂತ ಹೆಚ್ಚಿನ ಅಮಂಗಲವೂ ಆಗುವುದೇ ಇಲ್ಲ. (ಅಲ್ಪವೇ ಆಗುವುದು) ಆದ ಕಾರಣ ಅವೈಷ್ಣವರ ವಿಷಯದಲ್ಲಿ ಸಜ್ಜನರು

ಶುಭವಾಗಲಿ ಎಂದು ಹೇಳಿದರೂ, ಮನಸ್ಸಿನಿಂದ ಆಶೀರ್ವದಿಸಿದರೂ ಸುಳ್ಳೇ ಆಗುವುದು. ಆಧಿಕ್ಯ ತಂದು ಕೊಡುವುದಿಲ್ಲ. ದುಷ್ಟರ ಸ್ವಭಾವ ಅಶುಭವೇ ಆದುದರಿಂದ ಅವರಿಗೆ ಶುಭವಾಗಲಿ ಎಂದು ಹೇಳಿದರೂ ಆಲೋಚಿಸಿದರೂ ಅದು ಅಸತ್ಯವೇ ಆಗುವುದು. ಎಂದು ಪ್ರದ್ಯೋತದಲ್ಲಿ ಹೇಳಿದೆ. ೧, ೨ ಶ್ಲೋಕಗಳಲ್ಲಿ ಹೇಳಿದ್ದರ ವಿವರಣವೇ ಆದ್ದರಿಂದ ಅಸಂಗತವಲ್ಲ.।।೪।।

ಸ್ವಾಭಾವಿಕವಾಗಿ ಅಶುಭಸ್ವರೂಪರಾದವರಿಗೆ ಬೇರೆ ಯಾವುದರಿಂದಲೂ ಶುಭಾಶುಭಗಳು ಅತ್ಯಲ್ಪವಾದ್ದರಿಂದ ಅವರಿಗೆ ಮಾಡಿದ ಆಶೀರ್ವಾದಾದಿ-ಗಳೂ ಸುಳ್ಳಾಗುವವು ಅಂದಮೇಲೆ ಅವರಿಗೆ ಬರುವ ಅಶುಭದೇಹಾದಿಗಳು ಅಶುಭ ಕಾರಣವಾಗುವುದಿಲ್ಲವೇ? ಎಂದರೆ ಹಾಗೇನಿಲ್ಲ ಶುಭಾಶುಭವಾದ ಫಲಕ್ಕೆ ಕಾರಣವಾಗುವವು ಎಂದು ಹೇಳುವರು-

**ಛಾಯಾಪ್ರತ್ಯುದಕಾಭಾಸಾ ಹ್ಯಸಂತೋಽಪ್ಯರ್ಥಕಾರಿಣಃ ।**
**ಏವಂ ದೇಹಾದಯೋ ಭಾವಾ ಯಚ್ಛಂತ್ಯಾಮೃತ್ಯುತೋ ಭಯಮ್ ।।೫।।**

**ಯಥಾ** ಹೇಗೆ **ಛಾಯಾಪ್ರತ್ಯುದಕಾಭಾಸಾಃ** ನೆರಳು, ಹಿಮ, ಪ್ರತಿಬಿಂಬಗಳು **ಅಸಂತಃ ಅಪಿ** ಅಶಕ್ತವಾಗಿದ್ದರೂ **ಅರ್ಥಕಾರಿಣಃ** ಪ್ರಯೋಜನ ಉಳ್ಳವುಗಳೋ **ಏವಂ** ಹಾಗೆಯೇ **ದೇಹಾದಯೋ ಭಾವಾಃ** ಅಶುಭವಾದ ದೇಹ ಕರ್ಮ ಮೊದಲಾದವುಗಳು **ಆಮೃತ್ಯುತಃ** ತಮಸ್ಸಾಗುವವರೆಗೂ **ಭಯಂ ಯಚ್ಛಂತಿ** ಅಶುಭವನ್ನು ಕೊಡುವವು. (ಅಭಯಂ ಎಂದೂ ಮಾಡಿ ಶುಭ ಕೊಡುವವು ಎಂದೂ ಅರ್ಥ ಮಾಡಬಹುದು) ಇದರ ಅಭಿಪ್ರಾಯ ಹೀಗೆ ಯದ್ಯಪಿ ಅಸಜ್ಜನರ ಸ್ವರೂಪವೇ ಅಶುಭ ಸ್ವಭಾವ ಉಳ್ಳದ್ದು. ತನ್ನ ಯೋಗ್ಯತೆಗಿಂತ ಹೆಚ್ಚಿನ ಅಶುಭವನ್ನು ಯಾವ ದೇಹಕರ್ಮಗಳು ಮಾಡಲಾರವು. ಸ್ವಾಭಾವಿಕ ಜೀವನಕ್ಕಿಂತ ಅಸಮರ್ಥವಾದವುಗಳು ಆದರೂ ಅನಾದಿಯಾದ ಯೋಗ್ಯತೆಯಿಂದ ಸಿದ್ಧವಾದ ದುಃಖ-ಅಜ್ಞಾನಗಳ ಅಭಿವ್ಯಕ್ತಿಗೆ ಕಾರಣ-ವಾಗುವವು. ಮತ್ತು ಸಂಸಾರದಲ್ಲಿ ಸ್ವರೂಪಾನುಸಾರಿಯಾದ ಮಾನಸ-ದುಃಖಾದಿಗಳಿಗೆ ಜನಕವೂ ಆಗುವವು. ಸ್ವತಃ ಅಶಕ್ತವಾದ ನೆರಳು ಹಿಮಪ್ರತಿಬಿಂಬಗಳಂತೆ ಅಲ್ಪಕಾರ್ಯಕಾರಿ ಆಗಿವೆ ಎಂದು ಭಾವ. ಆದ್ದರಿಂದ ಪಾಪೇನ ಪಾಪಂ ಮುಂತಾದ ವೇದಾಪ್ರಾಮಾಣ್ಯಕ್ಕೆ ಅವಕಾಶವಿಲ್ಲ.

ಈ ಶ್ಲೋಕಕ್ಕೆ ಸಂಗತಿ ತಿಳಿಯದ್ದರಿಂದ ಅದನ್ನು ಆಚಾರ್ಯರು ತಿಳಿಸುವರು-

**ತಾತ್ಪರ್ಯ-** ಸ್ವಭಾವತೋಽಶುಭಸ್ಯಾಶುಭದೇಹಾದಿಕಂ ನಾಶುಭಕಾರಣಂ ತರ್ಹಿ ಇತ್ಯತ ಆಹ ಛಾಯಾ ಪ್ರತ್ಯುದಕಾಭಾಸಾಃ'' ಇತಿ ||

ಸ್ವಭಾವತಃ ಅಶುಭನಾದವನಿಗೆ ಹೊಸದಾಗಿ ಶುಭಾಶುಭಗಳು ಹುಟ್ಟುವುದಿಲ್ಲ ಎಂದಾದರೆ ಅರ್ಥಾತ್ ಅವರಿಗೆ ಬಂದ ಅಶುಭ ದೇಹಕರ್ಮಗಳು ಅಶುಭಕ್ಕೆ ಕಾರಣವಲ್ಲ ಎಂದತಾಯಿತಲ್ಲ. ದುಷ್ಕರ್ಮಕ್ಕೆ ಅಶುಭಕಾರಣತ್ವ ಹೇಳುವ ಪ್ರಮಾಣಗಳಿಗೆ ಅಪ್ರಾಮಾಣ್ಯ ಬರುವುದು ಎಂಬ ಶಂಕೆಯನ್ನು ಛಾಯಾಪ್ರತ್ಯುದಕಾಭಾಸಾಃ ಎಂಬ ಶ್ಲೋಕದಿಂದ ದೃಷ್ಟಾಂತಗಳ ಮೂಲಕ ಪರಿಹರಿಸುವರು ಎಂದು ಭಾವ.

ಈ ಶ್ಲೋಕಕ್ಕೆ ನೀರಿನಲ್ಲಿ ಕಾಣುವ ಸೂರ್ಯಪ್ರತಿಬಿಂಬಾದಿಗಳು ಸುಳ್ಳಾಗಿದ್ದರೂ ಹೇಗೆ ಅರ್ಥಕ್ರಿಯಾಕಾರಿಗಳಾಗಿವೆಯೋ ಹಾಗೆ ಮಿಥ್ಯಾ-ಭೂತವಾದ ದೇಹಾದಿಗಳು ಭಯಾದಿಗಳನ್ನು ಕೊಡುವವು ಎಂದು ವ್ಯಾಖ್ಯಾನಿಸುವುದು ಸರಿಯಲ್ಲ. 'ನೇದಂ ರಜತಂ' ಎಂಬಂತೆ ಬಾಧಕ ಬರದಿರುವುದರಿಂದ ಪ್ರತಿಬಿಂಬಾದಿಗಳಿಗೆ ಅಸತ್ಯತ್ವವು ಸಿದ್ಧವಾಗುವುದಿಲ್ಲ. ಮತ್ತು ಉದಕಾಭಾಸಾಃ ಎಂದರೆ ಸಾಕು ಪ್ರತಿ ಶಬ್ದ ವ್ಯರ್ಥವಾಗುವುದು. ಆದ್ದರಿಂದ ಪ್ರಮಾಣದಿಂದಲೇ ವ್ಯಾಖ್ಯಾನಿಸುವರು-

**ತಾತ್ಪರ್ಯ-** ವ್ಯಪೇಕ್ಷ್ಯ ಜೀವಂ ದೇಹಾದಿ ನಿಶ್ಶಕ್ತತ್ವಾದವಸ್ತ್ವಪಿ |
ಪುನಃ ಶುಭಾಶುಭನೃಣಾಂ ಯಚ್ಛೇದೇವ ಶುಭಾಶುಭಮ್ ||

ಛಾಯಾ ನೀಹಾರಕಾಭಾಸಾ ನಿಶ್ಶಕ್ತಾ ಅಪಿ ಕಾರ್ಯದಾಃ |
ಏವಂ ಶುಭಾದಿದೇಹಾದೇರ್ಭವೇತ್ಕಾರ್ಯಂ ಶುಭಾದಿಕಮ್ ||

-ಇತಿ ಸುಮತೇ |

ನೀಹಾರಃ ಪ್ರತ್ಯುದಂ ಚೈವ ಧೂಮ್ರಮಿತ್ಯಭಿಶಬ್ದ್ಯತೇ |

-ಇತಿ ಶಬ್ದನಿರ್ಣಯೇ ||೫||

ಸ್ವಯಂ ಶುಭಾಶುಭಸ್ವರೂಪನಾದ ಜೀವನಿಗಿಂತ ಅಸಮರ್ಥವಾದು-ದರಿಂದ ಅವಸ್ತು ಅಸತ್ಯ ಎನಿಸಿಕೊಂಡಿದ್ದರೂ (ಅವಸ್ತ್ವಶಕ್ತಮುದ್ದಿಷ್ಟಂ ಎಂದಿದೆ) ಮತ್ತು 'ಪ್ರಭುರ್ಹಿ ಜೀವೋ ಜಡಮಪೇಕ್ಷ್ಯ' 'ಸ್ವಾತಂತ್ರ್ಯಂ ಚ

ಜಡಾನ್ ಪ್ರತಿ' ಎಂಬ ಗೀತಾಭಾಷ್ಯದ ಪ್ರಕಾರ ಶರೀರ-ಕರ್ಮಾದಿಗಳು ಶುಭಾಶುಭನೄಣಾಂ ಒಳ್ಳೆ ಕೆಟ್ಟ ಜನರಿಗೆ ಶುಭಾಶುಭಂ ಒಳ್ಳೆಯ ಮತ್ತು ಕೆಟ್ಟ ಫಲವನ್ನು ಕೊಡುವವು. (ಸ್ವರೂಪದಲ್ಲಿ ವ್ಯತ್ಯಾಸವಾಗದಿದ್ದರೆ ಹೊರಗೇನೇ ಫಲವಾಗುವುದು) ಛಾಯಾ ನೆರಳು ನೀಹಾರ ಹಿಮ, ಅಥವಾ ನೀರಿನ ಕಣ, (ಪ್ರತ್ಯುದಕಶಬ್ದಾರ್ಥವಿದು) ಆಭಾಸ ಪ್ರತಿಬಿಂಬಗಳು ಅಸಮರ್ಥವಾದರೂ (ಬಿಂಬದಲ್ಲಿ) ಕಾರ್ಯಕಾರಿ ಆಗುತ್ತವೆ. ಅದರಂತೆ ಶುಭದೇಹಾದಿಗಳ ಕಾರ್ಯವಾದ ಶುಭಾದಿಗಳಾಗುವವು. (ಜೀವನ ಅಧೀನವಾದ ಪ್ರವೃತ್ತಿ ಜಡಕ್ಕೆ ಎಂದರ್ಥ.) 'ಯಥೈಷಾ ಪುರುಷೇ ಛಾಯಾ' ನೆರಳು ಪುರುಷನ ಅಧೀನ. ಹಿಮದ ಅಶಕ್ತತೆಯು ''ನ ಹಿ ಪ್ರತಿಬಿಂಬಸ್ಯ ಕ್ರಿಯಾ, ಸ ಹಿ ಬಿಂಬಕ್ರಿಯಯೈವ ಕ್ರಿಯಾವಾನ್'' ಎಂದು ಪ್ರತಿಬಿಂಬ ಬಿಂಬಾಧೀನವೆಂದು ತಿಳಿದು ಬರುವುದು.

ಹೀಗೆ ಸೂರ್ಯಚಂದ್ರಬಿಂಬಗಳಲ್ಲಿ, ಅಸಮರ್ಥವಾದ ಸೂರ್ಯನ ಛಾಯೆಯು ಶೀತನಿವಾರಿಸುವುದು, ಹಿಮವು ಶೀತ ಕೊಡುವುದು, ಪ್ರತಿಬಿಂಬವು ಬಿಂಬದ ಸೌಂದರ್ಯಾದಿಗಳನ್ನು ತಿಳಿಸುವುದು, ಅಥವಾ ''ಜಲೇ ನಾತ್ಮಾನಮೀಕ್ಷೇತ' ಎಂದಿರುವುದರಿಂದ ನೀರಿನಲ್ಲಿ ನೆರಳನ್ನು ನೋಡಿದರೆ ಮಾಡಿದ ಪುಣ್ಯ ನಾಶವಾಗುವುದು. ''ವೇದವಿದ್ಬ್ರಾಹ್ಮಣಚ್ಛಾಯಾ ನ ದುಷ್ಯತಿ ಕದಾಚನ'' ಎಂದೂ ಇರುವುದರಿಂದ ಬ್ರಾಹ್ಮಣರ ಛಾಯೆ ಬೀಳುವುದರಿಂದ ದೂಷಿತವಾಗುವುದಿಲ್ಲ. ಪುನೀತವಾಗುವುದು. ಅಂತು ಛಾಯೆ ಶುಭಾಶುಭ ಕಾರ್ಯಮಾಡುವುದು. ಹಿಮವು ಸಸ್ಯದ ಅಭಿವೃದ್ಧಿ ಅನಾರೋಗ್ಯವೆಂಬ ಶುಭಾಶುಭಫಲದಾಯಕ. ಕನ್ನಡಿಯಲ್ಲಿ ಪ್ರತಿಬಿಂಬ ಶುಭ, ನೀರಿನಲ್ಲಿ ಪ್ರತಿಬಿಂಬ ಅಶುಭ. ಛಾಯೆಯ ಬಿಂಬನಾದ ಪುರುಷನಿಗೆ ಗಿಡಕ್ಕೆ ಏನೂ ಮಾಡದಿದ್ದರೂ ಅದರಲ್ಲಿ ಕುಳಿತವನಿಗೆ ಆನಂದ ನೀಡುವುದು. ಹಿಮ ಚಂದ್ರನಿಗೆ ಏನು ಮಾಡದೇ ಬೇರೆಯವರಿಗೆ ಶೀತ ಉಂಟುಮಾಡುವುದು. ಸೂರ್ಯನಿಗೆ ಏನೂ ಮಾಡದ ಸೂರ್ಯನ ಪ್ರತಿಬಿಂಬವು ಅನ್ಯತ್ರ ಅಗ್ನಿಯನ್ನು ಉತ್ಪಾದಿಸುತ್ತದೆ.

'ತುಷಾರಸ್ತುಹಿನಂ ಹಿಮಂ' ಎಂದು ಅಭಿಧಾನ. ''ತುಷಾರೋಽಂಬುಕಣಃ ಸ್ಮೃತಃ'' ಎಂದು ಅಭಿಧಾನ ಪ್ರಕಾರ ನೀರಿನ ಕಣ ಎಂದಂತಾಯಿತು.

ಅಶ್ವತ್ಥಛಾಯಾ ಶುಭಫಲದಾಯಕ. ಅಂತ್ಯಜಛಾಯಾ ಅಶುಭಫಲ-ದಾಯಕ. ಗಂಗಾಜಲಕಣ ಪಾವಿತ್ರ್ಯದಾಯಕ. ಮೂತ್ರಕಣವು ಅಪಾವಿತ್ರ್ಯದಾಯಕ.

ಪ್ರತ್ಯುದಕಶಬ್ದವು ನೀಹಾರವಾಚಕ ಎಂಬ ವಿಷಯದಲ್ಲಿ ಅಭಿಧಾನವನ್ನು 'ನೀಹಾರಃ...' ಎಂಬ ವಚನದಿಂದ ಹೇಳುತ್ತಿದ್ದಾರೆ. ನೀಹಾರ ಪ್ರತ್ಯುದ ಧೂಮ್ರ ಇವು ಪರ್ಯಾಯ ಪದಗಳು ಎಂದು ಶಬ್ದನಿರ್ಣಯದಲ್ಲಿ ಹೇಳಿದೆ.

ಇಲ್ಲಿ ಮೊದಲನೇ ಎರಡು ಶ್ಲೋಕಗಳಿಂದ ಎಲ್ಲವೂ ಭಗವಂತನಿಂದ ವ್ಯಾಪ್ತವಾದ್ದರಿಂದ ಅವನ ಅಧೀನವಾದ ಕಾರಣ ಅದರ ಪ್ರಶಂಸೆ ಮಾಡಬೇಕು. ನಿಂದೆ ಮಾಡಬಾರದು. ಭಗವಂತನ ದ್ವೇಷಿಗಳ ಪ್ರಶಂಸೆ ಮಾಡಬಾರದು. ವಿಪರೀತವಾಗಿ ನಿಂದಿಸಬೇಕು. ಎಂದು ಹೇಳಿ ಮೂರನೇ ಶ್ಲೋಕದಲ್ಲಿ ಸರ್ವಾವಸ್ಥಾಪ್ರೇರಕನಾದ್ದರಿಂದ ಎಲ್ಲವೂ ಅವನ ಅಧೀನ ಎಂದು ಹೇಳಿ ನಾಲ್ಕನೇ ಶ್ಲೋಕದಲ್ಲಿ ಹರಿದ್ವೇಷಿಗಳಿಗೆ ನಿಂದ್ಯತ್ವವನ್ನು ಉಪಪಾದಿಸಲು ಕೇವಲ ಅಶುಭಸ್ವರೂಪರಾದ ಅಸಜ್ಜನರ ಶ್ರೇಯಸ್ಸನ್ನು ಅಪೇಕ್ಷಿಸಬಾರದು. ಎಂದು ಹೇಳಿ ಐದನೇ ಶ್ಲೋಕದಲ್ಲಿ ಅದರ ಮೇಲೆ ಬಂದ ಅನುಪಪತ್ತಿ ಪರಿಹಾರಮಾಡಿದರು.

ಈಗ ಪರಮಾತ್ಮನೇ ಸಕಲಸೃಷ್ಟ್ಯಾದಿಕರ್ತೃವಾಗಿರುವುದರಿಂದ ಪ್ರತ್ಯಕ್ಷ-ರೂಪಗಳಿಂದ ಅವತಾರರೂಪಗಳಿಂದ ತತ್ತತ್ಕಾಲದಲ್ಲಿ ಪ್ರಾಪ್ತವಾದ ಉಪದ್ರವಗಳನ್ನು ನಿವಾರಿಸುವುದರಿಂದ ಸಂರಕ್ಷಕನಾದದ್ದರಿಂದ ಸಕಲಗುಣ-ಪರಿಪೂರ್ಣನಾದ ಆ ಪರಮಾತ್ಮನ ಸ್ತುತಿಯನ್ನೇ ಮಾಡಬೇಕು. ಅವನ ಭಕ್ತರ ಸ್ತುತಿಯನ್ನು ಮಾಡಬೇಕು. ಎಂದು ಎರಡುವರಿ ಶ್ಲೋಕದಿಂದ ಹೇಳುವರು-

**ಆತ್ಮೈವ ತದಿದಂ ವಿಶ್ವಂ ಸೃಜ್ಯತೇ ಸೃಜತಿ ಪ್ರಭುಃ ।**
**ತ್ರಾಯತೇ ತ್ರಾತಿ ವಿಶ್ವಾತ್ಮಾ ಹ್ರಿಯತೇ ಹರತೀಶ್ವರಃ ॥೬॥**

**ವಿಶ್ವಾತ್ಮಾ** ಸರ್ವಾಂತರ್ಯಾಮಿಯಾದ **ಪ್ರಭುಃ** ಸಮರ್ಥನಾದ **ಈಶ್ವರಃ** ಸರ್ವ ನಿಯಾಮಕನಾದ **ಆತ್ಮಾ ಏವ** ಶ್ರೀಹರಿಯೇ (ಸ್ವತಂತ್ರವಾಗಿ) **ತದಿದಂ ವಿಶ್ವಂ** ಪ್ರತ್ಯಕ್ಷಾದಿಪ್ರಮಾಣಗಳಿಂದ ಸಿದ್ಧವಾದ ಪ್ರಪಂಚವನ್ನು **ಆತ್ಮೈವ** ತಾನೇ ತನ್ನಿಂದಲೇ **ಸೃಜ್ಯತೇ** ಮೂಲರೂಪದಿಂದ ವ್ಯಕ್ತಿಯನ್ನು ಹೊಂದುವನು.

**ತ್ರಾಯತೇ** ಇಷ್ಟು ಕಾಲ ಪರ್ಯಂತ ಮನುಷ್ಯರ ಮಧ್ಯದಲ್ಲಿರುವೆನೆಂದು ನಿರ್ಧರಿಸಿ ಇರುವ ಸ್ಥಿತಿ ಎಂಬ ರಕ್ಷಣೆಯನ್ನು ಪಡೆಯುವನು. **ಹ್ರಿಯತೇ** ಮೂಲರೂಪದಲ್ಲಿ ಏಕೀಭಾವ ಹೊಂದುವುದೆಂಬ ಸಂಹಾರವನ್ನು ಹೊಂದುವನು.।।೬।।

ಮೇಲಿನ ಶ್ಲೋಕದಲ್ಲಿ ಆತ್ಮಾ ಇದಂ ವಿಶ್ವಂ ಸೃಜತಿ, ತ್ರಾತಿ, ಹರತಿ, ಎಂದು ಅನ್ವಯವಾದ ಮೇಲೆ ಸೃಜ್ಯತೇ, ತ್ರಾಯತೇ, ಹ್ರಿಯತೇ, ಎಂಬುವು ಅನನ್ವಿತವಾಗಿ ಉಳಿಯುವವು. ಕಾರಣ ಅನ್ವಯ ತೋರಿಸುವರು-

**ತಾತ್ಪರ್ಯ-** ಇದಂ ವಿಶ್ವಂ ಸೃಜತಿ, ತ್ರಾತಿ, ಹರತಿ ಚ, ಸ್ವಯಂ ಸ್ವಾತ್ಮನೈವ ಸೃಜ್ಯತೇ ತ್ರಾಯತೇ ಹ್ರಿಯತೇ ಚ ।।

ಇಲ್ಲಿ ಆತ್ಮಶಬ್ದಕ್ಕೆ ಸ್ವಯಂ ಎಂಬರ್ಥ ಇಟ್ಟುಕೊಂಡು ಸೃಜ್ಯತೇ ಮುಂತಾದವಕ್ಕೆ ಅನ್ವಯ ತೋರಿಸಲ್ಪಟ್ಟಿತು. ಅದು ಸರಿಯಲ್ಲ. ಪರಮಾತ್ಮನಿಗೆ ಸೃಷ್ಟ್ಯಾದಿಗಳೇ ಇಲ್ಲವಲ್ಲ ಎಂದರೆ ಪ್ರಮಾಣದಿಂದಲೇ ಪರಮಾತ್ಮನಲ್ಲಿ ವಿವಕ್ಷಿತವಾದ ಸೃಷ್ಟ್ಯಾದಿಗಳನ್ನು ತಿಳಿಸುವರು-

**ತಾತ್ಪರ್ಯ-** ದೀಪಾದ್ದೀಪಾಂತರಂ ಯದ್ವತ್ ಸೃಷ್ಟಿರೀಶಸ್ಯ ಕೀರ್ತ್ಯತೇ ।
ಏತಾವತ್ಕಾಲಮಾಶಿಷ್ಯೇ ಮಾನುಷೇಷ್ವಿತಿ ಚಿಂತನಮ್ ।

ವಿಷ್ಣೋಸ್ತ್ರಾಣಂ ಸಮುದ್ದಿಷ್ಟಂ ಸ್ವಸ್ಯೈವ ಸ್ವೇಚ್ಛಯೈವ ತು ।
ದೀಪೇ ದೀಪಾಂತರಸ್ಯೇವ ಹ್ಯೇಕೀಭಾವಶ್ಚ ಸಂಹೃತಿಃ । ಇತಿ ಚ ।।

ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೇ ।
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ । ಇತಿ ಚ ।

**ತಾತ್ಪರ್ಯದ ಭಾವಾರ್ಥ**

ಶ್ರೀಹರಿಯು ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಮಾಡುತ್ತಾನೆ. ಮತ್ತು ತಾನು ತನ್ನಿಂದಲೇ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಹೊಂದುತ್ತಾನೆ.

ಒಂದು ದೀಪದಿಂದ ಇನ್ನೊಂದು ದೀಪವು ವ್ಯಕ್ತವಾಗುವಂತೆ ಮೂಲ ರೂಪದಿಂದ ರೂಪಾಂತರದಿಂದ ಜನರಿಗೆ ಪ್ರತ್ಯಕ್ಷವಾಗುವುದೇ ಜನ್ಮವು. ಇಷ್ಟು ಕಾಲ (ಹದಿಮೂರುಸಾವಿರದ ಒಂದು ನೂರಾ ಆರು ವರ್ಷ ಆರು ತಿಂಗಳು ಇತ್ಯಾದಿಯಾಗಿ) ಮನುಷ್ಯರಲ್ಲಿ ವಾಸಿಸುವೆನು ಎಂದು ಚಿಂತಿಸಿವುದೇ

ರಕ್ಷಣೆಯು. ತನ್ನ ಇಚ್ಛೆಯಿಂದಲೇ ತನ್ನ ಮೂಲರೂಪದಲ್ಲಿ ಸೇರುವುದೇ ಸಂಹಾರವೆಂದು ತಿಳಿಯಬೇಕು. ಏಕೀಭಾವ ಎಂದರೆ ಸಂಬಂಧವಿಶೇಷವೇ ಹೊರತು ಐಕ್ಯವಲ್ಲ.

ಇಂದ್ರಾರ್ಜುನರಂತೆ ಅಂಶಿ-ಅಂಶಗಳಲ್ಲಿ ಕಿಂಚಿತ್ತು ವ್ಯತ್ಯಾಸವಿಲ್ಲವೆಂದು ಹೇಳುವರು. ಭಗವಂತನ ಮೂಲರೂಪವೂ ಪೂರ್ಣವೇ ಅವತಾರ ರೂಪವೂ ಪೂರ್ಣವೇ. ಪೂರ್ಣವಾದ ಮೂಲರೂಪದಿಂದ ಪೂರ್ಣವಾದ ಅವತಾರ ರೂಪವು ಅಭಿವ್ಯಕ್ತವಾಗುತ್ತದೆ. ಪೂರ್ಣವಾದ ಅವತಾರರೂಪದ ಪೂರ್ಣತ್ವವನ್ನು ಸ್ವೀಕರಿಸಿ ಪೂರ್ಣವೇ ಆಗಿ ಮೂಲರೂಪವು ಉಳಿಯುವುದು. ಹೊರತು ಅವತಾರರೂಪದ ಸಂಶ್ಲೇಷದಿಂದ ಆಧಿಕ್ಯವನ್ನು ಹೊಂದುವುದಿಲ್ಲ-ವೆಂದು ಭಾವ.।।೬।।

ಚತುರ್ಮುಖಬ್ರಹ್ಮ ಮೊದಲಾದವರಿಗೆ ಸೃಷ್ಟಿಕರ್ತೃತ್ವಾದಿಗಳನ್ನು ಹೇಳುವ ವೇದಗಳಿರುವಾಗ ಶ್ರೀಹರಿಯೇ ಸೃಷ್ಟ್ಯಾದಿಗಳನ್ನು ಮಾಡುವನೆಂದು ಹೇಗೆ ನಿಶ್ಚಯಿಸುವುದು ಎಂಬ ಶಂಕೆಯನ್ನು ಪರಿಹರಿಸುತ್ತಾ ಉಪಸಂಹರಿಸುವರು. ಅಥವಾ ನಮ್ಮ ತಂದೆಗೂ ಒಬ್ಬ ತಂದೆ ಇದ್ದಂತೆ ಜಗಜ್ಜನಕನಿಗೂ ಜನಕ ಇನ್ನೊಬ್ಬನಿರಬಾರದೇಕೆ? ಎಂಬ ಶಂಕೆಯನ್ನು ಪರಿಹರಿಸುವರು-

**ತಸ್ಮಾನ್ನ ಹ್ಯಾತ್ಮನೋಽಮುಷ್ಮಾದನ್ಯೋ ಭಾವೋ ನಿರೂಪಿತಃ ।**
**ಅನಿರೂಪಿತೇಯಂ ತ್ರಿವಿಧಾ ನಿರ್ಮೂಲಾ ಮತಿರಾತ್ಮನಿ ।।೭।।**

**ತಸ್ಮಾತ್** ನಿರವಕಾಶವಾದ ಪ್ರಮಾಣಬಲದಿಂದ ಶ್ರೀಹರಿಯೇ ಸೃಷ್ಟ್ಯಾದಿ-ಕರ್ತಾ ಎಂದು ಸಿದ್ಧವಾದುದರಿಂದ **ಅಮುಷ್ಮಾದನ್ಯಃ** ಶ್ರೀಹರಿಯಿಂದ ಭಿನ್ನವಾದ **ಭಾವಃ** ಸೃಷ್ಟ್ಯಾದಿಕರ್ತೃವು **ನ ನಿರೂಪಿತಃ** ವೇದಾದಿಗಳಲ್ಲಿ ಎಲ್ಲಿಯೂ ಹೇಳಲ್ಪಟ್ಟಿಲ್ಲ ಎರಡನೇ ಅವತಾರಿಕ ಪ್ರಕಾರ ಅರ್ಥ **ತಸ್ಮಾತ್** ಯಾವ ಕಾರಣ ಶ್ರೀಹರಿಯು ತನ್ನಿಂದಲೇ ತಾನು ಆವಿರ್ಭಾವಾದಿಗಳನ್ನು ಹೊಂದುವನೆಂಬುದು ಪ್ರಾಮಾಣಿಕವಾಗಿದೆಯೋ ಆ ಕಾರಣ **ಆತ್ಮನಃ** ಪರಮಾತ್ಮನಿಗೆ **ಭಾವಃ** ಸೃಷ್ಟ್ಯಾದಿ ಕರ್ತೃವು **ಅಮುಷ್ಮಾದನ್ಯಃ** ಶ್ರೀಹರಿಯನ್ನು ಬಿಟ್ಟು **ನ** ಬೇರೆಯವರಿಲ್ಲ. **ಆತ್ಮನಿ** ಪರಮಾತ್ಮನ ವಿಷಯದಲ್ಲಿ **ಇಯಂ ತ್ರಿವಿಧಾ ಮತಿಃ** ಬೇರೆಯವರಿಂದ ಸೃಷ್ಟಿ, ಸ್ಥಿತಿ, ಸಂಹಾರವಾಗುವುದು ಎಂಬ ಮೂರು

ವಿಧವಾದ ಬುದ್ಧಿಯು **ನ ನಿರೂಪಿತಾ ವಿದ್ವದ್ಭಿಃ** ಜ್ಞಾನಿಗಳಿಂದ ನಿರೂಪಿಸಲ್ಪಡಲಿಲ್ಲ ಏಕೆಂದರೆ **ನಿರ್ಮೂಲಾ** ಮೂಲಪ್ರಮಾಣ ರಹಿತವಾಗಿದೆ ಆದ ಕಾರಣ ಎಂದು ಭಾವ.

ಮೇಲಿನ ಶ್ಲೋಕದಲ್ಲಿ ಪರಮಾತ್ಮನ ಹೊರತು ಬೇರೆ ಪದಾರ್ಥಗಳೇ ಇಲ್ಲ ಎಂದು ಹೇಳಿದಂತೆ ಕಾಣುವುದು ಕಾರಣ ಯೋಜಿಸುವರು-

**ತಾತ್ಪರ್ಯ-** ಆತ್ಮನಃ ಪರಮೇಶ್ವರಸ್ಯ ತಸ್ಮಾದನ್ಯಃ ಭಾವಃ ನಾಸ್ತಿ ।

ಸೃಷ್ಟಿ ಸ್ಥಿತಿಶ್ಚ ಸಂಹಾರೋ ಭಾವನಂ ಸಮುದಾಹೃತಮ್ ।
ತದ್ಯಃ ಕರೋತಿ ಪುರುಷಃ ಸ ಭಾವ ಇತಿ ಕೀರ್ತ್ಯತೇ । ಇತಿ ವಿವೇಕೇ ।

ಅನ್ಯೇನ ಸೃಷ್ಟಿಃ ಸ್ಥಿತಿಃ ಸಂಹಾರ ಇತಿ ತ್ರಿವಿಧಾ ಮತಿಃ ವಿದ್ವದ್ಭಿಃ ನೈವ ನಿರೂಪಿತಾ ನಿರ್ಮೂಲಾ ಪ್ರಮಾಣವರ್ಜಿತಾ (ಚ) ।

ಅನ್ಯಸ್ಮಾತ್ ಸೃಷ್ಟಿಸಂಹಾರೌ ಸ್ಥಿತಿಶ್ಚ ಪರಮಾತ್ಮನಃ ।
ನಿರೂಪಿತಾ ನ ವಿದ್ವದ್ಭಿಃ ಪ್ರಮಾಣಾಭಾವತೋ ಹರೇಃ ॥ ಇತಿ ಬ್ರಹ್ಮತರ್ಕೇ

ಆತ್ಮನಃ ಪರಮಾತ್ಮನಿಗೆ ಶ್ರೀಹರಿಯಿಂದ ಭಿನ್ನನಾದ ಸೃಷ್ಟಿಕರ್ತೃ ಇಲ್ಲ. ಸೃಷ್ಟಿ, ಸ್ಥಿತಿ, ಸಂಹಾರಗಳು ಭಾವನವೆಂದು ಕರೆಯಲ್ಪಡುತ್ತವೆ. ಅವುಗಳನ್ನು ಮಾಡುವವನು ಭಾವನೆನಿಸಿಕೊಳ್ಳುವನು ಎಂದು ವಿವೇಕದಲ್ಲಿ ಹೇಳಿದೆ. (ತತ್ ಭವನಂ ಯಃ ಕರೋತಿ ಸಃ ಭಾವ ಭವತೀತಿ ಭಾವಃ ಭವನಂ ಭವನಕರ್ತಾ ಎಂದರ್ಥ ಎಂದಾಗುವುದು.)

ಬೇರೆಯವರಿಂದ ಸೃಷ್ಟಿ, ಸ್ಥಿತಿ, ಸಂಹಾರಗಳು ಶ್ರೀಹರಿಗೆ ಎಂಬ ಬುದ್ಧಿಯು ಜ್ಞಾನಿಗಳಿಗೆ ಇಲ್ಲ. ಅದು ಮೂಲ ಪ್ರಮಾಣರಹಿತವಾಗಿದೆ. ಶ್ರೀಹರಿಗೆ ಇತರರಿಂದ ಸೃಷ್ಟಿ, ಸ್ಥಿತಿ, ಸಂಹಾರಗಳೆಂಬುವುದನ್ನು ವೇದಾದಿ ಮೂಲ ಪ್ರಮಾಣವಿಲ್ಲದಿರುವುದರಿಂದ ಜ್ಞಾನಿಗಳು ಹೇಳಲೇ ಇಲ್ಲವೆಂದು ಬ್ರಹ್ಮ ತರ್ಕದಲ್ಲಿದೆ. ಎಂದು ತಾತ್ಪರ್ಯದ ಭಾವ.

ಇನ್ನು ಜನಿತೋಽತ ವಿಷ್ಣೋಃ ಎಂಬ ವಾಕ್ಯದಲ್ಲಿ ವಿಷ್ಣುಶಬ್ದಕ್ಕೆ ಯಜ್ಞ ಯಜಮಾನ ಮುಂತಾಗಿ ಅರ್ಥ ಹೇಳಿದೆ. ದಶರಥಾದಿಗಳಿಂದ ಜನಿಸಿದ ಎಂಬ ಪುರಾಣಕ್ಕೂ ಆವಿರ್ಭಾವ ಎಂದೇ ಅರ್ಥ.॥೭॥

ಯಾರು ಸತ್ವಾದಿಗುಣಬದ್ಧರೋ ಅವರಿಗೆ ಅನ್ಯರಿಂದ ಜನ್ಮಾದಿ-ಗಳಾಗುವವು. ಪರಮಾತ್ಮನಾದರೂ ಸತ್ವಾದಿಗುಣರಹಿತನು. ಕಾರಣ ಅವನಿಗೆ ಅನ್ಯರಿಂದ ಜನ್ಮಾದಿಗಳಿಲ್ಲವೆಂದು ಹೇಳುವರು-

**ಇದಂ ಗುಣಮಯಂ ವಿದ್ಧಿ ತ್ರಿವಿಧಂ ಮಾಯಯಾ ಕೃತಮ್ ॥೮॥**

**ಇದಂ ತ್ರಿವಿಧಂ** ಅನ್ಯರಿಂದ ಮಾಡಲ್ಪಡುವ ಸೃಷ್ಟಿ, ಸ್ಥಿತಿ, ಸಂಹಾರಗಳೆಂಬ ಮೂರು **ಗುಣಮಯಂ** ಗುಣಪ್ರಧಾನವೆಂದು ಅರ್ಥಾತ್ ಗುಣತ್ರಯ-ಸಂಬಂಧವಾಪ್ಯವೆಂದು **ಮಾಯಯಾ ಕೃತಂ** ಈಶ್ವರೇಚ್ಛೆಯಿಂದ ಮಾಡಲ್ಪಟ್ಟಿದೆ ಎಂದು **ವಿದ್ಧಿ** ತಿಳಿ. ಕಾರಣ ವ್ಯಾಪಕವಾದ ಸತ್ವಾದಿಗುಣಾಧೀನತ್ವ ಇಲ್ಲದ್ದರಿಂದ ಭಗವಂತನಿಗೆ ಬೇರೆಯವರಿಂದ ಸೃಷ್ಟ್ಯಾದಿಗಳಿಲ್ಲ. ಅವನೇ ಸೃಷ್ಟಿಕರ್ತೃ-ವಾದ್ದರಿಂದ ಅವನ ಅಧೀನವೂ ಆದ್ದರಿಂದ ಅವನಿಂದ ವ್ಯಾಪ್ತವೂ ಆಗಿದೆ.॥

**ತಾತ್ಪರ್ಯ-** ಅನ್ಯತಃ ಸೃಷ್ಟಿಃ ಸ್ಥಿತಿಃ ಸಂಹಾರಃ ಇತಿ ತ್ರಯಂ ಗುಣಪ್ರಧಾನಂ ಸತ್ವಾದಿಗುಣಾಧೀನಮ್ ।

**ಗುಣಸಂಬಂಧಯೋಗ್ಯಾನಾಮುತ್ಪತ್ತ್ಯಾದ್ಯಾಃ ಸ್ಯುರನ್ಯತಃ ।**
**ಸರ್ವದಾ ನಿರ್ಗುಣಸ್ಯಾಸ್ಯ ಸರ್ಗಾದ್ಯಾಃ ಸ್ಯುಃ ಕುತೋಽನ್ಯತಃ ॥ ಇತಿ ಚ ॥**

ಸತ್ವಾದಿಗುಣಾಧೀನವಾದ ಸೃಷ್ಟ್ಯಾದಿಗಳು ಅನ್ಯರಿಂದ ಆಗುವುದು ಎಂದು ಈಶ್ವರೇಚ್ಛೆಯಿಂದ ಮಾಡಲ್ಪಟ್ಟಿದ್ದು. ಗುಣಸಂಬಂಧ ಉಳ್ಳ ಜೀವರಿಗೆ ಬೇರೆಯವರಿಂದ ಉತ್ಪತ್ತ್ಯಾದಿಗಳು ಆಗುವವು. ಸರ್ವದಾ ಗುಣತ್ರಯಗಳಿಲ್ಲದ ಶ್ರೀಹರಿಗೆ ಅನ್ಯರಿಂದ ಸೃಷ್ಟ್ಯಾದಿಗಳಾಗಲಾರವು ಎಂದು ಭಾವ.

ಇಲ್ಲಿಯ ವರೆಗೆ ಹೇಳಿದ (ಕಲಿಸಿದ) ಜ್ಞಾನದ ಫಲವನ್ನು ಹೇಳುವನು-

**ಏತದ್ವಿದ್ವಾನ್ ಮದುದಿತಂ ಜ್ಞಾನವಿಜ್ಞಾನನೈಪುಣಃ ।**
**ನ ನಿಂದತಿ ನ ಚ ಸ್ತೌತಿ ಲೋಕೇ ಚರತಿ ಸೂರ್ಯವತ್ ॥೯॥**

**ಮದುದಿತಂ ಏತತ್** ನಾನು ಹೇಳಿದ ಸರ್ವವ್ಯಾಪ್ತತ್ವ, ಸರ್ವಾವಸ್ಥಾಪ್ರದತ್ವ ಸರ್ವಸ್ರಷ್ಟೃತ್ವ, ಅನನ್ಯಸೃಜ್ಯತ್ವ ಮುಂತಾದವನ್ನು **ವಿದ್ವಾನ್** ತಿಳಿದವನು **ಜ್ಞಾನವಿಜ್ಞಾನನೈಪುಣಃ ಸನ್** ಸಾಧಾರಣಜ್ಞಾನ ತನಗೆ ಯೋಗ್ಯವಾದ ವಿಶೇಷಜ್ಞಾನಗಳಲ್ಲಿ ಕುಶಲನಾಗಿ ಮನುಷ್ಯನು **ನ ನಿಂದತಿ** ವಿಷ್ಣು-ವೈಷ್ಣವರನ್ನು

ನಿಂದಿಸುವುದಿಲ್ಲ **ಸ್ತೌತಿ ಚ** ಪ್ರಶಂಸೆಯನ್ನೇ ಮಾಡುವನು. **ನ ಚ ಸ್ತೌತಿ ನಿಂದತಿ ಚ** ವಿಷ್ಣುದ್ವೇಷಿಗಳನ್ನು ಪ್ರಶಂಸಿಸುವುದಿಲ್ಲ ನಿಂದಿಸುವನು. **ಲೋಕೇ** ಜಗತ್ತಿನಲ್ಲಿ ಎಲ್ಲಕಡೆ **ಸೂರ್ಯವತ್** ಸೂರ್ಯನಂತೆ ನಿಸ್ಸಂಗನಾಗಿ ಸಂಚರಿಸುವನು ಸ್ವಾಮಿಯಾದ ಪರಮಾತ್ಮನು ಎಲ್ಲರನ್ನೂ ಪ್ರೇರಿಸಿ ಆ ಕಾರ್ಯಗಳನ್ನು ಮಾಡಿಸುವನು ಎಂಬ ಯಥಾರ್ಥ ಜ್ಞಾನ ಉಳ್ಳವನಾಗಿ ನಿಂದಿಸುವುದನ್ನಾಗಲಿ ಸ್ತುತಿಸುವುದನ್ನಾಗಲಿ ಮಾಡದೇ ನಿಸ್ಸಂಗನಾಗಿ ಸೂರ್ಯನಂತೆ ಸಂಚರಿಸುವ-ನೆಂದು ಭಾವ.॥೯॥

ಸೂರ್ಯನಂತೆ ಎಂದು ದೃಷ್ಟಾಂತ ಹೇಳಿದರು ದಾರ್ಷ್ಟಾಂತಿಕದಲ್ಲಿ ಹೇಗೆಂದು ತಿಳಿಸುವರು-

**ಪ್ರತ್ಯಕ್ಷೇಣಾನುಮಾನೇನ ನಿಗಮೇನಾತ್ಮಸಂವಿದಾ ।**
**ಆದ್ಯಂತವದಸದ್‌ಜ್ಞಾತ್ವಾ ನಿಸ್ಸಂಗೋ ವಿಚರೇದಿಹ ॥೧೦॥**

**ಇದಂ** ಪ್ರಮಾಣಪ್ರಮಿತವಾದ ಬ್ರಹ್ಮಾದಿ ಸಮಸ್ತ ಪ್ರಪಂಚವು **ಪ್ರತ್ಯಕ್ಷೇಣ** ಪ್ರತ್ಯಕ್ಷದಿಂದ **ಅನುಮಾನೇನ** ಕೃತಕತ್ವ ಮುಂತಾದ ಅನುಮಾನದಿಂದ (ಉತ್ಪನ್ನವಾದುದರಿಂದ ನಾಶವಾಗಲೇಬೇಕೆಂದು ಊಹಿಸಿ ಎಂದರ್ಥ) **ನಿಗಮೇನ** ವೇದಾದಿಶಾಸ್ತ್ರದಿಂದಲೂ, **ಆತ್ಮಸಂವಿದಾ** ತನ್ನ ಪ್ರತಿಭೆಯಿಂದ ಅಥವಾ ಸಾಕ್ಷಿಯಿಂದಲೂ **ಆದ್ಯಂತವತ್** ಉತ್ಪತ್ತಿನಾಶವುಳ್ಳದ್ದು **ಅಸತ್** ಅಭೀಷ್ಟ ಕೊಡುವಲ್ಲಿ ಅಸಮರ್ಥವು ಎಂದು **ಜ್ಞಾತ್ವಾ** ನಿಶ್ಚಯಿಸಿಕೊಂಡು ಶ್ರೀಹರಿಯೇ ಸರ್ವ ಸಮರ್ಥನೆಂದೂ ನಿಶ್ಚಯಿಸಿಕೊಂಡು, **ನಿಸ್ಸಂಗಃ** ಸಂಸಾರದಲ್ಲಿ ಆಸಕ್ತನಾಗದೇ **ಇಹ ವಿಚರೇತ್** ಜಗತ್ತಿನಲ್ಲಿ ಸಂಚರಿಸಬೇಕು.

ಇಲ್ಲಿ ಅಸತ್ ಎಂದರೆ ಶೂನ್ಯ ಮುಂತಾದ ಅರ್ಥವಾಗದಿರಲೆಂದು ವ್ಯಾಖ್ಯಾನಿಸುವರು-

**ತಾತ್ಪರ್ಯ- ಅಸಮರ್ಥಮಸತ್ ಪ್ರೋಕ್ತಂ ಸತ್ ಸಮರ್ಥಂ ಪ್ರಕೀರ್ತಿತಮ್ ॥**
**-ಇತಿ ಚ ।**

ಅಶಕ್ತವಾದುದು ಅಸತ್ ಎಂದು ಸರ್ವಶಕ್ತವಾದುದನ್ನು ಸತ್ ಎಂದು ಕರೆಯುವರು ಎಂದು ಭಾವ.

ಸಂಸಾರದಲ್ಲಿ ಅನಾಸಕ್ತನಾಗಿ ಎಂದಾಗ ಈ ಸಂಸಾರ ಯಾರಿಗೆ ಎಂದು ಪ್ರಶ್ನಿಸುವನು. ಜೀವನಿಗೆ ಸಂಸಾರವು, ದೇಹದಲ್ಲಿದ್ದರೂ ಬ್ರಹ್ಮನಿಗೆ ಸಂಸಾರವಿಲ್ಲವೆಂದು ತಾನು ತಿಳಿದಿದ್ದರೂ ಜನರಿಗೆ ದೃಢವಾದ ಜ್ಞಾನ ಬರಲೆಂದು ಕೇಳುವನು. ಅಥವಾ ಸ್ವಪ್ರಕಾಶನಾದುದರಿಂದ ಪರಮಾತ್ಮನಿಗೂ ಜಡವಾದುದರಿಂದ ದೇಹಕ್ಕೂ ಸಂಸಾರ ಅಸಂಭಾವಿತವೆಂದು ತಿಳಿದಿದ್ದರೂ ಜನರ ಹಿತಕ್ಕಾಗಿ ಪ್ರಶ್ನಿಸುವನು.

**ಉದ್ಧವ ಉವಾಚ -**

**ನೈವಾತ್ಮನೋ ನ ದೇಹಸ್ಯ ಸಂಸೃತಿರ್ದ್ರಷ್ಟೃದೃಶ್ಯಯೋಃ ।**
**ಅನಾತ್ಮಸ್ವದೃಶೋರೀಶ ಕಸ್ಯೇಯಮುಪಲಭ್ಯತೇ ॥೧೧॥**

**ಹೇ ಈಶ** ಸ್ವಾಮಿಯಾದ ಶ್ರೀಕೃಷ್ಣನೇ **ಸಂಸೃತಿಃ** ಸಂಸಾರವು **ಕಸ್ಯ** ಯಾರಿಗೆ **ಆತ್ಮನಃ** ಶ್ರೀಹರಿಗೋ ಅಥವಾ **ದೇಹಸ್ಯ** ಶರೀರಕ್ಕೋ ಇಬ್ಬರಿಗೂ ಕೂಡಲಾರದು. **ದ್ರಷ್ಟೃದೃಶ್ಯಯೋಃ ನೈವ** ಸ್ವತಂತ್ರದ್ರಷ್ಟೃವಾದ ಶ್ರೀಹರಿಗಾಗಲಿ ದೃಶ್ಯವಾದ ದೇಹಕ್ಕಾಗಲಿ ಕೂಡುವುದಿಲ್ಲ ಏಕೆಂದರೆ **ಅನಾತ್ಮಸ್ವದೃಶೋಃ** ದೃಶ್ಯವಾದುದು ಜಡವಾದುದರಿಂದ ಸುಖದುಃಖಾತ್ಮಕ ಸಂಸಾರವಿಲ್ಲ, ಸ್ವಪ್ರಕಾಶನಾದ ದ್ರಷ್ಟೃವಾದ ಶ್ರೀಹರಿಗೆ ಸಂಸಾರಕಾರಣವಾದ ಅಜ್ಞಾನವಿಲ್ಲದಿರುವುದರಿಂದ ಅವನಿಗೂ ಉಪಪನ್ನವಲ್ಲ, ಆದ್ದರಿಂದ **ಕಸ್ಯ ಇಯಂ ಉಪಲಭ್ಯತೇ** ಯಾರಿಗೆ ಈ ಸಂಸಾರ ಎಂದು ತಿಳಿಯುತ್ತದೆ?

**ಆತ್ಮಾವ್ಯಯೋಽಗುಣಃ ಶುದ್ಧಃ ಸ್ವಯಂಜ್ಯೋತಿರನಾವೃತಃ ।**
**ಅಗ್ನಿವದ್ದಾರುವದಪಿ ದೇಹಃ ಕಸ್ಯೇತಿ ಸಂಸೃತಿಃ ॥೧೨॥**

**ಆತ್ಮಾ** ಪರಮಾತ್ಮನು **ಅವ್ಯಯಃ** ಹ್ರಾಸರಹಿತನು **ಅಗುಣಃ** ಸತ್ವಾದಿಗುಣ-ರಹಿತನು, ವಿಕಾರರಹಿತನು **ಶುದ್ಧಃ** ಪಾಪಾದಿದೋಷರಹಿತನು **ಸ್ವಯಂಜ್ಯೋತಿಃ** ಸ್ವಪರಗತ ಸಕಲಪ್ರಕಾಶರೂಪನು **ಅನಾವೃತಃ** ಅಜ್ಞಾನಾವರಣರಹಿತನು **ಅಗ್ನಿವತ್** ಅಗ್ನಿಯಂತೆ ಈಶ್ವರನು **ದಾರುವತ್ ದೇಹಃ** ಕಟ್ಟಿಗೆಯಂತೆ ದೇಹವು ಅಂದ ಮೇಲೆ ಸಂಸಾರ ಯಾರಿಗೆ? ಸಂಸಾರವು ಪ್ರಮಿತವಾಗಿದೆ ಆದ್ದರಿಂದ ಸಂಸಾರ ಎಂಬುವುದೇ ಇಲ್ಲವೆಂದು ಹೇಳಲಾಗುವುದಿಲ್ಲ.

ಯದ್ಯಪಿ ಈ ಶಂಕೆಗೆ ಉತ್ತರ ಸ್ವಪ್ರಕಾಶಜ್ಞಾನರೂಪನಾದರೂ ಅಸ್ವತಂತ್ರನಾದ ಜೀವನಿಗೆ ಔಪಾಧಿಕವಾಗಿ ಉಪಪನ್ನವಾಗುವುದೆಂದು ಭಿಕ್ಷುಗೀತೆಯಲ್ಲಿ ಹೇಳಿದೆ. ಆದರೂ ದೃಢತೆಗಾಗಿ ವಿಶೇಷಜ್ಞಾನಕ್ಕಾಗಿ ಲೋಕಾನುಗ್ರಹಕ್ಕಾಗಿ ಪ್ರಶ್ನಿಸುವನು ಎಂದು ತಿಳಿಯಬೇಕು.॥೧೨॥

**ಶ್ರೀಭಗವಾನುವಾಚ -**

**ಯಾವದ್ ದೇಹೆಂದ್ರಿಯಪ್ರಾಣೈರಾತ್ಮನಃ ಸನ್ನಿಕರ್ಷಣಮ್ ।**
**ಸಂಸಾರಫಲವಾಂಸ್ತಾವದಪಾರ್ಥೋऽಪ್ಯವಿವೇಕಿನಃ ॥೧೩॥**

**ಯಾವತ್** ಎಲ್ಲಿಯವರೆಗೆ **ದೇಹೇಂದ್ರಿಯಪ್ರಾಣೈಃ** ಶರೀರ-ಇಂದ್ರಿಯ-ಪ್ರಾಣಗಳಿಂದ **ಸನ್ನಿಕರ್ಷಣಂ** ಸಂಬಂಧವಿರುವುದೋ **ತಾವತ್** ಅಲ್ಲಿಯವರೆಗೆ **ಅವಿವೇಕಿನಃ** ತಾನು ಆನಂದರೂಪನೆಂದು ತಿಳಿಯದಿರುವ, ಸ್ಪಷ್ಟವಾಗಿ ದೇಹಾತ್ಮವಿವೇಕವಿಲ್ಲದಿರುವ **ಆತ್ಮನಃ** ಜೀವನಿಗೆ **ಅಪಾರ್ಥೋऽಪಿ** ನಿರರ್ಥಕ-ವಾಗಿದ್ದರೂ ವಿವೇಕಿಯಾದವನಿಗೆ **ಫಲವಾನ್** ಶ್ರವಣಾದಿಗಳಿಂದ ನಿತ್ಯಾನಂದಾಭಿವ್ಯಕ್ತಿಗೆ ಸಾಧನವಾದ್ದರಿಂದ ಸಾರ್ಥಕವೂ ಆಗಿದೆ **ಸಂಸಾರಃ** ಸಂಸಾರವು ಯಾರಿಗೆ? ಎಂಬ ಪ್ರಶ್ನೆಗೆ ಉತ್ತರ ಜೀವನಿಗೆ ಎಂದು. ಅದಕ್ಕೆ ಕಾರಣ ದೇಹೇಂದ್ರಿಯಸಂಬಂಧ. ಈ ಸಂಸಾರವು ದುಃಖರೂಪವಾದುದ-ರಿಂದ ಆನಂದಸ್ವರೂಪನಾದವನಿಗೆ ನಿರರ್ಥಕವಾದರೂ ಸಾಧನಮಾಡಿ-ಕೊಂಡು ಮೋಕ್ಷವನ್ನು ಪಡೆಯಲು ಕಾರಣವಾದ್ದರಿಂದ ಸಫಲವೂ ಆಗಿದೆ. **ಅವಿವೇಕಿನಃ** ಎಂದರೆ ಬ್ರಹ್ಮಜ್ಞಾನರಹಿತನಾದವನಿಗೆ **ಅಪಾರ್ಥೋऽಪಿ ಸಂಸಾರಃ ಅವಿವೇಕಿನಃ** ಅಕಾರಶಬ್ದವಾಚ್ಯ ಪರಮಾತ್ಮಜ್ಞಾನಿಗೆ ಫಲಜನಕವಾಗಿದೆ ಹೀಗೂ ಯೋಜಿಸಬಹುದು. ಇಲ್ಲಿ **ಫಲವಾನ್ ಅಪಾರ್ಥಃ** ಎಂದು ವಿರುದ್ಧ ಹೇಳಿದಂತೆ ಕಾಣುವುದರಿಂದ ವ್ಯಾಖ್ಯಾನಿಸುವರು.

**ತಾತ್ಪರ್ಯ- ಫಲವಾನ್ ಮೋಕ್ಷಹೇತುತ್ವಾನ್ನಿತ್ಯಾನಂದಾದಪಾರ್ಥಕಃ ।**
**ಜೀವಾತ್ಮನಸ್ತು ಸಂಸಾರಃ ಸ್ವಪ್ನವಚ್ಚಂಚಲತ್ವತಃ । -ಇತಿ ತತ್ತ್ವವಿವೇಕೇ ।**

ಜೀವನಿಗೆ ಸಂಸಾರವು ವಿಫಲವಾಗಿದ್ದರೂ ಸ್ಥೂಲದೇಹದಿಂದ ಶಾಸ್ತ್ರ-ಶ್ರವಣಾದಿಗಳನ್ನು ಮಾಡಿ ಮೋಕ್ಷವನ್ನು ಪಡೆಯಬೇಕಾದ್ದರಿಂದ ದುಃಖರೂಪ ಸಂಸಾರವೂ ಸಫಲವೆಂದು ಸಜ್ಜೀವನು ನಿತ್ಯಾನಂದರೂಪನಾದುದರಿಂದ ದುಃಖಾದಿರೂಪಸಂಸಾರವು ನಿರರ್ಥಕವೆಂದೂ, ಚಂಚಲವಾದ್ದರಿಂದ

(ಶೀಘ್ರನಾಶವಾಗುವುದರಿಂದ) ಸ್ವಪ್ನದಂತೆ ಎಂದೂ ಕರೆಸಿಕೊಳ್ಳುವುದು ಎಂದು ತತ್ವವಿವೇಕದಲ್ಲಿ ಹೇಳಿದೆ.

**ಅರ್ಥೇऽಪ್ಯವಿದ್ಯಮಾನೇऽಪಿ ಸಂಸೃತಿರ್ನ ನಿವರ್ತತೇ ।**
**ಧ್ಯಾಯತೋ ವಿಷಯಾನಸ್ಯ ಸ್ವಪ್ನೇऽನರ್ಥಾಗಮೋ ಯಥಾ ॥೧೪॥**

**ವಿಷಯಾನ್** (ಜಾಗ್ರತ್‌ಕಾಲದಲ್ಲಿ) ಪದಾರ್ಥಗಳನ್ನು ನೋಡಿ **ಧ್ಯಾಯತಃ** ಮನಸ್ಸಿನಲ್ಲಿ ಚಿಂತಿಸುವವನಿಗೆ ಅದರಿಂದ ಉಂಟಾದ ಸಂಸ್ಕಾರದಿಂದ **ಸ್ವಪ್ನೇ** ಕನಸಿನಲ್ಲಿ **ಯಥಾ ಅನರ್ಥಾಗಮಃ** ಹೇಗೆ ಹಾವು ಮುಂತಾದವನ್ನು ಕಂಡು ಭಯ ದುಃಖಾದಿಗಳಾಗುವುದೋ **ತಥಾ** ಹಾಗೆ **ವಿಷಯಾನ್** ದುಷ್ಟವಾದ ಹೆಣ್ಣು, ಹೊನ್ನು, ಮಣ್ಣುಗಳನ್ನು, **ಧ್ಯಾಯತಃ** ಸ್ಮರಿಸುವ **ಅಸ್ಯ** ಜೀವನಿಗೆ **ಅರ್ಥೇ ಅವಿದ್ಯಮಾನೇऽಪಿ** ಅಲ್ಪಫಲವಿದ್ದರೂ (ಮುಖ್ಯವಾದ ಪ್ರಯೋಜನ-ವಿಲ್ಲದಿದ್ದರೂ **ಸಂಸೃತಿಃ** ಸಂಸಾರವು **ನ ನಿವರ್ತತೇ** ನಾಶವಾಗಲಾರದು. ಪ್ರತಿಯೊಂದು ದೇಹವನ್ನು ಬಿಡುವಾಗಲೂ ವಿಷಯಗಳ ಸ್ಮರಣೆಯನ್ನೇ ಮಾಡುತ್ತಿದ್ದರೆ ದೇಹಪರಂಪರಾರೂಪವಾದ ಸಂಸಾರ ಹೋಗಲು ಸಾಧ್ಯವಿಲ್ಲ.)

ಈ ಶ್ಲೋಕದಲ್ಲಿ ಸಂಸಾರ ಯಾರಿಗೆ? ಎಂಬ ಪ್ರಶ್ನೆಗೆ ಉತ್ತರಿಸುವ ಪ್ರಸಂಗದಲ್ಲಿ ಸಂಸಾರನಿವೃತ್ತಿಯು ಆಗುವುದಿಲ್ಲ ಎಂದು ಹೇಳುವುದು ಅನುಪಯುಕ್ತವಾದ್ದರಿಂದ ಅಸಂಗತವು. ಮತ್ತು ಅರ್ಥೇऽಪ್ಯವಿದ್ಯಮಾನಃ ಎಂಬುದು ಅಪಾರ್ಥೋऽಪಿ ಎಂಬುದರಿಂದ ಪುನರುಕ್ತವು ಎಂಬ ಶಂಕೆಯನ್ನು ಪುನರುಕ್ತಿಯನ್ನು ಪರಿಹರಿಸುತ್ತ ಸಂಗತಿಯನ್ನು ತೋರಿಸುವರು. ಆಚಾರ್ಯರು-

**ತಾತ್ಪರ್ಯ-** ಸಂಸೃತ್ಯಭಾವಸ್ಯೈವ ಫಲರೂಪತ್ವಾನ್ನಿರರ್ಥಃ ಸಂಸಾರಃ ಇತ್ಯವಧಾರಯತಿ- ಅರ್ಥೇऽಪೀತಿ । ಉಚ್ಯತೇ ನಿಷ್ಫಲತ್ವೇನ ಯದತ್ಯಲ್ಪಫಲಂ ಭವೇತ್ । ಇತಿ ಚ । ಅತೋऽಲ್ಪ ಫಲತ್ವಾವಧಾರಣಾರ್ಥಂ ಚ ಪುನರ್ವಚನಮ್ ॥

ಭಾಗವತದ ಹಿಂದಿನ ಶ್ಲೋಕದಲ್ಲಿ ಅಪಾರ್ಥೋऽಪಿ ಎಂದು ಸಂಸಾರಕ್ಕೆ ನಿರರ್ಥಕತ್ವ ಹೇಳಿದೆ. ಸಂಸಾರದಲ್ಲಿಯೂ ಸುಖ ಕಾಣುವುದರಿಂದ ಅದು ನಿರರ್ಥಕ ಹೇಗೆ? ಎಂದರೆ ದುಃಖರೂಪವಾದ ಸಂಸಾರದ ನಿವೃತ್ತಿಯೇ

ನಿಜವಾದ ಫಲವಾದುದರಿಂದ ಅದರ ಪ್ರತಿಯೋಗಿಯಾದ ಸಂಸಾರವು ನಿರರ್ಥಕವೇ ಅಂದರೆ ವಿರೋಧಿಯೇ ಎಂದರ್ಥ. ಸ್ವಲ್ಪ ಸುಖ ಇರುವ ಮಾತ್ರದಿಂದ ಫಲವತ್ ಆಗಲಾರದು.

ಪೂರ್ಣವಾದ ಆನಂದಕ್ಕೆ ಪ್ರತಿಬಂಧಕವಾಗಿದೆ ಆದ್ದರಿಂದ ಸಂಸಾರ ಅಪಾರ್ಥಕವೆಂದು ಅವಧಾರಣ ಮಾಡುವರು. ಅವಧಾರಣ ಮಾಡುವುದಕ್ಕಾಗಿ ಹೇಳಿದ್ದರಿಂದ ಪುನರುಕ್ತಿಯು ದೋಷವಲ್ಲ. ಅಪಿ ಶಬ್ದಕ್ಕೆ ಏವ ಎಂದರ್ಥ. ಅರ್ಥಶಬ್ದವು ಮುಖ್ಯವಾದ ಪುರುಷಾರ್ಥವನ್ನು ತಿಳಿಸುವದು. ಏವಂ ಚ **ಅರ್ಥೇ** ಪರಮಪುರುಷಾರ್ಥವಾದ ಮೋಕ್ಷವು **ಅವಿದ್ಯಮಾನೇಽಪಿ** ಇಲ್ಲದಿರುವಾಗಲೇ **ಸಂಸೃತಿಃ** ಸಂಸಾರವು ಇರುವುದು ಹೊರತು **ನ ನಿವರ್ತತೇ** ಸಂಸಾರಕಾಲದಲ್ಲಿ ಸಂಸಾರನಿವೃತ್ತಿರೂಪವಾದ, ಮೋಕ್ಷರೂಪವಾದ ಫಲವು ಇಲ್ಲದಿರುವುದರಿಂದ ನಿರರ್ಥಕವೆಂದಿರುವರು.

ಇನ್ನೊಂದು ರೀತಿಯಿಂದಲೂ ಪರಿಹಾರ ಮಾಡುವರು. ಅತ್ಯಲ್ಪಫಲವಿದ್ದರೂ ನಿಷ್ಫಲವೆಂದು ಕರೆಯಲು ಪ್ರಮಾಣವಿದ್ದುದರಿಂದ ಅಪಾರ್ಥಪದದಿಂದ ಹೇಳಿದ ಅಲ್ಪಫಲನಿರ್ಧಾರಣಕ್ಕಾಗಿ ಅರ್ಥೇ ಅವಿದ್ಯಮಾನವೆಂಬ ಪುನರ್ವಚನವು.

ತಾತ್ಪರ್ಯವನ್ನು ಹೀಗೂ ವ್ಯಾಖ್ಯಾನಿಸಬಹುದು.

ಅರ್ಥೇಽಪಿ ಎಂಬಲ್ಲಿ ನಿಷ್ಪ್ರಯೋಜನತ್ವ ಹೇಳಿದ್ದು ಸರಿಯಲ್ಲ ಹಿಂದೆ ಫಲವಿದೆ ಎಂದು ಹೇಳಿದೆ. ಕಾರಣ ಅದರ ಅಭಿಪ್ರಾಯ ಇಲ್ಲಿ ಹೇಳುವರು. ಸಂಸೃತ್ಯಭಾವಸ್ಯೈವ ಎಂದು.

ಇಲ್ಲಿ ನಿರರ್ಥಃ ಎಂಬುದು ಭಾವಪ್ರಧಾನಿರ್ದೇಶವೆಂದು ಇಟ್ಟುಕೊಂಡು ''**ನಿರ್ಗತಂ ಅರ್ಥತ್ವಂ ಯಸ್ಯ ಸಃ ನಿರರ್ಥಃ**'' ಎಂದರೆ ಸಂಸಾರವು ಪುರುಷಾರ್ಥ ಸಾಧನವಾದರೂ ಸ್ವಯಂ ಪುರುಷಾರ್ಥವಲ್ಲವೆಂದು ಈ ಶ್ಲೋಕದಲ್ಲಿ ಹೇಳುವರು. ಯದ್ಯಪಿ ಅಪಾರ್ಥಪದದಿಂದಲೇ ಇದನ್ನು ಹಿಂದೆ ಹೇಳಿದೆ. ಆದರೂ ''**ಸಿದ್ಧೇ ಸತ್ಯಾರಂಭೋ ನಿಯಮಾರ್ಥಃ**'' ಎಂಬ ಅಭಿಪ್ರಾಯದಿಂದ ಅವಧಾರಣೆ ಮಾಡುವರು ಎಂದಿದ್ದಾರೆ. ಇದರ ಪ್ರಕಾರ ಮೂಲದಲ್ಲಿ ಸಂಸೃತಿಃ ಅರ್ಥೇ ಅರ್ಥತ್ವೇ ಅವಿದ್ಯೆಮಾನೇಽಪಿ ಎಂದರ್ಥ. ಉಚ್ಯತೇ

ಎಂಬುದು ರೀತ್ಯಂತರದಿಂದ ವ್ಯಾಖ್ಯಾನ. ಈ ರೀತಿ ಪ್ರಮಾಣವಿದ್ದದ್ದರಿಂದ ಅಲ್ಪಫಲದ ಅವಧಾರಣಕ್ಕಾಗಿ ಮತ್ತೆ ಹೇಳಿದ್ದು ಎಂದರ್ಥ.

ಅಪಾರ್ಥಪದದಿಂದ ಲಭ್ಯವಾದ ಚಂಚಲತ್ವ ಎಂಬ ಹೇತುವಿನಿಂದ ಸಾಧ್ಯವಾದ ಅಪುರುಷಾರ್ಥದ ಅವಧಾರಣ ಮಾಡುವರು ಎಂದು ತಾತ್ಪರ್ಯದ ಭಾವ.

ಅಜ್ಞಾನಿಗಳಿಗೆನೇ ಸಂಸಾರವು ಅನರ್ಥದಾಯಕವು ಜ್ಞಾನಿಗಳಿಗಲ್ಲ ಎಂದು ಹೇಳುವರು-

**ಯಥಾ ಹ್ಯಪ್ರತಿಬುದ್ಧಸ್ಯ ಪ್ರಸ್ವಾಪೋ ಬಹ್ವನರ್ಥಕೃತ್ ।**
**ಸ ಏವ ಪ್ರತಿಬುದ್ಧಸ್ಯ ನ ವೈ ಮೋಹಾಯ ಕಲ್ಪತೇ ॥೧೫॥**

**ಯಥಾ** ಹೇಗೆ **ಅಪ್ರತಿಬುದ್ಧಸ್ಯ** ಬಾಹ್ಯಾರ್ಥಜ್ಞಾನವಿಲ್ಲದಿರುವ ಅಂದರೆ ಬಾಹ್ಯೇಂದ್ರಿಯೋಪರಮರೂಪವಾದಾಗ ಸ್ವಪ್ನವನ್ನು ಕಾಣುವವನಿಗೆ **ಪ್ರಸ್ವಾಪಃ** ನಿದ್ರೆಯು **ಬಹ್ವನರ್ಥಕೃತ್** ಸರ್ಪ, ಹುಲಿ, ಮುಂತಾದ ಕ್ರೂರವಾದ ಪದಾರ್ಥಗಳನ್ನು ನೋಡುವುದರಿಂದ ಅನರ್ಥ ಉಂಟು ಮಾಡುವುದು. **ಸಃ ಏವ** ಆ (ಪ್ರಸ್ವಾಪಃ) ನಿದ್ರೆಯೇ **ಪ್ರತಿಬುದ್ಧಸ್ಯ** ಸ್ವಪ್ನದಿಂದ ಜಾಗ್ರತವಾದವನಿಗೆ **ಮೋಹಾಯ** ಹೊರಗಿನ ಹಾವನ್ನೇ ನೋಡುವೆನು ಎಂಬ ಭ್ರಮದಿಂದ ಆಗುವ ಅನರ್ಥಕ್ಕೆ **ನೈವ ಕಲ್ಪತೇ** ಕಾರಣವಾಗುವುದಿಲ್ಲ. **ತಥಾ** ಹಾಗೆಯೇ **ಅಪ್ರತಿಬುದ್ಧಸ್ಯ** ಭಗವಂತನ ಸ್ವಾತಂತ್ರ್ಯಾದಿಗಳನ್ನು ತಿಳಿಯದಿರುವವನಿಗೆ ಸಂಸಾರವು **ಬಹ್ವನರ್ಥಕೃತ್** ಬಹಳ ದುಃಖದಾಯಕವಾಗುವುದು. ಜ್ಞಾನಿಗಾದರೂ **ಸ ಏವ** ಆ ಸಂಸಾರವೇ **ನೈವ ಮೋಹಾಯ ಕಲ್ಪತೇ** ಭ್ರಮಜನಕವಲ್ಲ, ದುಃಖದಾಯಕವಲ್ಲ ಪ್ರತ್ಯುತ ಫಲವಾನೇವ ಮೋಕ್ಷಾದಿ-ಫಲದಾಯಕವೇ ಆಗಿದೆ. ಎಂದು ದಾರ್ಷ್ಟಾಂತಿಕವನ್ನು ಯೋಜಿಸಬೇಕು.

ಒಂದೇ ಸಂಸಾರ ಜ್ಞಾನಿಗಳಿಗೆ ತೊಂದರೆ ಕೊಡುವುದಿಲ್ಲ. ಅಜ್ಞಾನಿಗಳಿಗೆ ತೊಂದರೆ ಕೊಡುತ್ತದೆ ಎಂದೂ ಹೇಳಬಹುದು. ಸ್ವಪ್ನವು ತೊಂದರೆ ಕೊಡುತ್ತದೆ ಸ್ವಪ್ನನಿವೃತ್ತಿಯು ತೊಂದರೆ ಕೊಡುವುದಿಲ್ಲ ಎಂದು ಹೇಳಬೇಕಾಗುವುದು.

ಜೀವನಿಗೂ ಅಭಿಮಾನ ನಿಮಿತ್ತಕವೇ ಸಂಸಾರ ಹೊರತು ಸ್ವಾಭಾವಿಕವಲ್ಲ ಇಲ್ಲವಾದರೆ ಸಂಸಾರ ಹೋಗಲು ಪ್ರಯತ್ನಿಸುವುದು ವ್ಯರ್ಥವಾಗುವುದು ಎಂದು ಹೇಳುವರು-

**ಶೋಕಹರ್ಷಭಯಕ್ರೋಧಲೋಭಮೋಹಸ್ಪೃಹಾದಯಃ ।**
**ಅಹಂಕಾರಸ್ಯ ದೃಶ್ಯಂತೇ ಜನ್ಮಮೃತ್ಯುಶ್ಚ ನಾತ್ಮನಃ ॥೧೬॥**

**ಶೋಕ** ದುಃಖವು **ಹರ್ಷ** ಸಂತೋಷವು **ಭಯ** ಹೆದರಿಕೆಯು **ಕ್ರೋಧ** ಸಿಟ್ಟು **ಲೋಭ** ಹಣವನ್ನು ಖರ್ಚು ಮಾಡದಿರುವ ಇಚ್ಛೆ **ಮೋಹ** ಭ್ರಾಂತಿಯು **ಸ್ಪೃಹಾದಯಃ** ಇಚ್ಛೆ ಮೊದಲಾದವು **ಜನ್ಮ ಮೃತ್ಯುಶ್ಚ** ಜನನ, ಮರಣಗಳೂ, ಸಹ **ಅಹಂಕಾರಸ್ಯ ಸಕಾಶಾತ್** ದೇಹಾದಿಗಳಲ್ಲಿ ಅತಿಯಾದ ಅಭಿಮಾನ ಮಾಡುವುದು ನನ್ನದಲ್ಲದ್ದನ್ನು ನನ್ನದೆಂದು ತಿಳಿಯುವುದು ಎಂಬ ಸ್ವಾತಂತ್ರ್ಯಭ್ರಮ ಮುಂತಾದ ಕಾರಣದಿಂದ **ಆತ್ಮನಃ** ಜೀವನಿಗೆ **ದೃಶ್ಯಂತೇ** ಕಾಣುವವು. **ನ ಸ್ವತಃ** ಸ್ವಾಭಾವಿಕವಲ್ಲ ಜೀವನು ಸ್ವಾಭಾವಿಕವಾಗಿ ಜ್ಞಾನಾನಂದ-ಸ್ವರೂಪನು ಕಾರಣ ಸ್ವಾಭಾವಿಕವಲ್ಲ. ಅಂದಮೇಲೆ ಪ್ರಾಕೃತದೇಹವೇ ಇಲ್ಲದ ಸರ್ವಸ್ವಾಮಿಯಾದ ಸರ್ವಸ್ವತಂತ್ರನಾದ ಶ್ರೀಹರಿಗೆ ಸಂಸಾರವಿಲ್ಲವೆಂದು ಸ್ವತಃ ಸಿದ್ಧವಾಗುವುದು.

ಇಲ್ಲಿ ಅಂತಃಕರಣಕ್ಕೆ (ಅಹಂಕಾರವೆಂಬ) ಸಂಸಾರವು ಜೀವನಿಗಲ್ಲವೆಂದು ಹೇಳಿದಂತೆ ತೋರುವುದು. ಅದು ಸರಿಯಲ್ಲ. ಹಿಂದೆ ಜೀವನಿಗೆ ಸಂಸಾರ-ವೆಂದು ಹೇಳಿದೆ ಕಾರಣ ತಾತ್ಪರ್ಯ ಹೇಳುವರು-

**ತಾತ್ಪರ್ಯ-** ಅಹಂಕಾರಸ್ಯ ಸಕಾಶಾತ್ ದೃಶ್ಯಂತೇ । ನಾತ್ಮನಃ ಸ್ವತಃ ।

ಅಹಂಕಾರಾತ್ತು ಸಂಸಾರೋ ಭವೇಜ್ಜೀವಸ್ಯ ನ ಸ್ವತಃ ।
ಕುತಶ್ಚಿದಾನಂದತನೋಃ ಸ್ವರೂಪೇಚ್ಛಾಯುತಸ್ಯ ಸಃ । ಇತಿ ತಂತ್ರಭಾಗವತೇ

ದೇಹಾದಿಗಳಲ್ಲಿ ಅತಿಯಾದ ಅಭಿಮಾನದಿಂದ ಮತ್ತು ಸ್ವಾತಂತ್ರ್ಯಾಭಿ-ಮಾನದಿಂದ ಜೀವನಿಗೆ ಶೋಕಾದಿಗಳು ಹೊರತು ಸ್ವಾಭಾವಿಕವಾಗಿ ಅಲ್ಲ. ಅಹಂಕಾರನಿಮಿತ್ತಕವಾಗಿ ಜೀವನಿಗೆ ಸಂಸಾರವು ಹೊರತು ಸ್ವಾಭಾವಿಕವಲ್ಲ. ಸ್ವಾಭಾವಿಕ ಜ್ಞಾನಾನಂದಾತ್ಮಕ ಸ್ವರೂಪದೇಹ ಉಳ್ಳ ಸ್ವರೂಪೇಚ್ಛೆಯುಳ್ಳ ಜೀವನಿಗೆ ಸಂಸಾರವು ಕುತಃ ಸ್ವಾಭಾವಿಕವಾಗಿ ಬರಲು ಹೇಗೆ ಸಾಧ್ಯ ? ಎಂದು ತಂತ್ರಭಾಗವತದಲ್ಲಿ ಇದೆ. ಇಲ್ಲಿ ಉತ್ತರಾರ್ಧವನ್ನು ಪರಮಾತ್ಮ ಪರವಾಗಿಯೂ ಅರ್ಥ ಮಾಡಬಹುದು. ಅಂದರೆ ಯಾವನು ಅಹಂಕಾರ ಮಾಡುವನೋ ಆ ಜೀವನಿಗೆ ಸಂಸಾರವು. ಪ್ರಾಕೃತದೇಹರಹಿತನಾದ

ಅಹಂಕಾರವಿಲ್ಲದ ಪರಮಾತ್ಮನಿಗೆ ಎಲ್ಲಿಯ ಸಂಸಾರ? ಸಾಧ್ಯವಿಲ್ಲ ಎಂದು ಅರ್ಥ.

ಜೀವ-ಪ್ರಕೃತಿ ಇಬ್ಬರೂ ನಿತ್ಯವಾಗಿದ್ದರಿಂದ ಪ್ರಕೃತಿಸಂಬಂಧದಿಂದ ಬಂದ ಸಂಸಾರ ನಿವೃತ್ತವಾಗುವುದು ಹೇಗೆ? ಕೇವಲ ಪ್ರಕೃತಿಸಂಬಂಧವು ಸಂಸಾರ ಕಾರಣವಲ್ಲ. ಅಹಂಕಾರ ಸಹಿತರಾದವರಿಗೆ ಕಾಣುವುದು. ಅಹಂಕಾರ ರಹಿತರಾದವರಿಗೆ ಇಲ್ಲ. ಅಂದಮೇಲೆ ಪ್ರಕೃತಿಸಂಬಂಧ ಅಪ್ರಯೋಜಕ. ಅಹಂಕಾರಸ್ಯ ಎಂಬುದು ಔಪಚಾರಿಕ. ಅಹಂಕಾರಯುತನಿಗೆ ಎಂದರ್ಥ ಮಾಡಬಹುದು. ಅಹಂಕಾರಶಬ್ದವು ಮತ್ವರ್ಥೀಯ ಅರ್ಶಆದ್ಯಜಂತ ಎಂದು ಇಟ್ಟುಕೊಳ್ಳಬಹುದು.॥೧೬॥

**ದೇಹೇಂದ್ರಿಯಪ್ರಾಣಮನೋಭಿಮಾನೋ**
**ಜೀವೋऽಂತರಾತ್ಮಾ ಗುಣಕರ್ಮಮೂರ್ತಿಃ।**
**ಸೂತ್ರಂ ಮಹಾನಿತ್ಯುರುಧೇಹ ಗೀತಃ**
**ಸಂಸಾರ ಆಧಾವತಿ ಕಾಲತಂತ್ರಃ** ॥೧೭॥

**ದೇಹೇಂದ್ರಿಯಪ್ರಾಣಮನೋಭಿಮಾನಃ** ದೇಹ, ಇಂದ್ರಿಯಗಳು, ಪ್ರಾಣ, ಮನಸ್ಸು ಇವುಗಳಲ್ಲಿ ಅಭಿಮಾನ ಉಳ್ಳ (ಇಲ್ಲಿ ಅಭಿಮಾನವೆಂದರೆ ಪರಮಾತ್ಮನು ಕೊಟ್ಟ ಸ್ವಾಮಿತ್ವವೆಂದರ್ಥ. ಹೊರತು ನಮಗೆ ಇರುವಂತೆ ತನ್ನದಲ್ಲದ್ದನ್ನು ತನ್ನದೆಂದು ತಿಳಿಯುವುದಲ್ಲ. ಅಸ್ವಕೀಯೇ ಸ್ವಕಿಯತ್ವಬುದ್ಧಿಯು ನಮ್ಮ ಅಭಿಮಾನ) ಇಲ್ಲವಾದರೆ ''ಬ್ರಹ್ಮಾ ನಿರಭಿಮಾನಿತ್ವಾತ್ ಶರೀರ್ಯಪ್ಯ-ಶರೀರವಾನ್'' ಎಂಬ ಪ್ರಮಾಣವಿರೋಧ ಬರುವುದು. **ಅಂತರಾತ್ಮಾ** ಎಲ್ಲ ಜೀವನಿಯಾಮಕನೂ **ಗುಣಕರ್ಮಮೂರ್ತಿಃ** ಜ್ಞಾನಾನಂದಾದಿಗುಣಗಳು, ಶುಭಕರ್ಮಗಳೇ ಸ್ವರೂಪವಾಗಿ ಉಳ್ಳ ಅಥವಾ ಗುಣಗಳಿಂದ (ಸತ್ವಾದಿಗಳು) ಕರ್ಮವೆಂದರೆ ಪ್ರಾರಬ್ಧವಾದ ನಿಮಿತ್ತ ಇಷ್ಟಪುಣ್ಯದಿಂದ ಪ್ರಾಪ್ತವಾದ ದೇಹವುಳ್ಳ **ಇಹ** ಶ್ರುತಿ-ಪುರಾಣಾದಿಗಳಲ್ಲಿ **ಸೂತ್ರಂ ಮಹಾನ್ ಇತಿ ಉರುಧಾ ಗೀತಃ** ಸೂತ್ರ ಮಹಾನ್ ಎಂಬ ಅಧಿಕಾರ ನಾಮಗಳಿಂದ ಸ್ತುತಿಸಲ್ಪಟ್ಟವನು. (ಸೂತಮಸ್ಮಿನ್ ಜಗದ್ಯಸ್ಮಾತ್ ಸೂತ್ರಂ ಎಂದಿರುವುದರಿಂದ ಸರ್ವಾ-ಧಾರತ್ವಾಧಿಕಾರದಿಂದ ಬಂದ ನಾಮ ಸೂತ್ರ ಎಂಬುದು, ಮಹತ್ತತ್ವಾಭಿ-ಮಾನಿಯಾದುದರಿಂದ ಮಹಾನ್ ಎಂದು, ಪಾರಮೇಷ್ಠ್ಯಪದ ಪ್ರಯುಕ್ತ

ಪರಮೇಷ್ಠಿ ಎಂದೂ ಸ್ರಷ್ಟಾ ಆದುದರಿಂದ ವಿರಿಂಚಿ (ವಿರಿಂಚಿಶ್ಚ ವಿರೇಚನಾತ್) ಎಂದೂ ಹೀಗೆ ಪುರುಷ ಮುಂತಾದ ಅನೇಕ ನಾಮಗಳಿವೆ ವಿಸ್ತಾರ ಭಯದಿಂದ ಬಿಟ್ಟಿರುವೆನು. **ಕಾಲತಂತ್ರಃ** ದುರ್ಗಾಧೀನನು ಶ್ರೀಹರಿಯ ಅಧೀನನು **ಸಂಸಾರೇ ಆಧಾವತಿ** ಸಂಸಾರದಲ್ಲಿ ಪ್ರವರ್ತಿಸುವನು. ಅಂದಮೇಲೆ ಅಲ್ಪರಾದ ಉಳಿದ ಜೀವರು ಸಂಸಾರದಲ್ಲಿ ಧಾವಿಸುವರೆಂದು ಬೇರೆ ಹೇಳಬೇಕಿಲ್ಲ. ಕೈಮುತ್ಯನ್ಯಾಯಸಿದ್ಧವೆಂದು ಭಾವ. ಎಲ್ಲ ಜೀವರಿಗೂ ಸಂಸಾರವಿದೆ. ಎಂದು ಹೇಳಲು ಹೊರಟು ಹಿರಣ್ಯಗರ್ಭನಿಗೆ ಮಾತ್ರ ಸಂಸಾರ ಹೇಳುವುದು ಅನುಚಿತ ಎಂದರೆ ಉತ್ತರಿಸುವರು-

**ತಾತ್ಪರ್ಯ- ದೇಹೇಂದ್ರಿಯಪ್ರಾಣಮನಸಾಂ ಅಭಿಮಾನಯುಕ್ತಃ। ಸೂತ್ರಂ ಮಹಾನಿತ್ಯಾದ್ಯಧಿಕಾರ ನಾಮಭಿರ್ಯುಕ್ತಃ। ಪ್ರಧಾನಜೀವೋ ಹಿರಣ್ಯಗರ್ಭೋಽಪ್ಯಾಧಾವತಿ ಸಂಸಾರೇ ಕಿಮುತಾನ್ಯ ಇತ್ಯಾಶಯಃ।**

**ಸಂಸಾರಯುಗ್ಯೋ ಬ್ರಹ್ಮಾಽಪಿ ಸರ್ವಜೀವೇಶ್ವರೇಶ್ವರಃ।**
**ವಿಷ್ಣ್ವಧೀನಃ ಸದಾ ಜ್ಞಾನೀ ಕಿಮುತಾನ್ಯೇಽಲ್ಪಚಿತ್ತಿನಃ'' (ಚೇತನಾಃ)**
**-ಇತಿ ಸತ್ತತ್ವೇ ॥**

ದೇಹೇಂದ್ರಿಯಪ್ರಾಣಮನಸ್ಸುಗಳ ಅಭಿಮಾನದಿಂದ ಕೂಡಿದವನು, ಸೂತ್ರ, ಮಹಾನ್ ಮೊದಲಾದ ಅಧಿಕಾರನಾಮಗಳಿಂದ ಶ್ರುತಿ-ಪುರಾಣಗಳಲ್ಲಿ ಬಹುಪ್ರಕಾರ ಗಾನ ಮಾಡಲ್ಪಟ್ಟವನು.

ಇಂತಹ ಜೀವೋತ್ತಮನಾದ ಚತುರ್ಮುಖನೂ ಸಹ ಸಂಸಾರವನ್ನು ಅನುಭವಿಸುವಾಗ ಇತರರು ಸಂಸಾರದಲ್ಲಿ ತೊಳಲಾಡುವುದು ಸುತರಾಂ ಸಿದ್ಧ ಎಂದು ಅಭಿಪ್ರಾಯವೆಂದರ್ಥ. ರುದ್ರಾದಿಸರ್ವಜೀವೇಶ್ವರರಿಗೂ ನಿಯಾಮಕನಾದ, ಶ್ರೀವಿಷ್ಣುವಿನ ಅಧೀನನಾದ, ಸದಾ ಜ್ಞಾನಿಯಾದ ಚತುರ್ಮುಖನೂ ಸಂಸಾರವನ್ನು ಹೊಂದಿರುವಾಗ ಅಲ್ಪಜ್ಞಾನ ಉಳ್ಳ ಇತರರು ಹೊಂದುವುದು ಕೈಮುತ್ಯನ್ಯಾಯಸಿದ್ಧವೆಂದು ಸತ್ತತ್ವದಲ್ಲಿದೆ.

ಇಲ್ಲಿ ಅಧಿಕಾರನಾಮದಿಂದ ಕೂಡಿದವರು ಎಂದು ಹೇಳಿದುದು ಬ್ರಹ್ಮದೇವರಿಗೆ ಸಂಸಾರವಿದೆ ಎಂಬುದಕ್ಕೆ ಯುಕ್ತಿಯನ್ನು ಸೂಚಿಸುವುದು. ಅಂದರೆ ಮೋಕ್ಷದಲ್ಲಿ ಜಗದ್ವ್ಯಾಪಾರವರ್ಜ್ಯ, ಎಂದು ಮುಕ್ತರಿಗೆ ಅಧಿಕಾರವಿಲ್ಲವೆಂದು ಹೇಳಿದೆ. ಇವನಿಗೆ ಅಧಿಕಾರನಾಮವಿದೆ. ಅರ್ಥಾತ್

ಅಧಿಕಾರವಿದೆ ಎಂದರೆ ಸಂಸಾರವಿದೆ ಎಂದಂತಾಯಿತು. ಮುಕ್ತಿಯಲ್ಲಿ ಈ ಹೆಸರು ಕರೆಯುವುದು ಭೂತಪೂರ್ವಗತ್ಯಾ ಎಂದು ತಿಳಿಯಬೇಕು. ರಾಮಣ್ಣಾಚಾರ್ಯ ಸ್ವಾಮಿಗಳು ಎಂದಂತೆ.

ಸರ್ವದೋಷರಹಿತನು, (ಋಜುವು) ಸರ್ವಜೀವೋತ್ತಮನು ಆದ ಹಿರಣ್ಯಗರ್ಭನು ಕೇವಲ ಈಶ್ವೇರೇಚ್ಛೆಯಿಂದ ಅವನ ಅಧೀನವಾದ ಪರಮೋತ್ಸಾಹವರ್ಜನವೆಂಬ ಗುಣಾಲ್ಪತೆಯಿಂದ ಸಂಸಾರದಲ್ಲಿರುವನು. ಅಂದಮೇಲೆ ''ದೋಷಾ ಅನಾದಿಸಂಬದ್ಧಾಸ್ತೇ ಮುಕ್ತಿಪರಿಪಂಥಿನಃ । ಸರ್ವೇಷ್ವೇತೇಷು ಜೀವೇಷು ದೃಶ್ಯಂತೇ ತಾರತಮ್ಯತಃ ।'' ಎಂದು ರುದ್ರಾದಿ ಜೀವರಲ್ಲಿ ಸಂಸಾರಪ್ರಾಪಕವಾದ ದೋಷಗಳು ಪ್ರಮಿತವಾಗಿವೆ. ಆದ್ದರಿಂದ ಎಲ್ಲರೂ ಸಂಸಾರಿಗಳೇ. ರಮಾ ಮತ್ತು ನಾರಾಯಣರು ನಿತ್ಯಮುಕ್ತರು.॥೧೭॥

ಈ ರೀತಿ ಪ್ರಬಲವಾದ ಸಂಸಾರವು ಹೋಗುವ ಬಗೆಯಾದರೂ ಹೇಗೆ? ಎಂದರೆ ಅದಕ್ಕೆ ಕಾರಣವಾದ ಅಜ್ಞಾನವು ಹೋದರೆ ಹೋಗುವುದು ಎಂದು ಹೇಳುವರು-

**ಅಮೂಲಮೇತದ್ ಬಹುರೂಪರೂಪಂ**
**ಮನೋವಚಃಪ್ರಾಣಶರೀರಕರ್ಮ ।**
**ಜ್ಞಾನಾಸಿನೋಪಾಸನಯಾ ಶಿತೇನ**
**ಛಿತ್ವಾ ಮುನಿರ್ಗಾಂ ವಿಚರತ್ಯತೃಷ್ಣಃ ॥೧೮॥**

**ಅಮೂಲಂ** ಅಕಾರಶಬ್ದವಾಚ್ಯ ವಿಷ್ಣುವಿನಿಂದ ಉಂಟಾದ **ಬಹುರೂಪರೂಪಂ** ಮನಸ್ಸೇ ಮೊದಲಾದವುಗಳಲ್ಲಿ ಸನ್ನಿಹಿತವಾದ ಅನೇಕ ರೂಪಗಳಿಂದ ಅವನವನ ಅದೃಷ್ಟಾನುಗುಣವಾಗಿ ಪ್ರೇರಿಸಲ್ಪಡುವ (ರೂಪ್ಯತೇ ನಿರೂಪ್ಯತೇ ಪ್ರೇರ್ಯತೇ ಇತಿ ರೂಪಂ) **ಮನೋವಚಃಪ್ರಾಣಶರೀರಕರ್ಮ** ಮನಸ್ಸು, ವಾಕ್, ಚಕ್ಷುರಾದಿ ಇಂದ್ರಿಯಗಳು, ತ್ವಗಿಂದ್ರಿಯವು ಇವುಗಳೇ ವಿಷಯವಾಗಿ ಉಳ್ಳ **ಏತತ್** ನಾನೇ ಹೋಗುವೆನು ನಾನೇ ಮಾತಾಡುವೆನು ಮುಂತಾದ ಮಿಥ್ಯಾಜ್ಞಾನವನ್ನು **ಮುನಿಃ** ನಿರಂತರ ಸ್ಮರಣ ಮನನ ಸಮರ್ಥನಾದ ಅಧಿಕಾರಿಯು **ಉಪಾಸನಯಾ ಶಿತೇನ** ಧ್ಯಾನದಿಂದ ಉಂಟಾದ ಕಾರಣ ತೀಕ್ಷ್ಣವಾದ **ಜ್ಞಾನಾಸೀನಾ** ಜ್ಞಾನವೆಂಬ ಖಡ್ಗದಿಂದ **ಛಿತ್ವಾ** ಕತ್ತರಿಸಿ **ಅತೃಷ್ಣಃ**

ಮತ್ತೆ ಅವುಗಳಲ್ಲಿ ಆಶೆಯಿಲ್ಲದವನಾಗಿ (ನಿಸ್ಸಂಗನಾಗಿ) **ಗಾಂ ವಿಚರತಿ** ಶರೀರವು ಬೀಳುವವರೆಗೆ ಸಂಚರಿಸುವನು.

ಇಲ್ಲಿ ಅಮೂಲವೆಂದರೆ ನಿರ್ಮೂಲ ಕಾರಣರಹಿತವೆಂದರ್ಥವಾಗುವುದು ಆದ್ದರಿಂದ ಅರ್ಥ ಹೇಳುವರು-

**ತಾತ್ಪರ್ಯ- ಅಮೂಲಂ ವಿಷ್ಣುಮೂಲಮ್ ।**

**ಅಮೂಲಂ** ಎಂದರೇ ವಿಷ್ಣುಮೂಲ ಎಂದು ಅರ್ಥ. ಈ ಸಂಸಾರವು ಅಮೂಲವಾಗಿದೆ. ವಿಷ್ಣುಮೂಲವಾಗಿದೆ ಎಂದು ಅರ್ಥ.

''**ಬಹುರೂಪರೂಪಮ್**'' ಎಂಬಲ್ಲಿ ಎರಡು ರೂಪಶಬ್ದವೇಕೆ ಎಂದು ತಿಳಿಯದು. ಆದ್ದರಿಂದ ವ್ಯಾಖ್ಯಾನಿಸುವರು-

**ತಾತ್ಪರ್ಯ- ಬಹುರೂಪೇಣ ತೇನೈವ ರೂಪ್ಯತೇ॥**

ಬಹುರೂಪಗಳಿಂದ ಮನಸ್ಸು ಮುಂತಾದವುಗಳಲ್ಲಿ ಸನ್ನಿಹಿತನಾಗಿ ಅವುಗಳನ್ನು ರೂಪಿಸುತ್ತಾನೆ ನಿರೂಪಿಸುತ್ತಾನೆ. ಅವುಗಳ ಜ್ಞಾನವನ್ನು ಮಾಡಿಸುತ್ತಾನೆ ಆದ್ದರಿಂದ ಮನಸ್ಸು ಮುಂತಾದವುಗಳು ಬಹುರೂಪರೂಪ ಎನಿಸುತ್ತವೆ.

ಮನೋವಚಃಪ್ರಾಣಶರೀರಕರ್ಮ ಎಂಬುದಕ್ಕೆ ಪ್ರಕೃತಸಂಗತ ಅರ್ಥ ತಿಳಿಯದ್ದರಿಂದ ವ್ಯಾಖ್ಯಾನ ಮಾಡುವರು-

**ತಾತ್ಪರ್ಯ- ಮನ ಆದೀನಾಂ ವಿಷಯಃ ।**

ಇಲ್ಲಿ ಶರೀರಪದದಿಂದ ತ್ವಗಿಂದ್ರಿಯವನ್ನು ಸ್ವೀಕರಿಸಿದ್ದರಿಂದ ಶರೀರವು ಸವಿಷಯಕವಾಗದ್ದರಿಂದ ಕರ್ಮಶಬ್ದಕ್ಕೆ ವಿಷಯವೆಂದು ಅರ್ಥಮಾಡಿದ್ದರೂ ಅನನ್ವಿತವೇ ಎಂಬ ಸಂಶಯಕ್ಕೆ ಆಸ್ಪದವಿಲ್ಲ. ಮನ ಆದಿಗಳಿಗೆ ವಿಷಯರಾದ ಭಾರ್ಯಾದಿ ಸಮಸ್ತ ಸಂಗವನ್ನೂ ಜ್ಞಾನದಿಂದ ಕತ್ತರಿಸಿ ನಿಸ್ಸಂಗನಾಗಿ ಸಂಚರಿಸುವನು ಎಂದೇ ಭಾವ. ॥೧೮॥

''ಜ್ಞಾನಾಸಿನಾ'' ಎಂಬಲ್ಲಿ ಹೇಳಿದ ಜ್ಞಾನ ಯಾವ ವಿಧವಾದುದು ಎಂದು ಹೇಳುವರು-

ಅಧಿಕಾರವಿದೆ ಎಂದರೆ ಸಂಸಾರವಿದೆ ಎಂದಂತಾಯಿತು. ಮುಕ್ತಿಯಲ್ಲಿ ಈ ಹೆಸರು ಕರೆಯುವುದು ಭೂತಪೂರ್ವಗತ್ಯಾ ಎಂದು ತಿಳಿಯಬೇಕು. ರಾಮಣ್ಣಾಚಾರ್ಯ ಸ್ವಾಮಿಗಳು ಎಂದಂತೆ.

ಸರ್ವದೋಷರಹಿತನು, (ಋಜುವು) ಸರ್ವಜೀವೋತ್ತಮನು ಆದ ಹಿರಣ್ಯಗರ್ಭನು ಕೇವಲ ಈಶ್ವರೇಚ್ಛೆಯಿಂದ ಅವನ ಅಧೀನವಾದ ಪರಮೋತ್ಸಾಹವರ್ಜನವೆಂಬ ಗುಣಾಲ್ಪತೆಯಿಂದ ಸಂಸಾರದಲ್ಲಿರುವನು. ಅಂದಮೇಲೆ ''ದೋಷಾ ಅನಾದಿಸಂಬದ್ಧಾಸ್ತೇ ಮುಕ್ತಿಪರಿಪಂಥಿನಃ । ಸರ್ವೇಷ್ವೇತೇಷು ಜೀವೇಷು ದೃಶ್ಯಂತೇ ತಾರತಮ್ಯತಃ ।'' ಎಂದು ರುದ್ರಾದಿ ಜೀವರಲ್ಲಿ ಸಂಸಾರಪ್ರಾಪಕವಾದ ದೋಷಗಳು ಪ್ರಮಿತವಾಗಿವೆ. ಆದ್ದರಿಂದ ಎಲ್ಲರೂ ಸಂಸಾರಿಗಳೇ. ರಮಾ ಮತ್ತು ನಾರಾಯಣರು ನಿತ್ಯಮುಕ್ತರು.।।೧೭।।

ಈ ರೀತಿ ಪ್ರಬಲವಾದ ಸಂಸಾರವು ಹೋಗುವ ಬಗೆಯಾದರೂ ಹೇಗೆ? ಎಂದರೆ ಅದಕ್ಕೆ ಕಾರಣವಾದ ಅಜ್ಞಾನವು ಹೋದರೆ ಹೋಗುವುದು ಎಂದು ಹೇಳುವರು-

**ಅಮೂಲಮೇತದ್ ಬಹುರೂಪರೂಪಂ**
**ಮನೋವಚಃಪ್ರಾಣಶರೀರಕರ್ಮ ।**
**ಜ್ಞಾನಾಸಿನೋಪಾಸನಯಾ ಶಿತೇನ**
**ಛಿತ್ತ್ವಾ ಮುನಿರ್ಗಾಂ ವಿಚರತ್ಯತೃಷ್ಣಃ** ।।೧೮।।

**ಅಮೂಲಂ** ಅಕಾರಶಬ್ದವಾಚ್ಯ ವಿಷ್ಣುವಿನಿಂದ ಉಂಟಾದ **ಬಹುರೂಪ-ರೂಪಂ** ಮನಸ್ಸೇ ಮೊದಲಾದವುಗಳಲ್ಲಿ ಸನ್ನಿಹಿತವಾದ ಅನೇಕ ರೂಪಗಳಿಂದ ಅವನವನ ಅದೃಷ್ಟಾನುಗುಣವಾಗಿ ಪ್ರೇರಿಸಲ್ಪಡುವ (ರೂಪ್ಯತೇ ನಿರೂಪ್ಯತೇ ಪ್ರೇರ್ಯತೇ ಇತಿ ರೂಪಂ) **ಮನೋವಚಃಪ್ರಾಣಶರೀರಕರ್ಮ** ಮನಸ್ಸು, ವಾಕ್, ಚಕ್ಷುರಾದಿ ಇಂದ್ರಿಯಗಳು, ತ್ವಗಿಂದ್ರಿಯವು ಇವುಗಳೇ ವಿಷಯವಾಗಿ ಉಳ್ಳ **ಏತತ್** ನಾನೇ ಹೋಗುವೆನು ನಾನೇ ಮಾತಾಡುವೆನು ಮುಂತಾದ ಮಿಥ್ಯಾಜ್ಞಾನವನ್ನು **ಮುನಿಃ** ನಿರಂತರ ಸ್ಮರಣ ಮನನ ಸಮರ್ಥನಾದ ಅಧಿಕಾರಿಯು **ಉಪಾಸನಯಾ ಶಿತೇನ** ಧ್ಯಾನದಿಂದ ಉಂಟಾದ ಕಾರಣ ತೀಕ್ಷ್ಣವಾದ **ಜ್ಞಾನಾಸೀನಾ** ಜ್ಞಾನವೆಂಬ ಖಡ್ಗದಿಂದ **ಛಿತ್ತ್ವಾ** ಕತ್ತರಿಸಿ **ಅತೃಷ್ಣಃ**

ಮತ್ತೆ ಅವುಗಳಲ್ಲಿ ಆಶೆಯಿಲ್ಲದವನಾಗಿ (ನಿಸ್ಸಂಗನಾಗಿ) **ಗಾಂ ವಿಚರತಿ** ಶರೀರವು ಬೀಳುವವರೆಗೆ ಸಂಚರಿಸುವನು.

ಇಲ್ಲಿ ಅಮೂಲವೆಂದರೆ ನಿರ್ಮೂಲ ಕಾರಣರಹಿತವೆಂದರ್ಥವಾಗುವುದು ಆದ್ದರಿಂದ ಅರ್ಥ ಹೇಳುವರು-

**ತಾತ್ಪರ್ಯ- ಅಮೂಲಂ ವಿಷ್ಣುಮೂಲಮ್ ।**

**ಅಮೂಲಂ** ಎಂದರೇ ವಿಷ್ಣುಮೂಲ ಎಂದು ಅರ್ಥ. ಈ ಸಂಸಾರವು ಅಮೂಲವಾಗಿದೆ. ವಿಷ್ಣುಮೂಲವಾಗಿದೆ ಎಂದು ಅರ್ಥ.

''**ಬಹುರೂಪರೂಪಮ್**'' ಎಂಬಲ್ಲಿ ಎರಡು ರೂಪಶಬ್ದವೇಕೆ ಎಂದು ತಿಳಿಯದು. ಆದ್ದರಿಂದ ವ್ಯಾಖ್ಯಾನಿಸುವರು-

**ತಾತ್ಪರ್ಯ- ಬಹುರೂಪೇಣ ತೇನೈವ ರೂಪ್ಯತೇ॥**

ಬಹುರೂಪಗಳಿಂದ ಮನಸ್ಸು ಮುಂತಾದವುಗಳಲ್ಲಿ ಸನ್ನಿಹಿತನಾಗಿ ಅವುಗಳನ್ನು ರೂಪಿಸುತ್ತಾನೆ ನಿರೂಪಿಸುತ್ತಾನೆ. ಅವುಗಳ ಜ್ಞಾನವನ್ನು ಮಾಡಿಸುತ್ತಾನೆ ಆದ್ದರಿಂದ ಮನಸ್ಸು ಮುಂತಾದವುಗಳು ಬಹುರೂಪರೂಪ ಎನಿಸುತ್ತವೆ.

ಮನೋವಚಃಪ್ರಾಣಶರೀರಕರ್ಮ ಎಂಬುದಕ್ಕೆ ಪ್ರಕೃತಸಂಗತ ಅರ್ಥ ತಿಳಿಯದ್ದರಿಂದ ವ್ಯಾಖ್ಯಾನ ಮಾಡುವರು-

**ತಾತ್ಪರ್ಯ- ಮನ ಆದೀನಾಂ ವಿಷಯಃ ।**

ಇಲ್ಲಿ ಶರೀರಪದದಿಂದ ತ್ವಗಿಂದ್ರಿಯವನ್ನು ಸ್ವೀಕರಿಸಿದ್ದರಿಂದ ಶರೀರವು ಸವಿಷಯಕವಾಗದ್ದರಿಂದ ಕರ್ಮಶಬ್ದಕ್ಕೆ ವಿಷಯವೆಂದು ಅರ್ಥಮಾಡಿದ್ದರೂ ಅನನ್ವಿತವೇ ಎಂಬ ಸಂಶಯಕ್ಕೆ ಆಸ್ಪದವಿಲ್ಲ. ಮನ ಆದಿಗಳಿಗೆ ವಿಷಯರಾದ ಭಾರ್ಯಾದಿ ಸಮಸ್ತ ಸಂಗವನ್ನೂ ಜ್ಞಾನದಿಂದ ಕತ್ತರಿಸಿ ನಿಸ್ಸಂಗನಾಗಿ ಸಂಚರಿಸುವನು ಎಂದೇ ಭಾವ. ।।೧೮।।

''ಜ್ಞಾನಾಸಿನಾ'' ಎಂಬಲ್ಲಿ ಹೇಳಿದ ಜ್ಞಾನ ಯಾವ ವಿಧವಾದುದು ಎಂದು ಹೇಳುವರು-

**ಜ್ಞಾನಂ ವಿವೇಕೋ ನಿಗಮಸ್ತಪಶ್ಚ ಪ್ರತ್ಯಕ್ಷಮೈತಿಹ್ಯಮಥಾನುಮಾನಮ್ ।**
**ಆದ್ಯಂತಯೋರಸ್ಯ ಯದೇವ ಕೇವಲಂ ಕಾಲಶ್ಚ ಹೇತುಶ್ಚ ತದೇವ ಮಧ್ಯೇ ॥**

**(ಪರಂ ಬ್ರಹ್ಮ** ಪರಮಾತ್ಮನು) **ಜ್ಞಾನಂ** ಜ್ಞಾನರೂಪನು **ವಿವೇಕಃ** ರಮಾಬ್ರಹ್ಮಾದಿ ಸಕಲ ಜಗತ್ತಿನಿಂದ ವಿವಿಕ್ತನಾದ್ದರಿಂದ (ಭಿನ್ನ) ವಿವೇಕನು **ನಿಗಮಃ** ಸರ್ವರಿಗೂ ಮೋಕ್ಷಾದಿ ಫಲವನ್ನು ಹೊಂದಿಸುವವನು. ಅಥವಾ ಎಲ್ಲರನ್ನೂ ತನ್ನ ಅಧೀನದಲ್ಲಿ ಇರಿಸುವವನು **ತಪಃ** ಎಲ್ಲರಿಂದಲೂ ಆಲೋಚಿಸಲ್ಪಡುವವನು **ಪ್ರತ್ಯಕ್ಷಂ** ಎಲ್ಲ ಇಂದ್ರಿಯಗಳಲ್ಲಿ ನಿಯಾಮಕ-ನಾಗಿರುವವನು **ಐತಿಹ್ಯಂ** ಆಚಾರ್ಯ ಸಂಪ್ರದಾಯಸಿದ್ಧನು ಇತಿಹಾಸ-ವಿಷಯನಾದ್ದರಿಂದ **ಐತಿಹ್ಯಂ ಅನುಮಾನಂ** ವೇದಾನುಮಾನವಿಷಯನು **ಅಸ್ಯ** ಈ ಜಗತ್ತಿನ **ಆದ್ಯಂತಯೋಃ** ಸೃಷ್ಟಿಯ ಮೊದಲು ಅನಂತರವು **ಯದೇವ** ಯಾವನು ಇರುವನೋ **ಸಃ** ಅವನು **ಕೇವಲಂ** ಸ್ವತಂತ್ರನು ಆದ್ದರಿಂದ **ತದೇವ** ಅವನೇ **ಮಧ್ಯೇ** ಮಧ್ಯದಲ್ಲಿ ಸ್ಥಿತಿಕಾಲದಲ್ಲಿಯೂ **ಕೇವಲಂ** ಸ್ವತಂತ್ರನು **ಕಾಲಃ** ಪೂರ್ಣಗುಣನು **ಹೇತುಃ** ನಿಮಿತ್ತಕಾರಣನು. ಹೀಗೆ ಸರ್ವದಾ ಶ್ರೀಹರಿಯ ಸ್ವಾತಂತ್ರ್ಯಾಜ್ಞಾನವೇ ಸಂಸಾರಕ್ಕೆ ಮೂಲವಾಗಿದೆ. ಶ್ರೀಹರಿಯ ಸ್ವಾತಂತ್ರ್ಯ ಜ್ಞಾನವೇ ಅಜ್ಞಾನನಾಶಕ್ಕೆ ಕಾರಣವೆಂದು ಭಾವ.

ಮೇಲಿನ ಶ್ಲೋಕದಲ್ಲಿಯ ಕೇವಲ ಎಂಬ ಶಬ್ದದ ಅರ್ಥವನ್ನು ಹೇಳುವರು-

**ತಾತ್ಪರ್ಯ- ಕೇವಲಂ ಸ್ವತಂತ್ರಮ್ ।**

ಜಗತ್ತಿನ ಆದ್ಯಂತಗಳಲ್ಲಿ ಪರಮಾತ್ಮನೇ ಕೇವಲನಾಗಿದ್ದಾನೆ. ಸ್ವತಂತ್ರ-ನಾಗಿದ್ದಾನೆ ಎಂದು ಅರ್ಥ.

ಅನ್ವಯ ತೋರಿಸುವರು-

**ತಾತ್ಪರ್ಯ- ಆದ್ಯಂತಯೋರ್ಯತ್ ಸ್ವತಂತ್ರಂ ತದೇವ ಮಧ್ಯೇಽಪಿ ಸ್ವತಂತ್ರಮ್ ।**

ಆದ್ಯಂತಗಳಲ್ಲಿಪರಮಾತ್ಮನೇಸ್ವತಂತ್ರನಾಗಿರುವುದರಿಂದಮಧ್ಯದಲ್ಲಿಯೂ ಪರಮಾತ್ಮನೇ ಸ್ವತಂತ್ರನಾಗಿದ್ದಾನೆ. ಹೀಗೆ ಅನ್ವಯ ಮಾಡಿಕೊಂಡು ಅರ್ಥ ಮಾಡಿಕೊಳ್ಳಬೇಕು.

ಪೂರ್ವಾರ್ಧದಲ್ಲಿ ವಿಶೇಷ್ಯವು ತಿಳಿಯದಿರುವುದರಿಂದ ಅದನ್ನು ಹೇಳುವರು-

**ತಾತ್ಪರ್ಯ- ಪರಂ ಬ್ರಹ್ಮ ಜ್ಞಾನವಿವೇಕಾದಿಸ್ವರೂಪಮ್ ।**

ಪರಂ ಬ್ರಹ್ಮ ಎಂಬ ವಿಶೇಷ್ಯವನ್ನು ಇಲ್ಲಿ ಇಟ್ಟುಕೊಳ್ಳಬೇಕು. ಅನ್ವಯ ತಿಳಿಸಿ ಪೂರ್ವಾರ್ಧವನ್ನು ವ್ಯಾಖ್ಯಾನ ಮಾಡುವರು-

**ತಾತ್ಪರ್ಯ- ಪರಿಪೂರ್ಣಗುಣತ್ವಾತ್ ಕಾಲಃ । ಅನ್ಯತೋ ವಿವಿಕ್ತತ್ವಾತ್ ವಿವೇಕಃ । ಸರ್ವಂ ನಿಗಮಯತಿ ಪ್ರಾಪಯತೀತಿ ನಿಗಮಃ । ಸರ್ವೈರಾಲೋಚ್ಯತ್ವಾತ್ ತಪಃ । ಪ್ರತಿ ಪ್ರತಿ ಅಕ್ಷೇಷು ಸ್ಥಿತತ್ವಾತ್ ಪ್ರತ್ಯಕ್ಷಮ್ । ಆಚಾರ್ಯಸಂಪ್ರದಾಯಸಿದ್ಧತ್ವಾತ್ ಐತಿಹ್ಯಮ್ ।। ಅನುಮೇಯತ್ವಾದನುಮಾನಮ್ ।।**

**ತಾತ್ಪರ್ಯದ ಭಾವಾರ್ಥ**

ಪರಬ್ರಹ್ಮನಾದ ಪರಮಾತ್ಮನು ಜ್ಞಾನಸ್ವರೂಪನು. ಬ್ರಹ್ಮಾದಿಗಳಿಂದ ಭಿನ್ನ. ಪರಿಪೂರ್ಣಗುಣಸ್ವರೂಪನಾದ್ದರಿಂದ ಕಾಲನು. ಇತರವಿಲಕ್ಷಣನಾದ್ದರಿಂದ ವಿವೇಕನು. ಭಕ್ತರಿಗೆ ಸಮಸ್ತ ಅಭಿಷ್ಟ ಹೊಂದಿಸುವುದರಿಂದ ನಿಗಮನು. ಸರ್ವರಿಂದ ವಿಚಾರ ಮಾಡಲ್ಪಡುವುದರಿಂದ ತಪನು. ಎಲ್ಲ ಇಂದ್ರಿಯಗಳಲ್ಲಿಯೂ ನಿಯಾಮಕನಾಗಿರುವುದರಿಂದ ಪ್ರತ್ಯಕ್ಷನು. ಆಚಾರ್ಯ ಸಂಪ್ರದಾಯ ಸಿದ್ಧನಾದ್ದರಿಂದ ಐತಿಹ್ಯನು. ವೇದಾನುಸಾರಿ ಅನುಮಾನ ವಿಷಯನಾದ್ದರಿಂದ ಅನುಮಾನನು. ಎನಿಸಿಕೊಳ್ಳುವ ಪರಬ್ರಹ್ಮನನ್ನೇ ''**ಸತ್ಯಂ ಜ್ಞಾನಮನಂತಂ ಬ್ರಹ್ಮ**'' ಎಂದು ಶ್ರುತಿ ಹೇಳಿದ ಪ್ರಕಾರ ತಿಳಿದುಕೋ ಎಂದು ಭಾವ.।।೧೯।।

ಜಗತ್ತಿನ ಆದಿ ಮಧ್ಯ ಅಂತಗಳಲ್ಲಿ ಶ್ರೀಹರಿಗೆ ಅಪ್ರತಿಹತವಾದ ಸ್ವಾತಂತ್ರ್ಯ ಎಂಬುದನ್ನು ಉದಾಹರಣದಿಂದ ಸ್ಪಷ್ಟಪಡಿಸುವರು-

ಸರ್ವಕಾಲದಲ್ಲಿಯೂ ಭಗವಂತನು ಸರ್ವಜಗದ್ವಿಲಕ್ಷಣನೆಂದು ಈ ಶ್ಲೋಕದಲ್ಲಿ ಹೇಳುವರು-

**ಯಥಾ ಹಿರಣ್ಯಂ ಸ್ವಕೃತಂ ಪುರಸ್ತಾತ್ ಪಶ್ಚಾಚ್ಚ ಸರ್ವಸ್ಯ ಹಿರಣ್ಮಯಸ್ಯ ।**
**ತದೇವ ಮಧ್ಯೆ ವ್ಯವಹಾರ್ಯಮಾಣಂ ನಾನಾಪದೇಶೈರಹಮಸ್ಯ ತದ್ವತ್ ।।**

**ಯಥಾ** ಹೇಗೆ **ಸ್ವಕೃತಂ** (ಸ್ವೇನ ಕೃತಂ) ಪರಮಾತ್ಮನಿಂದ ನಿರ್ಮಿತವಾದ **ಹಿರಣ್ಯಂ** ಚಿನ್ನವು **ಸ್ವಕೃತಂ** (ಸುಕೃತಂ) ಚೆನ್ನಾಗಿ ಚಿತ್ರಿಸಲ್ಪಟ್ಟ ಅಲಂಕರಿಸಲ್ಪಟ್ಟದ್ದು **ಸರ್ವಸ್ಯ ಹಿರಣ್ಮಯಸ್ಯ ಸಕಾಶಾತ್** ಬಂಗಾರದಿಂದ ಅಲಂಕರಿಸಿದ ಎಲ್ಲ

ಪದಾರ್ಥಗಳಿಂದ **ಪುರಸ್ತಾತ್** ಅಲಂಕಾರ ಮಾಡುವ ಮೊದಲೂ **ಪಶ್ಚಾಚ್ಚ** ಬಂಗಾರವನ್ನು ಬೇರ್ಪಡಿಸುವುದೆಂಬ ಕಾವಾದ ಮೇಲೆಯೂ **ಪೃಥಗ್** ಭಿನ್ನವೇ ಆಗಿದೆ. **ಮಧ್ಯೇ ಚ** ಅಲಂಕರಿಸಿದ ಕಾಲದಲ್ಲಿ **ತದೇವ** ಆ ಚಿನ್ನವೇ **ನಾನಾಪದೇಶೈಃ ವ್ಯವಹಾರ್ಯಮಾಣಂ** ಚಿನ್ನದ ರಥ, ಶಂಖ, ಮುಂತಾಗಿ ನಾನಾ ಹೆಸರುಗಳಿಂದ ಕರೆಸಿಕೊಳ್ಳಲ್ಪಡುವುದು ಈ ಚಿನ್ನವು **ಪೃಥಕ್** ಕಟ್ಟಿಗೆ, ಶಂಖಗಳಿಂದ ಭಿನ್ನವೇ **ತದ್ವತ್** ಅದರಂತೆ **ಅಹಂ** ನಾನು **ಅಸ್ಯ** ಈ ಜಗತ್ತಿನ **ಪುರಸ್ತಾತ್ ಪಶ್ಚಾತ್ ಮಧ್ಯೇ** ಆದಿ ಅಂತ ಮಧ್ಯಗಳಲ್ಲಿ **ನಾನಾಪದೇಶೈಃ** ಸುರ, ನರ, ಮುಂತಾದ ಹೆಸರುಗಳಿಂದ **ವ್ಯಹಾರ್ಯಮಾಣಂ** ಅಂತರ್ಯಾಮಿ-ಯಾಗಿದ್ದು ಮುಖ್ಯವಾಚ್ಯನಾಗಿ **ಪೃಥಗೇವ ಸ್ಥಿತಃ** ಭಿನ್ನವಾಗಿಯೇ ಇದ್ದೇನೆ. ಅಥವಾ ಚಿನ್ನವು ಕಾಲತ್ರಯದಲ್ಲಿಯೂ ಚಿನ್ನವೇ ಆಗಿರುವಂತೆ ಕಾಲತ್ರಯದಲ್ಲಿಯೂ ನಾನು ಸರ್ವಶಬ್ದವಾಚ್ಯನಾಗಿದ್ದೇನೆ. ಎಂದು ಹೇಳುವನು. **ಯಥಾ** ಹೇಗೆ **ಹಿರಣ್ಯಂ** ಚಿನ್ನವು **ಸರ್ವಸ್ಯ ಹಿರಣ್ಮಯಸ್ಯ** ಎಲ್ಲ ಕಡಗ, ಹಾರ, ಮುಂತಾದವುಗಳಿಗಿಂತ **ಪುರಸ್ತಾತ್** ಆಭರಣ ಮಾಡುವ ಮೊದಲು **ಸ್ವಕೃತಂ** ಆಭರಣವಾಗಿ ವಿಕಾರವಾಗದಿರುವಾಗ **ಹಿರಣ್ಯಮೇವ** ಚಿನ್ನವೇ ಆಗಿರುವುದು **ಪಶ್ಚಾತ್** ಆಭರಣನಾಶ ಮಾಡಿದ ಮೇಲೂ **ಹಿರಣ್ಯಮೇವ** ಚಿನ್ನವೇ **ಮಧ್ಯೇ** ಆಭರಣವಾದಾಗಲೂ **ತದೇವ** ಚಿನ್ನವೇ ಆಗಿದೆ. **ತದ್ವತ್** ಹಾಗೆಯೇ **ಅಸ್ಯ** ಅಸ್ವತಂತ್ರವಾದ ಜಗತ್ತಿನ ಪೂರ್ವದಲ್ಲಿಯೂ, ಪ್ರಲಯಕಾಲದಲ್ಲಿಯೂ, ಸ್ಥಿತಿ ಕಾಲದಲ್ಲಿಯೂ, ಸುರ, ನರ, ಮುಂತಾದ ಎಲ್ಲ ಶಬ್ದಗಳಿಂದ ನಾನೇ ವಾಚ್ಯನು ಹೀಗೂ ಅರ್ಥ.

ಮೇಲಿನ ಶ್ಲೋಕದಲ್ಲಿ ಚಿನ್ನ ಆಭರಣದ ದೃಷ್ಟಾಂತದಿಂದ ಬ್ರಹ್ಮನಿಗೆ ಜಗದುಪಾದಾನತ್ವ ಹೇಳುವರೆಂಬ ಭ್ರಮ ಬರುವ ಕಾರಣ ವ್ಯಾಖ್ಯಾನಿಸುವರು-

**ತಾತ್ಪರ್ಯ-** ಹಿರಣ್ಯಖಚಿತತ್ವೇನ ಹಿರಣ್ಯಪ್ರಧಾನಂ ಹಿರಣ್ಮಯಮ್ । ಶಂಖ-ಮಂಚರಥಾದಿಷು ಮಧ್ಯೇಽಪಿ ಕೇವಲಂ ಪ್ರಾಧಾನ್ಯೇನ ವ್ಯವಹಾರ್ಯಮಾಣಂ ತದೇವ ।

ರಥೋಪಸ್ಥೇ ಪರಿಷ್ಕಾರಾತ್ ಪೂರ್ವಂ ದಾರುಮಯಾದ್ರಥಾತ್ ।
ಸುವರ್ಣಂ ವ್ಯವಹಾರಾಯ ಮುಖ್ಯಂ ರಥಪರಿಷ್ಕೃತಮ್ ॥

ಮಧ್ಯೇ ಚಾಂತೇ ರಥೋಪಸ್ಥಾನ್ನಿಷ್ಕೃಷ್ಯ ಪೃಥಗಾಸ್ಥಿತಮ್ ।
ಯದ್ವದೇವಂ ಹರಿಃ ಸಾಕ್ಷಾತ್ ಜಗದ್ದೇಹಾತ್ ಪೃಥಕ್‌ಸ್ಥಿತಿಃ ॥

ಪೂರ್ವಂ ಜಗತಿ ಸಂಸ್ಥಶ್ಚ ಜಗದಂತೇ ಪೃಥಕ್ ಸ್ಥಿತಿಃ ।
ಸ ಏವ ಮುಖ್ಯೋ ಜಗತಃ ಸ್ವಾತಂತ್ರ್ಯಾತ್ ಪರಮೇಶ್ವರಃ ॥ ಇತಿ ಬ್ರಹ್ಮತರ್ಕೇ

ಸುರಪಿತೃಮನುಜಾದಿಕಲ್ಪನಾದಿಭಿಃ ಇತ್ಯಾದಿ ಅಂತರ್ಯಾಮ್ಯಪೇಕ್ಷಯಾ ।

ಯಥಾ ಸುವರ್ಣಮಕೃತಂ ಕ್ರಿಯತೇ ಕುಂಡಲಾದಿಕಮ್ ।
ಪುನರೇಕೀಭವತ್ಯದ್ಧಾ ತದ್ವದ್ವಿಷ್ಣುರಜೋಽಪಿ ಸನ್ ।
ಸುರಾದ್ಯಂತಃಸ್ಥಿತೋ ಭೂತ್ವಾ ಪುನರೇಕೀಭವೇದ್ವಿಭುಃ ॥ ಇತಿ ವಚನಾತ್ ॥

ತತ್ತನ್ನಿಯಾಮಕಸ್ಯೈವ ನಾಮ ಸರ್ವಂ ಸುರಾದಿಕಮ್ ।
ತತ್ಸಂಬಂಧಾದುದೀರ್ಯೇತ ವ್ಯವಹೃತ್ಯೈ ಸುರಾದಿಷು ॥
-ಇತಿ ಶಬ್ದ ನಿರ್ಣಯೇ ।

ಏಕಲಂ ಕೇವಲಂ ಚೇತಿ ಸ್ವತಂತ್ರಮಭಿಧೀಯತೇ ।
ಸ್ವತಂತ್ರಸ್ತು ಹರಿಃ ಸಾಕ್ಷಾತ್ ಪರಿಷ್ಕೃತಹಿರಣ್ಯವತ್ ॥ ಇತಿ ಪ್ರವೃತ್ತೇ ।

ಪ್ರತ್ಯೇಕಂ ನ ತು ದಾರ್ವಾದಿ ಸ್ವತಂತ್ರಂ ವಿಕ್ರಿಯಾಗತಮ್ ।
ಮಹಾಫಲಂ ಸ್ಯಾತ್ ಸ್ವರ್ಣಂ ತು ಸ್ವತಂತ್ರಂ ವಿಕ್ರಿಯೋಪಗಮ್ ।
ತದ್ವತ್ಸ್ವತಂತ್ರೋ ಭಗವಾನ್ ಪ್ರವೃತ್ತಾವನ್ಯದನ್ಯಥಾ । ಇತಿ ಚ ।

ಸುವರ್ಣಖಚಿತವಾದುದರಿಂದ ಸುವರ್ಣವೇ ಪ್ರಧಾನವಾಗಿವುಳ್ಳ ಕಟ್ಟಿಗೆಯದಾದ ರಥ ಮಂಚ ಮೊದಲಾದುದು ಹಿರಣ್ಮಯವೆನಿಸಿಕೊಳ್ಳುತ್ತದೆ. ಶಂಖ, ಮಂಚ, ರಥ, ಅಲಂಕಾರದ ಮೊದಲು ಅನಂತರ (ತೆಗೆದ ಮೇಲೂ) ಮಧ್ಯದಲ್ಲಿಯೂ ಪ್ರಧಾನವಾಗಿ ಚಿನ್ನವೇ ಕರೆಸಿಕೊಳ್ಳುವುದು.

ಕಟ್ಟಿಗೆಯ ರಥ ಮುಂತಾದವು ಅಲಂಕಾರಕ್ಕಾಗಿ ಚಿನ್ನದಿಂದ ಚಿತ್ರಿಸಲ್ಪಟ್ಟರೆ ಚಿನ್ನದ ಸಂಬಂಧದಿಂದ ಚಿನ್ನದ ರಥ, ಚಿನ್ನದ ಶಂಖವೆಂದು ವ್ಯವಹಾರವಿದ್ದರೂ ಪೂರ್ವೋತ್ತರಗಳಲ್ಲಿ ಮುಖ್ಯವಾಚ್ಯವಾದುದು ಸುವರ್ಣವೇ, ಮಧ್ಯದಲ್ಲಿಯೂ ಸುವರ್ಣಪದವಾಚ್ಯವು ಚಿನ್ನವೇ (ಅಂದರೆ ಚಿನ್ನವು ರಥದ ಮೇಲೆ ಚಿತ್ರಿತವಾದರೆ ಚಿತ್ರ ತೆಗೆಯುವ ಮೊದಲು ಕಟ್ಟಿಗೆಯಕ್ಕಿಂತ ಬೇರೆಯೇ ರಥದಿಂದ ಚಿನ್ನದ ತಗಡನ್ನು ತೆಗೆದು ಮೇಲೆಯೂ ಚಿನ್ನವು ರಥದಿಂದ ಭಿನ್ನವೇ

ಸುವರ್ಣ ಖಚಿತಾವಸ್ಥೆಯಲ್ಲಿಯೂ ಸುವರ್ಣರಥವಿದು ಮುಂತಾದ ವ್ಯವಹಾರಯೋಗ್ಯವೇ ಆಗಿದೆ. ಅದೇ ಚಿನ್ನವು ಕಟ್ಟಿಗೆಯು ಬೇರೆಯೇ ಇದರಂತೆಯೇ ಜಗತ್ಸೃಷ್ಟಿಗಿಂತ ಮೊದಲೂ ಜಗತ್ತಿನ ನಾಶವಾದ ಮೇಲೆಯೂ ಮುಖ್ಯತಃ ಸರ್ವಶಬ್ದವಾಚ್ಯನಾದ ಸರ್ವಸ್ವತಂತ್ರನಾದ ಶ್ರೀಹರಿಯೇ ಜಗತ್ತಿರುವಾಗಲೂ ಇಂದ್ರಾದಿ ಎಲ್ಲ ಶಬ್ದಗಳಿಂದಲೂ ಮುಖ್ಯವಾಚ್ಯನು. ಜಗತ್ತಿನಿಂದಲೂ ಜೀವರ ದೇಹದಿಂದಲೂ ಭಿನ್ನನೇ ಎಂದು ಬ್ರಹ್ಮತರ್ಕದಲ್ಲಿದೆ. (ವಿಷ್ಣುಪುರಾಣ ಮೂರನೇ ಅಂಶ ಏಳನೆಯ ಅಧ್ಯಾಯ ಯಮಗೀತಾದಲ್ಲಿ ''ಕಟಕಮುಕುಟಕರ್ಣಿಕಾದಿಭೇಧ್ಯೈಃ ಕನಕಮಭೇದಮಾಭಾಷ್ಯತೇ ಯಥೈಕಮ್ । ಸುರಪಿತೃಮನುಜಾದಿಕಲ್ಪನಾಭಿರ್ಹರಿರಖಿಲಾಭಿರುದೀರ್ಯತೇ ತಥೈವೇಕಃ॥ಎಂದು ಅಭೇದ ಹೇಳಿದಂತಿದೆ. ಅದಕ್ಕೆ ಸುರಪಿತೃಮನುಜಾದಿಕಲ್ಪನಾಭಿಃ ಇತ್ಯಾದಿ ಅಂತರ್ಯಾಮಿವಿವಕ್ಷಯಾ ಎಂಬ ತಾತ್ಪರ್ಯ ಹೊರಟಿದೆ.

ದೇವತೆ, ಪಿತೃ, ಮನುಷ್ಯರುಗಳಲ್ಲಿ ಅಂತರ್ಯಾಮಿಯಾಗಿರುವುದರಿಂದ ಶ್ರೀಹರಿಯು ಸುರ, ಪಿತೃ, ಮನುಷ್ಯ ಮುಂತಾದ ಎಲ್ಲ ಶಬ್ದವಾಚ್ಯನಾಗಿದ್ದಾನೆ. ಆಭರಣವಾಗಿ ಮಾಡಲ್ಪಡದಿರುವ ಚಿನ್ನವೇ ಆಭರಣವಾಗಿ ಮಾಡಲ್ಪಡುವುದು. ಉಂಗುರ, ಕಡಗ, ಹಾರವಾಗುವುದು. ಮತ್ತೆ ಒಂದಾಗುವುದು. ಅದರಂತೆ ಶ್ರೀಹರಿಯು ಜನ್ಮರಹಿತನಾದರೂ ದೇವತಾದಿಗಳಲ್ಲಿ ನಿಯಾಮಕ ಬಹುರೂಪವುಳ್ಳವನಾಗಿ ಮತ್ತೆ ಏಕೀಭಾವ ಹೊಂದುವನು. ಆ ದೇವಾದಿಗಳಿಗೆ ನಿಯಾಮಕನಾದ ಶ್ರೀಹರಿಗೇನೇ ಮುಖ್ಯವಾಗಿ ಸುರ-ಪಿತೃ-ನರ ಮುಂತಾದ ಎಲ್ಲ ನಾಮಗಳು. ಆತನೇ ಮುಖ್ಯ ಸರ್ವಶಬ್ದವಾಚ್ಯನು. ಅವನ ಸಂಬಂಧ-ದಿಂದಲೇ ವ್ಯವಹಾರ ನಡೆಯುವುದಕ್ಕಾಗಿ ಅಮುಖ್ಯವಾಗಿ ದೇವಾದಿಗಳಲ್ಲಿ ಆ ಶಬ್ದಗಳನ್ನು ಪ್ರಯೋಗಿಸುತ್ತಾರೆ. ಎಂದು ಶಬ್ದನಿರ್ಣಯದಲ್ಲಿದೆ. ಏಕಲ ಕೇವಲ ಸ್ವತಂತ್ರ ಇವು ಒಂದೇ ಅರ್ಥವುಳ್ಳ ಪದಗಳು. ಅಲಂಕರಿಸಲ್ಪಟ್ಟ ಪ್ರಧಾನವಾದ ಚಿನ್ನದಂತೆ ಶ್ರೀಹರಿಯೇ ಸರ್ವಸ್ವತಂತ್ರನು ಎಂದು ಪ್ರವೃತ್ತ ಎಂಬ ಗ್ರಂಥದಲ್ಲಿದೆ.

ವಿಕಾರವನ್ನು ಹೊಂದುವ ಪ್ರಧಾನವಾದ ಸುವರ್ಣವೇ ಹೇಗೆ ಮಹಾಫಲವುಳ್ಳದ್ದೋ ಕಟ್ಟಿಗೆ ರಥಕ್ಕಿಂತ ಬೆಲೆಬಾಳುವುದೋ ಕಟ್ಟಿಗೆ ರಥವು

ಬೆಲೆಬಾಳುವುದಿಲ್ಲ. ಪ್ರಧಾನವೂ ಅಲ್ಲ. ಹಾಗೆಯೇ ಅಂತರ್ನಿಯಾಮಕನಾದ ಶ್ರೀಹರಿಯೇ ಪ್ರವೃತ್ತಿ ಮೊದಲಾದ ಎಲ್ಲಾ ವಿಷಯದಲ್ಲಿ ಸ್ವತಂತ್ರನು. ಉಳಿದುದು ಅಸ್ವತಂತ್ರವು ಎಂದು ಹೇಳಿದೆ.।।೨೦।।

ಮೋಕ್ಷಾದಿಗಳನ್ನು ಕೊಡುವುದರಿಂದ ಮುಖ್ಯಸ್ವತಂತ್ರನು ಹರಿಯೇ ಎಂದು ಹೇಳುವರು-

**ವಿಜ್ಞಾನಮೇತತ್ ತ್ರಿಪದಸ್ಥಮಂಗ ಗುಣತ್ರಯಂ ಕಾರಣಕಾರ್ಯಕರ್ತೃ ।**
**ಸಮನ್ವಯೇನ ವ್ಯತಿರೇಕತಶ್ಚ ಯೇನೈವ ತುರ್ಯೇಣ ತದೇವ ಸತ್ಯಮ್ ।।**

**ಹೇ ಅಂಗ** ಉದ್ಧವನೇ **ಗುಣತ್ರಯಂ** (ಗುಣಾನಾಂ ತ್ರಯಂ ಯಸ್ಯ ತತ್) ಸಾತ್ವಿಕ, ರಾಜಸ, ತಾಮಸ, ಜೀವಸಮೂಹವನ್ನು **ತ್ರಿಪದಸ್ಥಂ** ಮೋಕ್ಷ, ನಿತ್ಯಸಂಸಾರ, ತಮಸ್ಸು, ಎಂಬ ಮೂರುಸ್ಥಾನಗಳಲ್ಲಿ ಇರುವಂತೆ ಮಾಡುವ **ಯದೇತತ್** ಪೂರ್ವೋಕ್ತವಾದ **ವಿಜ್ಞಾನಂ** ವಿಜ್ಞಾನರೂಪನಾದ ಬ್ರಹ್ಮನೇನಿದ್ದಾನೋ **ತತ್** ಆ ಬ್ರಹ್ಮನು **ಯೇನ ತುರ್ಯೇಣ** ಯಾವ ವಾಸುದೇವರೂಪದಿಂದ **ಸಮನ್ವಯೇನ ವ್ಯತಿರೇಕತಶ್ಚ** ಅವನ ಇಚ್ಛೆಯಿದ್ದರೆ ಈ ಜಗತ್ತು ಇರುವುದು ಇಲ್ಲದಿದ್ದರೆ ಇಲ್ಲ ಎಂಬ ಅನ್ವಯ-ವ್ಯತಿರೇಕದಿಂದ ಕಾರಣ-ಕಾರ್ಯ-ಕರ್ತೃ ಮಹದಾದಿ ಕಾರಣ ಮತ್ತು ಬ್ರಹ್ಮಾಂಡಾದಿ ಕಾರ್ಯಗಳಿಗೆ ಕರ್ತೃವಾಗಿದೆಯೋ **ತದೇವ ಸತ್ಯಂ** ಅವನೇ ಸ್ವತಂತ್ರನು.

ಅಥವಾ **ಯೇನ ತುರ್ಯೇಣ** (ತೃತೀಯಾ ಷಷ್ಠ್ಯರ್ಥೇ) ಯಾವ ಜಾಗ್ರದಾದ್ಯವಸ್ಥಾತೀತನಾದ ವಿಶ್ವ, ತೈಜಸ, ಪ್ರಾಜ್ಞ, ತುರೀಯನಾದ ತುರೀಯನ **ಸಮನ್ವಯೇನ** ಇಚ್ಛೆಯು ಇರುವುದರಿಂದ ಅನುಗ್ರಹದಿಂದ **ಗುಣತ್ರಯಂ** ಸತ್ವಾದಿಗಳು ಕಾರಣ, ಮಹದಾದಿಗಳು ಉಪಾದಾನ, ಕಾರ್ಯದೇಹಾದಿಗಳು ಕರ್ತೃ, ಕಾಲ-ಕರ್ಮಾದಿ ನಿಮಿತ್ತ ಕಾರಣಗಳು. **ವ್ಯತಿರೇಕತಃ** ಇಚ್ಛೆಯಿಲ್ಲದಿದ್ದರೆ ಇಲ್ಲ. ಆದ್ದರಿಂದ **ತದೇವ ಸತ್ಯಂ** ಕೇವಲ ಅದೇ ಸ್ವತಂತ್ರವಾದ ಸತ್ಯವು.

ಮೇಲಿನ ಶ್ಲೋಕದಲ್ಲಿ ತ್ರಿಪದಸ್ಥ ಎಂದರೆ ಶ್ವೇತದ್ವೀಪ, ಅನಂತಾಸನ, ವೈಕುಂಠವೆಂಬ ಮೂರು ಸ್ಥಳದಲ್ಲಿ ಇರುವನೆಂದು ಹೇಳುವುದು ಅಸಂಗತವು ಕಾರಣ ತಾತ್ಪರ್ಯ ಹೊರಟಿದೆ-

**ತಾತ್ಪರ್ಯ- ಮೋಕ್ಷದಂ ಸಂಸಾರದಂ ತಮಃಪ್ರದಂ ಚೇತಿ ತ್ರಿಪದಸ್ಥಂ ವಿಜ್ಞಾನಮ್ ।**

ನಿತ್ಯನಾದ ಸರ್ವತ್ರ ವ್ಯಾಪ್ತನಾದವನಿಗೆ ಅನ್ವಯ-ವ್ಯತಿರೇಕ ಕೂಡುವುದಿಲ್ಲ. ಕಾರಣ ಇಲ್ಲಿ ವಿವಕ್ಷಿತ ಅನ್ವಯ ವ್ಯತಿರೇಕ ತಿಳಿಸುವರು-

**ತಾತ್ಪರ್ಯ- ತದಿಚ್ಛಾಯಾಃ ಸತ್ವೇ ಏತತ್ಸರ್ವಮಸ್ತಿ । ಅನ್ಯಥಾ ನಾಸ್ತಿ ಇತ್ಯನ್ವಯ ವ್ಯತಿರೇಕೌ ।**

ಭಗವಂತನಿಗೆ ಅನ್ವಯ-ವ್ಯತಿರೇಕ ಇಲ್ಲದಿದ್ದರೂ ಅವನ ಇಚ್ಛೆಗೆ ಅನ್ವಯ ವ್ಯತಿರೇಕ ಹೇಳಬಹುದು. ವಿಜ್ಞಾನಶಬ್ದವಾಚ್ಯನಾದ ಪರಮಾತ್ಮನು ಸಾತ್ವಿಕರಿಗೆ ಮೋಕ್ಷ, ರಾಜಸರಿಗೆ ಸಂಸಾರ, ತಾಮಸರಿಗೆ ತಮಸ್ಸು, ಹೊಂದಿಸುವುದರಿಂದ ತಿಪ್ರದಸ್ಥ ಎನ್ನುವರು. ಶ್ರೀಹರಿಯ ಇಚ್ಛೆ ಇದ್ದರೇ ಈ ಜಗತ್ತು ಇಲ್ಲವಾದರೆ ಇಲ್ಲ ಎಂದು ಅನ್ವಯ-ವ್ಯತಿರೇಕಗಳು ಎಂದು ಭಾವ.॥೨೦॥

ಶ್ರೀಹರಿಯೇ ಏಕೆ ಸ್ವತಂತ್ರನು? ಉಳಿದವರು ಏಕಾಗಬಾರದು? ಎಂದರೆ ಹೇಳುವರು-

**ನ ಯತ್ ಪುರಸ್ತಾದುತ ಯನ್ನ ಪಶ್ಚಾ-**
**ನ್ಮಧ್ಯೇ ಚ ತನ್ನ ವ್ಯಪದೇಶಮಾತ್ರಮ್ ।**
**ಭೂತಂ ಪ್ರಸಿದ್ಧಂ ಚ ಪರೇಣ ಯದ್ಯತ್**
**ತದೇವ ಸತ್ ಸ್ಯಾದಿತಿ ಮೇ ಮನೀಷಾ ॥೨೨॥**

**ಯತ್** ಯಾವ ಜಗತ್ತು **ಪುರಸ್ತಾತ್** ಹುಟ್ಟುವ ಮೊದಲು **ಕೇವಲಂ ನ** ಸ್ವತಂತ್ರವಲ್ಲ **ಉತ** ಮತ್ತು **ಯತ್ ಪಶ್ಚಾತ್ ಕೇವಲಂ ನ** ನಾಶವಾದ ಮೇಲೂ ಸ್ವತಂತ್ರವಲ್ಲ **ಮಧ್ಯೇ ಚ** ಸ್ಥಿತಿಕಾಲದಲ್ಲಿಯೂ **ಕೇವಲಂ ನ** ಸ್ವತಂತ್ರವಲ್ಲ. **ಯತ್** ಯಾವುದು **ಪರೇಣ** ಬೇರೆಯವರಿಂದ (ಶ್ರೀಹರಿಯಿಂದ) **ಭೂತಂ** ಉತ್ಪನ್ನವಾದುದು **ಚ** ಮತ್ತು **ಪರೇಣ** ಪ್ರಸಿದ್ಧನಾದ ಶ್ರೀಹರಿಯಿಂದಲೇ ಸತ್ತಾ -ಪ್ರವೃತ್ತಿ-ಪ್ರತೀತಿಗಳುಳ್ಳದ್ದು **ತತ್** ಆ ಜಗತ್ತು **ವ್ಯಪದೇಶಮಾತ್ರಂ** ಸ್ವತಂತ್ರ ಎಂಬುದು ಕೇವಲ ಮಾತಷ್ಟೇ **ತದೇವ** ಬ್ರಹ್ಮನೊಬ್ಬನೇ **ಸತ್** ಸ್ವತಂತ್ರನು **ಇತಿ** ಹೀಗೆ **ಮೇ ಮನೀಷಾ** ನನ್ನ ತಿಳುವಳಿಕೆಯು.

ಶ್ರೀನಿವಾಸತೀರ್ಥರ ಪ್ರಕಾರ **ಯತ್** ಯಾವ ಬ್ರಹ್ಮನು **ಪುರಸ್ತಾತ್** ಪೂರ್ವಕಲ್ಪದಲ್ಲಿ **ಕೇವಲಂ ನ** ಅದ್ವಿತೀಯನಲ್ಲ ಸದ್ವಿತೀಯನು **ಯತ್** ಯಾವ ಬ್ರಹ್ಮನು **ಪಶ್ಚಾತ್** ಮುಂದಿನ ಕಲ್ಪದಲ್ಲಿಯೂ **ಕೇವಲಂ ನ** ಅದ್ವಿತೀಯನಲ್ಲ ಸದ್ವಿತೀಯನೇ **ಯತ್ ಮಧ್ಯೇ** ಈ ಕಲ್ಪದಲ್ಲಿ **ಕೇವಲಂ** ಅದ್ವಿತೀಯನಲ್ಲ **ತದೇವ** ಅವನೇ ಸದ್ವಿತೀಯಬ್ರಹ್ಮನೇ **ಸತ್** ಸತ್ಯನು. ಮೂರುಕಾಲದಲ್ಲಿ ಕೇವಲನಲ್ಲ ಎಂದು ನಿಷೇಧಿಸಿದರೆ, "**ಕೇವಲೋ ನಿರ್ಗುಣಶ್ಚ**" ಎಂಬುದು ವಾಙ್ಮಾತ್ರ ಅಂದರೆ ಜಡಾಮಿಶ್ರ ಎಂಬರ್ಥದಲ್ಲಿ ಹೇಳಿದ್ದೇ ಹೊರತು ಅದ್ವಿತೀಯ ಎಂಬರ್ಥದಲ್ಲಿ ಅಲ್ಲ. ಹೀಗೆ ಮಾಡಿದ್ದರಿಂದ ಜಗತ್ತಿಗೆ, ಬ್ರಹ್ಮನಿಗೆ, ಇಬ್ಬರಿಗೂ ಕಾಲತ್ರಯ ಸತ್ವ ಹೇಳಿದಂತಾಯಿತು. ಸಮಾನ- ವಾದ್ದರಿಂದ ಜಗತ್ತು ಸ್ವತಂತ್ರವಾಗಲಿ ಎಂದರೆ ಅವನ ಅಧೀನವಾದ್ದರಿಂದ ಸ್ವತಂತ್ರವಲ್ಲ ಎಂದು ಹೇಳಿದೆ. **ಯತ್ ಪರೇಣ ಭೂತಂ ಪ್ರಸಿದ್ಧಂ ಚ** ಶ್ರೀಹರಿಯ ಅಧಿ ೕನವಾಗಿ, ಉತ್ಪನ್ನವಾಗಿ, ಸತ್ತಾ-ಪ್ರತೀತಿ-ಪ್ರವೃತ್ತಿಗಳಲ್ಲಿ ಅವನ ಅಧೀನವೇ ಆಗಿದೆ. ಎಂದೂ ಅರ್ಥ.

ಮೇಲಿನ ಶ್ಲೋಕದಲ್ಲಿ ಜಗತ್ತು ಮೂರು ಕಾಲದಲ್ಲಿ ಇಲ್ಲವೆಂದು ಹೇಳಿ ಮುಂದೆ "**ಪರೇಣ ಭೂತಂ ಪ್ರಸಿದ್ಧಂ ಯತ್ ತತ್ ವ್ಯಪದೇಶಮಾತ್ರಮ್**" ಉತ್ಪನ್ನ ಎಂದು ಹೇಳಿದುದುಷ್ಟೇ. ವಸ್ತುತಃ ಇಲ್ಲ. ತದೇವ ತತ್ ಸ್ಯಾತ್ ಪ್ರಪಂಚವೇ ಬ್ರಹ್ಮ ಎಂದು ಹೇಳಿದಂತೆ ತೋರುವುದು. ಕಾರಣ ಪ್ರಪಂಚ-ಮಿಥ್ಯಾತ್ವ ನಿರಾಕರಿಸಲು ಸರಿಯಾಗಿ ವ್ಯಾಖ್ಯಾನಿಸುವರು.

**ತಾತ್ಪರ್ಯ– ತದೇವ ಕೇವಲಂ ಸತ್ಯಂ ಇತಿ ಸರ್ವತ್ರ ಸಂಬಧ್ಯತೇ ।**

೧೯ನೇ ಶ್ಲೋಕದಲ್ಲಿ ಕೇವಲಂ ಪದವು ೨೧ ನೇ ಶ್ಲೋಕದಲ್ಲಿ ಸತ್ಯಂ ಎಂಬ ಪದವು ಇವೆ. ಇಲ್ಲಿ ಅನುವೃತ್ತಿ ಮಾಡಿಕೊಳ್ಳಬೇಕು ಎಂದರ್ಥ. ಪುರಸ್ತಾತ್ ಎಂಬಲ್ಲಿ ಎಲ್ಲ ಕಡೆ ಕೇವಲಂ ಎಂಬುದನ್ನಾಗಲಿ ಸತ್ಯಂ ಎಂಬುದನ್ನಾಗಲಿ ಅನ್ವಯಿಸಬೇಕು.

ಶ್ರೀಸುಧೀಂದ್ರರ ಪ್ರಕಾರ **ತದೇವ ಸತ್ಯಂ** ಬ್ರಹ್ಮನೊಬ್ಬನೇ ಸತ್ಯ ಉಳಿದುದು ಅಸತ್ಯ ಎಂದರ್ಥವಾಗಬಾರದೆಂದು ಈ ತಾತ್ಪರ್ಯ ಹೊರಟಿದೆ. ಈ ಶ್ಲೋಕದಲ್ಲಿ ಕೇವಲಪದವನ್ನು ಅನುವೃತ್ತಿ ಮಾಡಿ ತದೇವ ಕೇವಲಂ ಎಂದು ಅನ್ವಯಿಸಬೇಕು. ಸತ್ಯಂ ಎಂಬ ಪದವನ್ನು ಸರ್ವತ್ರ ಎಂದರೆ ಎಲ್ಲ ಪ್ರಪಂಚಕ್ಕೆ

ಸಂಬಂಧ ಮಾಡಬೇಕು. ಆದರೆ **ತತ್** ಬ್ರಹ್ಮನು ಕೇವಲನು **ತತ್** ಪ್ರಪಂಚವು ಸತ್ಯವು (ಯಥಾರ್ಥವು) ಎಂದರ್ಥ.

ಮಿಥ್ಯೆಯಾದರೆ ನಿಯಮ್ಯತ್ವ ಕೂಡಲಾರದ ಕಾರಣ ಸತ್ಯತ್ವ ಹೇಳಿದೆ. ಹೀಗೆ ವ್ಯಾಖ್ಯಾನಿಸುವರು.

ಕೇವಲಪದಕ್ಕೆ ಹಿಂದೆ ಸ್ವತಂತ್ರ ಎಂದು ಅರ್ಥಮಾಡಿರುವುದರಿಂದ ಯಾವುದು ಮೊದಲು ಸ್ವತಂತ್ರವಲ್ಲ, ಆಮೇಲೆ ಸ್ವತಂತ್ರವಲ್ಲ, ಅದು ಈಗ ಸ್ವತಂತ್ರವಲ್ಲ ಎಂದರ್ಥ ಮಾಡಿದರೆ ಏನೂ ತಪ್ಪಾಗಲಾರದು. ಜಗತ್ತು ಅಸ್ವತಂತ್ರವೇ ಆಗಿದೆ. ಆದರೆ ಸತ್ಯಂ ನ ಎಂದು ಅನ್ವಯ ಎಲ್ಲೆಡೆ ಮಾಡಿದರೆ ಜಗತ್ತು ಮಿಥ್ಯಾ ಎಂದು ಹೇಳಿದಂತಾಗುವುದು. ಕಾರಣ ಇಲ್ಲಿ ಅಪೇಕ್ಷಿತ ಸತ್ಯಶಬ್ದಾರ್ಥವನ್ನು ಪ್ರಮಾಣದಿಂದ ಹೇಳುವರು-

**ತಾತ್ಪರ್ಯ- ಸ್ವಾತಂತ್ರ್ಯಮೇವ ಸತ್ಯತ್ವಂ ವಿಷ್ಣೋರನ್ಯಸ್ಯ ಸತ್ಯತಾ ।**
**ಪ್ರವಾಹತಃ ಸದಾಸ್ತಿತ್ವಂ ಪುಂಪ್ರಕೃತ್ಯೋಃ ಸದಾಽಸ್ತಿತಾ । -ಇತಿ ವಸ್ತುತತ್ವೇ ।**

ಶ್ರೀಹರಿಗೆ ಸರ್ವಸ್ವಾತಂತ್ರ್ಯವೇ ಸತ್ಯತ್ವವು. ಉಳಿದ ಅನಿತ್ಯಪ್ರಪಂಚಕ್ಕೆ ಪ್ರವಾಹತಃ ಸದಾ ಅಸ್ತಿತ್ವವೇ ಸತ್ಯತ್ವವು, ಜೀವ, ಪ್ರಕೃತಿ, ಮುಂತಾದ ನಿತ್ಯ ವಸ್ತುಗಳಿಗೆ ಸ್ವರೂಪತಃ ಸದಾ ಅಸ್ತಿತ್ವವೇ ಸತ್ಯತ್ವವು. ಹೀಗೆ ಅರ್ಥ ಹೇಳಿದ್ದರಿಂದ ಸತ್ಯಂ ನ ಎಂದರೆ ಸ್ವತಂತ್ರಂ ನ ಎಂದರ್ಥವಾಗುವುದರಿಂದ ವಿರೋಧವಿಲ್ಲ. ಮತ್ತು ಅಸ್ತಿತ್ವ ಒಪ್ಪಿದ್ದರಿಂದ ಮಿಥ್ಯಾತ್ವವಿಲ್ಲವೆಂದು ತಿಳಿಯಬೇಕು. ಇನ್ನೊಂದು ರೀತಿಯಿಂದಲೂ ಯೋಜಿಸುವರು.

**ತಾತ್ಪರ್ಯ- ಮಧ್ಯೇ ಚ ಕೇವಲಂ ನ ಇತಿ ಸಂಬಧ್ಯತೇ॥**

ಕೇವಲಂ ಎಂಬುದನ್ನು ಎಲ್ಲ ಕಡೆ ಅನ್ವಯ ಮಾಡದಿದ್ದರೂ ಪುರಸ್ತಾತ್ ಎಂದರೆ ಪ್ರಾಗಭಾವಪ್ರತಿಯೋಗಿ ಮುಂದೆ ಹುಟ್ಟುವುದು ಎಂದರ್ಥ-ವಾಗುವುದು.

ಪಶ್ಚಾತ್ ಅನಂತರ ಇಲ್ಲಿ ನ ಎಂದರೆ ನಾಶವಾಗುವುದು. ಎಂದರ್ಥವಾಗುವುದುರಿಂದ ಜಗತ್ಸತ್ಯತ್ವಕ್ಕೆ ಬಾಧಕವಿಲ್ಲ. ಆದರೆ ಮಧ್ಯೇ ಚ ಯತ್ ನ ಎಂಬಲ್ಲಿ ಕೇವಲಪದವು ಅವಶ್ಯ ಬೇಕೇ ಬೇಕು ಎಂದು ಭಾವ. ಇಲ್ಲವಾದರೆ ಮೂರುಕಾಲದಲ್ಲಿ ಇಲ್ಲ ಎಂದರ್ಥವಾಗಿ ಮಿಥ್ಯಾ

ಎಂದರ್ಥವಾಗುವುದು. ತಾವು ಹೇಳಿದ ಅರ್ಥದಲ್ಲಿ ಪ್ರಮಾಣ ಕೊಡುವರು-

**ತಾತ್ಪರ್ಯ-** ತತ್ ಸ್ವಾತಂತ್ರ್ಯೇಣ ನೈವಾಸ್ತಿ ಯದುತ್ಪತ್ತಿವಿನಾಶವತ್ ।
ಸ್ವಾತ್ರಂತ್ರ್ಯೇಣಾಸ್ತಿತಾ ತಸ್ಯ ಯತ್‌ಸತ್ತಾ ಜ್ಞಾನದಂ ಸದಾ । ಇತಿ ವೈಭವೇ ।

ಯಾವ ಜಗತ್ತು ಉತ್ಪತ್ತಿ ನಾಶವುಳ್ಳದ್ದೋ ಅದು ಸ್ವತಂತ್ರವಾಗಿ ಇಲ್ಲ. ಯಾವ ಪರಮಾತ್ಮ ಎಂಬ ವಸ್ತುವು ಪ್ರಪಂಚಕ್ಕೆ ಸತ್ತಾಜ್ಞಾನಾದಿಗಳನ್ನು ನೀಡುವುದು ಅದಕ್ಕೇನೇ ಸ್ವಾತಂತ್ರ್ಯ ಅಸ್ತಿತ್ವ ಎಂದು ವೈಭವದಲ್ಲಿ ಹೇಳಿದೆ.

ಇದುವರೆಗೆ ಸತ್ಯತ್ವವೆಂದರೆ ಸ್ವಾತಂತ್ರ್ಯ ಅದನ್ನೇ ಜಗತ್ತಿಗೆ ನಿಷೇಧಿಸುವುದು ಹೊರತು ಅಸ್ತಿತ್ವವನ್ನಲ್ಲ ಎಂದು ಹೇಳಿದರು. ಈಗ ಅಸ್ತಿತ್ವವನ್ನು ನಿಷೇಧಿಸಿದರೂ ತೊಂದರೆ ಇಲ್ಲ ಎಂದು ಹೇಳುವರು-

**ತಾತ್ಪರ್ಯ-** ಜಗತೋ ನಾಸ್ತಿತಾ ಸೈವ ಯಾ ಪರಾಧೀನತಾ ಸದಾ ।
ಅಭಾವಸ್ತು ಕುತಸ್ತಸ್ಯ ಸದ್ವಿಭಾತೀಹ ಸರ್ವದಾ ॥ ಇತಿ ಪ್ರಾಕಾಶ್ಯೇ ।

ಸರ್ವದಾ ಪರಾಧೀನವಾಗಿರುವುದೇ ನಾಸ್ತಿತ್ವವು. ಅದು ಜಗತ್ತಿಗೆ ಇದ್ದೇ ಇದೆ. ಯಾವುದು ಸರ್ವದಾ ಇದೆ ಎಂದು ತೋರುವುದು ಅದು ನಾಸ್ತಿ ಎಂದರೆ ಇಲ್ಲವೇ ಇಲ್ಲ ಎಂಬರ್ಥ ಹೇಗಾದೀತು. ಕಾರಣ ಪರಾಧೀನತೆಯಲ್ಲೇ ಪರ್ಯವಸಾನಗೊಳ್ಳುವುದು ಎಂದು ಭಾವ.॥೨೨॥

ಅಸತ್ತಾದರೆ ತೋರಬಾರದು ಸತ್ತಾದರೆ ಬಾಧಿಸಬಾರದು. ಜಗತ್ತಾದರೂ ತೋರುತ್ತದೆ. ಆದ್ದರಿಂದ ಅಸತ್ ಅಲ್ಲ. ಬಾಧಿತವಾಗುವುದರಿಂದ ಸತ್ ಅಲ್ಲ ಸದಸದ್ವಿಲಕ್ಷಣ ಎಂಬುದು ಅನ್ಯಥಾನುಪಪತ್ತಿಯಿಂದ ಸಿದ್ಧವಾಗುವುದರಿಂದ ಅನಿರ್ವಚನಿಯತ್ವವನ್ನು ನಿರಾಕರಿಸಲಾಗದು. ಎಂದು ಶಂಕಿಸಿ ಪ್ರಪಂಚ ಅಸತ್ ಎಂದು ಹೇಳುವ ಸಿದ್ಧಾಂತಿಗಳಿಗೆ ಸ್ವಾತಂತ್ರ್ಯವಿಲ್ಲವೆಂದು ಅಭಿಪ್ರಾಯವೇ ಹೊರತು ಪ್ರತೀತಿ ಕೂಡುವುದಿಲ್ಲ ಆದ್ದರಿಂದ ಅದು ಅನಿರ್ವಚನೀಯವೆಂದು ಹೇಳುವುದಲ್ಲ ಅಸತ್ತಿಗೂ ಪ್ರತೀತಿ ಇದ್ದೇ ಇದೆ. ಸತ್ತಾಗಿದ್ದರೂ ಅನಿತ್ಯವಾದ್ದರಿಂದ ನಾಶವಾಗುವ ಸಾಧ್ಯತೆ ಇದೆ. ಕಾರಣ ಬಾಧಾನುಪಪತ್ತಿಯೂ ಇಲ್ಲ ಎಂದು ಹೇಳುವರು. (ಅದ್ವೈತಮತ) ಅಥವಾ ಸದಸದ್ವಿಲಕ್ಷಣವಲ್ಲವೆಂದರೆ ಶೂನ್ಯವಾದಿಗಳು ಹೇಳುವಂತೆ ಜಗತ್ತು ಅಸತ್ ಎಂಬುದನ್ನು ನಿರಾಕರಿಸುವರು. ಅಥವಾ ಜಗತ್ತು ಸ್ವತಂತ್ರವೆಂಬುದು

ಅಜ್ಞಾನಿಗಳು ತಿಳಿಯುವುದು. ಜ್ಞಾನಿಗಳು ಜಗತ್ತು ಬ್ರಹ್ಮಾಧೀನವೆಂದು ತಿಳಿಯುವರು ಎಂದು ಈ ಶ್ಲೋಕದಲ್ಲಿ ಹೇಳುವರು-

**ಅವಿದ್ಯಮಾನೋಽಪ್ಯವಭಾಸತೇ ಯೋ**
**ವೈಕಾರಿಕೋ ರಾಜಸಸರ್ಗ ಏಷಃ ।**
**ಬ್ರಹ್ಮ ಸ್ವಯಂಜ್ಯೋತಿರತೋ ವಿಭಾತಿ**
**ಬ್ರಹ್ಮೇಂದ್ರಿಯಾರ್ಥಾತ್ಮವಿಕಾರಚಿತ್ರಮ್** ॥೨೩॥

**ಯಃ** ಯಾವ ಬ್ರಹ್ಮನಿಂದ ಭಿನ್ನವಾದ **ವೈಕಾರಿಕಃ** ವಿಕಾರಯೋಗ್ಯವಾದ **ರಾಜಸಸರ್ಗಃ ಏಷಃ** ರಜೋಗುಣ ಸಂಬಂಧಿಯಾದ ಉತ್ಪತ್ತಿಯುಳ್ಳ ಈ ಪ್ರಪಂಚವು **ಅವಿದ್ಯಮಾನಃ ಅಪಿ** ಅಸತ್ತಾಗಿದ್ದರೂ ಅಂದರೆ ಅಸ್ವತಂತ್ರ-ವಾಗಿದ್ದರೂ **ಅವಭಾಸತೇ** ಅಜ್ಞಾನಿಗಳಿಗೆ ಸ್ವತಂತ್ರವೆಂದು ತೋರುವುದು. ಏಕೆಂದರೆ **ಬ್ರಹ್ಮ** ಶ್ರೀಹರಿಯೊಬ್ಬನೇ **ಸ್ವಯಂಜ್ಯೋತಿಃ** ಸ್ವಪ್ರಕಾಶನು, ಸ್ವತಂತ್ರನು ಎಂದು **ವಿಭಾತಿ** ಜ್ಞಾನಿಗಳಿಗೆ ತೋರುವನು **ಬ್ರಹ್ಮೇಂದ್ರಿ-ಯಾರ್ಥಾತ್ಮವಿಕಾರಚಿತ್ರಂ** ಬ್ರಹ್ಮ, ಮೂಲಪ್ರಕೃತಿಯು, **ಇಂದ್ರಿಯ** ಶ್ರೋತ್ರಾದಿ ಇಂದ್ರಿಯಗಳು, **ಅರ್ಥ** ಶಬ್ದಾದಿ ವಿಷಯಗಳು, **ಆತ್ಮಾ** ಜೀವನು **ವಿಕಾರ** ಇಂದ್ರಿಯಾಭಿಮಾನಿದೇವತೆಗಳು ಇವೇ ಮೊದಲಾದ **ಚಿತ್ರಂ** ವಿಚಿತ್ರವಾದ ಜಗತ್ತು **ಅತಃ** ಶ್ರೀಹರಿಯಿಂದಲೇ **ವಿಭಾತಿ** ತೋರುವುದು ಎಂದು ಭಾವ. ''**ತಸ್ಯ ಭಾಸಾ ಸರ್ವಮಿದಂ ವಿಭಾತಿ**'' ಎಂದಿರುವುದರಿಂದ ಅವನ ಅಧೀನ-ವಾಗಿಯೇ ತೋರುವುದು. ಈ ಶ್ಲೋಕದಲ್ಲಿ ಜಗತ್ತು ಇಲ್ಲವೆಂದು ಹೇಳಿದಂತೆ ತೋರುವುದು ಕಾರಣ ವ್ಯಾಖ್ಯಾನಿಸುವರು-

**ತಾತ್ಪರ್ಯ-** ಅವಿದ್ಯಮಾನತಾ ನಾಮ ಜಗತಃ ಪರತಂತ್ರತಾ ।
ಯಥಾಽಶಕ್ತಸ್ತು ಪುತ್ರಾದಿರಸನ್ನಿತ್ಯುಚ್ಯತೇ ಜನೈಃ ॥ ಇತಿ ವಿವೇಕೇ ।

ಅತಃ ಬ್ರಹ್ಮಣ ಏವ ವಿಭಾತಿ। ದ್ವಿತೀಯಬ್ರಹ್ಮ ಪ್ರಕೃತಿಃ। ಆತ್ಮಾ ಜೀವಃ ಪ್ರಕೃತೀಂದ್ರಿಯವಿಷಯಜೀವಾದಿವಿಚಿತ್ರಂ ಜಗತ್ ಬ್ರಹ್ಮತ ಏವ ವಿಭಾತೀತ್ಯರ್ಥಃ।

ಅಶಕ್ತರಾದ ಮಕ್ಕಳು ಮುಂತಾದವರನ್ನು ಜನರು ಅಸತ್ ಇದ್ದರೂ ಇಲ್ಲದಂತೆ ಎಂದು ಕರೆಯುವಂತೆ ಜಗತ್ತು ಅವಿದ್ಯಮಾನವೆಂದರೆ ಪರಾಧೀನ ವೆಂದರ್ಥವೆಂದು ವಿವೇಕದಲ್ಲಿ ಹೇಳಿದೆ.

**ಅತಃ ಬ್ರಹ್ಮ ಸ್ವಯಂಜ್ಯೋತಿಃ** ಎಂದು ಹೇಳಿದ ಪರಬ್ರಹ್ಮನಿಂದಲೇ ಜಗತ್ತು ತೋರುವುದು.

ಬ್ರಹ್ಮನು ಸ್ವಯಂಜ್ಯೋತಿ ಎಂಬಲ್ಲಿ ಬ್ರಹ್ಮ ಎಂದರೆ ವಿಷ್ಣುವೇ, ಬ್ರಹ್ಮೇಂದ್ರಿಯಾರ್ಥ ಎಂಬಲ್ಲಿ ಎರಡನೇ ಸಲ ಹೇಳಿದ ಬ್ರಹ್ಮಶಬ್ದಕ್ಕೆ ಪ್ರಕೃತಿ ಎಂದರ್ಥ.

ಆತ್ಮಾ ಎಂದರೆ ಜೀವನು. ಪ್ರಕೃತಿ, ಇಂದ್ರಿಯ, ವಿಷಯ, ಜೀವ ಮೊದಲಾದ ವಿಚಿತ್ರವಾದ ಜಗತ್ತು ಬ್ರಹ್ಮನಿಂದಲೇ ತೋರುವುದು ಎಂದು ಭಾವ.।।೨೩।।

ಈ ರೀತಿಯಾಗಿ ಪರಾಪರತತ್ವಗಳನ್ನು ತಿಳಿದು ಮುಂದೆ ಮಾಡಬೇಕಾದ ಕರ್ತವ್ಯ ಹೇಳುವರು-

**ಏವಂ ಸ್ಫುಟಂ ಬ್ರಹ್ಮ ವಿವಿಚ್ಯ ಹೇತುಭಿಃ**
**ಪರಾಪವಾದೇನ ವಿವೇಕಬುದ್ಧ್ಯಾ ।**
**ಛಿತ್ವಾಽಽತ್ಮಸಂದೇಹಮುಪಾರಮೇತ-**
**ಸ್ವಾನಂದತುಷ್ಟೋಽಖಿಲಕಾಮುಕೇಭ್ಯಃ** ।।೨೪।।

**ಏವಂ** ಇದುವರೆಗೆ ಹೇಳಿದ ಪ್ರಕಾರ **ವಿವೇಕಬುದ್ಧ್ಯಾ** ವೈಲಕ್ಷಣ್ಯಜ್ಞಾನದಿಂದ ಅನುಗೃಹೀತವಾದ **ಹೇತುಭಿಃ** ನಿರ್ದುಷ್ಟವಾದ ಯುಕ್ತಿಗಳಿಂದ **ಪರಾಪವಾದೇನ ಪರಸ್ಯ** ಉತ್ತಮವಾದ ಶ್ರೀಹರಿಗೆ **ಅಪವಾದೇನ** ಜಗದಭೇದವಿಲ್ಲವೆಂದು ಅಥವಾ **ಪರಸ್ಯ** ಜಗತ್ತಿಗೆ ಬ್ರಹ್ಮಾಭೇದವಿಲ್ಲವೆಂದು ತಿಳಿದು (ನೇತಿ ನೇತಿ ಎಂದು ಶ್ರುತಿ ಇದೆ.) **ಸ್ಫುಟಂ** ಸ್ಪಷ್ಟವಾಗಿ **ಬ್ರಹ್ಮ** ಶ್ರೀಹರಿಯನ್ನು **ವಿವಿಚ್ಯ** ಪ್ರತ್ಯೇಕವಾಗಿ (ಅಸ್ವತಂತ್ರ ಜೀವನಿಂದ ಭಿನ್ನವೆಂದು) ತಿಳಿದು **ಆತ್ಮಸಂದೇಹಂ** ಮನಸ್ಸಿನಲ್ಲಿರುವ ಸಂಶಯವನ್ನು **ಛಿತ್ವಾ** ಕಳೆದುಕೊಂಡು **ಅಖಿಲಕಾಮುಕೇಭ್ಯಃ** ವಿಪುಲವಾದ ಆಶೆಯನ್ನು ಹುಟ್ಟಿಸುವ ವಿಷಯಗಳಿಂದ **ಸ್ವಾನಂದತುಷ್ಟಃ ಸನ್** ಸ್ವರೂಪಾನಂದಾನುಭವದಿಂದ ಅಲಂಬುದ್ಧಿ ಉಳ್ಳವನಾಗಿ **ಉಪಾರಮೇತ** ವಿರಕ್ತನಾಗಬೇಕು. ಇದರಿಂದ ಜೀವಬ್ರಹ್ಮರ ಭೇದಜ್ಞಾನವೇ ಮುಕ್ತಿಸಾಧನ ಹೊರತು ಅಭೇದಜ್ಞಾನವಲ್ಲ. ಕಾರಣ ಶ್ರೇಯೋಽರ್ಥಿಗಳು ಅಭೇದಮತ-ವನ್ನು ಅವಶ್ಯ ವರ್ಜಿಸಬೇಕು ಎಂದು ತಿಳಿಸಿದಂತಾಯಿತು.।।೨೪।।

ಪರಾಪವಾದದ ರೀತಿಯನ್ನು ತಿಳಿಸುವರು-

**ನಾತ್ಮಾ ವಪುಃ ಪಾರ್ಥಿವಮಿಂದ್ರಿಯಾಣಿ**
**ದೇವಾ ಹ್ಯಸುರ್ವಾಯುಜಲಂ ಹುತಾಶಃ ।**
**ಮನೋಽನ್ನಮಾತ್ರಂ ಧಿಷಣಾ ಚ ಸತ್ತ್ವಮ್**
**ಅಹಂಕೃತಿಃ ಖಂ ಕೃತಿರರ್ಥಸಾಮ್ಯಮ್ ॥೨೫॥**

**ಆತ್ಮಾ** ಪರಮಾತ್ಮನು **ಪಾರ್ಥಿವಂ ವಪುಃ** ನ ಪಾರ್ಥಿವ ಶರೀರವಲ್ಲ **ಆತ್ಮಾ** ಶ್ರೀಹರಿಯು **ಇಂದ್ರಿಯಾಣಿ** ನ ಇಂದ್ರಿಯಗಳಲ್ಲ **ದೇವಾಃ** ನ ಇಂದ್ರಿಯಾಭಿಮಾನಿ ದೇವತೆಗಳೂ ಪರಮಾತ್ಮನಲ್ಲ **ವಾಯುಜಲಂ ಹುತಾಶಃ ಅಸುಃ ಅಪಿ ನ** ವಾಯುವಿಗೆ ಆಧಾರವಾದ ಜಲ, ಅಗ್ನಿಗಳಿಂದ ನಿರ್ಮಿತವಾದ ಶರೀರವಾಗಲಿ ಮುಖ್ಯಪ್ರಾಣನಾಗಲಿ ಪರಮಾತ್ಮನಲ್ಲ ಅಥವಾ ವಾಯು, ಜಲ, ಅಗ್ನಿ ಈ ಭೂತತ್ರಯಾತ್ಮಕ ಶರೀರ ಉಳ್ಳ ಮುಖ್ಯಪ್ರಾಣನಲ್ಲ ಹೀಗೂ ಅರ್ಥ ಮಾಡಬಹುದು. **ಮನಃ** ನ ಮನಸ್ಸು ಅಲ್ಲ **ಅನ್ನಮಾತ್ರಂ** ನ ಪೃಥಿವಿಯಾಗಲಿ ಪಂಚತನ್ಮಾತ್ರಾಗಳಾಗಲಿ ಅಲ್ಲ. **ಧಿಷಣಾಚ ನ** ಅಹಂಕಾರಜನ್ಯವಾದ (ಪ್ರಾಕೃತ) ಬುದ್ಧಿಯೂ ಅಲ್ಲ **ಸತ್ತ್ವಂ** ನ ಮೂಲಬುದ್ಧಿಯೂ ಅಲ್ಲ **ಖಂ** ನ ಮಹಾಕಾಶವೂ ಅಲ್ಲ **ಅಹಂಕೃತಿಃ** ನ ಅಹಂಕಾರತತ್ವವೂ ಅಲ್ಲ. **ಕೃತಿಃ** ನ ದರ್ಶನಾದಿಕ್ರಿಯೆಯೂ ಅಲ್ಲ. **ಅರ್ಥಸಾಮ್ಯಂ** ನ ನಾನು ಮಾಡುತ್ತೇನೆ, ನಾನು ಕೇಳುತ್ತೇನೆ, ನಾನು ಮುಟ್ಟುತ್ತೇನೆ, ಮುಂತಾಗಿ ಎಲ್ಲ ಅರ್ಥದಲ್ಲಿಯೂ ಅಭಿಮಾನವು ಸಮಾನವಾಗಿರುವುದರಿಂದ ಅರ್ಥಸಾಮ್ಯವೆನಿಸುವ ಅಹಂಕಾರವೆಂಬ ಅಭಿಮಾನ ವಿಶೇಷವೂ **ಆತ್ಮಾ** ನ ಪರಮಾತ್ಮನಲ್ಲ.॥೨೫॥

ಈ ಶ್ಲೋಕವು ಮೇಲ್ನೋಟಕ್ಕೆ ಯಾವ ಜೀವಾದಿಪ್ರಪಂಚವೂ ಇಲ್ಲವೆಂದು ಹೇಳುವಂತೆ ಕಾಣುವುದು. ವಸ್ತುತಃ ಇಲ್ಲಿ ಎಲ್ಲ ವಸ್ತುಗಳಿಂದ ಭೇದ ಹೇಳುವರು. ವಾಯುಜಲಂ ಹುತಾಶಃ ಎಂಬಲ್ಲಿ ಯಾರಿಂದ ಭೇದ ಹೇಳುವರು ತಿಳಿಯುವುದಿಲ್ಲ. ಅರ್ಥಸಾಮ್ಯ ಶಬ್ದಾರ್ಥವಾಗುವುದಿಲ್ಲ. ಕಾರಣ ಅಭಿಪ್ರೇತ ಅರ್ಥವನ್ನು ಹೇಳುವರು-

**ತಾತ್ಪರ್ಯ**- ವಾಯುರೇವ ಸ್ವಯಂಪ್ರಾಣಃ ತತ್ರಸ್ಥೇ ಚೋದತೇಜಸೀ ।
ಉದೇನ ತೇಜಸಾ ಚೈವ ಪ್ರಾಣಸ್ಯ ಹಿ ಕೃತಂ ವಪುಃ ॥

-ಇತಿ ಪ್ರಕಾಶಿಕಾಯಾಮ್

ವಾಯುಜಲಂಹುತಾಶಃಎಂಬಲ್ಲಿವಾಯುಪದದಿಂದಮುಖ್ಯಪ್ರಾಣನನ್ನು ಸ್ವೀಕರಿಸಬೇಕು. ಅವನಲ್ಲಿರುವ ನೀರು ಅಗ್ನಿಗಳನ್ನು ಜಲ ಹುತಾಶ ಶಬ್ದಗಳಿಂದ ತೆಗೆದುಕೊಳ್ಳಬೇಕು ಇದರ ಉಪಯೋಗವೇನು ಅಂದರೆ ಜಲ ತೇಜಸ್ಸುಗಳಿಂದ ಮುಖ್ಯಪ್ರಾಣನ ಶರೀರವು ನಿರ್ಮಿಸಲ್ಪಟ್ಟಿದೆ ಎಂದು ಪ್ರಕಾಶಿಕೆಯಲ್ಲಿ ಹೇಳಿದೆ.

ವಾಯುವಿನ ಶರೀರೋಪಾದಾನತ್ವೇನ ಅವುಗಳನ್ನು ಸ್ವೀಕರಿಸಬೇಕು. ಅಂದರೆ ಬ್ರಹ್ಮಾಂಡದ ಹೊರಗೆ ಪಂಚಭೂತಗಳು ಹುಟ್ಟುವ ಮೊದಲು ಮುಖ್ಯಪ್ರಾಣನು ಯಾವಾಗ ಜನಿಸಿದನೋ ಆವಾಗ ಪ್ರಕೃತ್ಯಾತ್ಮಕಮೂಲ ಜಲ ತೇಜಸ್ಸುಗಳಿಂದ ಅವನ ಶರೀರ ಉತ್ಪನ್ನವಾಯಿತು. ಬ್ರಹ್ಮಾಂಡದ ಒಳಗೆ, ಭೂತೋತ್ಪತ್ತಿಯ ನಂತರ ಉತ್ಪನ್ನವಾದಾಗ ಭೂತತ್ರಯನಿರ್ಮಿತ-ಶರೀರವು ಅವರಿಗೆ ಇದೆ. ಇಲ್ಲಿ ವಾಯುಶಬ್ದದಿಂದ ಭೂತವಾಯುವನ್ನು ಸ್ವೀಕರಿಸಿಲ್ಲ. ಮುಖ್ಯಪ್ರಾಣನನ್ನು ತೆಗೆದುಕೊಂಡಿದೆ. ಮತ್ತು ಜಲ ಹುತಾಶ ಶಬ್ದದಿಂದ ಮೂಲ ಜಲ ನೆಲಗಳನ್ನು ಹೇಳಿದೆ. ಈ ಪಕ್ಷದಲ್ಲಿ ಭೂತಗಳ ಸುದ್ದಿಯೇ ಇಲ್ಲ. ಅಪೂರ್ವತತ್ವವನ್ನು ತಿಳಿಸಲು ಆಚಾರ್ಯರು ಈ ಅರ್ಥ ಮಾಡಿರುವರು ಎಂದು ತಿಳಿಯಬೇಕು. ರೀತ್ಯಂತರದಿಂದ ವ್ಯಾಖ್ಯಾನಿಸುವರು-

**ಪ್ರಾಣಸ್ಯ ವಾಯುರೂಪಸ್ಯ ಭೂತತ್ರಯಕೃತಂ ವಪುಃ ।**
**ತತೋ ಹಿ ಪಾರ್ಥಿವಂ ನಾತ್ರ ಖಂ ಚಾತ್ಯಲ್ಪಮುದಾಹೃತಮ್ ॥**
**–ಇತಿ ಸಂಧಾರಣೇ ।**

ಅಸುಶಬ್ದದಿಂದ ವಾಚ್ಯರಾದ ಪ್ರಾಣದೇವರಿಗೆ ಶರೀರದಲ್ಲಿ ಪಾರ್ಥಿವ ಅಂಶವಿಲ್ಲದಿರುವುದರಿಂದ ಆಕಾಶವು ಅತ್ಯಲ್ಪವಿರುವುದರಿಂದ ವಾಯು, ಜಲ, ಅಗ್ನಿಗಳೆಂಬ ಭೂತತ್ರಯ ಶರೀರ ಹೇಳಲ್ಪಟ್ಟಿದೆ. ಕಾರಣ ಅಸುಃ ವಾಯು ಜಲ, ಹುತಾಶಃ ಎಂದು ಅನ್ವಯಿಸಿ ಅರ್ಥ ತಿಳಿಯಬೇಕು.

ಧಿಷಣಾಶಬ್ದದಿಂದ ಬುದ್ಧಿಯನ್ನು ಹೇಳಿರುವುದರಿಂದ ಮತ್ತೆ ಸತ್ವಶಬ್ದದಿಂದ ಬುದ್ಧಿಯನ್ನು ಹೇಳಿದರೆ ಪುನುರುಕ್ತಿ ಬರುವುದು ಕಾರಣ ವ್ಯಾಖ್ಯಾನಿಸುವರು-

ಮಹತ್ತತ್ವಜನ್ಯವಾದ ಬುದ್ಧಿತತ್ವವು (ಸರಸ್ವತಿಯಿಂದ ಅಭಿಮನ್ಯಮಾನ-ವಾದುದು ಸತ್ವಶಬ್ದದಿಂದ ಹೇಳಲ್ಪಟ್ಟಿದೆ. ಅಹಂಕಾರಜನ್ಯವಾದ ಬುದ್ಧಿಯು

ಉಮಾ ಅಭಿಮನ್ಯಮಾನವಾದುದು. ಧಿಷಣಶಬ್ದದಿಂದ ಹೇಳಲ್ಪಟ್ಟಿದೆ. ಕಾರಣ ಪುನರುಕ್ತಿ ಇಲ್ಲವೆಂದು ಭಾವ. (ಬುದ್ಧಿಃ ಪ್ರಾಣಸ್ತು ತೈಜಸಃ ಎಂದಿದೆ.)

ಅರ್ಥಸಾಮ್ಯ ಶಬ್ದಾರ್ಥ ಹೇಳಿ ಅನ್ವಯ ತಿಳಿಸುವರು-

**ತಾತ್ಪರ್ಯ- ಅಹಂ ಶೃಣೋಮಿ, ಅಹಂ ಸ್ಪೃಶಾಮಿ, ಅಹಂ ಪಶ್ಯಾಮಿ, ಇತಿ ಸರ್ವಾರ್ಥೇಷು ಸಮತ್ವಾತ್ ಅಹಂಕಾರಃ ಅರ್ಥಸಾಮ್ಯಮ್ ।**

ಹೀಗೆ ವ್ಯಾಖ್ಯಾನಿಸಿದ್ದರಿಂದ ಇದಕ್ಕೆ ಅಹಂಕೃತಿ ಎಂಬುದರಿಂದ ಅನ್ವಯ ತಿಳಿಸಿದಂತಾಯಿತು. ಈ ವಿಷಯದಲ್ಲಿ ಪ್ರಮಾಣ ಹೇಳುವರು-

**ತಾತ್ಪರ್ಯ- ನ ದೇಹೋ ನೇಂದ್ರಿಯಪ್ರಾಣಮನೋಬುದ್ಧ್ಯಹಮಾದಯಃ।**
**ವಿಷ್ಣುಶ್ಚಿದಾನಂದತನುಃ ಸ ಹಿ ಜೀವಾಧಿಪಃ ಸದಾ । -ಇತಿ ಸತ್ತತ್ವೇ**

ನಾನು ಕೇಳುತ್ತೇನೆ, ನಾನು ಮುಟ್ಟುತ್ತೇನೆ, ನಾನು ನೋಡುತ್ತೇನೆ ಎಂದು ಎಲ್ಲಅರ್ಥಶಬ್ದವಾಚ್ಯವಾದವಿಷಯಗಳಲ್ಲಿಅಹಂಸಮಾನವಾಗಿರುವುದರಿಂದ ಅಹಂಕಾರವು, ಅರ್ಥಸಾಮ್ಯವೆನಿಸುತ್ತದೆ. ಚಿದಾನಂದಸ್ವರೂಪನಾದ ಶ್ರೀಹರಿಯು ದೇಹ, ಇಂದ್ರಿಯ, ಪ್ರಾಣ, ಮನಸ್ಸು, ಬುದ್ಧಿ, ಅಹಂಕಾರ, ಮುಂತಾದವುಗಳ ಸ್ವರೂಪನಲ್ಲ. ಜೀವರಿಗೆ ನಿಯಾಮಕನು. ಎಂದು ಸತ್ತತ್ತ್ವ ಗ್ರಂಥದಲ್ಲಿದೆ. ಜೀವಾಧಿಪ ಎಂದದ್ದರಿಂದ ಮೂಲದಲ್ಲಿ ಆತ್ಮಾ ಎಂದರೆ ಜೀವನಲ್ಲ. ಪರಮಾತ್ಮಾ ಎಂದು ಹೇಳಿದಂತಾಯಿತು.।।೨೫।।

ಇಂದ್ರಿಯಗಳನ್ನು ಭಗವಂತನಲ್ಲಿರಿಸುವುದರಿಂದ ಇರಿಸದಿರುವುದರಿಂದ ಶ್ರೀಹರಿಗೆ ಪ್ರೀತಿ-ಅಪ್ರೀತಿಗಳಾಗುವವು ಎಂದು ಹೇಳುವುದರಿಂದ ಇಂದ್ರಿಯ ಸಮಾಧಾನ ವಿಕ್ಷೇಪಗಳಿಂದ ಗುಣದೋಷಗಳು (ಲಾಭಹಾನಿ) ಇವೆಯೇನೋ ಎಂದರೆ ಇಲ್ಲವೆಂದು ಹೇಳುವರು-

**ಸಮಾಹಿತೈಃ ಕಃ ಕರಣೈರ್ಗುಣಾತ್ಮಭಿ-**
**ರ್ಗುಣೋ ಭವೇತ್ ತತ್ಸುವಿವಿಕ್ತಧಾಮ್ನಃ ।**
**ವಿಕ್ಷಿಪ್ಯಮಾಣೈರುತ ಕಿಂ ನು ದೂಷಣಂ**
**ಘನೈರುಪೇತೈರ್ವಿಗತೈ ರವೇಃ ಕಿಮ್ ।।೨೬।।**

**ಉಪೇತೈಃ** ಪ್ರಾಪ್ತವಾದ **ಘನೈಃ** ಮೋಡಗಳಿಂದಾಗಲಿ, **ವಿಗತೈಃ ವಾ** ಹೊಗಲ್ಪಟ್ಟ ಮೋಡಗಳಿಂದಾಗಲಿ **ರವೇಃ** ಸೂರ್ಯನಿಗೆ **ಕಿಂ** ಯಾವ ಸುಖ-ದುಃಖಗಳಾಗುವವು? ಯಾವುದೂ ಇಲ್ಲ. ಮೋಡ ಬಂದರೆ ನೆರಳಿನಿಂದ ಸುಖ ಹೋದರೇ ದುಃಖ ಇತರರಿಗೆ ಆಗುವವು ಹೇಗೋ ಹಾಗೆಯೆ **ತತ್ಸುವಿವಿಕ್ತಧಾಮ್ನಃ** ಇಂದ್ರಿಯಗಳಿಂದ ವಿಷಯಗಳಿಂದ ಭಿನ್ನವಾದ ಸ್ವರೂಪವುಳ್ಳ ಹರಿಗೆ **ಗುಣಾತ್ಮಭಿಃ** ವಿಷಯಾಸಕ್ತರಾದ ಜನರಿಂದ **ಸಮಾಹಿತೈಃ ಕರಣೈಃ** ಚಿತ್ತೈಕಾಗ್ರತೆಯಿಂದ ಇಡಲ್ಪಟ್ಟ ಇಂದ್ರಿಯಗಳಿಂದ **ಕಃ ಗುಣಃ** ಏನು ಲಾಭವಾಗುವುದಿದೆ? **ಉತ** ಮತ್ತು **ವಿಕ್ಷಿಪ್ಯಮಾಣೈಃ ಕಿಂ ನು ದೂಷಣಂ** ಹಾನಿಯಾಗುವುದಾದರೂ ಏನು? ಏನೂ ಇಲ್ಲ.॥೨೬॥

ಇದನ್ನೇ ವಿವರಿಸುವರು-

**ಯಥಾ ನಭೋ ವಾಯ್ವನಲಾಂಬುಭೂಗುಣೈ**
**ರ್ಗತಾಗತೈರ್ವಾ ತ್ರಿಗುಣೈರ್ನ ಸಜ್ಜತೇ।**
**ತಥಾಽಕ್ಷರಂ ಸತ್ತ್ವರಜಸ್ತಮೋಮಲೈ-**
**ರಸಂಗತಂ ಸಂಸೃತಿಹೇತುಭಿಃ ಪರಮ್** ॥೨೭॥

**ಯಥಾ** ಹೇಗೆ **ನಭಃ** ಆಕಾಶವು **ವಾಯ್ವನಲಾಂಬುಭೂಗುಣೈಃ** ಗಾಳಿ, ನೀರು, ಬೆಂಕಿ, ನೀರುಗಳ ಗುಣವಾದ ಸ್ಪರ್ಶ, ರೂಪ, ರಸಗಳಿಂದಾಗಲಿ **ಗತಾಗತೈಃ** ಅಲ್ಲಿ ತಿರುಗಾಡುವ ದೇಹವೇ ಮೊದಲಾದ ಭೂತಕಾರ್ಯಗಳ ಗುಣದಿಂದಾಗಲಿ **ತ್ರಿಗುಣೈಃ** ಸತ್ತ್ವಾದಿಗುಣಗಳಿಂದ **ನ ಸಜ್ಜತೇ** ಸಂಬದ್ಧವಾಗು-ವುದಿಲ್ಲವೋ **ತಥಾ** ಹಾಗೆಯೇ **ಪರಂ** ಗುಣಾತೀತನಾದ **ಅಕ್ಷರಂ** ನಾಶರಹಿತ-ನಾದ ಬ್ರಹ್ಮನು **ಸಂಸೃತಿಹೇತುಭಿಃ** ಸಂಸಾರಕಾರಣವಾದ **ಸತ್ತ್ವರಜಸ್ತಮೋಮಲೈಃ** ಸತ್ತ್ವಾದಿಗಳಿಂದಾಗಲಿ, ರಾಗಾದಿದೋಷಗಳಿಂದಾಗಲಿ, **ಅಸಂಗತಂ** ಅಸಂಬದ್ಧವಾಗಿದೆ ಇದರಿಂದ ನಿಸ್ಸಂಗವಾದ್ದರಿಂದ ಮನಃಸಮಾಧಾನ ಅಸಮಾಧಾನ-ಗಳಿಂದ ಶ್ರೀಹರಿಗೆ ಗುಣದೋಷವಿಲ್ಲದಿದ್ದರೂ ವಿಷಯಸಂಗದಿಂದ ಜೀವನಿಗೆ ಗುಣದೋಷಗಳುಂಟು ಎಂದು ಹೇಳಿದಂತಾಯಿತು.

**ತಥಾಪಿ ಸಂಗಃ ಪರಿವರ್ಜನೀಯೋ**
**ಗುಣೇಷು ಮಾಯಾರಚಿತೇಷು ತಾವತ್ ।**

**ಮದ್ಭಕ್ತಿಯೋಗೇನ ದೃಢೇನ ಯಾವತ್**
**ರಜೋ ನಿರಸ್ಯೇತ ತಮಃಕಷಾಯಮ್** ॥೨೮॥

**ತಥಾಪಿ** ಭಗವಂತನಿಗೆ ಗುಣದೋಷಗಳಿಲ್ಲದಿದ್ದರೂ **ಮಾಯಾರಚಿತೇಷು ಗುಣೇಷು** ಪ್ರಕೃತಿನಿರ್ಮಿತಗಳಾದ ವಿಷಯಗಳಲ್ಲಿ **ಸಂಗಃ** ಆಸಕ್ತಿಯು **ದೃಢೇನ** ಬಲವಾದ **ಮದ್ಭಕ್ತಿಯೋಗೇನ** ನನ್ನ ಭಕ್ತಿ ಎಂಬ ಉಪಾಯದಿಂದ **ಯಾವತ್** ಯಾವಾಗ ಎಲ್ಲಿಯವರೆಗೆ **ರಜಃ ತಮಃಕಷಾಯಂ** ರಜೋಗುಣ, ತಮೋಗುಣದಿಂದ ಉಂಟಾದ ಪಾಪವು, **ನಿರಸ್ಯೇತ** ಹೋಗುವುದೋ **ತಾವತ್** ಅಲ್ಲಿಯವರೆಗೆ **ಪರಿವರ್ಜನೀಯಃ** ಬಿಡಲ್ಪಡಬೇಕು. ಮುಕ್ತಿಯಾಗುವ-ವರೆಗೆ ವಿಷಯಾಸಕ್ತಿಯನ್ನು ಬಿಡಬೇಕು ಎಂದರ್ಥ.

೨೬-೨೭ ನೇ ಶ್ಲೋಕದಲ್ಲಿ ಪರಮಾತ್ಮನಿಗೆ ದೋಷವಿಲ್ಲವೆಂದು ಹೇಳಿ ಇಲ್ಲಿ ಅಸಂಗತವಾಗಿ ಏನು ಹೇಳುವರು ಎಂದು ತಿಳಿಯುವುದಿಲ್ಲ ಕಾರಣ ತಾತ್ಪರ್ಯ ಹೇಳುವರು-

**ತಾತ್ಪರ್ಯ- ಭಗವತಃ ಗುಣದೋಷಾಭಾವೇಽಪಿ ಜೀವಸ್ಯ ಸಂಗೋಽವರ್ಜನೀಯಃ ಏವ ಮುಕ್ತಿಪರ್ಯಂತಮ್ ।**

**ಸಮಾಹಿತೇನ ಜೀವೇನ ವಿಕ್ಷಿಪ್ತೇ ವಾ ನ ತು ಕ್ವಚಿತ್ ।**
**ವಿಶೇಷೋ ವಿದ್ಯತೇ ವಿಷ್ಣೋಸ್ತಥಾಪಿ ತು ಸಮಾಹಿತೇ ।**
**ಪ್ರೀತೋ ಭವತಿ ವೈ ನಿತ್ಯಂ ಸರ್ವಧರ್ಮಕೃತೋಽಪಿ ಚ ॥ -ಇತಿ ಪಾದ್ಮೇ ।**

ಭಗವಂತನು ಸರ್ವದಾ ನಿರ್ದೋಷನಾದುದರಿಂದ ಜೀವನು ಚಿತ್ತೈಕಾಗ್ರತೆ ಮಾಡುವುದರಿಂದ ಬಿಡುವುದರಿಂದ ಗುಣದೋಷಳೇನು ಇಲ್ಲ. ಆದರೆ ಮುಕ್ತಿಯಾಗುವವರೆಗೆ ಗುಣದೋಷಸಂಬಂಧವಿರುವುದರಿಂದ ಅವನು ಅವಶ್ಯವಾಗಿ ವಿಷಯಸಂಗವನ್ನು ಬಿಡಲೇಬೇಕು. ಇಲ್ಲವಾದರೆ ಮುಕ್ತಿಯು ದೊರೆಯಲಾರದು. ಮುಕ್ತಿಯಲ್ಲಿ ವಿಷಯಾನುಭವ ಪುರುಷಾರ್ಥವೇ ಆಗಿದೆ.

ಜೀವನಿಂದ ಇಂದ್ರಿಯಗಳನ್ನು ಭಗವಂತನಲ್ಲಿಡುವುದರಿಂದ ಬೇರೆ ವಿಷಯಗಳನ್ನು ಶ್ರೀಹರಿ ಬಿಡುವುದರಿಂದ ಶ್ರೀಹರಿಗೆ ಯಾವ ಅತಿಶಯವೂ ಇಲ್ಲ. ಆದರೂ ತನ್ನಲ್ಲಿ ಮನಸ್ಸಿಟ್ಟವರಲ್ಲಿಯೂ ತಾನು ಹೇಳಿದ ಧರ್ಮಾಚರಣೆ

ಮಾಡುವವರಲ್ಲಿ ಶ್ರೀಹರಿಯ ಪ್ರೀತಿಯುಂಟಾಗುವುದು. ಎಂದು ಪಾದ್ಮಪುರಾಣದಲ್ಲಿದೆ.

ಕಾರಣ ಶ್ರೀಹರಿಯ ಪ್ರೀತಿಗಾಗಿ ವಿರಕ್ತನಾಗಬೇಕು. ವಿಷಯಾಸಕ್ತ-ನಾದವನಿಗೆ ದೋಷ ಹೇಳುವರು-

**ಯಥಾಽಮಯೋಽಸಾಧು ಚಿಕಿತ್ಸಿತೋ ನೃಣಾಂ**
**ಪುನಃ ಪುನಃ ಸಂತುದತಿ ಪ್ರರೋಹನ್ ।**
**ಏವಂ ಮನೋಽಪಕ್ವಕಷಾಯಕರ್ಮ**
**ಕುಯೋಗಿನಂ ವಿಧ್ಯತಿ ಸರ್ವಸಂಗಮ್ ॥೨೯॥**

**ಯಥಾ** ಹೇಗೆ **ನೃಣಾಂ** ಜನರ, **ಅಸಾಧು ಚಿಕಿತ್ಸಿತಃ** ಚೆನ್ನಾಗಿ ಚಿಕಿತ್ಸೆ ಇಲ್ಲದಿರುವ **ಆಮಯಃ** ರೋಗವು **ಪುನಃ ಪುನಃ ಪ್ರರೋಹನ್** ಮತ್ತೆ ಮತ್ತೆ ಬೆಳೆದು **ಸಂತುದತಿ** ರೋಗಿಯನ್ನು ಪೀಡಿಸುವುದೋ **ಏವಂ** ಅದೇ ರೀತಿಯಾಗಿ **ಅಪಕ್ವಕಷಾಯಕರ್ಮ** ಪರಿಪಾಕ ಶೂನ್ಯವಾದ ಕರ್ಮಫಲವುಳ್ಳ (ಅನಿವೃತ್ತ-ವಾದ ಪಾಪ ಉಳ್ಳ) **ಮನಃ** ಮನಸ್ಸು **ಸರ್ವಸಂಗಂ ಸತ್** ಎಲ್ಲ ವಿಷಯಗಳಲ್ಲಿ ಆಸಕ್ತವಾಗಿ **ಕುಯೋಗಿನಂ** ಅಪಕ್ವ ಸಾಧನ ಉಳ್ಳ ಪುರುಷನನ್ನು **ವಿಧ್ಯತಿ** ಪೀಡಿಸುವುದು ಭಗವಂತನ ಧ್ಯಾನಕ್ಕೆ ವಿಘ್ನ ಮಾಡುವುದು. ಮತ್ತೆ ಮತ್ತೆ ವಿಷಯಾಭಿಲಾಷೆ ಹೆಚ್ಚುತ್ತಲೇ ಹೋಗುವುದು ಎಂದು ಭಾವ.॥೨೯॥

ಅಪರಿಪಕ್ವಯೋಗಿಗಳಿಗೆ ವಿಘ್ನಗಳೇ ಬರುವುದಾದರೆ ಯೋಗಪರಿಪಾಕ-ದಿಂದ ಭಗವಂತನ ಪ್ರಾಪ್ತಿ ಇಲ್ಲವೇ ಎಂದರೆ ಹೇಳುವರು-

**ಕುಯೋಗಿನೋ ಯೇ ವಿಹತಾ ಹ್ಯಂತರಾಯೈಃ**
**ಮನುಷ್ಯಭೂತೈಸ್ತ್ರಿದಶೋಪಸೃಷ್ಟೈಃ ।**
**ತೇ ಪ್ರಾಕೃತಾಭ್ಯಾಸಬಲೇನ ಭೂಯೋ**
**ಯುಂಜಂತಿ ಯೋಗಂ ನ ತು ಕರ್ಮತಂತ್ರಮ್ ॥೩೦॥**

**ತ್ರಿದಶೋಪಸೃಷ್ಟೈಃ** ದೇವತೆಗಳಿಂದ ಪ್ರೇರಿತವಾದ ಮನುಷ್ಯ, ಪುತ್ರ, ಮಿತ್ರ, ಕಲತ್ರರಿಂದ **ಭೂತೈಃ** ಜಲ-ಅನಿಲಗಳಿಂದ (ಅಥವಾ ದೇವತೆಗಳಿಂದ ಪ್ರಾಪ್ತವಾದ ವಿಷಯಗಳಿಂದ) ಆಧಿದೈವಿಕ, ಆಧ್ಯಾತ್ಮಿಕ, ಆಧಿಭೌತಿಕಗಳಾದ **ಅಂತರಾಯೈಃ** ವಿಘ್ನಗಳಿಂದ **ವಿಹತಾಃ** ಪೀಡಿತರಾಗಿ ಧ್ಯಾನಪರಿಪಾಕವನ್ನು

ಹೊಂದದಿರುವ **ಯೇ ಕುಯೋಗಿನಃ** ಅಪಕ್ವಯೋಗಿಗಳು ಯಾರಿರುವರೋ, **ತೇ** ಅವರು **ಪ್ರಾಕೃತಾಭ್ಯಾಸಬಲೇನ** ಹಿಂದಿನ ಜನ್ಮದಲ್ಲಿ ಮಾಡಿದ ಧ್ಯಾನಾ-ಭ್ಯಾಸದಿಂದ ಅಂದರೆ ಅದರ ಸಂಸ್ಕಾರಾತಿಶಯದಿಂದ **ಭೂಯಃ** ಮತ್ತೆ **ಯೋಗಂ ಯುಂಜಂತಿ** ಧ್ಯಾನವನ್ನು ಮಾಡುವರು. (ಪಶ್ಚಾತ್ ಮತ್ಪ್ರಸಾದೇನ ಮಾಂ ಆಪ್ನುವಂತಿ ಇತಿ ಶೇಷಃ) ನಂತರ ನನ್ನ ಪ್ರಸಾದದಿಂದ ನನ್ನನ್ನು ಹೊಂದುವರು. **ಕರ್ಮತಂತ್ರಂ ಯುಂಜಂತಿ ನ** ಕರ್ಮಯೋಗವನ್ನು ಮಾಡುವುದಿಲ್ಲ. ವಿಷಯಭೋಗಮಾಡಿದ ಸಂಸ್ಕಾರದಿಂದ ಪುನಃ ವಿಷಯಭೋಗಾಭಿಲಾಷೆ- ಯಿಂದ ಕರ್ಮಗಳನ್ನು ಮಾಡುವುದಿಲ್ಲ. ವಿರಕ್ತರಾಗುವರು. ವೈರಾಗ್ಯದಿಂದ ಪ್ರಾಪ್ತ ಭಕ್ತಿದಾರ್ಢ್ಯದಿಂದ ಪ್ರಸನ್ನನಾದ ನಾರಾಯಣನಿಂದ ಉದ್ಧೃತರಾಗುವರು.।।೩೦।।

ಕರ್ಮಯೋಗವನ್ನು ಮಾಡುವುದಿಲ್ಲ ಧ್ಯಾನವನ್ನು ಮಾಡುವರು ಎಂದು ಹೇಳಿದರು. ಇವೆರಡರಲ್ಲೂ ಸ್ವಾತಂತ್ರ್ಯವಿದೆಯೇ? ಪೂರ್ವಸಂಸ್ಕಾರ ಒಂದೇ ಕಾರಣವೇ? ಭಿನ್ನವಾದ ಕಾರಣವಿದೆಯೋ? ಅದು ಯಾವುದು ಎಂಬ ಪ್ರಶ್ನೆಯನ್ನು ಪರಿಹರಿಸುವರು-

**ಕರೋತಿ ಕರ್ಮ ಕ್ರಿಯತೇ ಚ ಜಂತುಃ**
**ಕೇನಾಪ್ಯಸೌ ಚೋದಿತ ಆನಿಪಾತಾತ್ ।**
**ನ ತತ್ರ ವಿದ್ವಾನ್ ಪ್ರಕೃತೌ ಸ್ಥಿತೋಽಪಿ**
**ನಿವೃತ್ತತೃಷ್ಣಃ ಸ್ವಸುಖಾನುಭೂತ್ಯಾ** ।।೩೧।।

ದುರ್ಘಟಭಾವದೀಪಿಕಾ ಪ್ರಕಾರ-

**ಕೇನಾಪಿ** ಯಾವನೊಬ್ಬನಿಂದ **ಕರ್ಮ** ಕ್ರಿಯೆಯು **ಕ್ರಿಯತೇ** ಸ್ವತಂತ್ರವಾಗಿ ಮಾಡಲ್ಪಡುವುದೋ **ಅಸೌ ಜಂತುಃ** ಈ ಚೇತನನು **ಕೇನಾಪಿ ಚೋದಿತಃ** ಯಾರಿಂದಲೋ ಪ್ರೇರಿತನಾಗಿ **ಕರ್ಮ** ಕೆಲಸಗಳನ್ನು **ಕರೋತಿ** ಮಾಡುವನು. ಅಂದರೆ ಸ್ವತಂತ್ರವಾಗಿ ಕಮ-ಕರ್ತೃವು ಶ್ರೀಹರಿಯೇ. ಜೀವನು ಅವನ ಪ್ರೇರಣೆಯಿಂದ ಕರ್ಮ ಮಾಡುವನು ಎಂದು ಭಾವ. ಇದರಿಂದ ಕ್ರಿಯತೇ ಎಂಬುದು ವ್ಯರ್ಥ ಎಂಬ ದೂಷಣೆ ನಿರಾಕೃತವಾಯಿತು.

ಕೇವಲ ಜಂತುಃ ಕೇನಾಪಿ ಚೋದಿತಃ ಕರ್ಮ ಕರೋತಿ ಎಂದಿಷ್ಟೇ

ಹೇಳಿದ್ದರೆ ಶ್ರೀಹರಿಗೆ ಕಾರಯಿತೃತ್ವವಿದೆಯೇ ಹೊರತು ಕರ್ತೃತ್ವವಿಲ್ಲ ಎಂದು ಭ್ರಾಂತಿ ಬಂದೀತು ಅದನ್ನು ನಿವಾರಿಸಲು ಕ್ರಿಯತೇ ಎಂದಿದ್ದಾರೆ ಎಂದು ಭಾವ.

**ಸುಧೀಂದ್ರರ ಪ್ರಕಾರ-**

**ಜಂತುಃ** ಅಜ್ಞಾನಿಯಾದ ಚೇತನನು **ಕರ್ಮ** ಕಾಮ್ಯಕರ್ಮವನ್ನು **ಆನಿಪಾತಾತ್** ಶರೀರ ಬೀಳುವವರಗೆ **ಕೇನಾಪಿ ಚೋದಿತಃ** ತನಗೆ ಇಚ್ಛೆ ಇಲ್ಲದಿದ್ದರೂ **ಅಸೌ** ಇವನು ಅದೃಷ್ಟಪ್ರೇರಕನಾದ ಅಂತರ್ಯಾಮಿಯಿಂದ ಪ್ರೇರಿತನಾಗಿ ಮಾಡುತ್ತಾನೆ **ಕೈಶ್ಚಿತ್** ಕೆಲವರಿಂದ **ಕರ್ಮ ಕ್ರಿಯತೇ** ಪೂರ್ವಾಭ್ಯಾಸ ಬಲದಿಂದ ಬುದ್ಧಿಪೂರ್ವಕ ಕರ್ಮವೇ ಮಾಡಲ್ಪಡುವುದು ಇದು ಅಜ್ಞಾನಿಗಳ ಸ್ಥಿತಿಯು **ವಿದ್ವಾನ್** ಈಶ್ವರನ ಸ್ವಾತಂತ್ರ್ಯಾದಿಗಳನ್ನು ತಿಳಿದವನು **ಪ್ರಕೃತೌ ಸ್ಥಿತೋऽಪಿ** ಲಿಂಗದೇಹಬಂಧವಿದ್ದರೂ **ತತ್ರ** ವಿಷಯ-ಭೋಗಸಾಧನವಾದ ಅಕಾಮ್ಯಕರ್ಮಗಳಲ್ಲಿ **ನ ಸಜ್ಜತೇ** ಆಸಕ್ತನಾಗುವುದಿಲ್ಲ. ಕಿಂತು **ಸ್ವಸುಖಾನುಭೂತ್ಯಾ** ಸ್ವತಂತ್ರಸುಖರೂಪನಾದ ಪರಮಾತ್ಮನ ಜ್ಞಾನದಿಂದ **ನಿವೃತ್ತತೃಷ್ಣಃ ವರ್ತತೇ** ಕಾಮ್ಯಕರ್ಮದ ಅಭಿಲಾಷೆ ಇಲ್ಲದೇ ಇರುವನು.

**ತಾಮ್ರಪರ್ಣಿ ಪ್ರಕಾರ-**

**ಜಂತುಃ ಕರ್ಮ ಕರೋತಿ** ಮನುಷ್ಯನು ಶುಭಾಶುಭ ಕರ್ಮ ಮಾಡುವನು. **ಅಸೌ** ಈ ಕರ್ಮ ಮಾಡುವ ಪುರುಷನು **ಕೇನಾಪಿ** ಯೋಗ್ಯತಾ ಮತ್ತು ಅದೃಷ್ಟನಿಯಾಮಕನಾದ ಶ್ರೀಹರಿಯಿಂದ **ಚೋದಿತಃ** ಪ್ರೇರಿತನಾಗಿ **ಕರೋತಿ** ಮಾಡುತ್ತಾನೆ. ಇದರಿಂದ ಪೂರ್ವವಾಸನಾದಿಂದ ಭಿನ್ನವಾದ ಸ್ವತಂತ್ರ ಕಾರಯಿತಾ (ಮಾಡಿಸುವವನು) ಇದ್ದಾನೆ ಎಂದಾಯಿತು. **ತತ್ರ** ಹೀಗಿರುವಾಗ **ಪ್ರಕೃತೌ ಸ್ಥಿತೋऽಪಿ** ಪ್ರಕೃತಿನಿರ್ಮಿತ ದೇಹದಲ್ಲಿ ಪೂರ್ವಾಭ್ಯಾಸವೆಂಬ ಸ್ವಭಾವದಲ್ಲಿದ್ದರೂ **ಸ್ವಸುಖಾನುಭೂತ್ಯಾ** ಸ್ವರೂಪಸುಖಾತ್ಮಕ ಭಗವಂತನ ಅನುಭವದಿಂದ ಅವನ ಪ್ರಸಾದದಿಂದ ವ್ಯಕ್ತವಾದ ತನ್ನ ಸ್ವರೂಪ ಸುಖಾನುಭವದಿಂದಲೂ **ನಿವೃತ್ತತೃಷ್ಣಃ** ವಿಷಯಾಭಿಲಾಷೆ ಇಲ್ಲದವನಾಗಿ **ಕೇನ** ಶ್ರೀಹರಿಯಿಂದ ಅವನ ಅನುಗ್ರಹದಿಂದ **ನ ಸಜ್ಜತೇ** ಬಂಧಕಕರ್ಮಗಳಲ್ಲಿ ಆಸಕ್ತನಾಗುವುದಿಲ್ಲ.

**ವಿಜಯಧ್ವಜರು ಶ್ರೀನಿವಾಸ ತೀರ್ಥರ ಪ್ರಕಾರ-**

**ಜಂತುಃ** ಯೋಗಿಯಾದ ಅಯೋಗಿಯಾದ (ಜ್ಞಾನಿ, ಅಜ್ಞಾನಿ) ಮನುಷ್ಯನು **ಕರ್ಮ ಕರೋತಿ** ಕಾರ್ಯಗಳನ್ನು ಮಾಡುವುದು ಪ್ರತ್ಯಕ್ಷಸಿದ್ಧ ಆದರೂ **ಕೇನಾಪಿ ಚೋದಿತಃ ಏವ ಕರೋತಿ** ಪ್ರೇರಿತನಾಗಿಯೇ ಮಾಡುತ್ತಾನೆ. ಅಂದರೆ **ಕ್ರಿಯತೇ ಕಾರ್ಯತೇ ಇತಿ ಯಾವತ್** ಯಾವನಿಂದಲೋ ಕರ್ಮವು ಮಾಡಿಸಲ್ಪಡವುದು ಎಂದರ್ಥ.

ಆ ಮಾಡಿಸುವವನೇ ಶ್ರೀಹರಿಯು (ವಾಸನಾತಿರಿಕ್ತ ಪ್ರಯೋಜಕಕರ್ತಾ ಇದ್ದಾನೆ ಎಂದಂತಾಯಿತು)

''**ಏಷ ಏವ ಸಾಧುಕರ್ಮ ಕಾರಯತಿ**''

ಇಬ್ಬರೂ ಶ್ರೀಹರಿ ಪ್ರೇರಣೆಯಿಂದಲೇ ಕೆಲಸ ಮಾಡುವುದಾದರೆ ಜ್ಞಾನಿಗೂ ಅಜ್ಞಾನಿಗೂ ಏನು ವಿಶೇಷ ಎಂದರೆ ಹೇಳುವರು. **ತತ್ರ ವಿದ್ವಾನ್** ಅವರಿಬ್ಬರ ಮಧ್ಯದಲ್ಲಿ ಜ್ಞಾನಿಯು **ಪ್ರಕೃತೌ** ಪ್ರಕೃತಿವಿಕಾರವಾದ ಮಹದಾದಿಗಳಿಂದ ವಿಕೃತ ಪಂಚಭೂತ ನಿರ್ಮಿತ ದೇಹದಲ್ಲಿ **ಸ್ಥಿತೋಽಪಿ** ಇದ್ದವನಾದರೂ **ಸ್ವಸುಖಾನುಭೂತ್ಯಾ** ಭಗವದನುಗ್ರಹದಿಂದ ಆವಿರ್ಭೂತ-ವಾದ ತನ್ನ ಸ್ವರೂಪಾನಂದಾನುಭವದಿಂದ **ನಿವೃತ್ತತೃಷ್ಣಃ** ವಿಷಯಾಭಿಲಾಷೆ-ಯಿಲ್ಲದವನು ಆದ ಕಾರಣ **ತತ್ರ ನ ಸಜ್ಜತೇ** ಕರ್ಮಗಳನ್ನು ಮಾಡಿದರೂ ಅದರ ಲೇಪವಾಗದು ಎಂದು ಭಾವ.॥೩೧॥

ಅಸಂಪ್ರಜ್ಞಾತಸಮಾಧಿಸ್ಥನಾದ ಜ್ಞಾನಿಯ ಸ್ಥಿತಿಯನ್ನು ಹೇಳುವರು-

**ತಿಷ್ಠಂತಮಾಸೀನಮುತ ವ್ರಜಂತಂ**
**ಶಯಾನಮುದ್ಯಂತಮದಂತಮನ್ನಮ್ ।**
**ಸ್ವಭಾವಮನ್ಯತ್ ಕಿಮಪೀಹಮಾನ-**
**ಮಾತ್ಮಾನಮಾತ್ಮಸ್ಥಮತಿರ್ನ ವೇದ** ॥೩೨॥

**ಆತ್ಮಸ್ಥಮತಿಃ** ಪರಮಾತ್ಮನಲ್ಲಿಯೇ ಇರುವ ಮನಸ್ಸು ಉಳ್ಳವನಾದ್ದರಿಂದ ಅಸಂಪ್ರಜ್ಞಾತಸಮಾಧಿಯಲ್ಲಿರುವವನಾದುದರಿಂದ ಮತ್ತು ತನ್ನ ದೇಹದಲ್ಲಿದ್ದು ಕೂಡುವುದು, ನಿಲ್ಲುವುದು, ಓಡಾಡುವುದು, ಮುಂತಾದ ಎಲ್ಲ ಕ್ರಿಯೆಗಳನ್ನು ಮಾಡುವವನು ಶ್ರೀಹರಿಯೇ ಎಂದು ತಿಳಿದವನು **ತಿಷ್ಠಂತಂ** ನಿಲ್ಲುವ **ಆಸೀನಂ**

ಕೂಡುವ **ಉತ** ಮತ್ತು **ವ್ರಜಂತಂ** ಓಡಾಡುವ **ಶಯಾನಂ** ಮಲಗುವ **ಉದ್ಯಂತಂ** ಉದ್ಯೋಗಮಾಡುವ ಪ್ರಯತ್ನಮಾಡುವ **ಅನ್ನಂ ಅದಂತಂ** ಊಟ ಮಾಡುವ **ಸ್ವಭಾವಂ** ತನ್ನ ಧರ್ಮವಾದ ಪಾರತಂತ್ರ್ಯಾದಿಗಳನ್ನು ಅಥವಾ ತನ್ನ ವಸ್ತುಗಳಾದ ಆಭರಣಾದಿಗಳನ್ನಾಗಲಿ **ಅನ್ಯತ್ ಕಿಮಪಿ ಈಹಮಾನಂ** ಇನ್ನು ಬೇರೆ ಬೇರೆ ಕಾರ್ಯಮಾಡುವ **ಆತ್ಮಾನಂ** ತನ್ನನ್ನು **ನ ವೇದ** ತಿಳಿಯಲಿಲ್ಲ. **ಸ್ವಭಾವಂ** ದೇಹಕ್ಕೆ ಆಗುವ ಪ್ರಿಯಾಪ್ರಿಯಗಳನ್ನು ಎಂದೂ ಅರ್ಥ.

**ತಾತ್ಪರ್ಯ– ಆತ್ಮಸ್ಥಮತಿಃ ಪರಮಾತ್ಮಸ್ಥಮತಿಃ । ಪರಮಾತ್ಮನಃ ಅನ್ಯತ್ ಪಾರತಂತ್ರ್ಯಾದೇಃ ।**

ಪರಮಾತ್ಮನಲ್ಲಿ ಮನಸ್ಸುಳ್ಳ ಜ್ಞಾನಿಯು ಪರಮಾತ್ಮನಿಂದ ಭಿನ್ನವಾದ ಯಾವುದನ್ನು ತಿಳಿಯುವುದಿಲ್ಲ. ಪಾರತಂತ್ರ್ಯದಿಂದ ಭಿನ್ನವಾದ ಬೇರೆಯದನ್ನು ತಿಳಿಯುವುದಿಲ್ಲ ಹೀಗೂ ಅರ್ಥ. ಅಂದರೆ ಪಾರತಂತ್ರ್ಯ ಪರಮಾತ್ಮ ಎರಡನ್ನು ಮಾತ್ರ ತಿಳಿಯುವನು ಎಂದು ಅರ್ಥ. (ವಿಜಯಧ್ವಜ) ಈ ತಾತ್ಪರ್ಯ ಮುಂದಿನ ಶ್ಲೋಕಕ್ಕೂ ಅನ್ವಯಿಸುವುದು.।।೩೨।।

ಅಸಂಪ್ರಜ್ಞಾತ ಸಮಾಧಿಸ್ಥನು ಬೇರೆ ಪದಾರ್ಥಗಳನ್ನು ನೋಡುವುದಿಲ್ಲ-ವೆಂದು ಹಿಂದಿನ ಶ್ಲೋಕದಲ್ಲಿ ಹೇಳಿದರು. ಸಮಾಧಿಯು ಮುಗಿದ ಮೇಲೆ ಏನನ್ನಾದರೂ ಮಿಂಚಿನಂತೆ ನೋಡಿದರೂ ಅವುಗಳನ್ನು ಸ್ವತಂತ್ರವೆಂದು ತಿಳಿಯುವುದಿಲ್ಲ ಎಂದು ಹೇಳುವರು.

ಪ್ರಾರಬ್ಧಕರ್ಮದಿಂದ ಅನಿವಾರ್ಯವಾಗಿ ವಿಷಯಭೋಗಮಾಡುವ ಪ್ರಸಂಗ ಬಂದಾಗಲೂ ಜ್ಞಾನಿಯು ಪರಮಾತ್ಮಬುದ್ಧಿಯನ್ನು ಬಿಡಲಾರನು ಎಂದು ಹೇಳುವರು-

**ಯದಿ ಸ್ಮ ಪಶ್ಯತ್ಯಸದಿಂದ್ರಿಯಾರ್ಥಂ**
**ನಾನಾನುಮಾನೇನ ವಿರುದ್ಧಮನ್ಯತ್ ।**
**ನ ಮನ್ಯತೇ ವಸ್ತುತಯಾ ಮನೀಷೀ**
**ಸ್ವಪ್ನಂ ಯಥೋತ್ಥಾಯ ತಿರೋದಧಾನಮ್ ।।೩೩।।**

**ಯಥಾ** ಹೇಗೆ ಕನಸನ್ನು ಕಾಣುವ ಮನುಷ್ಯರು **ಉತ್ಥಾಯ** ಕನಸ್ಸಿನಿಂದ ಎಚ್ಚೆತ್ತವನಾಗಿ **ತಿರೋದಧಾನಂ** ಮರೆಯಾಗುವ ಅರ್ಥಾತ್ ಅನಿತ್ಯವಾದ

ಪರತಂತ್ರವಾದ **ಸ್ವಪ್ನಂ** ಕನಸಿನಲ್ಲಿ ಕಾಣುವ ಪದಾರ್ಥಗಳನ್ನು **ನ ಮನ್ಯತೇ** ಇವುಗಳು ಎಚ್ಚರವಿರುವಾಗ ನೋಡಿದವುಗಳೇ ಎಂದು **ನಾನಾನುಮಾನ-ವಿರುದ್ಧತ್ವಾತ್** ಹೊರಗಿನ ಕಾರ್ಯಕ್ಕೆ ಉಪಯೋಗ ಬೀಳದಿರುವುದೇ ಮುಂತಾದ ಅನುಮಾನವಿರುದ್ಧವಾದುದರಿಂದ ತಿಳಿಯುವುದಿಲ್ಲ. ಅಂದರೆ ಕನಸಿನಲ್ಲಿ ಕಂಡ ಪದಾರ್ಥಗಳಾಗಲಿ ಕನಸಾಗಲಿ ಸುಳ್ಳು ಎಂದು ಮನುಷ್ಯನು ತಿಳಿಯುವುದಿಲ್ಲ. ಕನಸ್ಸು ಕಂಡಿದ್ದು ನಿಜವೇ ಆದರೆ ಅಲ್ಲಿ ಕಂಡ ಪದಾರ್ಥಗಳು ಹೊರಗಿನವು. ಎಂದು ತಿಳಿದಿದ್ದೇ ಅದು ಮಾತ್ರ ಸುಳ್ಳು ಎಂದು ತಿಳಿಯುವನು **ತಥಾ** ಹಾಗೆಯೇ **ಮನೀಷೀ** ಜ್ಞಾನಿಯು **ಅನ್ಯತ್** ಪಾರತಂತ್ರ್ಯ-ಅಲ್ಪಶಕ್ತಿಗಳಿ-ರುವುದರಿಂದ ಪರಮಾತ್ಮನಿಂದ ಭಿನ್ನವಾದ **ಅಸತ್** ಅಮಂಗಲವಾದ **ಇಂದ್ರಿಯಾರ್ಥಂ** ಇಂದ್ರಿಯಗಳಿಗೆ ವಿಷಯವಾದ ಮನೆ, ಮಡದಿ, ಮುಂತಾದವುಗಳನ್ನು **ಯದಿ ಪಶ್ಯತಿ ಸ್ಮ** ನೋಡುವನೋ **ನಾನಾ ಅನುಮಾನೇನ ವಿರುದ್ಧಂ** ಪ್ರತ್ಯಕ್ಷದಿಂದಲೂ ''**ಯದಿ ನಾಮ ನ ತಸ್ಯ ವಶೇ ಸಕಲಂ ಕಥಮೇವ ತು ನಿತ್ಯಸುಖಂ ನ ಭವೇತ್**'' ಎಂಬ ಅನುಮಾನ ಶ್ರುತಿ-ಸ್ಮೃತಿಗಳು **ಓಂ ಅನವಸ್ಥಿತೇರಸಂಭವಾಚ್ಚ ನೇತರಃ ಓಂ** ಎಂಬ ಸೂತ್ರದಿಂದಲೂ ವಿರುದ್ಧ-ವಾದ್ದರಿಂದ **ವಸ್ತುತಯಾ** ಸ್ವತಂತ್ರವಾಗಿ ತಿಳಿಯುವುದಿಲ್ಲವೇ ಹೊರತು **ಅಸತ್** ಅವಿದ್ಯಮಾನವೆಂದು ತಿಳಿಯಲಾರದು.।।೩೩।।

ಮೇಲಿನ ಶ್ಲೋಕದಲ್ಲಿ ಅನ್ಯತ್ ಎಂಬುದಕ್ಕೆ ಪ್ರತಿಯೋಗಿ ಯಾವುದು ಎಂದು ತಿಳಿಯುವುದಿಲ್ಲ. ಆದ್ದರಿಂದ ಹೇಳುವರು. ''**ಪರಮಾತ್ಮನೋಽನ್ಯತ್।**'' ಭಿನ್ನವು ಏಕೆ? ಎಂದರೆ ಹೇಳುವರು.

''**ಪಾರತಂತ್ರ್ಯಾದೇಃ**'' ಅಸ್ವಾತಂತ್ರ್ಯ ಆದಿ ಪದದಿಂದ ಅಶಕ್ತಿ ಇರುವುದ-ರಿಂದ ಶ್ರೀಹರಿ ಭಿನ್ನ ಎಂದರ್ಥ. ಪ್ರಮಾಣವನ್ನು ಉದಾಹರಿಸಿ ಸಂಪೂರ್ಣ ಶ್ಲೋಕವನ್ನು ವ್ಯಾಖ್ಯಾನಿಸುವರು-

> **ತಾತ್ಪರ್ಯ-** ನಾನಾಮಾನವಿರುದ್ಧಂ ಹಿ ಸ್ವಾತಂತ್ರ್ಯಂ ಜಗತಃ ಸದಾ।
> ಸ್ವತಂತ್ರೋ ಭಗವಾನ್ವಿಷ್ಣುರೇಕ ಏವ ನ ಸಂಶಯಃ। ಇತಿ ಚ।

ಇಂದ್ರಿಯಾರ್ಥಗಳು ಅಸತ್ ಆಗಿವೆ. ವಾಸ್ತವಿಕವಲ್ಲ. ಎಂದು ವಿಪರೀತ ಅರ್ಥವಾಗುವುದು. ಕಾರಣ ವ್ಯಾಖ್ಯಾನಿಸುವರು.

**ತಾತ್ಪರ್ಯ-** ವಸ್ತುತಯಾ ಸ್ವತಂತ್ರತ್ವೇನ । ವಿರುದ್ಧಂ ತಥಾ ನ ಮನ್ಯತೇ ।

''ವಸ್ತು ಸ್ವತಂತ್ರಮುದ್ದಿಷ್ಟಮಸ್ವತಂತ್ರಮವಸ್ತು ಚ'' ಎಂದು ವಚನವಿರುವುದರಿಂದ ವಸ್ತುಶಬ್ದವು ಸ್ವತಂತ್ರವಾಚಕವಾಗಿದೆ. ಸ್ವಪ್ನದೃಷ್ಟಾಂತ ಕೊಟ್ಟಿದ್ದರಿಂದ ಸ್ವಪ್ನವು ಮಿಥ್ಯಾ ಎಂದರ್ಥವಾಗುವುದು ಕಾರಣ ವ್ಯಾಖ್ಯಾನಿಸುವರು-

**ತಾತ್ಪರ್ಯ-** ಅಸ್ಯೈವ ಸ್ವಾಪ್ನಮಖಿಲಂ ವಾಸನಾರೂಪಮಾತ್ಮನಿ ।
ಜಾಗ್ರದೇತದಿತಿ ಜ್ಞಾನಂ ಯತ್ತದೇವ ಭ್ರಮಾತ್ಮಕಮ್ ॥

ತದ್ವಜ್ಜಗದಿದಂ ಸರ್ವಂ ವಿದ್ಯಮಾನಂ ನ ಸಂಶಯಃ ।
ಸ್ವತಂತ್ರಮೇತದಿತಿ ತು ಯಜ್ಜ್ಞಾನಂ ತದ್ಭ್ರಮಾತ್ಮಕಮ್ ॥ ಇತಿ ಚ ।

ದೃಷ್ಟಾಂತ-ದಾರ್ಷ್ಟಾಂತಿಕಗಳಿಗೆ ಏಕರೂಪತೆ ತೋರಿಸುವರು-

**ತಾತ್ಪರ್ಯ-** ಉತ್ಥಿತೋ ನೈವ ಜಾಗ್ರತ್ವಂ ಕ್ವಚಿತ್ ಸ್ವಪ್ನಸ್ಯ ಪಶ್ಯತಿ ।
ಸ್ವಾತಂತ್ರ್ಯಮೇವಂ ಜಗತೋ ಜ್ಞಾನವಾನ್ನೈವ ಪಶ್ಯತಿ ॥ ಇತಿ ವಿವೇಕೇ ।

ಜಗತ್ತಿಗೆ ಸ್ವಾತಂತ್ರ್ಯವು ಯಾವಾಗಲೂ ಅನೇಕ ಪ್ರಮಾಣವಿರುದ್ಧವು. ನಿಸ್ಸಂಶಯವಾಗಿ ಶ್ರೀಹರಿಯೊಬ್ಬನೇ ಸ್ವತಂತ್ರನು. ವಸ್ತುತಯಾ ಅಂದರೆ ಸ್ವತಂತ್ರವೆಂದು ಜಗತ್ತನ್ನು ತಿಳಿಯುವುದಿಲ್ಲ. ಏಕೆಂದರೆ ಜಗತ್ತಿಗೆ ಸ್ವಾತಂತ್ರ್ಯವು ಅನುಮಾನಾದಿಗಳಿಂದ ವಿರುದ್ಧವಾಗಿದೆ.

ಮಾನಸವಾಸನೋಪಾದಾನಕವಾಗಿರುವುದರಿಂದ ಕನಸಿನಲ್ಲಿ ಕಾಣುವ ಆನೆ, ಕುದುರೆ ಮುಂತಾದವುಗಳು ಮನಸ್ಸಿನಲ್ಲಿ ಸತ್ಯವೇ ಆಗಿವೆ. ಆದರೆ ಇವುಗಳನ್ನು ಹೊರಗಿನ ಎಚ್ಚರವಿರುವಾಗ ನೋಡಿದವುಗಳೇ ಎಂದು ತಿಳಿಯುವುದು ಭ್ರಮವು. ಅದರಂತೆ ಜಗತ್ತು ಸತ್ಯವೇ ಆಗಿದ್ದರೂ ಈ ಜಗತ್ತು ಸ್ವತಂತ್ರವೆಂದು ತಿಳಿಯುವುದು ಭ್ರಮವು. ಸ್ವಪ್ನದಿಂದ ಎಚ್ಚೆತ್ತವನು ಸ್ವಾಪ್ನಪದಾರ್ಥಗಳನ್ನು ಜಾಗ್ರತ್ಪದಾರ್ಥಗಳೆಂದು ತಿಳಿಯುವುದಿಲ್ಲ. ಅದರಂತೆಯೇ ಜ್ಞಾನಿಯೂ ಜಗತ್ತನ್ನು ಸತ್ಯವೆಂದು ತಿಳಿದರೂ ಸ್ವತಂತ್ರವೆಂದು ತಿಳಿಯುವುದಿಲ್ಲ ಎಂದು ವಿವೇಕದಲ್ಲಿದೆ.

ಜಗತ್ತು ಸ್ವತಂತ್ರವೆಂದು ತೋರಲು ಅಜ್ಞಾನವೇ ಕಾರಣವೆಂದು ಹೇಳುವರು-

**ಪೂರ್ವಂ ಗೃಹೀತಂ ಗುಣಕರ್ಮಚಿತ್ರಂ**
**ಅಜ್ಞಾನಮಾತ್ಮನ್ಯವಿವಿಕ್ತಮಂಗ ।**
**ನಿವರ್ತತೇ ತತ್ಪುನರೀಕ್ಷಯೈವ**
**ನ ಗೃಹ್ಯತೇ ನಾಪಿ ವಿಸೃಜ್ಯ ಆತ್ಮಾ ॥೩೪॥**

**ಹೇ ಅಂಗ** ಎಲೋ ಉದ್ಧವನೇ! **ಪೂರ್ವಂ** ಅಪರೋಕ್ಷಜ್ಞಾನವಾಗುವ ಮೊದಲು **ಆತ್ಮನಿ** ಪರಮಾತ್ಮಸ್ವರೂಪವಿಷಯಕವಾದ **ಗುಣಕರ್ಮಚಿತ್ರಂ** ಪರಮಾತ್ಮನ ಗುಣವಿಷಯಕ ಮತ್ತು ಕರ್ಮವಿಷಯಕ ಹೀಗೆ ನಾನಾವಿಧವಾದ **ಅವಿವಿಕ್ತಂ** ಇದನ್ನು ನಾನು ತಿಳಿಯಲಾರೆನೆಂದು ವಿವೇಕಶೂನ್ಯವಾದ ಅಥವಾ ಜ್ಞಾನವನ್ನು ತಿಳಿಯುವುದಿಲ್ಲ, ಆನಂದವನ್ನು ತಿಳಿಯುವುದಿಲ್ಲ, ಸೃಷ್ಟಿಕರ್ತೃತ್ವ-ವನ್ನು, ಸ್ಥಿತಿಯನ್ನು ತಿಳಿಯುವುದಿಲ್ಲ. ಈ ರೀತಿಯಾಗಿ ವಿಶೇಷರಹಿತವಾಗಿರುವ (ಮಾಂ ಅನ್ಯಂ ಚ ನ ಜಾನಾಮಿ ಎಂಬಂತೆ) **ಅಜ್ಞಾನಂ** ಅಜ್ಞಾನವು **ಗೃಹೀತಂ** ಸಂಪಾದಿತವಾಗಿದೆ. **ತತ್** ಅದು **ಪುನಃ ನಿರೀಕ್ಷಯಾ** ಮತ್ತೆ ಮತ್ತೆ ಶ್ರೀಹರಿಯ ಸ್ವರೂಪ-ಗುಣ-ಕ್ರಿಯೆಗಳ ಆಲೋಚನಾರೂಪವಾದ ಉಪಾಸನೆಯಿಂದ ಉಂಟಾದ ಜ್ಞಾನದಿಂದ **ತತ್** ಆ ಅಜ್ಞಾನವು **ನ ಗೃಹ್ಯತೇ** ಉಂಟಾಗುವುದಿಲ್ಲ. **ಆತ್ಮಾ** ಪರಮಾತ್ಮನು **ನ ವಿಸೃಜ್ಯಃ** ಬಿಡಲ್ಪಡುವವನು ಅಲ್ಲ. ಪರಮಾತ್ಮನ ಜ್ಞಾನ ಮಾಡಿಕೊಳ್ಳುವುದರಿಂದ ಜೀವನಿಗೆ ಅಜ್ಞಾನನಿವೃತ್ತಿ ಆಗುವುದೇ ಹೊರತು ಶ್ರೀಹರಿಗೆ ಏನೂ ಅತಿಶಯ ಬರುವುದಿಲ್ಲ. ಉಳಿದವರು ತಿಳಿಯದಿರುವುದರಿಂದ ತ್ಯಾಜ್ಯನೂ ಆಗುವುದಿಲ್ಲ.

**ತಾತ್ಪರ್ಯ-** ಭಗವದ್ಗುಣವಿಷಯಂ ತತ್ಕರ್ಮವಿಷಯಂ ಚೇತಿ ಗುಣಕರ್ಮ-ಚಿತ್ರಮ್ । ಆತ್ಮನಿ ಪರಮಾತ್ಮವಿಷಯಮ್ । ಏತನ್ನ ಜಾನಾಮೀತ್ಯಪ್ಯವಿವಿಕ್ತಮ್ ।

ಅನ್ಯೈರ್ಜ್ಞಾತೇಽಪಿ ವಾಽಜ್ಞಾತೇ ನ ವಿಶೇಷೋ ಹರೇಃ ಕ್ವಚಿತ್ ।
ತೇಷಾಮೇವ ವಿಶೇಷಃ ಸ್ಯಾದಜ್ಞಾನಾಪಗಮೇನ ತು ॥ ಇತಿ ಚ ।

ಅಜ್ಞಾನವು ಭಗವಂತನ ಗುಣವಿಷಯಕವು ಕರ್ಮವಿಷಯಕವೂ. ಹೀಗೆ ಅನೇಕವಿಷಯಕವಾದ್ದರಿಂದ ಗುಣಕರ್ಮ ಚಿತ್ರವೆನಿಸಿಕೊಳ್ಳುವುದು. ಭಗವಂತನ ಅಜ್ಞಾನವಿದ್ದರೂ ನಾನು ಅಜ್ಞನು ಎಂದು ಸಾಮಾನ್ಯ ಜ್ಞಾನವಿದೆಯೇ ಹೊರತು ವಿಶೇಷವಾಗಿ ಇಂಥ ಗುಣಕರ್ಮ ತಿಳಿದಿಲ್ಲವೆಂದು ವಿಶೇಷ ವಿಷಯಕವಲ್ಲ ಎಂಬುದು ಅವಿವಿಕ್ತಶಬ್ದಾರ್ಥವು. ಇತರರಿಗೆ ಜ್ಞಾನ

ಬಂದರೂ ಬರದಿದ್ದರೂ ಅದರಿಂದ ವಿಷಯನಾದ ಪರಮಾತ್ಮನಿಗೆ ಯಾವ ವಿಶೇಷ ಬರುವುದಿಲ್ಲ. ತಿಳಿದ ಭಕ್ತರಿಗೆ ಅಪರೋಕ್ಷಜ್ಞಾನದಿಂದ ಅಜ್ಞಾನ ನಾಶವಾಗುವುದು ಎಂದು ತಿಳಿಯಬೇಕು.।।೩೪।।

ಭಗವಂತನ ಸಾಕ್ಷಾತ್ಕಾರದಿಂದ ಅಧಿಕಾರಿಯ ಅಜ್ಞಾನ ನಿವೃತ್ತವಾಗುವುದು ಎಂದು ಹೇಳಿದರು. ಅದರಿಂದ ನನಗೆ (ಭಗವಂತನಿಗೆ ಯಾವ) ಯಾವ ವಿಶೇಷವಿಲ್ಲ ಎಂದು ದೃಷ್ಟಾಂತದಿಂದ ಶ್ರೀಕೃಷ್ಣನು ತಿಳಿಸುವನು-

**ಯಥಾ ಹಿ ಭಾನೋರುದಯೋ ನೃಚಕ್ಷುಷಾಂ**
**ತಮೋ ನಿಹನ್ಯಾನ್ನ ಚ ಸಂವಿಧತ್ತೇ ।**
**ಏವಂ ಸಮೀಕ್ಷಾ ನಿಪುಣಾ ಸತೀ ಮೇ**
**ಹನ್ಯಾತ್ ತಮಿಸ್ರಂ ಪುರುಷಸ್ಯ ಬುದ್ಧೇಃ** ।।೩೫।।

**ಯಥಾ** ಹೇಗೆ **ಭಾನೋಃ ಉದಯಃ** ಸೂರ್ಯನ ಉದಯವು **ನೃಚಕ್ಷುಷಾಂ ತಮಃ ನಿಹನ್ಯಾತ್** ಜನರ ಜ್ಞಾನಕ್ಕೆ ಪ್ರತಿಬಂಧಕವಾದ ಕತ್ತಲೆಯನ್ನು ಕಳೆಯುವುದು **ನ ಚ ಸಂವಿಧತ್ತೇ** ಮನುಷ್ಯರು ಸೂರ್ಯನಲ್ಲಿ ಯಾವ ವಿಶೇಷವನ್ನೂ ಉಂಟು ಮಾಡುವುದಿಲ್ಲ **ಏವಂ** ಇದೇ ರೀತಿಯಾಗಿ **ಮೇ** ನನ್ನ **ಸಮೀಕ್ಷಾ** ಜ್ಞಾನವು **ನಿಪುಣಾ ಸತೀ** ವೈರಾಗ್ಯಾದಿ ಸಾಧನ ಸಂಪತ್ತಿನಿಂದ ಸಮರ್ಥವಾಗಿ **ಪುರುಷಸ್ಯ ಬುದ್ಧೇಃ** ಅಧಿಕಾರಿಯ ಜ್ಞಾನಕ್ಕೆ ಪ್ರತಿಬಂಧಕವಾದ **ತಮಿಸ್ರಂ** ಅಜ್ಞಾನವನ್ನು **ಹನ್ಯಾತ್** ನಾಶಮಾಡುವುದು. **ಮಯಿ ನ ಸಂವಿಧತ್ತೇ** ನನ್ನಲ್ಲಿ ಯಾವ ವಿಶೇಷ ಹುಟ್ಟಿಸುವುದಿಲ್ಲ.।।೩೫।।

ದೇವತೆಗಳ ಕಣ್ಣಿಗೆ ಕತ್ತಲೆಯು ಪ್ರತಿಬಂಧಕವಲ್ಲ. ಕಾರಣ ನೃಚಕ್ಷುಷಾಂ ಎಂದಿದ್ದಾರೆ.

ಅನೇಕ ಬಾರಿ ಶ್ರೀಹರಿಯ ಸ್ವರೂಪ ತಿಳಿದಿದ್ದರೂ ಅವನ ಸ್ವರೂಪ ಎಂಥದು ಎಂಬ ಉದ್ಧವನ ಪ್ರಶ್ನೆಯನ್ನು ಪರಿಹರಿಸುವನು-

**ಏಷಃ ಸ್ವಯಂಜ್ಯೋತಿರಜೋಽಪ್ರಮೇಯೋ**
**ಮಹಾನುಭೂತಿಃ ಸಕಲಾನುಭೂತಿಃ ।**
**ಏಕೋಽದ್ವಿತಿಯೋ ವಚಸಾಂ ವಿರಾಮೋ**
**ಯೇನೇರಿತಾ ವಾಗ್ರಚನಾಶ್ಚರಂತಿ** ।।೩೬।।

**ಏಷಃ** ಈ ಪರಮಾತ್ಮನು(ನಾನು) **ಸ್ವಯಂಜ್ಯೋತಿಃ** ಸ್ವತಂತ್ರವಾಗಿ ಸ್ವಪ್ರಕಾಶನು ಆದ್ದರಿಂದಲೇ **ಅಜಃ** ಉತ್ಪತ್ತಿರಹಿತನು **ಅಪ್ರಮೇಯಃ** ಸಂಪೂರ್ಣವಾಗಿ ತಿಳಿಯಲಾಗದವನು **ಮಹಾನುಭೂತಿಃ** ಅಪರಿಚ್ಛಿನ್ನ ಜ್ಞಾನ ಉಳ್ಳವನು **ಸಕಲಾನುಭೂತಿಃ** ಸರ್ವಜ್ಞನು ಪೂರ್ಣಸುಖಾನುಭವ ಉಳ್ಳವನು **ಏಕಃ** ಜ್ಞಾನಾದಿಗುಣಗಳಿಂದ ಅಭಿನ್ನನು **ಅದ್ವಿತೀಯಃ** ಸರ್ವೋತ್ತಮನು **ವಚಸಾಂ ವಿರಾಮಃ** ವೇದಾದಿವಾಕ್ಯಗಳಿಂದ **ಸಾಕಲ್ಯೇನ** ತಿಳಿಯಲಾಗದವನು. **ಯೇನ** ಯಾವಾತನಿಂದ **ಈರಿತಾಃ** ಪ್ರೇರಿತವಾಗಿ **ವಾಗ್ರಚನಾಃ ಚರಂತಿ** ವಾಗ್ ವ್ಯವಹಾರಗಳು ನಡೆಯುವವು.

ಏಕಃ ಅದ್ವಿತೀಯಃ ಪದಗಳ ಪುನುರುಕ್ತಿಯ ಪರಿಹಾರಕ್ಕಾಗಿ ವ್ಯಾಖ್ಯಾನಿಸುವರು-

**ಜ್ಞಾನಾನಂದಾದ್ಯಭಿನ್ನತ್ವಾದೇಕಃ ಸರ್ವೋತ್ತಮತ್ವತಃ ।**
**ಅದ್ವಿತೀಯೋ ಮಹಾವಿಷ್ಣುಃ ಪೂರ್ಣತ್ವಾತ್ ಪುರುಷಃ ಸ್ಮೃತಃ । ಇತಿ ಚ ।**

ಜ್ಞಾನ, ಆನಂದಾದಿಗಳಿಂದ ಅಭಿನ್ನನಾದ್ದರಿಂದ ಏಕನು. ಸರ್ವೋತ್ತಮನಾದುದರಿಂದ ಅದ್ವಿತೀಯನು. ಪೂರ್ಣಷಡ್ಗುಣನಾದುದರಿಂದ ಪುರುಷನು ಎಂದೂ ಪ್ರಮಾಣವಿದೆ.।।೩೬।।

ಇಲ್ಲಿಯ ವರೆಗೆ ಜ್ಞಾನ-ಜ್ಞೇಯಗಳ ಸ್ವರೂಪವನ್ನು ಹೇಳಿ ಮಿಥ್ಯಾಜ್ಞಾನಸ್ವರೂಪದ ಕಾರಣಗಳನ್ನು ಹೇಳುವನು-

**ಏತಾವಾನಾತ್ಮಸಮ್ಮೋಹೋ ಯದ್ವಿಕಲ್ಪಸ್ತು ಕೇವಲೇ ।**
**ಆತ್ಮಾಽಮೃತೇ ಸ್ವಮಾತ್ಮಾನಮಚಲಂ ಯನ್ನ ಪಶ್ಯತಿ ।।೩೭।।**

**ಆತ್ಮಾ** ಜೀವನು **ಕೇವಲೇ** ಸ್ವತಂತ್ರನಾದ ಜಡಾಮಿಶ್ರನಾದ ಸ್ವತಂತ್ರನಾದ **ಅಮೃತೇ** ನಿತ್ಯಮುಕ್ತನಾದ ಪರಮಾತ್ಮನಲ್ಲಿರುವ **ಸ್ವಮಾತ್ಮಾನಂ** ತನ್ನನ್ನು ಅಂದರೆ ತನ್ನ ಯಾವಾಗಲೂ ಹೋಗದಿರುವ ಅಸ್ವಾತಂತ್ರ್ಯವೆಂಬ ಸ್ವಭಾವವನ್ನು **ಅಚಲಂ ನ ಪಶ್ಯತಿ** ಸ್ಥಿರವಾಗಿ ತಿಳಿಯುವುದಿಲ್ಲ. **ಯತ್** ಎಲ್ಲಿಯವರೆಗೆ ಅಲ್ಲಿಯವರೆಗೆ ಭ್ರಮದ ನಿವೃತ್ತಿ ಆಗುವುದಿಲ್ಲ. **ಯದ್ವಿಕಲ್ಪಃ** ಪ್ರಮಾಣವಿರುದ್ಧವಾದ ತಿಳುವಳಿಕೆಯು ಜೀವನ ಸ್ವಾತಂತ್ರ್ಯ, ಪರಮಾತ್ಮನ ಅಸ್ವಾತಂತ್ರ್ಯ, ಜೀವಾಭೇದ ಮುಂತಾದುದು ಏನಿದೆಯೊ **ಏತಾವಾನ್**

**ಆತ್ಮಸಮ್ಮೋಹಃ** ಇದು ಮಾನಸಿಕ ಭ್ರಮವು.।।೩೭।।

**ತಾತ್ಪರ್ಯ- ಏತಾವಾನ್ ಆತ್ಮಸಮ್ಮೋಹೋ ಯದ್ವಿರುದ್ಧಸ್ಯ ಕಲ್ಪನಮ್ ।**
**ಯತ್ಪರಾತ್ಮಾಶ್ರಯಾನ್ ಜೀವಾನ್ ನಿಶ್ಚಯೇನ ನ ಪಶ್ಯತಿ ।।**
**-ಇತಿ ತಂತ್ರಭಾಗವತೇ ।**

**ಅಚಲಮಿತಿ ಕ್ರಿಯಾವಿಶೇಷಣಮ್ ।।೩೭।।**

ಪ್ರಮಾಣವಿರುದ್ಧವಾದ ಜೀವೇಶ್ವರ ಭೇದಾದಿಗಳನ್ನು ಕಲ್ಪಿಸುವುದೇ ಮನಸ್ಸಿನ ಭ್ರಮವು. ಪರಮಾತ್ಮನನ್ನು ಆಶ್ರಯಿಸಿರುವ ಜೀವರನ್ನು ಆ ರೀತಿಯಾಗಿ ನಿಶ್ಚಯವಾಗಿ ತಿಳಿಯುವುದಿಲ್ಲ. ಅಚಲಂ ಎಂಬುದು ಕ್ರಿಯಾವಿಶೇಷಣವು ಅಚಲಂ ಯಥಾ ಭವತಿ ತಥಾ ನ ಪಶ್ಯತಿ ನಿಶ್ಚಯವಾಗುವಂತೆ ತಿಳಿಯುವುದಿಲ್ಲವೆಂದು ಭಾವ.।।೩೭।।

ತಾನು ಭಗವದಧೀನನೆಂದು ತಿಳಿಯದಿರುವುದು, ಮಿಥ್ಯಾಜ್ಞಾನವೆಂದು ಹೇಳಿದುದು ಸರಿಯಲ್ಲ. ಜೀವ ಬ್ರಹ್ಮ ಒಂದೇ. ಜಗತ್ತು ಸುಳ್ಳಾದುದ್ದರಿಂದ ಜಗತ್ಕಾರಣತ್ವವು ಸುಳ್ಳು. ಆದುದರಿಂದ ಕಾರಣತ್ವ ಉಳ್ಳ ಬ್ರಹ್ಮ ಇಲ್ಲದಿರುವ ಜೀವ ಭಿನ್ನ ಎಂಬುದೂ ಸುಳ್ಳು ಎಂದು ಶಂಕಿಸಿ ಜಗತ್ಸತ್ಯತ್ವ ಹೇಳುವರು-

**ಯನ್ನಾಮಾಕೃತಿಭಿರ್ಗ್ರಾಹ್ಯಂ ಪಂಚವರ್ಣಮಬಾಧಿತಮ್ ।**
**ವ್ಯರ್ಥೋ ನಾಪ್ಯರ್ಥವಾದೋಽಯಂ ದ್ವಯಂ ವಿಂದಂತಿ ಸೂರಯಃ ।।**

**ನಾಮಾಕೃತಿಭಿಃ** ಬ್ರಹ್ಮ, ರುದ್ರ, ಇಂದ್ರ, ಮುಂತಾದ ಹೆಸರುಗಳಿಂದ ನಾಲ್ಕುಮುಖ, ಐದು ಮುಖ ಮುಂತಾದ ಆಕಾರದಿಂದ **ಗ್ರಾಹ್ಯಂ** ತಿಳಿಯಲ್ಪಡುವ **ಪಂಚವರ್ಣಂ** ಪಂಚಭೂತಾತ್ಮಕವಾದ ಪಂಚಭೇದ ಉಳ್ಳದ್ದೆಂದು ವರ್ಣಿಸಲ್ಪಡುವ **ಯತ್** ಯಾವ ಜಗತ್ತಿದೆಯೋ **ತತ್** ಅದು **ಅಬಾಧಿತಂ** ಸತ್ಯವು ಐಕ್ಯಜ್ಞಾನ ಬಾಧ್ಯವಲ್ಲ. **ಅಯಂ ವಾದಃ** ಜಗತ್ತು ಸತ್ಯವೆಂಬ ವಾದವು **ವ್ಯರ್ಥೋ ನ** ಅರ್ಥರಹಿವಲ್ಲ. **ಅಪಿ ತು ಅರ್ಥವಾದಃ ಏವ** ನಿಜವಾದ ವಾದವೇ ಆಗಿದೆ ಯಥಾರ್ಥವಾಗಿದೆ ಏಕೆಂದರೆ **ಸೂರಯಃ** ಜ್ಞಾನಿಗಳು **ದ್ವಯಂ ವಿಂದಂತಿ** ಜೀವ, ಪರಮಾತ್ಮರನ್ನು ಇಬ್ಬರೆಂದು ಜಗತ್ತು ಪರಮಾತ್ಮಾ ಎರಡು ಎಂದೇ ತಿಳಿಯುವರು. ಹೀಗೆ ತಿಳಿದು ಪರಮಾನಂದ-ರೂಪವಾದ ಮೋಕ್ಷವನ್ನು ಪಡೆಯುವರು. ಕಾರಣ ಮೋಕ್ಷಜನಕ ಜ್ಞಾನವಿಷಯವಾದುದುರಿಂದ ಜಗತ್ತು ಸತ್ಯವೇ ಆಗಿದೆ.।।೩೮।।

**ತಾತ್ಪರ್ಯ**- ಅಯಂ ವ್ಯರ್ಥವಾದೋ ನ ಭವತಿ । ಕಿಂತು ಅರ್ಥವಾದಃ । ಜಗತ್ ಪರಮೇಶ್ವರಂ ಚ ದ್ವಯಂ ವಿಂದಂತಿ ಜ್ಞಾನಿನಃ ।

ಪಂಚಭೂತಾತ್ಮಕಂ ವಿಶ್ವಂ ಭ್ರಾಂತಿಸಿದ್ಧಮಪಂಡಿತಾಃ ।
ವದಂತಿ ಪಂಡಿತಾಸ್ಸದ್ಧಾ ಜಗದಾಹುರಬಾಧಿತಮ್ ।
ಪ್ರವಾಹರೂಪೇಣ ಸದಾ ವಿಷ್ಣೋರಿಚ್ಛಾವಶೇ ಸ್ಥಿತಮ್। ಇತಿ ಚ ।

ಜಗತ್ತು ಸತ್ಯವೆಂಬ ವಾದವು ಅಯಥಾರ್ಥವಲ್ಲ. ಯಥಾರ್ಥವೇ ಆಗಿದೆ. ಜ್ಞಾನಿಗಳು ಜಗತ್ ಮತ್ತು ಪರಮೇಶ್ವರ ಇವರಿಬ್ಬರನ್ನು ಎರಡು ಎಂದು ತಿಳಿಯುವರು. ಪಂಚಭೂತಾತ್ಮಕ ಪ್ರಪಂಚವನ್ನು ಅಜ್ಞಾನಿಗಳು ಭ್ರಾಂತಿಕಲ್ಪಿತ-ವೆಂದು ಹೇಳುವರು. ಪಂಡಿತರು ಜಗತ್ತು ಸತ್ಯವೆಂದೇ ಹೇಳುವರು. ಜಗತ್ತು ಶ್ರೀಹರಿ ಇಬ್ಬರೂ ಸತ್ಯವಾದರೂ ಶ್ರೀಹರಿಯು ಶಶ್ವದೇಕಪ್ರಕಾರನು ಜಗತ್ತು ಪ್ರವಾಹ ರೂಪದಿಂದ ಸರ್ವದಾ ಇರುವುದು. ಸ್ವರೂಪತಃ ಅನಿತ್ಯವು.॥೩೮॥

ಹಿಂದೆ ಅಪಕ್ವಯೋಗಿಗಳು ಜನ್ಮಾಂತರದಲ್ಲಿ ಯೋಗಾಭ್ಯಾಸ ಮಾಡುವರೆಂದು ಹೇಳಿದರು. ಈಗ ಇದೇ ಜನ್ಮದಲ್ಲಿಯೇ ಯೋಗಮಾಡಲು ಬಂದ ವಿಘ್ನ ಪರಿಹಾರ ಪ್ರಕಾರವನ್ನು ಹೇಳಲು ಪ್ರಸ್ತಾಪಿಸುವರು-

**ಯೋಗಿನೋಽಪಕ್ವಯೋಗಸ್ಯ ಯುಂಜತಃ ಕಾಲ ಉತ್ಥಿತ್ಯೈಃ ।**
**ಉಪಸರ್ಗೈರ್ವಿಹನ್ಯೇತ ತತ್ರಾಯಂ ವಿಹಿತೋ ವಿಧಿಃ ॥೩೯॥**

**ಕಾಲೇ** ಯೋಗಾಭ್ಯಾಸಕ್ಕೆ ವಿಹಿತವಾದ ಪ್ರಭಾತಾದಿಕಾಲಗಳಲ್ಲಿ **ಯುಂಜತಃ** ಯೋಗಾನುಷ್ಠಾನ ಮಾಡುವ **ಅಪಕ್ವಯೋಗಸ್ಯ** ಅಪರಿಪೂರ್ಣವಾದ ಯೋಗ ಉಳ್ಳ ಯೋಗಿಗೆ **ಕಾಲೇ** ಯೋಗಾನುಷ್ಠಾನ ಮಾಡುವ ಸಮಯದಲ್ಲಿ **ಉತ್ಥಿತ್ಯೈಃ** ಉಂಟಾದ **ಉಪಸರ್ಗೈಃ** ಉಪದ್ರವಗಳಿಂದ **ವಿಹನ್ಯೇತ** ತಡೆಯುಂಟಾದರೆ **ತತ್ರ** ಅದರ ಪರಿಹಾರ ವಿಷಯದಲ್ಲಿ **ಅಯಂ** ಮುಂದೆ ಹೇಳುವ **ವಿಧಿಃ** ಉಪಾಯವು **ವಿಹಿತಃ** ಹೇಳಲ್ಪಟ್ಟಿದೆ.॥೩೯॥

ಅದು ಯಾವುದೆಂದು ಹೇಳುವರು-

**ಯೋಗಧಾರಣಯಾ ಕಾಂಶ್ಚಿದಾಸನ್ನೈರ್ಧಾರಣಾನ್ವಿತ್ಯೈಃ ।**
**ತಪೋಮಂತ್ರೌಷಧ್ಯೈಃ ಕಾಂಶ್ಚಿದುಪಸರ್ಗಾನ್ ವಿನಿರ್ದಹೇತ್ ॥೪೦॥**

**ಕಾಂಶ್ಚಿತ್** ಕೆಲವು ವಿಘ್ನಗಳನ್ನು **ಯೋಗಧಾರಣಯಾ** ಯಮ, ನಿಯಮಗಳನ್ನು ಆವರ್ತನಮಾಡುವುದರಿಂದ **ಧಾರಣಾನ್ವಿತೈಃ ಆಸನೈಃ** ಖಂಡಸ್ಮೃತಿರೂಪ ಧಾರಣಾದಿಂದ ಸಹಿತವಾದ ಆಸನಗಳಿಂದ **ಕಾಂಶ್ಚಿತ್** ಕೆಲವನ್ನು **ತಪೋ-ಮಂತ್ರೌಷಧೈಃ** ಕೃಚ್ಛ್ರಾದಿ ತಪಸ್ಸಿನಿಂದ ''ನೃಸಿಂಹಾದಿಕಮನ್ಯಚ್ಚ ದುರಿತಾದಿ-ನಿವೃತ್ತಯೇ'' ಎಂದಿರುವುದರಿಂದ ವಿಘ್ನಜನಕ ಪಾಪನಿವಾರಣ ನೃಸಿಂಹ-ಮಂತ್ರಗಳಿಂದ ದೈಹಿಕವಿಘ್ನಗಳನ್ನು, ಔಷಧಿಯಿಂದ **ಕಾಂಶ್ಚಿತ್** ಕೆಲವು **ಉಪಸರ್ಗಾನ್** ವಿಘ್ನಗಳನ್ನು **ವಿನಿರ್ದಹೇತ್** ಸುಟ್ಟುಹಾಕಬೇಕು.।।೪೦।।

**ಕಾಂಶ್ಚಿನ್ಮಮಾನುಧ್ಯಾನೇನ ನಾಮಸಂಕೀರ್ತನಾದಿಭಿಃ ।**
**ಯೋಗೇಶ್ವರಾನುವೃತ್ತ್ಯಾ ವಾ ಹನ್ಯಾದಶುಭದಾನ್ ಶುಭೈಃ ।।೪೧।।**

**ಕಾಂಶ್ಚಿತ್** ಕೆಲವನ್ನು **ಮಮ ಅನುಧ್ಯಾನೇನ** ವಿಘ್ನಪರಿಹಾರಸಮರ್ಥವೆಂದು ವಿಹಿತವಾದ ಹರಿಸ್ಮರಣದಿಂದ **ನಾಮಸಂಕೀರ್ತನಾದಿಭಿಃ** ನಾಮೋಚ್ಚಾರ-ದಿಂದಲೂ **ಯೋಗೇಶ್ವರಾನುವೃತ್ತ್ಯಾ ವಾ** ಶ್ರೀಹರಿಯ ಸೇವೆಯಿಂದಲೂ **ಅಶುಭದಾನ್** ಅಮಂಗಲಪ್ರದವಾದ ವಿಘ್ನಗಳನ್ನು **ಶುಭೈಃ** ಶುಭದಾಯಕವಾದ ವಿವಿಧ ಉಪಾಯಗಳಿಂದ **ಹನ್ಯಾತ್** ಪರಿಹರಿಸಿಕೊಳ್ಳಬೇಕು.।।೪೧।।

ರಸಾಯನಾದಿ ನಾನಾವಿಧವಾದ ಉಪಾಯಗಳಿಂದ ಶರೀರನಾಶ-ರೂಪವಾದ ವಿಘ್ನಪರಿಹಾರ ಸುಲಭವಾದುದರಿಂದ ಯೋಗಧಾರಣಾದಿಗಳು ಬೇಕಿಲ್ಲ ಎಂಬುದು ಸರಿಯಲ್ಲ. ಬಾಲ್ಯದಿಂದಲೇ ಯೋಗಧಾರಣಾದಿಗಳನ್ನು ಮಾಡಬೇಕು. ವಯಸ್ಸಾದ ಮೇಲಲ್ಲ. ಎಂದು ಹೇಳುವರು-

**ಕೇಚಿದ್ ದೇಹಮಿಮಂ ಧಾರ್ಯಂ ಸುಕಲ್ಯಂ ವಯಸಿ ಸ್ಥಿತಮ್ ।**
**ವಿಧಾಯ ವಿವಿಧೋಪಾಯೈರಥ ಯುಂಜಂತಿ ಸಿದ್ಧಯೇ ।।೪೨।।**

**ಕೇಚಿತ್** ಅಜ್ಞಾನಿಗಳು **ಪರೇಣ ಧಾರ್ಯಂ** ಶ್ರೀಹರಿಯಿಂದ ಧರಿಸಲ್ಪಡುವ **ವಯಸಿ ಸ್ಥಿತಂ** ಬಾಲ್ಯ-ಯೌವನದಲ್ಲಿರುವ **ಸುಕಲ್ಯಂ** ಸುದೃಢವಾದ **ಇಮಂ ದೇಹಂ** ಈ ದೇಹವನ್ನು **ವಿವಿಧೋಪಾಯೈಃ** ರಸಾಯನಾದಿಗಳಿಂದ **ವಿಧಾಯ** ಸ್ಥಿರವಾಗಿ ಅಥವಾ **ಧಾರ್ಯಂ** ಹೆಂಡತಿ, ತಾಯಿಯಿಂದ, ಧರಿಸಲ್ಪಡುವುದನ್ನಾಗಿ ಮಾಡಿ, **ಅಥ** ವಾರ್ಧಕ್ಯಾವಸ್ಥೆ ಬಂದ ಮೇಲೆ **ಸಿದ್ಧಯೇ ಯುಂಜಂತಿ** ಮೋಕ್ಷಕ್ಕಾಗಿ ಯೋಗಾಭ್ಯಾಸ ಮಾಡುವರು.

ಈ ರೀತಿ ಮಾಡುವವರ ಅವಿವೇಕ ಹೇಳುವರು-

**ಇಹ ವರ್ಷಶತಾಶೀತ್ಯಾ ತದಾಯಾಸೋ ಹ್ಯಪಾರ್ಥಕಃ ।**
**ಅಂತವತ್ವಾಚ್ಛರೀರಸ್ಯ ಫಲಸ್ಯೇವ ವನಸ್ಪತೇಃ ॥೪೩॥**

**ಇಹ** ಈ ಲೋಕದಲ್ಲಿ **ವರ್ಷಶತಾಶೀತ್ಯಾ** ನೂರುವರ್ಷ ಅಥವಾ ಎಂಭತ್ತು ವರ್ಷಪರ್ಯಂತ **ತದಾಯಾಸಃ** ಪೋಷಿಸಲು ಮಾಡಿದ ಶ್ರಮವು **ಅಪಾರ್ಥಕಃ** ವ್ಯರ್ಥವು ಏಕೆಂದರೆ **ವನಸ್ಪತೇಃ ಫಲಸ್ಯ ಇವ** ಗಿಡದ ಪಕ್ವವಾದ ಹಣ್ಣಿನಂತೆ **ಶರೀರಸ್ಯ ಅಂತವತ್ವಾತ್** ಶರೀರವು ನಾಶ ಉಳ್ಳದ್ದಾಗಿದೆ. ಯಾವ ಕ್ಷಣದಲ್ಲಿಯೂ ಬೀಳಬಹುದು ಕಾರಣ ಔಷಧಾದಿಗಳನ್ನು ತೆಗೆದುಕೊಂಡು ವಯಸ್ಸಾದ ಮೇಲೆ ಸಾಧನ ಮಾಡುವುದು ಆಗಲಾರದ ಮಾತು. ಆದ್ದರಿಂದ ಅವಿವೇಕವೇ ಅದು. ಅಥವಾ ಸಾಧನೆಗಾಗಿ ವಿವಿಧೋಪಾಯಗಳಿಂದ ದೇಹವನ್ನು ರಕ್ಷಿಸಿಕೊಳ್ಳುವುದು ನೂರು, ಎಂಭತ್ತು, ವರ್ಷ ಪರ್ಯಂತವೇ ಹೊರತು ನಂತರ ಪೋಷಣಾದಿಗಳು ವ್ಯರ್ಥ ಏನು ಮಾಡಿದರೂ ನಂತರ ಬೀಳುವುದೇ ಎಂದು ಭಾವ.॥೪೩॥

ಯೋಗಾನುಷ್ಠಾನಕ್ಕೆ ದೇಹದಾರ್ಢ್ಯ ಅವಶ್ಯಕ. ಅದು ಯೋಗದಿಂದ ಆಗುವುದಿಲ್ಲ. ಕಾರಣ ರಸಾಯನಾದಿಗಳಿಂದ ದೇಹರಕ್ಷಣೆಯನ್ನು ಮಾಡಿಕೊಳ್ಳುವುದು ಅನಾಯಾಸ. ಯೋಗಾದಿಗಳಿಂದ ಆಯಾಸ ಪಡುವುದು ವ್ಯರ್ಥ ಎಂಬ ಶಂಕೆಗೆ ಶ್ರೀಕೃಷ್ಣನು ಉತ್ತರಿಸುವನು-

**ಯೋಗಂ ನಿಷೇವತೋ ನಿತ್ಯಂ ಕಾಯಶ್ಚೇತ್ ಕಲ್ಪತಾಮಿಯಾತ್ ।**
**ತಚ್ಛ್ರದ್ದಧ್ಯಾನ್ನ ಮತಿಮಾನ್ ಯೋಗಮುತ್ಸೃಜ್ಯ ಮತ್ಪರಃ ॥೪೪॥**

**ನಿತ್ಯಂ** ಸರ್ವಕಾಲದಲ್ಲಿ **ಯೋಗಂ ನಿಷೇವತಃ** ಭಗವಂತನ ಧ್ಯಾನವೆಂಬ ರಸಾಯನವನ್ನು ಸೇವಿಸುವ ಮನುಷ್ಯನಿಗೆ **ಕಾಯಃ** ದೇಹವು **ಕಲ್ಪತಾಂ ಇಯಾತ್ ಚೇತ್** ಸಾಮರ್ಥ್ಯವನ್ನು ಹೊಂದುವುದಾದರೆ **ಮತಿಮಾನ್** ಬುದ್ಧಿವಂತನು **ತತ್** ದೇಹದಾರ್ಢ್ಯಕಾರಣವಾದ ಯೋಗವನ್ನೇ **ಶ್ರದ್ದಧ್ಯಾತ್** ನಂಬುವನು. **ಮತ್ಪರಃ** ನನ್ನನ್ನು ಧ್ಯಾನಿಸುವವನು **ಯೋಗಂ ಉತ್ಸೃಜ್ಯ** ಯೋಗವನ್ನು ಬಿಟ್ಟು ಬೇರೆ ರಸಾಯನಾದಿಗಳನ್ನು **ನ ಶ್ರದ್ದಧ್ಯಾತ್** ನಂಬಲಾರನು ಅಂದರೆ ಯೋಗವೂ ಸಹ ಶರೀರರಕ್ಷಕವೇ ಆದ್ದರಿಂದ ಅದನ್ನು

ಬಿಟ್ಟು ಶರೀರರಕ್ಷಣಕ್ಕೆಂದು ರಸಾಯನಾದಿಗಳನ್ನು ಸೇವಿಸುವವರು ಅವಿವೇಕಿಗಳು. ಆದ್ದರಿಂದ ಬುದ್ಧಿವಂತನು ನನ್ನ ಯೋಗವನ್ನೇ ಅಭ್ಯಸಿಸಬೇಕು ಎಂದು ಸಿದ್ಧವಾಯಿತು.।।೪೪।।

ಯೋಗದಲ್ಲಿ ಶ್ರದ್ಧೆಯಿಡುವುದರಿಂದ ಫಲ ಹೇಳುವರು-

**ಯೋಗಚರ್ಯಾಮಿಮಾಂ ಯೋಗೀ ವಿಚರನ್ ಮದಪಾಶ್ರಯಃ ।**
**ನಾಂತರಾಯೈರ್ವಿಹನ್ಯೇತ ನಿಸ್ಪೃಹಃ ಸ್ವಸುಖಾನುಭೂಃ ।।೪೫।।**

**ಇಮಾಂ ಯೋಗಚರ್ಯಾಂ** ಈ ಯೋಗಾನುಷ್ಠಾನವನ್ನು **ಚರನ್** ಮಾಡುವ **ಯೋಗೀ** ಯೋಗಿಯು **ಮದಪಾಶ್ರಯಃ** ನಾನೇ ಆಶ್ರಯನಾಗಿ ಉಳ್ಳವನು. **ಸ್ವಸುಖಾನುಭೂಃ** ಸ್ವರೂಪಸುಖಾನುಭವಿಯಾಗಿ **ನಿಸ್ಪೃಹಃ** ಅನಾಸಕ್ತನಾಗಿ **ಅಂತರಾಯೈಃ ನ ವಿಹನ್ಯೇತ** ವಿಘ್ನಗಳಿಂದ ಪೀಡಿತನಾಗುವುದಿಲ್ಲ. ಅರ್ಥಾತ್ ಯೋಗವು ಸರ್ವಾಪೇಕ್ಷಿತವಾದ ಮೋಕ್ಷಕ್ಕೆ ಸಾಧನವಾದುದರಿಂದ ಸರ್ವಾನುಷ್ಠೇಯವೆಂದು ಸಿದ್ಧವಾಯಿತು.।।೪೫।।

**।। ಇತಿ ಶ್ರೀಮದ್ಭಾಗವತೇ ಏಕಾದಶಸ್ಕಂಧೇ ಅಷ್ಟಾವಿಂಶೋಽಧ್ಯಾಯಃ ।।**

★★★

## ಅಥ ಏಕೋನವಿಂಶೋಽಧ್ಯಾಯಃ

ಭಗವಂತನಿಂದ ಉಕ್ತವಾದ ಯೋಗಾಚರಣವು ಅಶಕ್ಯವೆಂದು ಮನಸ್ಸಿನಲ್ಲಿ ಭಾವಿಸಿದ ಉದ್ಧವನು ಯೋಗಸಿದ್ಧಿಗೆ ಉಪಾಯವನ್ನು ಕೇಳುತ್ತಿದ್ದಾನೆ-

**ಸುದುಶ್ಚರಾಮಿಮಾಂ ಮನ್ಯೇ ಯೋಗಚರ್ಯಾಮನಾತ್ಮನಃ ।**
**ಯಥಾಽಂಜಸಾ ಪುಮಾನ್ ಸಿದ್ಧ್ಯೇತ್ ತನ್ಮೇ ಬ್ರೂಹ್ಯಂಜಸಾಽಚ್ಯುತ ॥೧॥**

**ಹೇ ಅಚ್ಯುತ** ಚತುರ್ವಿಧನಾಶರಹಿತನಾದ ಶ್ರೀಕೃಷ್ಣನೇ **ಹೇ ಅಜಿತ** ಯಾರ ವಶವಾಗದ **ಅನಾತ್ಮನಃ** ಮನೋಜಯವಿಲ್ಲದೇ ಅಧೀರನಾದ ಚಂಚಲ ಮನಸ್ಸಿನವನಾದವನಿಗೆ **ಇಮಾಂ** ಮನಸ್ಥೈರ್ಯದಿಂದ ಸಾಧ್ಯವಾದ **ಯೋಗಚರ್ಯಾಂ** ಯೋಗಾಚರಣೆಯನ್ನು **ಸುದುಶ್ಚರಾಂ ಮನ್ಯೇ** ಅತ್ಯಂತ ಕಠಿಣವೆಂದು ತಿಳಿಯುವೆನು. **ಪುಮಾನ್** ಮೊದಮೊದಲು ಯೋಗದಲ್ಲಿ ಪ್ರಯತ್ನಿಸುವ ಮನುಷ್ಯನು **ಯಥಾ** ಯಾವ ಉಪಾಯದಿಂದ **ಅಂಜಸಾ ಸಿದ್ಧ್ಯೇತ್** ಧ್ಯಾನಾದಿಗಳನ್ನು ಪಡೆಯುವನು **ತತ್** ಆ ಉಪಾಯವನ್ನು **ಮೇ** ನನಗೆ **ಅಂಜಸಾ** ಚೆನ್ನಾಗಿ **ಬ್ರೂಹಿ** ಹೇಳು.॥೧॥

ಹೇಳದಿದ್ದರೆ ಆಗುವ ಅನರ್ಥ ಹೇಳುವನು-

**ಪ್ರಾಯಶಃ ಪುಂಡರೀಕಾಕ್ಷ ಯುಂಜತೋ ಯೋಗಿನೋ ಮನಃ ।**
**ವಿಷೀದತ್ಯಸಮಾಧಾನಾನ್ಮೌನಸಂಯಮಕರ್ಶಿತಮ್ ॥೨॥**

**ಪುಂಡರೀಕಾಕ್ಷ** ಕಮಲದಂತೆ ಕಣ್ಣುಗಳುಳ್ಳವನೇ **ಯುಂಜತಃ** ಯೋಗವನ್ನು ಆಚರಿಸುವ **ಯೋಗಿನಃ** ಯೋಗಿಯ **ಮನಃ** ಮನಸ್ಸು **ಪ್ರಾಯಶಃ** ಹೆಚ್ಚಾಗಿ **ಮೌನಸಂಯಮಕರ್ಶಿತಂ** ದುಷ್ಟಮಾತುಗಳನ್ನಾಡದಿರುವುದು ವಿಷಯಗಳಿಂದ ಸೆಳೆಯುವುದರಿಂದಲೂ ಕುಗ್ಗಿದ ಮನಸ್ಸು **ಅಸಮಾಧಾನಾತ್ ವಿಷೀದತಿ** ಸಮಾಧಾನವಿಲ್ಲದೇ ಖಿನ್ನವಾಗುವುದು. ನಿನ್ನಲ್ಲಿ ಅರ್ಪಿತವಾಗದ ಮನಸ್ಸು ದುಃಖಿತವಾಗುವುದು ಕಾರಣ ಹಾಗಾಗದಂತೆ ಯೋಗಾನುಷ್ಠಾನದ ಉಪಾಯವನ್ನು ಹೇಳು. ನಿನ್ನಲ್ಲಿ ಮನಸ್ಸು ಸಮಾಧಾನವಿದ್ದರೆ ಮೌನಾದಿ-ಗಳಿಂದ ಖಿನ್ನವಾಗುವುದಿಲ್ಲ ಎಂದು ಭಾವ.॥೨॥

ವಿಷಯಾಭಿಲಾಷೆ ಇಲ್ಲದವರಿಗೇನೇ ಯೋಗಾನುಷ್ಠಾನವು ಸಾಧ್ಯವೆಂದು ಹೇಳುವರು-

**ಅಥೋ ತ ಆನಂದದುಘಂ ಪದಾಂಬುಜಂ**
**ಹಂಸಾಃ ಶ್ರಯೇರನ್ನರವಿಂದಲೋಚನ ।**
**ಸುಖಂ ತು ವಿಶ್ವೇಶ್ವರ ಯೋಗಕರ್ಮಭಿಃ**
**ತ್ವನ್ಮಾಯಯಾಽಮೀ ವಿಹತಾ ನ ಮಾನಿನಃ ॥೩॥**

**ಅಥೋ** ಭಗವಂತನಲ್ಲಿ ಮನಸ್ಸಿಡದೇ ಹೋದರೆ ಕಷ್ಟವಾಗುವುದರಿಂದಲೇ **ಹಂಸಾಃ** ಅಹಂಕಾರ ಮಮಕಾರಗಳನ್ನು ತ್ಯಜಿಸಲು ಸಮರ್ಥರಾದ **ಮಾನಿನಃ** ಜ್ಞಾನಿಗಳು, **ಯೋಗಕರ್ಮಭಿಃ** ಯೋಗಾಖ್ಯಕರ್ಮದಿಂದ **ಹೇ ಅರವಿಂದ-ಲೋಚನ ವಿಶ್ವೇಶ್ವರ** ಕಮಲದಂತೆ ಕಣ್ಣುಳ್ಳ ಜಗದೊಡೆಯನೇ **ಆನಂದದುಘಂ** ಆನಂದವನ್ನೀಯುವ **ಪದಾಂಬುಜಂ** ಪಾದಕಮಲವನ್ನು **ಸುಖಂ ಶ್ರಯೇರನ್** ಅನಾಯಾಸವಾಗಿ ಆಶ್ರಯಿಸುವರು. **ಅಮೀ** ಇವರು **ತ್ವನ್ಮಾಯಾಯಾ** ನಿನ್ನ ಬಂಧಕಶಕ್ತಿಯಿಂದ **ನ ವಿಹತಾ** ಪ್ರತಿಬದ್ಧರಾಗುವುದಿಲ್ಲ. ಅಥವಾ **ಹಂಸಾಃ ಯೋಗಕರ್ಮಭಿಃ ಯಥಾ ಸುಖಂ ತು ಪದಾಂಬುಜಂ ಶ್ರಯೇರನ್ ತಥಾ ನ ಮಾನಿನಃ ತ್ವನ್ಮಾಯಯಾ ವಿಹತಾಃ ಸಂತಃ ಆನಂದದುಘಂ ಪದಾಬುಜಂ ನ ಶ್ರಯೇರನ್** ಹೀಗೂ ಯೋಜಿಸಬಹುದು. ಹೇ ಜಗದೊಡೆಯನೇ ಅಹಂಕಾರಾದಿ ದೋಷರಹಿತರಾದವರು ಧ್ಯಾನಾದಿಗಳಿಂದ ಹೇಗೆ ನಿನ್ನನ್ನು ಸುಲಭವಾಗಿ ಹೊಂದುವರೋ ಹಾಗೆ ಅಹಂಕಾರಾದಿಗಳುಳ್ಳವರು ನಿನ್ನ ಬಂಧಕಶಕ್ತಿಯಿಂದ ಪ್ರತಿಬದ್ಧರಾಗಿ ಅಭೀಷ್ಟದಾಯಕವಾದ ನಿನ್ನ ಪಾದಾರ-ವಿಂದವನ್ನು ಹೊಂದಲಾರರು.॥೩॥

**ಕಿಂ ಚಿತ್ರಮಚ್ಯುತ ತವೈತದಶೇಷಬಂಧೋಃ**
**ದಾಸೇಷ್ವನನ್ಯಶರಣೇಷು ಯದಾತ್ಮದಸ್ತ್ವಮ್।**
**ಯೋಽರೋಚಯಶ್ಚ ಪಶುಪೈಃ ಸ್ವಯಮೀಶ್ವರಾಣಾಂ**
**ಶ್ರೀಮತ್ಕಿರೀಟಮಣಿಘಟ್ಟಿತಪಾದಪೀಠಃ ॥೪॥**

ರಾಜಾಧಿರಾಜನಾದ ನನ್ನನ್ನು ಮನಬಂದಂತೆ ಪ್ರಶ್ನಿಸುವೆಯಲ್ಲ ಎಂದು ಶ್ರೀಕೃಷ್ಣನು ಅಂದಾನು ಎಂಬ ಶಂಕೆಗೆ ಉದ್ಧವನು ಉತ್ತರಿಸುವನು, ಅಥವಾ ಪ್ರಕೃತಿಯಲ್ಲಿದ್ದರೂ ಅದರಿಂದ ವಿಹತರಾಗದಿರುವುದು ನಿನ್ನ ದಾಸರಲ್ಲಿ ಆಶ್ಚರ್ಯವಲ್ಲವೆಂದು ಹೇಳುವನು-

**ಹೇ ಅಚ್ಯುತ** ಶ್ರೀಕೃಷ್ಣನೇ **ಅಶೇಷಬಂಧೋ** ಸಮಸ್ತರಿಗೂ ಆಪ್ತನಾದವನೇ **ಅನನ್ಯಶರಣೇಷು** ನಿನ್ನ ಹೊರತು ಬೇರೆ ರಕ್ಷಕರಿಲ್ಲವೆಂದು ತಿಳಿದ **ದಾಸೇಷು** ಭಕ್ತರಿಗೆ **ಯತ್** ಯಾವ ಕಾರಣ **ಆತ್ಮದಃ** ನಿನ್ನನ್ನೇ ಕೊಡುವವನು ಅಂದರೆ ಸಾಯುಜ್ಯ ಮೋಕ್ಷಪ್ರದನು **ಯಃ** ಯಾರು **ಸ್ವಯಂ ಈಶ್ವರಾಣಾಂ** ತಾವು ಜಗನ್ನಿಯಾಮಕರಾಗಿದ್ದ ಬ್ರಹ್ಮಾದಿಗಳ **ಶ್ರೀಮತ್ಕಿರೀಟಮಣಿಘಟ್ಟಿತಪಾದಪೀಠಃ** ಕಾಂತಿಯುತವಾದ ಕಿರೀಟಸಂಬದ್ಧವಾದ ಮಣಿಗಳಿಂದ ಘಟ್ಟಿಸಲ್ಪಟ್ಟ ಪಾದಪೀಠ ಉಳ್ಳವನೋ **ಸಃ ತ್ವಂ** ಅಂಥ ನೀನು **ಪಶುಪೈಃ** ಗೋ ಮತ್ತು ಗೋಪಾಲರಿಂದ **ಅರೋಚಯಃ** ಆತ್ಮದನೆಂದು ಸಖಿತ್ವಪ್ರತೀತಿಯನ್ನು ಉಂಟುಮಾಡಿದಿ. ಗೋ-ಗೋಪಾಲಕರೇ ಮುಂತಾದ ಸಜ್ಜನರಲ್ಲಿ ಪ್ರೀತಿಯನ್ನು ತೋರಿದಿ. ನಿನ್ನನ್ನು ಅವರಿಗೆ ನೀಡಿದಿ ಎಂದು ತಾತ್ಪರ್ಯ. **ಏತತ್ ಕಿಂ ಚಿತ್ರಂ** ನನ್ನ ಪ್ರಶ್ನೆಗೆ ಉತ್ತರಿಸುವ ಮೂಲಕ ನನ್ನನ್ನು ಅನುಗ್ರಹಿಸುವುದು ಒಂದು ಆಶ್ಚರ್ಯವೇ? ನಿನ್ನ ಭಕ್ತರಿಗೆ ನಿನ್ನನ್ನೇ ನೀಡುವ ನೀನು, ನನ್ನ ಪ್ರಶ್ನೆಗಳಿಗೆ ಉತ್ತರಿಸುವುದು ಆಶ್ಚರ್ಯವೇನಲ್ಲ ಎಂದು ಅಭಿಪ್ರಾಯ. ಅಂದರೆ ನೀನು ರಾಜಾಧಿರಾಜನಾದರೂ ಅಹಂಕಾರಾದಿಗಳಿಲ್ಲದ್ದರಿಂದ ನನ್ನ ಇಚ್ಛಾನುಸಾರ ಪ್ರಶ್ನೆ ಕೇಳುವುದು ಉಚಿತವು.।।೪।।

ಭಗವದ್ಭಕ್ತರ ಮಹಾತ್ಮ್ಯವು ಭಗವನ್ಮಾಹಾತ್ಮ್ಯದಿಂದ ಕೂಡಿದೆ ಎಂಬುದನ್ನು ವಿಸ್ತರಿಸುತ್ತಾ ಸಾರಾಸಾರಜ್ಞರನ್ನು ಹೇಳುವನು-

**ತಂ ತ್ವಾಽಖಿಲಾತ್ಮದಯಿತೇಶ್ವರಮಾಶ್ರಿತಾನಾಂ**
**ಸರ್ವಾರ್ಥದಂ ಸುಕೃತವಿದ್ ವಿಸೃಜೇತ ಕೋ ನು ।**
**ಕೋ ವಾ ಭಜೇತ್ ಕಿಮಪಿ ವಿಸ್ಮೃತಚಿತ್ತವೃತ್ತಿಃ**
**ಕಿಂ ವಾ ನ ವೇದ ತವ ಪಾದರಜೋಽಮೃತಾಂಭಃ ।।೫।।**

**ಅಖಿಲಾತ್ಮದಯಿತೇಶ್ವರಂ** ಎಲ್ಲ ಜೀವರಿಗೂ ಪ್ರಿಯನಾದ ಅಣಿಮಾದಿ ಐಶ್ವರ್ಯ ಉಳ್ಳ **ಆಶ್ರಿತಾನಾಂ ಸರ್ವಾರ್ಥದಂ** ತನ್ನನ್ನು ಆಶ್ರಯಿಸಿದವನಿಗೆ ಎಲ್ಲ ಅಭೀಷ್ಟವನ್ನು ನೀಡುವ **ತಂ ತ್ವಾ** ಬ್ರಹ್ಮಾದಿಗಳಿಂದ ವಂದ್ಯನಾದ ಆ ನಿನ್ನನ್ನು **ಸುಕೃತವಿತ್** ನೀನು ಮಾಡಿದ ಉಪಕಾರವನ್ನರಿತವನು ಸಾರಜ್ಞನು **ಕೋ ನು** ಯಾವನು ತಾನೇ **ವಿಸೃಜೇತ್** ತ್ಯಜಿಸಿಯಾನು **ವಿಸ್ಮೃತಚಿತ್ತವೃತ್ತಿಃ** ನಿನ್ನನ್ನು ಮರೆತವನಾಗಿ **ಕೋ ವಾ ಕಿಮಪಿ ಭಜೇತ್** ಯಾವನಾದರೂ

ಯಾವುದೋ ದೈವವನ್ನು ಸೇವಿಸಬಹುದೇ? ಸೇವಿಸುವನಾದರೆ ಅವನು **ತವ ಪಾದರಜೋಽಮೃತಾಂಭಃ** ನಿನ್ನ ಪಾದಧೂಳಿಯಿಂದ ಮಿಶ್ರಿತವಾದ ಅಮೃತಸದೃಶವಾದ ನೀರಿನ ಸ್ವಾದವನ್ನು **ಕಿಂ ವಾ ವೇದ** ತಿಳಿದಿರುವನೇನು? ಇಲ್ಲಿ ತಿಳಿದಿದ್ದರೆ ನಿನ್ನಲ್ಲಿಯೇ ಚಿತ್ತವಿರುತ್ತಿತ್ತು. ನಿನ್ನನ್ನು ಮರೆತು ಅನ್ಯರನ್ನು ಸೇವಿಸುವವನು ಪಶುವೆಂದು ಭಾವ.।।೫।।

**ನೈವೋಪಯಾಂತ್ಯಪಚಿತಿಂ ಕವಯಸ್ತವೇಶ**
**ಬ್ರಹ್ಮಾದಯೋಽಪಿ (ಬ್ರಹ್ಮಾಯುಷಾ) ನತಮೂರ್ಧ್ನ ಸದಾ ಸ್ಮರಂತಃ।**
**ಯೋಽಂತರ್ಬಹಿಸ್ತನುಭೃತಾಮಶುಭಂ ವಿಧುನ್ವನ್**
**ಆಚಾರ್ಯಚೈತ್ಯವಪುಷಾ ಸ್ವಗತಿಂ ವ್ಯನಂಕ್ಷಿ ।।೬।।**

**ಯಃ** ಯಾರು **ಅಂತಃ** ಒಳಗೂ **ಬಹಿಃ** ಹೊರಗೂ **ತನುಭೃತಾಂ** ಜೀವರಿಗೆ **ಅಶುಭಂ** ಅಮಂಗಲವನ್ನು **ವಿಧುನ್ವನ್** ಕಳೆಯುವವನಾಗಿ **ಆಚಾರ್ಯ-ಚೈತ್ಯವಪುಷಾ** ಚಿತ್ತಸ್ಥನಾದ ಆಚಾರ್ಯನಾದ ಬ್ರಹ್ಮಾಂತರ್ಯಾಮಿಯಾಗಿ ಅಥವಾ ಆಚಾರ್ಯರ (ಗುರುಗಳ) ಮನಸ್ಸಿನಲ್ಲಿರುವ ರೂಪದಿಂದ **ಸ್ವಗತಿಂ** ಅವರವರಿಗೆ ಯೋಗ್ಯವಾದ ಜ್ಞಾನವನ್ನು **ವ್ಯನಂಕ್ಷಿ** ವ್ಯಕ್ತಗೊಳಿಸುವಿ **ಹೇ ನತಮೂರ್ಧ್ನ** ಶಿರಸಾ ನಮಸ್ಕೃತನೇ **ಸದಾ ಸ್ಮರಂತಃ** ಸರ್ವದಾ ಸ್ಮರಣಮಾಡುವ **ಕವಯಃ** ಜ್ಞಾನಿಗಳಾದ **ಬ್ರಹ್ಮಾದಯಃ** ಬ್ರಹ್ಮಾದಿದೇವತೆಗಳು **ತವ ಅಪಚಿತಿಂ** ನಿನಗೆ ಪ್ರತ್ಯುಪಕಾರವನ್ನು **ನೈವ ಉಪಯಾಂತಿ** ಮಾಡಲು ಸಮರ್ಥರಲ್ಲ ಎಂದು ಭಾವ.।।೬।।

**ಶ್ರೀಶುಕ ಉವಾಚ -**

ಉದ್ಧವನ ಪ್ರಶ್ನೆಗೆ ಭಗವಂತನು ಏನು ಮಾಡಿದನು ಎಂದು ಹೇಳುವರು-

**ಇತ್ಯುದ್ಧವೇನಾತ್ಯನುರಕ್ತಚೇತಸಾ**
**ಪೃಷ್ಟೋ ಜಗತ್ಕ್ರೀಡನಕಃ ಸ್ವಶಕ್ತಿಭಿಃ ।**
**ಗೃಹೀತಮೂರ್ತಿತ್ರಯ ಈಶ್ವರೇಶ್ವರೋ**
**ಜಗಾದ ಸಪ್ರೇಮ ಮನೋಹರಸ್ಮಿತಃ ।।೭।।**

**ಅತ್ಯನುರಕ್ತಚೇತಸಾ** ಅತ್ಯಂತ ಆಸಕ್ತವಾದ ಮನಸ್ಸುಳ್ಳ **ಉದ್ಧವೇನ** ಉದ್ಧವನಿಂದ **ಇತಿ** ಈ ರೀತಿಯಾಗಿ **ಪೃಷ್ಟಃ** ಪ್ರಶ್ನಿಸಲ್ಪಟ್ಟ **ಜಗತ್ಕ್ರೀಡನಕಃ**

ಪ್ರಪಂಚವೇ ಕ್ರೀಡಾಸಾಧನವಾಗಿವುಳ್ಳ **ಸ್ವಶಕ್ತಿಭಿಃ** ಜ್ಞಾನೇಚ್ಛಾಕ್ರಿಯೆಗಳಿಂದ **ಗೃಹೀತಮೂರ್ತಿತ್ರಯಃ** ಸೃಷ್ಟಿ-ಸ್ಥಿತಿ-ಸಂಹಾರ-ಜಾಗ್ರತ್-ಸ್ವಪ್ನ-ಸುಷುಪ್ತಿ-ಗಳನ್ನು ಪ್ರವರ್ತಿಸುವುದಕ್ಕಾಗಿ ಕ್ರಮವಾಗಿ ಆತ್ಮಾ-ಅಂತಾರಾತ್ಮಾ-ಪರಮಾತ್ಮಾ ಎಂಬ ಮೂರು ಅವತಾರಗಳನ್ನು ಸ್ವೀಕರಿಸಿದ **ಈಶ್ವರೇಶ್ವರಃ** ಬ್ರಹ್ಮಾದಿಗಳಿಗೂ ನಿಯಾಮಕನಾದ ಶ್ರೀಕೃಷ್ಣನು **ಮನೋಹರಸ್ಮಿತಃ** ಚೇತೋಹಾರಿಯಾದ ಮುಗುಳ್ನಗೆಯುಳ್ಳವನಾಗಿ **ಸಪ್ರೇಮ** ಪ್ರೀತಿಯುತವಾಗಿ **ಜಗಾದ** ಮಾತಾಡಿದನು. ॥೭॥

ಮೇಲಿನ ಶ್ಲೋಕದಲ್ಲಿ ಮೂರ್ತಿಗಳು ಮೂರು ಯಾವುದು ಎಂದು ತಿಳಿಯುವುದಿಲ್ಲ ಕಾರಣ ಹೇಳುವರು-

**ತಾತ್ಪರ್ಯ-** ಆತ್ಮಾऽಂತರಾತ್ಮಾ ಪರಮಾತ್ಮೇತಿ ಮೂರ್ತಿತ್ರಯಂ ಹರೇಃ ।
ಜಾಗ್ರತ್‌ಸ್ವಪ್ನಸುಷುಪ್ತೀನಾಂ ಸೃಷ್ಟ್ಯಾದೇಶ್ಚ ಪ್ರವರ್ತಕಮ್॥ಇತಿ ತ್ರೈಕಾಲ್ಯೇ

ಆತ್ಮ, ಅಂತರಾತ್ಮ, ಪರಮಾತ್ಮ, ಎಂಬ ಮೂರು ಹರಿಯ ರೂಪಗಳು. ಜಾಗ್ರತ್, ಸ್ವಪ್ನ, ಸುಷುಪ್ತಿ, ಸೃಷ್ಟಿ, ಸ್ಥಿತಿ, ಸಂಹಾರಗಳಿಗೂ ಪ್ರವರ್ತಕಗಳಾಗಿವೆ. ಎಂದು ತ್ರೈಕಾಲ್ಯ ಎಂಬ ಗ್ರಂಥದಲ್ಲಿದೆ.॥೭॥

**ಹಂತ ತೇ ವರ್ಣಯಿಷ್ಯಾಮಿ ಮಮ ಧರ್ಮಾನ್ ಸುಮಂಗಲಾನ್ ।**
**ಯಾನ್ ಶುದ್ಧಾನಾಚರನ್ ಮರ್ತ್ಯೋ ಮೃತ್ಯುಂ ಜಯತಿ ದುರ್ಜಯಮ್ ॥**

**ಯಾನ್** ಯಾವ **ಶುದ್ಧಾನ್** ದೋಷರಹಿತಗಳಾದ ಧರ್ಮಗಳನ್ನು **ಆಚರನ್** ಮಾಡುವವನಾಗಿ **ಮರ್ತ್ಯಃ** ಮನುಷ್ಯನು **ದುರ್ಜಯಂ** ಗೆಲ್ಲಲು ಅಶಕ್ಯವಾದ (ಸಾಮಾನ್ಯರಿಂದ) **ಮೃತ್ಯುಂ ಜಯತಿ** ಜನನ-ಮರಣರೂಪವಾದ ಸಂಸಾರವನ್ನು ಗೆಲ್ಲುವನು. (ಹೊಂದಲಾರನೆಂದರ್ಥ) ಅಂತಹ **ಮಮ** ನನಗೆ ಪ್ರಿಯಕರವಾದ **ಸುಮಂಗಲಾನ್** ಪರಮಶುಭದಾಯಕಗಳಾದ **ಧರ್ಮಾನ್** ಧರ್ಮಗಳನ್ನು **ತೇ** ನಿನಗೆ **ವರ್ಣಯಿಷ್ಯಾಮಿ** ಹೇಳುವೆನು. **ಹಂತ** ಹರ್ಷವು.

**ಕುರ್ಯಾತ್ ಸರ್ವಾಣಿ ಕರ್ಮಾಣಿ ಮದರ್ಥಂ ಶನಕೈಃ ಸ್ಮರನ್ ।**
**ಮಯ್ಯರ್ಪಿತಮನಶ್ಚಿತ್ತೋ ಮದ್ಧರ್ಮಾತ್ಮಮನೋರತಿಃ ॥೯॥**

**ಮದ್ಧರ್ಮಾತ್ಮಮನೋರತಿಃ** ''ಮಮ ಧರ್ಮೇಷು ಆತ್ಮಾ ಯೇಷಾಂ ತೇ ಮದ್ಧರ್ಮಾತ್ಮಾನಃ ತೇಷು ಮನೋರತಿಃ ಯಸ್ಯ ಸಃ'' ನನ್ನ ಧರ್ಮಗಳಲ್ಲಿ

ಮನಸ್ಸುಳ್ಳ ನನ್ನ ಭಕ್ತರಲ್ಲಿ ಆಸಕ್ತವಾದ ಮನಸ್ಸುಳ್ಳವನಾಗಿ ಅಥವಾ ನನ್ನ ಸ್ವರೂಪಭೂತವಾದ ಆನಂದಾದಿಧರ್ಮಗಳಲ್ಲಿ ಮತ್ತು ನನ್ನ ರೂಪಗಳಲ್ಲಿ ಮನಸ್ಸಿಟ್ಟವನಾಗಿ ನಾನೇ ಆಧಾರವಾಗಿ ಉಳ್ಳ ಧರ್ಮಗಳಲ್ಲಿ ತನ್ನ ಮನೋರತಿಯುಳ್ಳವನಾಗಿ **ಮಯಿ** ನನ್ನಲ್ಲಿ **ಅರ್ಪಿತಮನಶ್ಚಿತ್ತಃ** ನನ್ನಲ್ಲಿ ಮನಸ್ಸುಳ್ಳವನಾಗಿ **ಸ್ಮರನ್** ನನ್ನ ಸ್ಮರಣೆ ಮಾಡುತ್ತ **ಶನಕೈಃ** ನಿಧಾನವಾಗಿ **ಮದರ್ಥಂ** ನನ್ನ ಪ್ರೀತಿಗಾಗಿ **ಸರ್ವಾಣಿ ಕರ್ಮಾಣಿ ಕುರ್ಯಾತ್** ಎಲ್ಲ ಕರ್ಮಗಳನ್ನು ಮಾಡಬೇಕು.।।೯।।

**ದೇಶಾನ್ ಪುಣ್ಯಾನ್ ಸಂಶ್ರಯೇತ ಮದ್ಭಕ್ತೈಃ ಸಾಧುಭಿಃ ಶ್ರಿತಾನ್ ।**
**ದೇವಾಸುರಮನುಷ್ಯೇಷು ಮದ್ಭಕ್ತಾಚರಿತಾನಿ ಚ ।।೧೦।।**

**ದೇವಾಸುರಮನುಷ್ಯೇಷು** ದೇವತೆಗಳು, ಅಸುರರು, ಮನುಷ್ಯರ ಮಧ್ಯದಲ್ಲಿ ತನಗೆ ಸಹವಾಸ ಮಾಡಲು ಯೋಗ್ಯರಾದ **ಸಾಧುಭಿಃ** ಸಜ್ಜನರಿಂದ **ಶ್ರಿತಾನ್** ಆಶ್ರಯಿಸಲ್ಪಟ್ಟ **ಪುಣ್ಯಾನ್** ಪುಣ್ಯಕರವಾದ **ದೇಶಾನ್** ಸ್ಥಳಗಳನ್ನು **ಸಂಶ್ರಯೇತ** ಆಶ್ರಯಿಸಬೇಕು. **ಮದ್ಭಕ್ತಾಚರಿತಾನಿ ಚ** ನನ್ನ ಭಕ್ತರು ಮಾಡಿದ ಕರ್ಮಗಳನ್ನು **ಕುರ್ಯಾತ್** ಮಾಡಲೇಬೇಕು. **ದೇವಾಸುರಮನುಷ್ಯೇಷು** ದೇವತೆಗಳಲ್ಲಿ ಬ್ರಹ್ಮ ರುದ್ರಾದಿಗಳು, ಅಸುರರಲ್ಲಿ ಪ್ರಹ್ಲಾದಾದಿಗಳು, ಮನುಷ್ಯರಲ್ಲಿ ಪ್ರಿಯವ್ರತಾದಿಗಳು, ನನ್ನ ಭಕ್ತರು ಅವರಿಂದ ಪೂಜಿತವಾದ ಪ್ರತಿಮೆಗಳಿಂದ ಸಹಿತವಾದ (**ಸ್ಥಲಾನಿ** ಸ್ಥಳಗಳನ್ನು) **ಸಂಶ್ರಯೇತ** ಆಶ್ರಯಿಸಬೇಕು ಹೀಗೂ ಅರ್ಥ.।।೧೦।।

**ಪೃಥಕ್ ಸತ್ರೇಣ ವಾ ಮಹ್ಯಂ ಮಮ ಯಾತ್ರಾಮಹೋತ್ಸವಮ್ ।**
**ಕಾರಯೇನ್ನೃತ್ಯಗೀತಾದ್ಯೈರ್ಮಹಾರಾಜವಿಭೂತಿಭಿಃ ।।೧೧।।**

**ಪೃಥಕ್** ತಾನೊಬ್ಬನೇ ಆಗಲಿ **ಸತ್ರೇಣ ವಾ** ಅನೇಕರಿಂದ ಕೂಡಿಯಾಗಲಿ **ಮಹ್ಯಂ** ನನ್ನನ್ನು ಹೊಂದಲು **ಮಮ** ನನ್ನ **ಯಾತ್ರಾಮಹೋತ್ಸವಂ** ಯಾತ್ರಾಮಹೋತ್ಸವ, ರಥೋತ್ಸವಾದಿಗಳನ್ನು **ನೃತ್ಯಗೀತಾದ್ಯೈಃ** ನರ್ತನ, ಸಂಗೀತ, ಮುಂತಾದ **ಮಹಾರಾಜವಿಭೂತಿಭಿಃ** ರಾಜಮರ್ಯಾದೆಯೊಡನೆ **ಕಾರಯೇತ್** ಮಾಡಿಸಬೇಕು ಮಾಡಲೂಬೇಕು.

ಮೇಲಿನ ಶ್ಲೋಕದಲ್ಲಿ ಪ್ರತ್ಯೇಕವಾಗಿ ಮಾಡುವ ಸತ್ರಯಾಗದಿಂದ ಎಂಬರ್ಥ ತೋರುವುದು. ಅದು ಸರಿಯಲ್ಲ. ಅನೇಕರು ಸೇರಿ ಮಾಡುವುದೇ ಸತ್ರ . ಆದ್ದರಿಂದ ತಾತ್ಪರ್ಯ ಹೇಳುವರು-

**ತಾತ್ಪರ್ಯ- ಪೃಥಕ್ ಸ್ವಯಮೇವ ಸತ್ರೇಣ ಬಹುಭಿಃ ಸಹ ವಾ ಮಮ ಯಾತ್ರಾ ಮಹೋತ್ಸವಂ ಕುರ್ಯಾತ್ ।**

ಮೂಲದಲ್ಲಿ ಪೃಥಕ್ಸತ್ರೇಣ ಎಂದು ಒಂದೇ ಪದವಲ್ಲ. ಪೃಥಕ್ ಎಂಬುದು ಬೇರೆ ಪದ. ಅದರ ಅರ್ಥ ಸ್ವಯಮೇವ ಎಂಬುದು. ಅಂದರೆ ತಾನೇ ಮಹೋತ್ಸವಾದಿಗಳನ್ನು ಮಾಡಬೇಕು ಎಂದು ಯೋಜಿಸಬೇಕು. ಎಂದಂತಾಯಿತು. ಸತ್ರೇಣ ಎಂಬ ಪದದಿಂದ ''**ಸತ್ರಯಾಗ**'' ಇಲ್ಲಿ ವಿವಕ್ಷಿತವಲ್ಲ ಆದರಂತೆ ಬಹಳ ಜನರು ಮಾಡಬೇಕೆಂಬುದೇ ವಿವಕ್ಷಿತವಾದುದು. ಎರಡು ಪಕ್ಷಗಳಿದ್ದರೆ ಮೂಲದಲ್ಲಿರುವ ''**ವಾ**'' ಶಬ್ದ ಸಾರ್ಥಕವಾಗುವುದು.।।೧೧।।

**ಮಾಮೇವ ಸರ್ವಭೂತೇಷು ಬಹಿರಂತರವಸ್ಥಿತಮ್ ।**
**ಈಕ್ಷೇತಾತ್ಮನಿ ಚಾತ್ಮಾನಂ ಯಥಾ ಖಮಮಲಾಶಯಃ ।।೧೨।।**

**ಅಮಲಾಶಯಃ** ನಿರ್ಮಲಾಂತಃಕರಣ ಉಳ್ಳ ಮನುಷ್ಯನು **ಸರ್ವಭೂತೇಷು** ಎಲ್ಲ ಪ್ರಾಣಿಗಳಲ್ಲಿ **ಆತ್ಮನಿ ಚ** ಹೃದಯದಲ್ಲಿಯೂ ತನ್ನ **ಆತ್ಮಾನಂ** ಅಂತರ್ಯಾಮಿಯಾದ **ಮಾಂ ಏವ** ನನ್ನನ್ನೇ **ಯಥಾ ಖಂ** ಆಕಾಶದಂತೆ ನಿರ್ಲಿಪ್ತನಾಗಿ **ಅವಸ್ಥಿತಂ** ಇರುವುದಾಗಿ **ಈಕ್ಷೇತ** ತಿಳಿಯಬೇಕು.।।೧೨।।

ಬಹಿರಂತರವಸ್ಥಿತಂ ಹೊರಗೂ ಒಳಗೂ ಇರುವ ಅಂದರೆ ಆವರಣ ರಹಿತನಾದ ಎಂದು ತಿಳಿಯಬೇಕು.

**ಇತಿ ಸರ್ವಾಣಿ ಭೂತಾನಿ ಮದ್ಭಾವೇನ ಮಹಾದ್ಯುತೇ ।**
**ಸಭಾಜಯೇನ್ಮನ್ಯಮಾನೋ ಜ್ಞಾನಂ ಕೇವಲಮಾಶ್ರಯನ್ ।।೧೩।।**

**ಇತಿ** ಹಿಂದೆ ಹೇಳಿದ ಗುಣವಿಶಿಷ್ಟವಾಗಿ **ಮಹಾದ್ಯುತೇ** ತೇಜಸ್ವಿಯಾದ ಉದ್ಧವನೇ **ಸರ್ವಾಣಿ ಭೂತಾನಿ** ಎಲ್ಲ ಪ್ರಾಣಿಗಳನ್ನು **ಮದ್ಭಾವೇನ ಮನ್ಯಮಾನಃ** ನನ್ನ ಸ್ಥಿತಿ ಅವುಗಳಲ್ಲಿ ಇದೆಯೆಂದು ತಿಳಿದ **ಸಭಾಜಯನ್** ಗೌರವಿಸುವನಾಗಿ

**ಕೇವಲಂ ಜ್ಞಾನಂ** ಅಪ್ರಾಕೃತವಾದ ಜ್ಞಾನವನ್ನು **ಆಶ್ರಯನ್** ಹೊಂದುವವನಾಗಿ

**ತಾತ್ಪರ್ಯ- ಸರ್ವಭೂತೇಷ್ವಸ್ತಿ ವಿಷ್ಣುರಿತಿ ಭಾವಃ ಸತಾಂ ಮತಃ ।**
**ಅನೇನ ಸರ್ವಭೂತಾನಾಮಾದಿತ್ಯೇ ತದ್ಗತಾತ್ಮನಾ ॥ ಇತಿ ಚ ।**

ಎಲ್ಲ ಪ್ರಾಣಿಗಳನ್ನು ಪೂಜಿಸುವಾಗ ಅವುಗಳಲ್ಲಿ ಶ್ರೀಹರಿ ಇರುವನು ಎಂದು ತಿಳಿಯುವುದು ಸಜ್ಜನರಿಗೆ ಸಮ್ಮತವಾದುದು. ಸೂರ್ಯನನ್ನು ಪೂಜಿಸುವಾಗ ಅವನಲ್ಲಿ ಮನಸ್ಸಿಟ್ಟು ಪೂಜಿಸಬೇಕು. ಅಂದರೆ ಪುಲ್ಕಸ ಮುಂತಾದ ಅಧಮ ಅಧಿಷ್ಠಾನದಲ್ಲಿ ಅಧಿಷ್ಠಾನವನ್ನು ಬಿಟ್ಟು ಅಲ್ಲಿರುವ ಹರಿಯನ್ನು ಮಾತ್ರ ಪೂಜಿಸಬೇಕು. ಉತ್ತಮಾಧಿಷ್ಠಾನದಲ್ಲಿ ಅಧಿಷ್ಠಾನಸಹಿತವಾಗಿ ಶ್ರೀಹರಿಯನ್ನು ಪೂಜಿಸಬೇಕು ಎಂದು ಭಾವ.॥೧೩॥

**ಬ್ರಾಹ್ಮಣೇ ಪುಲ್ಕಸೇ ಸ್ತೇನೇ ಬ್ರಹ್ಮಣ್ಯೇರ್ಕೇ ಸ್ಫುಲಿಂಗಕೇ ।**
**ಅಕ್ರೂರೇ ಕ್ರೂರಕೇ ಚೈವ ಸಮದೃಕ್ ಪಂಡಿತೋ ಮತಃ ॥೧೪॥**

**ಬ್ರಾಹ್ಮಣೇ** ಬ್ರಾಹ್ಮಣನಲ್ಲಿ (ಬ್ರಹ್ಮಣ್ಯೇ ಎಂಬ ಪಾಠದಲ್ಲಿ ಬ್ರಾಹ್ಮಣರ ವಿಷಯದಲ್ಲಿ ಸಾಧು ಆದವನು ಬ್ರಹ್ಮಣ್ಯ ಅವನಲ್ಲಿ ಎಂದರ್ಥ.) **ಪುಲ್ಕಸೇ** ಬ್ರಾಹ್ಮಣನಿಂದ ಕ್ಷತ್ರಿಯಸ್ತ್ರೀಯರಲ್ಲಿ ಜನಿಸಿದ ಮಿಶ್ರಜಾತಿಯವನಲ್ಲಿ **ಸ್ತೇನೇ** ಕಳ್ಳ ಅಥವಾ ವಂಚಕನಲ್ಲಿ **ಅರ್ಕೇ** ಸೂರ್ಯನಲ್ಲಿ **ಸ್ಫುಲಿಂಗಕೇ** ಬೆಂಕಿಯ ಕಿಡಿಯಲ್ಲಿ **ಅಕ್ರೂರೇ** ಹಿಂಸೆ ಮಾಡದ ಪ್ರಾಣಿಯಲ್ಲಿ **ಕ್ರೂರಕೇ** ಹಿಂಸ್ರಪಶುವಿನಲ್ಲಿ ಯಾಗಲಿ ಇರುವ **ಬ್ರಹ್ಮಣಿ** ಪರಮಾತ್ಮನ ವಿಷಯದಲ್ಲಿ **ಸಮದೃಕ್** ಗುಣಪೂರ್ಣ ದೋಷದೂರನು ಸ್ಥಾನದ ನೀಚೋಚ್ಚತೆಯಿಂದ ನೀಚೋಚ್ಚತೆ ಇಲ್ಲದವನು ಎಂದು ತಿಳಿದವನು **ಪಂಡಿತಃ** ಜ್ಞಾನಿಯು ಎಂದು **ಮತಃ** ಸಜ್ಜನರಿಗೆ ಸಮ್ಮತನು. **ಬ್ರಹ್ಮಣಿ** ವಿರಿಂಚನಲ್ಲಿರುವ ಹರಿ ಎಂದು ಅರ್ಥ ಮಾಡಬಹುದು.॥೧೪॥

ಈ ರೀತಿ ತಿಳಿಯುವವರಿಗೆ ಫಲ ಹೇಳುವರು-

**ನರೇಷ್ವಭೀಕ್ಷ್ಣಂ ಮದ್ಭಾವಃ ಪುಂಸೋ ಭಾವಯತೋಽಚಿರಾತ್ ।**
**ಸ್ಪ್ಯಾದ್ವಾ ಮಾಯಾ ತಿರಸ್ಕಾರಂ ಸಾಹಂಕಾರಾऽಪಿ ಯಾತಿ ಹಿ ॥೧೫॥**

**ನರೇಷು** ಮನುಷ್ಯರಲ್ಲಿ **ಮಾಂ** ನನ್ನನ್ನು **ಅಭೀಕ್ಷ್ಣಂ** ಚೆನ್ನಾಗಿ **ಭಾವಯತಃ** **ಪುಂಸಃ** ತಿಳಿಯುವ ಮನುಷ್ಯನಿಗೆ **ಅಚಿರಾತ್** ಶೀಘ್ರವಾಗಿ **ಮದ್ಭಾವಃ** ನನ್ನಲ್ಲಿ

ಭಕ್ತಿಯು **ಸ್ಯಾದ್ವಾ** ನಿಶ್ಚಿತವಾಗಿ ಉಂಟಾಗುವುದು ಅಥವಾ **ಮದ್ಭಾವಃ** ಮುಕ್ತಿಯ ಭೂತಿಯು (ಐಶ್ವರ್ಯವು) **ಸ್ಯಾತ್** ಆಗುವುದು. **ಸಾಹಂಕಾರಾಽಪಿ** ಅಹಂಕಾರ ಸಹಕಾರಿಯಾದ **ಮಾಯಾ** ಮಿಥ್ಯಾಜ್ಞಾನವು ಕೂಡ **ತಿರಸ್ಕಾರಂ ಯಾತಿ** ನಾಶವನ್ನು ಹೊಂದುವದು. ಹಿ ಶಬ್ದದಿಂದ "**ಭಕ್ತ್ಯಾಪ್ರಸನ್ನೋ ಭಗವಾನ್ ದದ್ಯಾನ್ಮುಕ್ತಿಂ ತಥಾ ಧ್ರುವಮ್**" ಎಂದು ಸ್ಮೃತಿಪ್ರಸಿದ್ಧಿಯನ್ನು ತಿಳಿಸುವರು.|| ೧೫||

ಭಕ್ತಿಯುಳ್ಳವನು ಈ ರೀತಿ ಇರಬೇಕೆಂದು ಹೇಳುವರು-

**ವಿಸೃಜ್ಯ ಸ್ವಯಮಾತ್ಮಸ್ಥಾಂ ದೃಶ್ಯವ್ರೀಡಾಂ ಚ ದೈಹಿಕೀಮ್ ।**
**ಪ್ರಣಮೇದ್ ದಂಡವದ್ ಭೂಮಾವಾಶ್ವಚಂಡಾಲಗೋಖರಮ್ ||೧೬||**

ಭಕ್ತನು **ಆತ್ಮಸ್ಥಾಂ** ಮನಸ್ಸಿನಲ್ಲಿರುವ **ಸ್ವಯಂ** ಅಹಂಕಾರವನ್ನು **ದೈಹಿಕೀಂ** ದೇಹಸಂಬಂಧಿಯಾದ **ದೃಶ್ಯವ್ರೀಡಾಂ ಚ** ಕಾಣುವ ಲಜ್ಜೆಯನ್ನು **ವಿಸೃಜ್ಯ** ತೊರೆದು **ಅಶ್ವಚಂಡಾಲಗೋಖರಂ** ನಾಯಿ, ನಾಯಿ ಬೇಯಿಸುವವ, ದನ, ಕತ್ತೆಯ ಪರ್ಯಂತವಾಗಿ **ದಂಡವತ್ ಭೂಮೌ ಪ್ರಣಮೇತ್** ಉದ್ದವಾಗಿ ನೆಲದ ಮೇಲೆ ನಮಸ್ಕರಿಸಬೇಕು. ಬ್ರಾಹ್ಮಣಾದಿಗಳಿಗೆ ಭೂಮಿಯಲ್ಲಿ ದಂಡಪ್ರಣಾಮ ಚಂಡಲಾದಿಗಳಿಗೆ ಮನಸಾ ಅಂತರ್ಯಾಮಿಯನ್ನು ಸ್ಮರಿಸುವುದೇ ಪ್ರಣಾಮ ಎಂಬ ವಿಶೇಷ ತಿಳಿಯಬೇಕು.||೧೬||

ಈ ಉಪಾಸನೆಯ ಅವಧಿಯನ್ನು ಹೇಳುವರು-

**ಯಾವತ್ ಸರ್ವೇಷು ಭೂತೇಷು ಮದ್ಭಾವೋ ನೋಪಜಾಯತೇ**
**ತಾವದೇವಮುಪಾಸೀತ ವಾಙ್ಮನಃಕಾಯವೃತ್ತಿಭಿಃ ||೧೭||**

**ಯಾವತ್** ಎಲ್ಲಿಯವರೆಗೆ **ಸರ್ವೇಷು ಭೂತೇಷು** ಎಲ್ಲ ಪ್ರಾಣಿಗಳಲ್ಲಿ **ಮದ್ಭಾವಃ** ನಾನು ಇರುವನೆಂಬ ಜ್ಞಾನವು **ಉಪಜಾಯತೇ** ಹುಟ್ಟುವುದಿಲ್ಲವೋ **ತಾವತ್** ಅಲ್ಲಿಯವರೆಗೆ **ವಾಙ್ಮನಃಕಾಯವೃತ್ತಿಭಿಃ** ಮಾತು, ಮನಸ್ಸು, ದೇಹಗಳಿಂದ **ಏವಂ ಉಪಾಸೀತ** ಈ ರೀತಿ ಉಪಾಸನೆ ಮಾಡಬೇಕು.||೧೭||

**ಸರ್ವಂ ಬ್ರಹ್ಮಾತ್ಮಕಂ ತಸ್ಯ ವಿದ್ಯಯಾಽಽತ್ಮಮನೀಷಯಾ ।**
**ಪರಿಪಶ್ಯಂತಿ ಚ ಪರಂ ಪರಮಾತ್ಮಾನಮಚ್ಯುತಮ್ ||೧೮||**

**ತಸ್ಯ** ಆ ಉಪಾಸಕರಿಗೆ **ಸರ್ವಂ** ಜಗತ್ತು **ಬ್ರಹ್ಮಾತ್ಮಕಂ** ಬ್ರಹ್ಮಾಧೀನವು ಎಂಬ ಬುದ್ಧಿಯುಂಟಾಗುವುದು. **ವಿದ್ಯಯಾ** ಈ ರೀತಿಯಾದ ಪರೋಕ್ಷ-ಜ್ಞಾನದಿಂದ **ಆತ್ಮಮನೀಷಯಾ** ಸ್ವರೂಪಜ್ಞಾನದಿಂದ **ಅಚ್ಯುತಂ** ನಾಶರಹಿತನಾದ **ಪರಮಾತ್ಮಾನಂ** ಶ್ರೀಹರಿಯನ್ನು **ಪರಂ ಪಶ್ಯತಿ** ತಮ್ಮೆಲ್ಲರಿಂದ ಭಿನ್ನನೆಂದು ತಿಳಿಯುವನು.||೧೮||

ಎಲ್ಲವೂ ಬ್ರಹ್ಮನಿಂದ ಅಭಿನ್ನವೆಂದು ತೋರುವುದು ಕಾರಣ ತಾತ್ಪರ್ಯ ಹೇಳುವರು-

**ತಾತ್ಪರ್ಯ**- ಬ್ರಹ್ಮಣಾಽಽತ್ತಮಿದಂ ಸರ್ವಂ ಯತ್ಕಿಂಚಿತ್ಸಚರಾಚರಮ್ ।
ಇತಿ ಪಶ್ಯೇತ ಯೋ ವಿದ್ವಾನ್ ಸ ಹಿ ಬ್ರಹ್ಮಾತ್ಮವಿನ್ಮತಃ । ಇತಿ ಬ್ರಾಹ್ಮೇ ।

ಚರಾಚರವಾದ ಈ ಸಮಸ್ತ ಪ್ರಪಂಚವು ಶ್ರೀಹರಿಯ ಅಧೀನವಾಗಿದೆ. ಎಂದು ಯಾವನು ತಿಳಿಯುವನೋ ಅವನೇ ಬ್ರಹ್ಮಾತ್ಮವಿತ್ ಎನಿಸಿಕೊಳ್ಳುತ್ತಾನೆ.

ಅಂದರೆ ಬ್ರಹ್ಮಾತ್ಮ ಎಂಬ ಶಬ್ದದ ಸರಿಯಾದ ಅರ್ಥಜ್ಞಾನಿ ಎಂದು ಸಜ್ಜನರ ಅಭಿಪ್ರಾಯವು. ಆತ್ಮಶಬ್ದವು ಸ್ವರೂಪ ಎಂಬ ಅರ್ಥದಲ್ಲಿ ಉಪಯೋಗಿಸಿದ್ದಲ್ಲಿ ಆದಾನಕರ್ತಾ ಎಂಬರ್ಥದಲ್ಲಿ ಉಪಯೋಗಿಸಿರುವರು ಎಂದು ಭಾವ.||೧೮||

ಸರ್ವಭೂತಗಳಲ್ಲಿ ವಿಷ್ಣು ಇರುವನು ಎಂಬುದು ಕೆಲವು ಕಾಲ ಮಾತ್ರವೇ? ಅಂದರೆ ಅಲ್ಲವೆಂದು ಹೇಳುವನು. ಬೇರೆ ರೀತಿಯಿಂದಲೂ ಮುಕ್ತಿಯಾಗುವಾಗ ಈ ಉಪಾಸನೆಯೇ ಏಕೆ ಎಂದರೆ ಹೇಳುವನು-

**ಅಯಂ ಹಿ ಸರ್ವಕಲ್ಪಾನಾಂ ಸಧ್ರೀಚೀನೋ ಮತೋ ಮಮ ।**
**ಮದ್ಭಾವಃ ಸರ್ವಭೂತೇಷು ಮನೋವಾಕ್ಕಾಯಕರ್ಮಭಿಃ ||೧೯||**

**ಮನೋವಾಕ್ಕಾಯಕರ್ಮಭಿಃ** ಮನಸ್ಸಿನಿಂದ ಸ್ಮರಣ, ಮಾತಿನಿಂದ ಸ್ತೋತ್ರ ದೇಹದಿಂದ ಪ್ರಣಾಮ, ಇವುಗಳಿಂದ **ಸರ್ವಭೂತೇಷು** ಎಲ್ಲ ಪದಾರ್ಥ-ಗಳಲ್ಲಿರುವ **ಮದ್ಭಾವಃ** ನನ್ನ ಭಕ್ತಿಯು **ಸರ್ವಕಲ್ಪಾನಾಂ** ಎಲ್ಲ ಕಲ್ಪಗಳಲ್ಲಿ ಸರ್ವಕಾಲದಲ್ಲಿ **ಸಧ್ರೀಚೀನಃ** ಸಾಧಾರಣವಾದುದು ಕಾದಾಚಿತ್ಕವಲ್ಲ ಅಥವಾ ಎಲ್ಲ ಮೋಕ್ಷೋಪಾಯಗಳಲ್ಲಿ **ಅಯಂ** ಇದು **ಸಧ್ರೀಚೀನಃ** ಶ್ರೇಷ್ಠವಾದುದು ಬೇರೆ ಮಾರ್ಗಗಳು ಆಭಾಸಗಳಷ್ಟೇ.||೧೯||

**ನ ಹ್ಯಂಗೋಪಕ್ರಮೇ ಧ್ವಂಸೋ ನ ಧೂರಸ್ಯೋದ್ಧವಾಣ್ವಪಿ ।**
**ಮಯಾ ವ್ಯವಸಿತಂ ಸಮ್ಯಜ್ ನಿರ್ಗುಣತ್ವಾದನಾಶಿಷಃ ॥೨೦॥**

**ಹೇ ಅಂಗ** ಎಲೋ ಉದ್ಧವನೇ **ಅಸ್ಯ ಉಪಕ್ರಮೇ ಕೃತೇಽಪಿ** ಈ ನನ್ನ ಧರ್ಮದ ಪ್ರಾರಂಭ ಮಾತ್ರ ಮಾಡಿದರೂ **ಧ್ವಂಸಃ ನ** ನಾಶವಿಲ್ಲ, ಫಲವಿಲ್ಲವೆಂದಲ್ಲ ಫಲವು ಇದ್ದೇ ಇದೆ ಎಂದು ಅರ್ಥ. ಈ ಧರ್ಮವನ್ನಾಚರಿಸುವವರಿಗೆ **ಧೂಃ ಅಣ್ವಪಿ ನ** ಆಯಾಸದ ಭಾರ ಅಲ್ಪವೂ ಇಲ್ಲ **ಅನಾಶಿಷಃ** ನಿಷ್ಕಾಮವಾದ ನನ್ನ ಧರ್ಮಕ್ಕೆ **ನಿರ್ಗುಣತ್ವಾತ್** ಮುಕ್ತಿಸಾಧನವಾದುದರಿಂದ **ಮಯಾ ಸಮ್ಯಜ್ವ್ಯವಸ್ಥಿತಂ** ನನ್ನಿಂದ ಚೆನ್ನಾಗಿ ನಿಶ್ಚಯಿಸಲ್ಪಟ್ಟಿದೆ. ಕಾರಣ ಬೇರೆ ಧರ್ಮದಂತೆ ಅಲ್ಲ. ''**ಪ್ರಾರಂಭಮಾತ್ರಮಿಚ್ಛಾ ವಾ ವಿಷ್ಣುಧರ್ಮೇ ನ ನಿಷ್ಫಲಾ**'' ಎಂದು ಪ್ರಮಾಣವಿದೆ.॥೨೦॥

ನನ್ನ ಭಕ್ತಿಯೇ ಸರಿಯಾದ ಸಾಧನವೆಂದು ಹೇಳಿದ್ದನ್ನು ಸಮರ್ಥಿಸುವರು-

**ಯೋ ಯೋಽಪರೋ ಮನೋಧರ್ಮಃ ಕಲ್ಪತೇ ನಿಷ್ಫಲಾಯ ತೇ ।**
**ತದಾಯಾಸೋ ನಿರರ್ಥಃ ಸ್ಯಾನ್ನಯಾದೇರಿವ ಸತ್ತಮ ॥೨೧॥**

**ಹೇ ಸತ್ತಮ** ಎಲೋ ಉದ್ಧವನೇ **ಯಃ ಯಃ ಅಪರಃ ಮನೋಧರ್ಮಃ ಕಲ್ಪತೇ** ಬೇರೆ ದೇವತೋದ್ದೇಶ್ಯಕವಾಗಿ ಧ್ಯಾನಪೂಜಾ ಮುಂತಾದ ಯಾವ ಯಾವ ಧರ್ಮವು ಮನಸಾ ಸಂಕಲ್ಪಿತವಾದುದು ಮಾಡಲ್ಪಡುತ್ತದೆಯೋ ಅದು **ತೇ** ನಿನಗೆ **ನಿಷ್ಫಲಾಯ** ಫಲರಹಿತವಾಗುವುದು. **ತದಾಯಾಸಃ** ಅದಕ್ಕಾಗಿ ಮಾಡುವ ಪ್ರಯತ್ನವು **ನಯಾದೇಃ ಇವ** ದುಷ್ಟನೀತಿಯಂತೆ **ನಿರರ್ಥಃ ಸ್ಯಾತ್** ವ್ಯರ್ಥವಾಗುವುದು.

ನಯಾದೇಃ ಎಂಬ ಶಬ್ದಾರ್ಥ ಹೇಳುವರು.

**ತಾತ್ಪರ್ಯ- ನಯಾದಿರ್ದುನಯಃ ಪ್ರೋಕ್ತೋ ಯನ್ನಯಂ**
**ಸೋಽತ್ತಿಸರ್ವದಾ ॥ ಇತಿ ಶಬ್ದತತ್ವೇ ।**

ಯಾವ ಕಾರಣ ದುರ್ನೀತಿಯು ನೀತಿಯನ್ನು ನಾಶಮಾಡುವುದೋ ಆ ಕಾರಣ ಅದನ್ನು ನಯಾದಿ ಎನ್ನುವರು ಎಂದು ಶಬ್ದತತ್ವದಲ್ಲಿ ಹೇಳಿದೆ.

**ಏಷಾ ಬುದ್ಧಿಮತಾಂ ಬುದ್ಧಿರ್ಮನೀಷಾ ಚ ಮನೀಷಿಣಾಮ್ ।**
**ಯತ್ ಸತ್ಯಮಮೃತೇನೇಹ ಮರ್ತ್ಯೇನಾಪ್ನೋತಿ ಮಾऽಮೃತಮ್॥೨೨॥**

**ಅನೃತೇನ** ಪ್ರತಿಕ್ಷಣದಲ್ಲಿಯೂ ಬದಲಾಗುವ **ಮರ್ತ್ಯೇನ** ನಶ್ವರವಾದ ಭಗವದಧೀನವಾದ ಧನದೇಹಾದಿಗಳಿಂದ ಭಗವದಾರಾಧನೆ ಮಾಡಿ ಅವನಿಂದ ಭಿನ್ನವೆಂದು ತಿಳಿಯುವುದರಿಂದ **ಋತಂ** ಮೊದಲು ತಿಳಿದಂತೆಯೇ ಇರುವ **ಸತ್ಯಂ** ಶಶ್ವದೇಕಪ್ರಕಾರನಾದ **ಮಾಂ** ನನ್ನನ್ನು **ಆಪ್ನೋತಿ ಯತ್** ಹೊಂದುವನು ಎಂಬುವುದೇನಿದೆಯೋ **ಏಷಾ** ಇದೇ ಎಲ್ಲವು ಭಗವದಧೀನ ವಾಗಿದೆ. ಅವನಿಂದ ಭಿನ್ನವಾಗಿದೆ. ಏಕಪ್ರಕಾರ ಇರುವುದಿಲ್ಲ. ಶ್ರೀಹರಿಯು ಮಾತ್ರ ಸ್ವತಂತ್ರ ಏಕ ಪ್ರಕಾರನು. ಎಂಬುದೇ **ಬುದ್ಧಿಮತಾಂ ಬುದ್ಧಿಃ** ತತ್ವನಿಶ್ಚಯ ಉಳ್ಳವರ ನಿಶ್ಚಯವು **ಮನೀಷಿಣಾಂ ಮನೀಷಾ** ಮನಸ್ಸಿನಿಂದ ಸಾರಾನ್ವೇಷಣ ಮಾಡುವವರ ಸಾರಾನ್ವೇಷಣವು ಇದೇ ಸಾರವೆಂದರ್ಥ.

**ತಾತ್ಪರ್ಯ–** ಏಕದಾ ಜ್ಞಾತರೂಪೇಣ ಯನ್ನ ತಿಷ್ಠತಿ ಸರ್ವದಾ ।
ಚಂಚಲತ್ವಾತ್ ಸತ್ಯಮಪಿ ಹ್ಯನೃತಂ ಜಗದುಚ್ಯತೇ । ಇತಿ ಚ ।

ಸರ್ವದೈಕಪ್ರಕಾರತ್ವಾತ್ ಸತ್ಯಂ ಬ್ರಹ್ಮ ಸದೋಚ್ಯತೇ॥

ಒಂದು ಸಲ ತಿಳಿದಂತೆಯೇ ಯಾವಾಗಲೂ ಇರದಿರುವುದರಿಂದ ಚಂಚಲ-ವಾದ ಪ್ರಪಂಚವು ಸತ್ಯವೇ ಆದರೂ ಅನೃತವೆಂದು ಕರೆಯಲ್ಪಡುವುದು.

ಎಲ್ಲ ಕಾಲದಲ್ಲಿ ಒಂದೇ ರೀತಿಯಾಗಿರುವುದರಿಂದ ಬ್ರಹ್ಮನು ಸತ್ಯನೆಂದು ಕರೆಯಲ್ಪಡುವನು.

ಋಗತಾವಿತಿ ಧಾತೋಸ್ತು ಪೂರ್ವಾವಗತವತ್ಸದಾ ।
ಸ್ಥಿತೇರ್ಬ್ರಹ್ಮರ್ತಮಿತ್ಯುಕ್ತಮನೃತಂ ಪರಿಣಾಮತಃ॥
ಪ್ರಕೃತಿಪ್ರಾಕೃತಂ ಪ್ರೋಕ್ತಂ... ... .. . . . . ॥

ಎಂಬ ತತ್ತ್ವೋದ್ಯೋತದಲ್ಲಿ ಗೃಹೀತ ವಚನಾನುಸಾರ ಅರ್ಥ ತಿಳಿಯಬೇಕು.

**ಏಷ ತೇऽಭಿಹಿತಃ ಕೃತ್ಸ್ನೋ ಬ್ರಹ್ಮವಾದಸ್ಯ ಸಂಗ್ರಹಃ ।**
**ಸಮಾಸವ್ಯಾಸವಿಧಿನಾ ದೇವಾನಾಮಪಿ ದುರ್ಗಮಃ ॥೨೩॥**

ಎಲೋ ಉದ್ಧವನೇ **ತೇ** ನಿನಗೆ **ದೇವಾನಾಂ ಅಪಿ** ದೇವತೆಗಳಿಗೂ ಸಹ **ದುರ್ಗಮಃ** ನನ್ನ ಅನುಗ್ರಹವಿಲ್ಲದೇ ತಿಳಿಯಲು ಅಸಾಧ್ಯವಾದ **ಬ್ರಹ್ಮವಾದಸ್ಯ ಸಂಗ್ರಹಃ** ಶ್ರೀಹರಿಯನ್ನು ತಿಳಿಸುವ ವಾದದ ಅಂದರೆ ವೇದಾದಿಶಾಸ್ತ್ರದ ಸಾರವು **ಸಮಾಸವ್ಯಾಸವಿಧಿನಾ** ಸಂಕ್ಷೇಪಶಬ್ದಗಳಿಂದ ವಿಸ್ತಾರವಾಗಿ ಅರ್ಥ ತಿಳಿಯುವಂತೆ **ಕೃತ್ಸ್ನಃ** ಪೂರ್ಣವಾಗಿ **ಅಭಿಹಿತಃ** ಹೇಳಲ್ಪಟ್ಟಿದೆ.॥೨೩॥

**ಅಭೀಕ್ಷ್ಣಶಸ್ತೇ ಗದಿತಂ ಜ್ಞಾನಂ ವಿಸ್ಪಷ್ಟಯುಕ್ತಿಮತ್ ।**
**ಏತದ್ವಿಜ್ಞಾಯ ಮುಚ್ಯೇತ ಪುರುಷೋ ನಷ್ಟಸಂಶಯಃ ॥೨೪॥**

**ತೇ** ನಿನಗೆ **ಅಭೀಕ್ಷ್ಣಶಃ** ಮತ್ತೆ ಮತ್ತೆ **ವಿಸ್ಪಷ್ಟಯುಕ್ತಿಮತ್** ಸ್ಪಷ್ಟವಾದ ಯುಕ್ತಿಗಳಿಂದ ಸಹಿತವಾದ **ಜ್ಞಾನಂ** ಶಾಸ್ತ್ರವು **ಗದಿತಂ** ಹೇಳಲ್ಪಟ್ಟಿದೆ **ಏತತ್** ನಿನಗೆ ಹೇಳಿದ ಶಾಸ್ತ್ರವನ್ನು **ವಿಜ್ಞಾಯ** ತಿಳಿದು **ನಷ್ಟಸಂಶಯಃ ಪುರುಷಃ** ಸಂಶಯರಹಿತನಾದ ಪುರುಷನು **ಮುಚ್ಯೇತ** ಬಂಧಮುಕ್ತನಾಗುವನು.॥೨೪॥

**ಸುವಿವಿಕ್ತಂ ತವ ಪ್ರಶ್ನಂ ಮಯೋಕ್ತಮಪಿ ಧಾರಯನ್ ।**
**ಸನಾತನಂ ಬ್ರಹ್ಮಗುಹ್ಯಂ ಪರಂಬ್ರಹ್ಮಾಧಿಗಚ್ಛತಿ ॥೨೫॥**

**ಸುವಿವಿಕ್ತಂ ತವ ಪ್ರಶ್ನಂ** ಬಹುವಿಸ್ತಾರವಾದ ನಿನ್ನ ಪ್ರಶ್ನೆಯನ್ನು **ಮಯಾ** ನನ್ನಿಂದ **ಉಕ್ತಂ ಅಪಿ** ಹೇಳಲ್ಪಟ್ಟ ಉತ್ತರವನ್ನು **ಧಾರಯನ್** ಕೇಳಿ ತಿಳಿದು **ಸನಾತನಂ ಬ್ರಹ್ಮಗುಹ್ಯಂ** ಅನಾದಿಯಾದ ವೇದರಹಸ್ಯವನ್ನು **ಅಧಿಗಚ್ಛತಿ** ತಿಳಿಯುವನು **ಪರಂ ಬ್ರಹ್ಮ ಅಧಿಗಚ್ಛತಿ** ಅಪರೋಕ್ಷವನ್ನು ಪಡೆದು ಶ್ರೀಹರಿಯನ್ನು ಹೊಂದುವನು.॥೨೫॥

**ಯ ಏತನ್ಮಮ ಭಕ್ತೇಷು ಸಂಪ್ರದದ್ಯಾತ್ ಸುಪುಷ್ಕಲಮ್ ।**
**ತಸ್ಯಾಹಂ ಬ್ರಹ್ಮದಾಯಸ್ಯ ದದಾಮ್ಯಾತ್ಮಾನಮಾತ್ಮನಾ ॥೨೬॥**

**ಯಃ** ಯಾವನು **ಮಮ ಭಕ್ತೇಷು** ನನ್ನ ಭಕ್ತರಲ್ಲಿ **ಸುಪುಷ್ಕಲಂ** ಅವರವರ ಯೋಗ್ಯತೆಗೆ ಸಾಕಾಗುವಷ್ಟು ಅಥವಾ ಮೋಕ್ಷಸಾಧನವಾದ **ಏತತ್** ಇದನ್ನು ಕೃಷ್ಣೋದ್ಧವಸಂವಾದವನ್ನು (ನಾನು ನಿನಗೆ ಹೇಳಿದ್ದನ್ನು) **ಸಂಪ್ರದದ್ಯಾತ್** ಚೆನ್ನಾಗಿ ಉಪದೇಶಿಸುವನೋ **ತಸ್ಯ** ಅವನಿಗೆ **ಬ್ರಹ್ಮದಾಯಸ್ಯ** ಬ್ರಹ್ಮನೇ ಆಸ್ತಿಯಾಗಿ ಉಳ್ಳ ಅಥವಾ ''**ಬ್ರಹ್ಮದಶ್ಚಾಸೌ ಆಯಶ್ಚ** '' ಬ್ರಹ್ಮನನ್ನು ಉಪದೇಶಿಸುವ ಮೂಲಕ ಶುಭದಾಯಕನಾದವನಿಗೆ **ಆತ್ಮನಾ** ಪ್ರಸನ್ನ-

ಮನಸ್ಸಿನಿಂದ **ಆತ್ಮಾನಂ** ನನ್ನನ್ನೇ ಕೊಡುವೆನು. ಅಥವಾ ತನ್ನನ್ನೇ ಅಂದರೆ ಸ್ವರೂಪಾನಂದವನ್ನು **ದದಾಮಿ** ಕೊಡುವೆನು.।।೨೬।।

**ವ್ಯಾಖ್ಯಾತುಸ್ತು ಸಮಂ ಮುಕ್ತೌ ಸುಖಂ ನಾನ್ಯಸ್ಯ ಕಸ್ಯಚಿತ್।।**

ಎಂದು ಗೀತಾತಾತ್ಪರ್ಯನಿರ್ಣಯದಲ್ಲಿ ಹೇಳಿದ್ದಾರೆ.

ಅಧ್ಯಯನ ಮಾಡುವುದರ ಫಲ ಹೇಳುವರು.

**ಯ ಏತತ್ ಸಮಧೀಯೀತ ಪವಿತ್ರಂ ಪರಮಂ ಶುಚಿ ।**
**ಸ ಪೂಯೇತಾಹರಹರ್ಮಾಂ ಜ್ಞಾನದೀಪೇನ ದರ್ಶಯನ್ ।।೨೭।।**

**ಯಃ** ಯಾವನು **ಯತ್** ಯಾವುದು **ಪವಿತ್ರಂ** ಪವಿತ್ರವಾದುದೋ ಅದಕ್ಕಿಂತಲೂ **ಪರಮಂ ಶುಚಿ** ಅತ್ಯಂತಶುದ್ಧವಾದ **ಏತತ್** ಈ ಶಾಸ್ತ್ರವನ್ನು **ಸಮಧೀಯೀತ** ಅಧ್ಯಯನ ಮಾಡುವನೋ **ಸಃ** ಅವನು **ಅಹರಹಃ** ಪ್ರತಿದಿನ **ಮಾಂ** ನನ್ನನ್ನು **ಜ್ಞಾನದೀಪೇನ ದರ್ಶಯನ್** ಪರೋಕ್ಷಜ್ಞಾನರೂಪವಾದ ದೀಪದಿಂದ ಅಪರೋಕ್ಷವಾಗಿ ನೋಡಿ **ಪೂಯೇತ** ಪವಿತ್ರನಾಗುವನು.।।೨೭।।

**ಯ ಏತತ್ ಶ್ರದ್ಧಯಾ ನಿತ್ಯಮವ್ಯಗ್ರಂ ಶ್ರುಣುಯಾನ್ನರಃ ।**
**ಮಯಿ ಭಕ್ತಿಂ ಪರಾಂ ಕುರ್ವನ್ ಕರ್ಮಭಿರ್ನ ಸ ಬಧ್ಯತೇ ।।೨೮।।**

**ಯಃ** ಯಾವನು **ಏತತ್** ಈ ಶಾಸ್ತ್ರವನ್ನು **ಶ್ರದ್ಧಯಾ** ಆಸ್ತಿಕ್ಯಬುದ್ಧಿಯಿಂದ **ನಿತ್ಯಂ** ಪ್ರತಿದಿನವೂ **ಅವ್ಯಗ್ರಂ** ಚಾಂಚಲ್ಯವಿಲ್ಲದೇ ಏಕಾಗ್ರತೆಯಿಂದ **ಶ್ರುಣುಯಾತ್** ಕೇಳುವನೋ **ಸಃ ನರಃ** ಆ ಮನುಷ್ಯನು **ಮಯಿ** ನನ್ನಲ್ಲಿ **ಪರಾಂ ಭಕ್ತಿಂ ಕುರ್ವನ್** ಉತ್ತಮವಾದ ಭಕ್ತಿಯನ್ನು ಮಾಡುವವನಾಗಿ **ಕರ್ಮಭಿಃ ನ ಬಧ್ಯತೇ** ಕರ್ಮಗಳಿಂದ ಬದ್ಧನಾಗುವುದಿಲ್ಲ. ಮುಕ್ತನಾಗುವನೆಂದರ್ಥ.।।೨೮।।

**ಅಪ್ಯುದ್ಧವ ತ್ವಯಾ ಬ್ರಹ್ಮ ಸಖೇ ಸಮುಪಧಾರಿತಮ್ ।**
**ಅಪಿ ತೇ ವಿಗತೋ ಮೋಹಃ ಶೋಕಶ್ಚಾಸೌ ಮನೋಭವಃ ।।೨೯।।**

**ಹೇ ಸಖೇ ಉದ್ಧವ** ಸ್ನೇಹಿತನಾದ ಉದ್ಧವನೇ **ತ್ವಯಾ** ನಿನ್ನಿಂದ **ಬ್ರಹ್ಮ ಸಮುಪಧಾರಿತಂ ಅಪಿ** ಬ್ರಹ್ಮನು ಚೆನ್ನಾಗಿ ತಿಳಿಯಲ್ಪಟ್ಟನೇನು? **ಮೋಹಃ ವಿಗತಃ ಅಪಿ** ಮನುಷ್ಯ ದೇಹದಿಂದ ಪ್ರಾಪ್ತವಾದ ಮಮತಾದಿಗಳು ಹೋದವೇನು? **ತೇ** ನಿನ್ನ **ಮನೋಭವಃ ಅಸೌ ಶೋಕಃ ವಿಗತಃ ಅಪಿ**

ಮನಸ್ಸಿನಲ್ಲಿದ್ದ (ಉಂಟಾದ) ಯದುಕುಲನಾಶಪ್ರಯುಕ್ತವಾದ ದುಃಖವು ಹೋಯಿತೇನು? ಎಂದು ತಾನು ಹೇಳಿದ ಜ್ಞಾನದ ಅವಧಾರಣವನ್ನು ಪ್ರಶ್ನಿಸಿದನು.॥೨೯॥

**ನೈತತ್ ತ್ವಯಾ ಡಾಂಭಿಕಾಯ ನಾಸ್ತಿಕಾಯ ಶಠಾಯ ಚ ।**
**ಅಶುಶ್ರೂಷೋರಭಕ್ತಾಯ ದುರ್ವಿನೀತಾಯ ದೀಯತಾಮ್ ॥೩೦॥**

ಎಲೋ ಉದ್ಧವನೇ **ತ್ವಯಾ** ನಿನ್ನಿಂದ **ಏತತ್** ಈ ಜ್ಞಾನವು **ಡಾಂಭಿಕಾಯ** ತಾನು ಅಲ್ಪನೆಂದು ತಿಳಿದಿದ್ದರೂ ಮಹತ್ವವನ್ನು ತೋರಿಸಿಕೊಳ್ಳುವವನಿಗೆ **ನಾಸ್ತಿಕಾಯ** ಶ್ರದ್ಧೆ ಇಲ್ಲದವನಿಗೆ **ಶಠಾಯ** ಗೂಢದ್ವೇಷ ಮಾಡುವವನಿಗೆ **ಅಶುಶ್ರೂಷೋಃ** ಕೇಳಲಿಚ್ಛೆಯಿಲ್ಲದವರಿಗೆ **ಅಭಕ್ತಾಯ** ಭಗವದ್ಭಕ್ತಿಯಿಲ್ಲದವರಿಗೆ **ದುರ್ವಿನೀತಾಯ** ವಂಚನೆಗಾಗಿ ವಿನಯ ತೋರಿಸುವವನಿಗೆ **ನ ದೀಯತಾಂ** ಉಪದೇಶಿಸಲ್ಪಡದಿರಲಿ. (ವಿನಯರಹಿತನಿಗೆ ಎಂದೂ ಅರ್ಥ ಮಾಡಬಹುದು)॥೩೦॥

**ಏತೈರ್ದೋಷೈರ್ವಿಹೀನಾಯ ಬ್ರಹ್ಮಣ್ಯಾಯ ಪ್ರಿಯಾಯ ಚ ।**
**ಸಾಧವೇ ಶುಚಯೇ ಬ್ರೂಯಾದ್ ಭಕ್ತಿಃ ಸ್ಯಾತ್ ಶೂದ್ರಯೋಷಿತಾಮ್ ॥**

**ಏತೈಃ** ಮೇಲೆ ಹೇಳಿದ **ದೋಷೈಃ** ದೋಷಗಳಿಂದ **ವಿಹೀನಾಯ** ರಹಿತ-ನಾದವನಿಗೆ **ಬ್ರಹ್ಮಣ್ಯಾಯ** ಬ್ರಾಹ್ಮಣರಲ್ಲಿ ಸಾಧುವಾದವನಿಗೆ **ಪ್ರಿಯಾಯ** ನನಗೆ ಪ್ರಿಯನಾದವನಿಗೆ **ಸಾಧವೇ** ಸಜ್ಜನನಿಗೆ **ಶುಚಯೇ** ಪವಿತ್ರನಾದವನಿಗೆ **ಬ್ರೂಯಾತ್** ಹೇಳಬೇಕು. **ಶೂದ್ರಯೋಷಿತಾಂ** ಶೂದ್ರರಿಗಾಗಲಿ ಎಲ್ಲ ಸ್ತ್ರೀಯರಿಗಾಗಲಿ **ಯದಿ ಭಕ್ತಿಃ ಸ್ಯಾತ್** ಭಕ್ತಿ ಇದ್ದರೆ ಅವರಿಗೂ **ಬ್ರೂಯಾತ್** ಹೇಳಬೇಕು ಎಂದು ಭಾವ.॥೩೧॥

**ನೈತದ್ ವಿಜ್ಞಾಯ ಜಿಜ್ಞಾಸೋರ್ಜ್ಞಾತವ್ಯಮವಶಿಷ್ಯತೇ ।**
**ಪೀತ್ವಾ ಪೀಯೂಷಮಮೃತಂ ಪಾತವ್ಯಂ ನಾವಶಿಷ್ಯತೇ ॥೩೨॥**

**ಜಿಜ್ಞಾಸೋಃ** ಜ್ಞಾನೇಚ್ಛುವಿಗೆ **ಏತತ್** ನಾನು ಹೇಳಿದ ತತ್ವವನ್ನು **ವಿಜ್ಞಾಯ** ತಿಳಿದ ಮೇಲೆ **ಜ್ಞಾತವ್ಯಂ ನ ಅವಶಿಷ್ಯತೇ** ತಿಳಿಯಬೇಕಾದುದು ಉಳಿಯುವುದಿಲ್ಲ. **ಅಮೃತಂ** ಮರಣನಾಶಕವಾದ **ಪೀಯೂಷಂ** ಸುಧೆಯನ್ನು

**ಪೀತ್ವಾ** ಕುಡಿದು, ನಂತರ **ಪಾತವ್ಯಂ ನ ಅವಶಿಷ್ಯತೇ** ಕುಡಿಯಬೇಕಾದುದು ಉಳಿಯುವುದಿಲ್ಲ.॥೩೨॥

**ಸುಧೀಂದ್ರತೀರ್ಥರ ಪ್ರಕಾರ-**

ಜ್ಞಾನದಿಂದಲೇ ಎಲ್ಲ ಪುರುಷಾರ್ಥಗಳು ಆಗುವವು ಎಂಬ ಜ್ಞಾನದ ಮಹಿಮೆಯನ್ನು ಹೇಳುವರು ಎಂದು ಸುಧೀಂದ್ರತೀರ್ಥರ ಪ್ರಕಾರ ಅವತಾರಿಕಾ. ಇವರು ದಂಡಧಾರಣೇ ಎಂಬುದರ ಬದಲಾಗಿ ಅವಧಾರಣೇ ಎಂಬ ಪಾಠವನ್ನು ಗ್ರಹಿಸಿ ಹಾಗೆಯೇ ವ್ಯಾಖ್ಯಾನಿಸಿದ್ದಾರೆ.

**ಜ್ಞಾನೇ ಕರ್ಮಣಿ ಯೋಗೇ ಚ ವಾರ್ತಾಯಾಂ ದಂಡಧಾರಣೇ ।**
**ಯಾವಾನರ್ಥೋ ನೃಣಾಂ ತಾತ ತಾವಾನ್ ಮೋಹಶ್ಚತುರ್ವಿಧಃ ॥೩೩॥**

**ಹೇ ತಾತ** ಎಲೋ ಪ್ರಿಯನೇ ಸಖನೇ **ಕರ್ಮಣಿ** ಯಜ್ಞಾದಿ ಕರ್ಮಗಳನ್ನಾಚರಿಸಿದರೆ **ಯೋಗೇ** ಯಮ-ನಿಯಮಾದಿಗಳನ್ನು ಆಚರಿಸಿದರೆ **ವಾರ್ತಾಯಾಂ** ಗುರು-ಶಿಷ್ಯರು ಮಾಡುವ ವಾದ, ಕಥಾ, ಅಥವಾ ಜಲ್ಪ ಕಥೆಯು ನಡೆದಾಗ **ಅವಧಾರಣೇ** ತತ್ವನಿರ್ಣಯವಾದಾಗ **ಯಾವಾನ್ ಅರ್ಥಃ** ಎಷ್ಟು ಸ್ವರ್ಗಾದಿರೂಪವಾದ ಪ್ರಯೋಜನವಾಗುವುದೋ **ಜ್ಞಾನೇ ಸತಿ** ಅಪರೋಕ್ಷಜ್ಞಾನವಾದಾಗ **ತಾವಾನ್** ಆ ಎಲ್ಲ ಪ್ರಯೋಜನವೂ ಆಗುವುದು. **ಚತುರ್ವಿಧಃ ಮೋಕ್ಷಶ್ಚ** ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗ, ಭೋಗ, ಎಂಬ ನಾಲ್ಕು ವಿಧ ಮೋಕ್ಷವು ಎಲ್ಲರಿಗೂ ಅಥವಾ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ, ಎಂಬ ನಾಲ್ಕು ವಿಧವಾದ ಮೋಕ್ಷವು ಅವರವರ ಯೋಗ್ಯತೆಯ ಪ್ರಕಾರವಾಗುವುದು ಎಂದು ಭಾವ.

**ವಿಜಯಧ್ವಜಿಯ ಪಾಠದ ಪ್ರಕಾರ-**

ಮಹಾಫಲವಿದ್ದರೂ ಜನರು ಪರಮಾತ್ಮನನ್ನು ಏಕೆ ತಿಳಿಯಲಿಚ್ಛಿಸುವುದಿಲ್ಲ ಎಂದರೆ ಈ ಶ್ಲೋಕದಿಂದ ಹೇಳುವರು. ಎಂದು ವಿಜಯಧ್ವಜತೀರ್ಥೀಯ ಅವತರಣಿಕಾ. ಇವರ ಪ್ರಕಾರ ಅರ್ಥ **ನೃಣಾಂ** ಜನರಿಗೆ **ಯಾವಾನ್ (ಜ್ಞಾತವ್ಯಃ)** ಅರ್ಥ ಎಷ್ಟು ತಿಳಿಯಬೇಕಾಗಿದೆಯೋ **ತಾವಾನ್ ಚತುರ್ವಿಧಃ ಮೋಹಃ** ಅಷ್ಟೇ ಮೋಹವು ಇದೆ ಇಲ್ಲಿ ನಾಲ್ಕು ವಿಧ ಎಂಬುದರ ಉಪಲಕ್ಷಣ ಪಂಚಪರ್ವ ಅವಿದ್ಯೆಯನ್ನು ತೆಗೆದುಕೊಳ್ಳಬೇಕು. ಅವಿದ್ಯೆಯಿಂದ ತಡೆಯಲ್ಪಟ್ಟಿರುವುದರಿಂದ ತಿಳಿಯಲು ಇಚ್ಛಿಸುವುದಿಲ್ಲ ಎಂದು ಅರ್ಥ.

**ಶ್ರೀನಿವಾಸತೀರ್ಥರ ಪ್ರಕಾರ-**

ಶ್ರೀನಿವಾಸತೀರ್ಥರ ಪ್ರಕಾರ ಹಿಂದೆ ಭಗವಂತನನ್ನು ತಿಳಿದ ಮೇಲೆ ಬೇರೆ ತಿಳಿಯುವುದೇನು ಉಳಿಯುವುದಿಲ್ಲ ಎಂದು ಹೇಳಿದ್ದು ಸರಿಯಲ್ಲ. ಬೇರೆ ಸಾಕಷ್ಟು ಜ್ಞಾನ ಮಾಡಿಕೊಳ್ಳುವುದು ಕಂಡಿದೆ. ಎಂದರೆ ಅದೆಲ್ಲವೂ ಮೋಹಕ್ಕೆ ಕಾರಣ ಅಥವಾ ಮೋಹದ ಕಾರ್ಯ ಎಂದು ಹೇಳುವರು ಎಂದು ಅವತಾರಿಕೆ.

**ಜ್ಞಾನೇ** ಭಗವಂತನಿಂದ ಭಿನ್ನವಾದ ವಸ್ತುಗಳ ಜ್ಞಾನ ಮಾಡಿಕೊಂಡರೇ **ಕರ್ಮಣಿ** ದುಷ್ಟಕರ್ಮಗಳನ್ನು ಮಾಡಿದರೆ **ಯೋಗೇ** ಇತರ ಯೋಗಾನುಷ್ಠಾನ ಮಾಡಿದರೆ **ವಾರ್ತಾಯಾಂ** ವ್ಯಾಪಾರ ಮಾಡಿದರೆ **ದಂಡಧಾರಣೇ** ದಂಡಧಾರಣ ಮಾಡುವುದರಿಂದ **ಯಾವಾನ್ ಅರ್ಥಃ** ಎನಿದೆಯೋ **ತಾವಾನ್** ಅದೆಲ್ಲವೂ **ಚತುರ್ವಿಧಮೋಹಃ** ಅಜ್ಞಾನಕ್ಕೆ ಸಾಧನವು ಅಥವಾ ಅಜ್ಞಾನಸಾಧ್ಯವು ಆದ್ದರಿಂದ ಬೇರೆ ತಿಳಿಯಬೇಕಾದ್ದಿಲ್ಲ ಎಂದು ತಿಳಿಯಬೇಕು.

**ತಾಮ್ರಪರ್ಣಿಯ ಪ್ರಕಾರ -**

ಜ್ಞಾನಶಾಸ್ತ್ರದಲ್ಲಿ, ಕರ್ಮಶಾಸ್ತ್ರದಲ್ಲಿ, ಧ್ಯಾನಾದಿ ಯೋಗಶಾಸ್ತ್ರದಲ್ಲಿ, ವಾಣಿಜ್ಯ ಶಾಸ್ತ್ರದಲ್ಲಿ, ದಂಡನೀತಿ ತಿಳಿಸುವ ಶಾಸ್ತ್ರದಲ್ಲಿ ಇವುಗಳಲ್ಲಿ ಮನುಷ್ಯನಿಗೆ ಏನು ತಿಳಿಯಬೇಕಾಗಿದೆಯೋ ಅದೆಲ್ಲವೂ ಇದರಿಂದ ತಿಳಿಯುತ್ತದೆ. ನಾಲ್ಕು ವಿಧ ಮೋಹವು ನಾಶವಾಗುವುದು (ಶೇಷ) ಈಶ್ವರ, ಪ್ರಕೃತಿ, ಜೀವ, ಜಡ, ಎಂಬ ನಾಲ್ಕು ವಿಷಯದಲ್ಲಿ ಬಂದದ್ದರಿಂದ ಮೋಹ ನಾಲ್ಕು ವಿಧ ಎಂದಿದ್ದಾರೆ. ಕಾರಣ ಜ್ಞಾತವ್ಯ ಉಳಿಯುವುದಿಲ್ಲ ಎಂದಿದ್ದಾರೆ.॥೩೩॥

ತಿಳಿಯಲು ಪ್ರಯತ್ನಿಸದಿದ್ದರೆ ಮೋಕ್ಷವೇ ಇಲ್ಲವೇ ಎಂದರೆ ಹೇಳುವರು- ಅನಾದಿ ಕಾಲದಿಂದ ಸಂಸಾರದಲ್ಲಿ ಇರುವವನಿಗೆ ನನ್ನ ಅನುಗ್ರಹದಿಂದ ಮೋಕ್ಷೋಪಾಯವಾದ ಜ್ಞಾನಾದಿಗಳು ಆಗುವವು ಎಂದು ಹೇಳುವರು-

**ಮರ್ತ್ಯೋ ಯದಾ ತ್ಯಕ್ತಸಮಸ್ತಕರ್ಮಾ**
**ನಿವೇಶಿತಾತ್ಮಾ ವಿಚಿಕೀರ್ಷಿತೋ ಮೇ ।**
**ತದಾಮೃತತ್ವಂ ಪ್ರತಿಪದ್ಯಮಾನೋ**
**ಮಯಾಽಽತ್ಮಭೂಯಾಯ ಚ ಕಲ್ಪತೇಽಸೌ ॥೩೪॥**

**ಯದಾ** ಯಾವಾಗ **ಮೇ** ನನ್ನಿಂದ **ವಿಚಿಕೀರ್ಷಿತಃ ಭವತಿ** ಇವನನ್ನು ಮುಕ್ತನನ್ನಾಗಿ ಮಾಡುವನೆಂಬ ಇಚ್ಛಾವಿಷಯನಾಗುವನೋ **ತದಾ** ಆಗ **ಮರ್ತ್ಯಃ** ಚೇತನನು ಮನುಷ್ಯನು **ತ್ಯಕ್ತಸಮಸ್ತಕರ್ಮಾ ಭವತಿ** ನನ್ನಲ್ಲಿ ಎಲ್ಲ ಕರ್ಮಗಳನ್ನು ಸಮರ್ಪಣ ಮಾಡಿದವನಾಗುವನು. ಅಂದರೆ ಶ್ರೀಹರಿಯೇ ಎಲ್ಲ ಕರ್ಮಗಳಲ್ಲಿ ಸ್ವತಂತ್ರನಾದ ಕರ್ತೃವು ತದನಂತರ ತತ್ವದೇವತೆಗಳು ಅವನ ಅಧೀನಕರ್ತೃಗಳು ನಾನು ಎಲ್ಲ ಕರ್ಮಗಳಲ್ಲಿ ಅಸ್ವತಂತ್ರಕರ್ತೃವು ಎಂಬ ನಿಶ್ಚಯ ಉಳ್ಳವನಾಗುವನು. (ಶ್ರವಣಾದಿಗಳನ್ನು ಮಾಡಿ ಎಂದರ್ಥ) **ನಿವೇಶಿತಾತ್ಮಾ ಭವತಿ** ನನ್ನಲ್ಲಿ ಮನಸ್ಸಿಟ್ಟವನಾಗುವನು. ಧ್ಯಾನಾದಿಗಳನ್ನು ಮಾಡುವನೆಂದರ್ಥ. **ಮಯಾ** ನನ್ನಿಂದ **ಅಮೃತತ್ವಂ** ಬಂಧಮುಕ್ತತ್ವವನ್ನು **ಪ್ರತಿಪದ್ಯಮಾನಃ** ಹೊಂದಿದವನಾಗಿ **ಅಸೌ** ಇವನು **ಆತ್ಮಭೂಯಾಯ** ನಿಃದುರ್ಖಾನಂದರೂಪವಾದ ತನ್ನ ಸ್ವರೂಪಾನಂದವನ್ನು ಅನುಭವಿಸಲು **ಕಲ್ಪತೇ** ಸಮರ್ಥನಾಗುವನು.

**ಶ್ರೀಶುಕ ಉವಾಚ -**

**ಸ ಏವಮಾದರ್ಶಿತಯೋಗಮಾರ್ಗಃ**
**ತದೋತ್ತಮಶ್ಲೋಕವಚೋ ನಿಶಮ್ಯ ।**
**ಬದ್ಧಾಂಜಲಿಃ ಪ್ರೀತ್ಯುಪರುದ್ಧಕಂಠೋ**
**ನ ಕಿಂಚಿದೂಚೇಽಶ್ರುಪರಿಪ್ಲುತಾಕ್ಷಃ ॥೩೫॥**

**ಸಃ ಏವ** ಹಿಂದೆ ಹೇಳಿದಂತೆ **ಆದರ್ಶಿತಯೋಗಮಾರ್ಗಃ** ಭಕ್ತಿ, ಜ್ಞಾನಗಳೆಂಬ ಮೋಕ್ಷೋಪಾಯಮಾರ್ಗ ಉಳ್ಳವನಾಗಿ **ಉತ್ತಮಶ್ಲೋಕವಚಃ ನಿಶಮ್ಯ** ಪುಣ್ಯಕೀರ್ತಿಯಾದ ಶ್ರೀಹರಿಯ ಮಾತನ್ನು **ನಿಶಮ್ಯ** ಕೇಳಿ **ಬದ್ಧಾಂಜಲಿಃ** ಕೈ ಜೋಡಿಸಿ **ಪ್ರೀತ್ಯುಪರುದ್ಧಕಂಠಃ** ಭಕ್ತಿಯಿಂದ ಬಿಗಿದ ಕಂಠ ಉಳ್ಳವನಾಗಿ **ಅಶ್ರುಪರಿಪ್ಲುತಾಕ್ಷಃ** ಆನಂದಬಾಷ್ಪ ತುಂಬಿದ ಕಣ್ಣುಗಳುಳ್ಳವನಾಗಿ **ನ ಕಿಂಚಿದೂಚೇ** ಏನೂ ಮಾತಾಡಲಿಲ್ಲ.॥೩೫॥

**ವಿಷ್ಟಭ್ಯ ಚಿತ್ತಂ ಪ್ರಣಯೇನ ಪೂರ್ಣಂ**
**ಧೈರ್ಯೇಣ ರಾಜನ್ ಬಹುಮನ್ಯಮಾನಃ ।**
**ಕೃತಾಂಜಲಿಃ ಪ್ರಾಹ ಯದುಪ್ರವೀರಂ**
**ಶಿರ್ಷ್ಣಾ ಸ್ಪೃಶನ್ ತಚ್ಚರಣಾರವಿಂದಮ್ ॥೩೬॥**

**ರಾಜನ್** ಪರೀಕ್ಷಿತನೇ **ಪ್ರಣಯೇನ** ಪೂರ್ಣಭಕ್ತಿಯಿಂದ ಕೂಡಿದ **ಚಿತ್ತಂ** ಮನಸ್ಸನ್ನು **ಧೈರ್ಯೇಣ ವಿಷ್ಟಭ್ಯ** ಧೈರ್ಯದಿಂದ ಸ್ಥಿರಪಡಿಸಿಕೊಂಡು **ಶಿರ್ಷ್ಣಾ ತಚ್ಚರಣಾರವಿಂದಂ ಸ್ಪ್ರುಶನ್** ತಲೆಬಾಗಿ ನಮಸ್ಕರಿಸುತ್ತಾ **ಕೃತಾಂಜಲಿಃ** ಕೈ ಜೋಡಿಸಿ **ಯದುಪ್ರವೀರಂ** ಶ್ರೀಕೃಷ್ಣನನ್ನು **ಬಹುಮನ್ಯಮಾನಃ** ಗೌರವಿಸುವವನಾಗಿ **ಪ್ರಾಹ** ಈ ರೀತಿ ಹೇಳಿದನು.॥೩೬॥

**ಉದ್ಧವ ಉವಾಚ -**

**ವಿದ್ರಾವಿತೋ ಮೋಹಮಯೋಽಂಧಕಾರೋ**
**ಯ ಆಶ್ರಿತೋ ಮೇ ತವ ಸನ್ನಿಧಾನಾತ್ ।**
**ವಿಭಾವಸೋಃ ಕಿನ್ನು ಸಮೀಪಗಸ್ಯ**
**ಶೀತಂ ತಮೋಽಭಿಪ್ರಭವತ್ಯಜಾದ್ಯ ॥೩೭॥**

**ಮೇ** ನನ್ನ ಮನದಲ್ಲಿ **ಆಶ್ರಿತಃ ಮೋಹಮಯಃ ಅಂಧಕಾರಃ** ವಿಪರೀತಜ್ಞಾನಜನಕವಾದ ಅಜ್ಞಾನವು **ತವ ಸನ್ನಿಧಾನಾತ್** ನಿನ್ನ ಸಾನ್ನಿಧ್ಯದಿಂದ **ವಿದ್ರಾವಿತಃ** ಓಡಿಸಲ್ಪಟ್ಟಿತು **ಅಜಾದ್ಯ** ಜನಿರಹಿತನು ಸರ್ವಕಾರಣನು ಅಥವಾ ಬ್ರಹ್ಮನಿಗೂ ಕಾರಣನಾದ ಶ್ರೀಕೃಷ್ಣನೇ **ವಿಭಾವಸೋಃ** ಅಗ್ನಿಯ **ಸಮೀಪಗಸ್ಯ** ಹತ್ತಿರದಲ್ಲಿರುವವನಿಗೆ **ಶೀತಂ** ಚಳಿಯಾಗಲಿ **ತಮಃ** ಕತ್ತಲೆಯಾಗಲಿ **ಅಭಿಪ್ರಭವತಿ ಕಿಂ ನು** ಬೆಳೆಯುವುದೇನು? ಬೆಳೆಯಲಾರದು ಎಂದರ್ಥ.

**ಪ್ರವರ್ಧಿತಾ ಮೇ ಭವತಾಽನುಕಂಪಿತಾ**
**ದತ್ತೋ ಹಿ ವಿಜ್ಞಾನಮಯಃ ಪ್ರದೀಪಃ ।**
**ಹಿತ್ವಾ ಕೃತಜ್ಞಸ್ತವ ಪಾದಮೂಲಂ**
**ಕೋಽಜ್ಞಃ ಸಮೀಯಾಚ್ಛರಣಂ ತ್ವದನ್ಯಮ್ ॥೩೮॥**

**ಭವತಾ** ನಿನ್ನಿಂದ **ಮೇ** ನನ್ನ ವಿಷಯದಲ್ಲಿ **ಅನುಕಂಪಿತಾ** ದಯೆಯು **ಪ್ರವರ್ಧಿತಾ** ಬೆಳೆಸಲ್ಪಟ್ಟಿತು. ವಿಶೇಷದಯೆ ಮಾಡಿದಿ ಎಂದರ್ಥ. **ವಿಜ್ಞಾನಮಯಃ ಪ್ರದೀಪಃ ದತ್ತಃ** ಜ್ಞಾನದೀಪವು ಕೊಡಲ್ಪಟ್ಟಿತು. **ಹಿ** ಆದ ಕಾರಣ **ಕೃತಜ್ಞಃ** ಉಪಕಾರಸ್ಮರಣ ಉಳ್ಳವನು **ತವ ಪಾದಮೂಲಂ ಹಿತ್ವಾ** ನಿನ್ನ ಪಾದಾರವಿಂದವನ್ನು ಬಿಟ್ಟು **ತ್ವದನ್ಯಂ ಶರಣಂ** ನಿನ್ನಿಂದ ಭಿನ್ನವಾದ ಮಾಯೆಯನ್ನು **ಕಃ ಅಜ್ಞಃ ಸಮೀಯಾತ್** ಯಾವ ದಡ್ಡನು ಹೊಂದಿಯಾನು? ಹೊಂದಲಾರನೆಂದು ಭಾವ.॥೩೮॥

**ವೃಕ್ಣಶ್ಚ ಮೇ ಸುದೃಢಃ ಸ್ನೇಹಪಾಶೋ**
**ದಾಶಾರ್ಹವೃಷ್ಣ್ಯಂಧಕಸಾತ್ವತೇಷು ।**
**ಪ್ರಸಾರಿತಃ ಸೃಷ್ಟಿವಿವೃದ್ಧಯೇ ತ್ವಯಾ**
**ಸ್ವಮಾಯಯಾ ಹ್ಯಾತ್ಮಸುಬೋಧಹೇತಿನಾ ॥೩೯॥**

**ತ್ವಯಾ** ನಿನ್ನಿಂದ **ಸೃಷ್ಟಿವಿವೃದ್ಧಯೇ** ಪಾಲನಪೋಷಣಾದಿಗಳಿಂದ ಬೆಳೆಯುವುದಕ್ಕಾಗಿ **ಪ್ರಸಾದಿತಃ** ವಿಸ್ತರಿಸಲ್ಪಟ್ಟ **ದಾಶಾರ್ಹವೃಷ್ಣ್ಯಂಧಕಸಾತ್ವತೇಷು** ಎಲ್ಲ ಯಾದವ ಪ್ರಭೇದಗಳಲ್ಲಿ **ಸುದೃಢಸ್ನೇಹಪಾಶಃ** ನಿರೂಢವಾದ ಮಮತೆಯ ಸಂಕೋಲೆಯು **ಸ್ವಮಾಯಯಾ** ನಿನ್ನ ಇಚ್ಛೆಯಿಂದ (ಇನ್ನು ಇವನನ್ನು ಸಂಸಾರದಲ್ಲಿ ಇಡಲಾರೆನೆಂಬ) **ಆತ್ಮಸುಭೋಧಹೇತಿನಾ** ಪರಮಾತ್ಮಜ್ಞಾನವೆಂಬ ಆಯುಧದಿಂದ **ವೃಕ್ಣಃ** ಕತ್ತರಿಸಲ್ಪಟ್ಟಿತು.॥೩೯॥

**ನಮೋಽಸ್ತು ತೇ ಮಹಾಯೋಗಿನ್ ಪ್ರಪನ್ನಮನುಶಾಧಿ ಮಾಮ್ ।**
**ಯಥಾ ತ್ವಚ್ಚರಣಾಂಭೋಜೇ ರತಿಃ ಸ್ಯಾದನಪಾಯಿನೀ ॥೪೦॥**

**ಹೇ ಮಹಾಯೋಗಿನ್** ನಿತ್ಯಸಿದ್ಧನಾದ ಶ್ರೀಕೃಷ್ಣನೇ **ತೇ** ನಿನಗೆ **ನಮಃ** ನಮಸ್ಕಾರವು **ಪ್ರಪನ್ನಂ ಮಾಂ** ಶರಣಾಗತನಾದ ನನ್ನನ್ನು **ತ್ವಚ್ಚರಣಾಂಭೋಜೇ** ನಿನ್ನ ಪಾದಕಮಲದಲ್ಲಿ **ಅನಪಾಯಿನೀ ರತಿಃ ಯಥಾ ಸ್ಯಾತ್ ತಥಾ ಅನುಶಾಧಿ** ಎಂದೂ ಕುಂದದಿರುವ ಆಸಕ್ತಿ ಉಂಟಾಗುವಂತೆ ಶಿಕ್ಷಣವನ್ನು ನೀಡು. ಎಂದು ಪ್ರಾರ್ಥಿಸಿದನು.॥೪೦॥

**ಶ್ರೀಭಗವಾನುವಾಚ –**

**ಗಚ್ಛೋದ್ಧವ ಮದಾದೇಶಾದ್ ಬದರ್ಯಾಖ್ಯಂ ಮದಾಶ್ರಮಮ್ ।**
**ತತ್ರ ಮತ್ಪಾದತೀರ್ಥೋದೇ ಸ್ನಾನೋಪಸ್ಪರ್ಶನೈಃ ಶುಚಿಃ ॥೪೧॥**

**ಹೇ ಉದ್ಧವ** ಉದ್ಧವನೇ **ಮದಾದೇಶಾದ್** ನನ್ನ ಆಜ್ಞೆಯಿಂದ **ಬದರ್ಯಾಖ್ಯಂ ಮದಾಶ್ರಮಂ** ಬದರೀ ಎಂಬ ನನ್ನ ಆಶ್ರಮಕ್ಕೆ **ಗಚ್ಛ** ಹೋಗು. **ತತ್ರ** ಅಲ್ಲಿ **ಮತ್ಪಾದತೀರ್ಥೋದೇ** ನನ್ನ ಪಾದೋದಕವಾದ ಗಂಗೆಯಲ್ಲಿ **ಸ್ನಾನೋಪಸ್ಪರ್ಶನೈಃ** ಸ್ನಾನ ಆಚಮನಗಳಿಂದ **ಶುಚಿಃ** ಶುದ್ಧನು ಆಗಿ, ॥೪೧॥

**ಈಕ್ಷಯಾಽಲಕನಂದಾಯಾ ವಿಧೂತಾಶೇಷಕಲ್ಮಷಃ ।**
**ವಸಾನೋ ವಲ್ಕಲಾನ್ಯಂಗ ವನ್ಯಭಕ್ಷಶ್ಚ ನಿಸ್ಪೃಹಃ ॥೪೨॥**

**ಅಂಗ** ಹೇ ಉದ್ಧವನೇ **ಅಲಕನಂದಾಯಾಃ ಈಕ್ಷಯಾ** ಗಂಗೆಯನ್ನು ನೋಡುವುದರಿಂದ **ವಿಧೂತಾಶೇಷಕಲ್ಮಷಃ** ಎಲ್ಲ ಪಾಪಗಳಿಂದ ರಹಿತನಾಗಿ **ವಲ್ಕಲಾನಿ** ನಾರುಬಟ್ಟೆಯನ್ನು ಉಟ್ಟುಕೊಂಡು, **ವನ್ಯಭಕ್ಷಶ್ಚ** ಅಡವಿಯಲ್ಲಿ ಬೆಳೆದ ಹಣ್ಣು ಗೆಡ್ಡೆಗೆಣಸುಗಳನ್ನು ತಿನ್ನುತ್ತ **ನಿಸ್ಪೃಹಃ** ಯಾವುದನ್ನೂ ಅಪೇಕ್ಷಿಸದೇ ಸುಖವಾಗಿ ಇರುವವನಾಗಿ,।।೪೨।।

**ತಿತಿಕ್ಷುರ್ದ್ವಂದ್ವಮಾತ್ರಾಣಾಂ ಸುಶೀಲಃ ಸಂಯತೇಂದ್ರಿಯಃ ।**
**ಶಾಂತಃ ಸಮಾಹಿತಧಿಯಾ ಜ್ಞಾನವಿಜ್ಞಾನಸಂಯುತಃ ।।೪೩।।**

**ದ್ವಂದ್ವಮಾತ್ರಾಣಾಂ** ಶೀತೋಷ್ಣಾದಿಗಳು, ಶಬ್ದಾದಿವಿಷಯಗಳು, **ತಿತಿಕ್ಷುಃ** ಅವುಗಳಿಂದಾಗುವ ದೇಹವಿಕಾರ ಮತ್ತು ಮನೋವಿಕಾರಗಳನ್ನು ಸಹನ-ಮಾಡುವ ಸಮರ್ಥನು **ಸುಶೀಲಃ** ಒಳ್ಳೆ ಆಚಾರವಂತನು **ಸಂಯತೇಂದ್ರಿಯಃ** ಇಂದ್ರಿಯ ಜಯವುಳ್ಳವನು **ಸಮಾಹಿತಧಿಯಾ** ವಶವಾದ ಮನಸ್ಸಿನಿಂದ **ಶಾಂತಃ** ಭಗವನ್ನಿಷ್ಠವಾದ ಬುದ್ಧಿಯುಳ್ಳವನು **ಜ್ಞಾನವಿಜ್ಞಾನಸಂಯುತಃ** ಸಾಮಾನ್ಯಜ್ಞಾನ, ವಿಶೇಷಜ್ಞಾನಗಳಿಂದ, ಕೂಡಿದವನೂ ಆಗಿ,।।೪೩।।

**ಮತ್ತೋಽನುಶಿಕ್ಷಿತಂ ಯತ್ತೇ ವಿವಿಕ್ತಮನುಭಾವಯನ್ ।**
**ಮಯ್ಯಾವೇಶಿತವಾಕ್ಚಿತ್ತೋ ಮದ್ಧರ್ಮನಿರತೋ ಭವ ।।೪೪।।**

**ಅತಿಕ್ರಮ್ಯ (ಅತಿವ್ರಜ್ಯ) ಗತೀಸ್ತಿಸ್ರೋ ಮಾಮೇಷ್ಯಸಿ ತತಃ ಪರಮ್।।೪೫।।**

**ಮತ್ತಃ** ನನ್ನಿಂದ **ಅನುಶಿಕ್ಷಿತಂ ಯತ್** ಕಲಿಯಲ್ಪಟ್ಟಿದ್ದು ಏನಿದೆಯೋ **ತತ್** ಅದನ್ನು **ವಿವಿಕ್ತಂ** ಏಕಾಂತದಲ್ಲಿ **ಅನುಭಾವಯನ್** ಅನುಭವಕ್ಕೆ ತಂದುಕೊಳ್ಳುತ್ತ **ಮಯಿ** ನನ್ನಲ್ಲಿ **ಆವೇಶಿತವಾಕ್ಚಿತ್ತಃ** ಇಡಲ್ಪಟ್ಟ ಮಾತು ಮನಸ್ಸು ಉಳ್ಳವನಾಗಿ **ಮದ್ಧರ್ಮನಿರತಃ ಭವ** ನನ್ನ ಧರ್ಮದಲ್ಲಿ ಆಸಕ್ತನಾಗು. **ತಿಸ್ರಃ ಗತೀಃ** ನರಕ, ಭೂಮಿ, ಸ್ವರ್ಗಗಳನ್ನು ಭೂಃ, ಭುವಃ, ಸ್ವಃ, ಎಂಬ ಮೂರು ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥಾಗಳನ್ನು **ಅತಿಕ್ರಮ್ಯ** ದಾಟಿದವನಾಗಿ **ತತಃ** ನಂತರ **ಪರಂ** ಸರ್ವೋತ್ತಮನಾದ **ಮಾಂ** ನನ್ನನ್ನು **ಏಷ್ಯತಿ** ಹೊಂದುವಿ.

**ಶ್ರೀಶುಕ ಉವಾಚ –**

**ಸ ಏವಮುಕ್ತೋ ಹರಿಮೇಧಸೋದ್ಧವಃ**
**ಪ್ರದಕ್ಷಿಣಂ ತಂ ಪರಿವೃತ್ಯ ಪಾದಯೋಃ ।**

**ಶಿರೋ ನಿಧಾಯಾಶ್ರುಕಲಾಭಿರಾರ್ದ್ರಧೀಃ**
**ಸಿಂಚನ್ ಪದದ್ವಂದ್ವಮಥೋ ನ ಚಕ್ರಮೇ (ಅನುಚಕ್ರಮೇ)॥೪೬॥**

**ಹರಿಮೇಧಸಾ** ಶ್ರೀವಿಷ್ಣುವಿನಿಂದ **ಏವಂ ಉಕ್ತಃ** ಈ ರೀತಿ ಹೇಳಿಸಿಕೊಳ್ಳಲ್ಪಟ್ಟ **ಸಃ ಉದ್ಧವಃ** ಆ ಉದ್ಧವನು **ತಂ** ಅವನನ್ನು **ಪ್ರದಕ್ಷಿಣಂ ಪರಿವೃತ್ಯ** ಪ್ರದಕ್ಷಿಣೆಯನ್ನು ಮಾಡಿ **ಪಾದಯೋಃ ಶಿರಃ ನಿಧಾಯ** ಪಾದಗಳಲ್ಲಿ ತಲೆಯನ್ನಿಟ್ಟು **ಪದದ್ವಂದ್ವಂ** ಪಾದಗಳೆರಡನ್ನು **ಅಶ್ರುಕಲಾಭಿಃ ಸಿಂಚನ್** ಕಣ್ಣೀರುಗಳಿಂದ ಸಿಂಪಡಿಸುತ್ತ **ಆರ್ದ್ರಧೀಃ** ಸ್ನೇಹ ಜಲದಿಂದ ತೊಯ್ಯದೇ ಆರ್ದ್ರವಾದ ಮನುಸ್ಸುಳ್ಳವನಾಗಿ **ಅಥೋ** ನಂತರ **ಅನುಚಕ್ರಮೇ** ನಿಧಾನವಾಗಿ ಹೊರಟನು.॥೪೬॥

**ನ ಚಕ್ರಮೇ** ಹೊರಡಲಿಲ್ಲ ಎಂದರ್ಥ. ಅದರ ವಿವರಣೆ ಮುಂದಿನ ಶ್ಲೋಕದಲ್ಲಿ ಇದೆ.

**ಸುದುಸ್ತ್ಯಜಸ್ನೇಹವಿಯೋಗಕಾತರೋ**
**ನ ಶಕ್ನುವಂಸ್ತಂ ಪರಿಹರ್ತುಮಾತುರಃ॥**
**ಕೃಚ್ಛ್ರಂ ಯಯೌ ಮೂರ್ಧನಿ ಭರ್ತೃಪಾದುಕೇ**
**ಬಿಭ್ರನ್ನಮಸ್ಕೃತ್ಯ ಯಯೌ ಪುನಃ ಪುನಃ ॥೪೭॥**

**ಸುದುಸ್ತ್ಯಜ** ಬಿಡಲು ಅಸಾಧ್ಯವಾದ **ಸ್ನೇಹವಿಯೋಗಕಾತರಃ** ಭಕ್ತಿಯಿಂದ ವಿರಹದಿಂದ ದುಃಖಿತನಾಗಿ **ತತ್** ಕಾರ್ಯವನ್ನು **ಪರಿಹರ್ತುಂ** ಪರಿಹಾರ ಮಾಡಲು **ನ ಶಕ್ನುವನ್** ಸಮರ್ಥನಾಗಲಿಲ್ಲ. **ಆತುರಃ** ದುಃಖಿತನಾಗಿ **ಭರ್ತೃಪಾದುಕೇ** ಸ್ವಾಮಿಯ ಪಾದುಕೆಗಳನ್ನು **ಮೂರ್ಧನಿ ಬಿಭ್ರನ್** ತಲೆಯಲ್ಲಿ ಧರಿಸಿಕೊಂಡು **ಪುನಃ ಪುನಃ ನಮಸ್ಕೃತ್ಯ** ಮತ್ತೆ ಮತ್ತೆ ವಂದಿಸುತ್ತ **ಕೃಚ್ಛ್ರಂ ಯಯೌ** ಕಷ್ಟದಿಂದ ತೆರಳಿದನು.॥೪೭॥

**ತತಸ್ತಮಂತರ್ಹೃದಿ ಸನ್ನಿವೇಶ್ಯ**
**ಗತೋ ಮಹಾಭಾಗವತೋ ವಿಶಾಲಾಮ್ ।**
**ಯಥೋಪದಿಷ್ಟಂ ಜಗದೇಕಬಂಧುನಾ**
**ತಪಃ ಸಮಾಸ್ಥಾಯ ಹರೇರಗಾದ್ ಗತಿಮ್ ॥೪೮॥**

**ತತಃ** ಅಲ್ಲಿಂದ **ತಂ** ಶ್ರೀಕೃಷ್ಣನನ್ನು **ಅಂತಃ ಹೃದಿ ಸನ್ನಿವೇಶ್ಯ** ಮನಸ್ಸಿನಲ್ಲಿಟ್ಟು-ಕೊಂಡು (ಧ್ಯಾನಿಸುತ್ತ) **ಮಹಾಭಾಗವತಃ** ಶ್ರೀಕೃಷ್ಣನ ಭಕ್ತನಾದ ಉದ್ಧವನು

**ವಿಶಾಲಾಂ ಗತಃ** ಬದರಿಗೆ ಹೋಗಿ **ಜಗದೇಕಬಂಧುನಾ** ಸಮಸ್ತಪ್ರಪಂಚಕ್ಕೆ ಮುಖ್ಯ ಉಪಕಾರಕನಾದ ಶ್ರೀಕೃಷ್ಣನಿಂದ **ಯಥೋಪದಿಷ್ಟಂ** ಉಪದೇಶಿಸಿದಂತೆ **ತಪಃ** ತಪಸ್ಸನ್ನು **ಸಮಾಸ್ಥಾಯ** ಮಾಡಿ **ಹರೇಃ ಗತಿಂ** ಶ್ರೀಹರಿಯ ಸ್ಥಾನವನ್ನು **ಅಗಾತ್** ಹೊಂದಿದನು.।।೪೮।।

**ಯದೇತದಾನಂದಸಮುದ್ರಸಂಭೃತಂ**
**ಜ್ಞಾನಾಮೃತಂ ಭಾಗವತಾಯ ಭಾಷಿತಮ್ ।**
**ಕೃಷ್ಣೇನ ಯೋಗೇಶ್ವರಸೇವಿತಾಂಘ್ರಿಣಾ**
**ಸಚ್ಛ್ರದ್ಧಯಾऽऽಸೇವ್ಯ ಜಗದ್ ವಿಮುಚ್ಯತೇ ।।೪೯।।**

**ಯದೇತತ್** ಯಾವ ಈ **ಯೋಗೇಶ್ವರಸೇವಿತಾಂಘ್ರಿಣಾ** ಯೋಗಿಗಳಿಗೆ ನಿಯಾಮಕರಾದ ಬ್ರಹ್ಮಾದಿಗಳಿಂದ ಸೇವಿಸಲ್ಪಡುವ ಪಾದವುಳ್ಳ ಶ್ರೀಕೃಷ್ಣನಿಂದ **ಭಾಗವತಾಯ ಭಾಷಿತಂ** ಭಕ್ತನಾದ ಉದ್ಧವನಿಗೆ ಹೇಳಿದ, ಆನಂದಸಮುದ್ರ-ದಿಂದ ಉದ್ಧೃತವಾದ ಅಥವಾ ಆನಂದಸಮುದ್ರನಾದ ಶ್ರೀಕೃಷ್ಣನಿಂದ ಉತ್ಪನ್ನವಾದ **ಜ್ಞಾನಾಮೃತಂ** ಜರಾ-ಮರಣಗಳನ್ನು ಕಳೆಯುವ ಜ್ಞಾನವೆಂಬ ಅಮೃತವನ್ನು **ಆಸೇವ್ಯ** ಪಾನಮಾಡಿ **ಜಗತ್ ವಿಮುಚ್ಯತೇ** ಸಜ್ಜನಪ್ರಪಂಚವೇ ಬಂಧಮುಕ್ತವಾಗುವುದು.।।೪೯।।

ಭಗವಂತನಲ್ಲಿರುವ ಭಕ್ತರ ಮೇಲಿನ ದಯೆಯನ್ನು ಕಂಡು ಆಶ್ಚರ್ಯ-ಪಡುತ್ತ ಮುಂದಿನ ಗ್ರಂಥ ಮುಂದುವರೆಯಲು ಶ್ರೀಶುಕ ಮುನಿಗಳು ಭಗವಂತನ ಪ್ರಸಾದಾಕಾಂಕ್ಷಿಗಳಾಗಿ ಭಗವಂತನನ್ನು ನಮಿಸುವರು.

**ಭವಭಯಮಪಹಂತುಂ ಜ್ಞಾನವಿಜ್ಞಾನಸಾರಂ**
**ನಿಗಮಕುಮುದದಭ್ರಂ ಭೃಂಗವದ್ ವೇದ್ಯಸಾರಮ್ ।**
**ಅಮೃತಮುದಧಿಕಲ್ಪಂ ಪಾಯಯನ್ ಭೃತ್ಯವರ್ಗಾನ್**
**ಪುರುಷಋಷಭಮಾದ್ಯಂ ವಿಷ್ಣುಸಂಜ್ಞಂ ನತೋऽಸ್ಮಿ ।।೫೦।।**

**ಯಃ** ಯಾರು **ಭವಭಯಂ** ಸಂಸಾರಭಯವನ್ನು **ಅಪಹಂತುಂ** ನಿಃಶೇಷವಾಗಿ ಕಳೆಯಲು **ಜ್ಞಾನವಿಜ್ಞಾನಸಾರಂ** ಸಾಮಾನ್ಯಜ್ಞಾನ, ವಿಶೇಷಜ್ಞಾನವೆಂಬ, ಶ್ರೇಷ್ಠ ರಸ ಉಳ್ಳ **ನಿಗಮಕುಮುದದಭ್ರಂ** ವೇದವೆಂಬ ಕಮಲದ ಏಕದೇಶ ಶಬ್ದದಲ್ಲಿ ಅಲ್ಪಸಿದ್ಧವಾದ **ವೇದ್ಯಸಾರಂ** ಜ್ಞಾತವ್ಯದಲ್ಲಿ ಶ್ರೇಷ್ಠವಾದ **ಉದಧಿ**

**ಕಲ್ಪಂ** ಅರ್ಥದಲ್ಲಿ ಯೋಗ್ಯತಾನುಸಾರ ಸಮುದ್ರದಂತೆ ಇರುವ **ಅಮೃತಂ** ತನ್ನ ಕೀರ್ತಿ ಎಂಬ ಅಮೃತವನ್ನು **ಭೃಂಗವತ್** ಜೇನುರಾಜನು ಭೃತ್ಯ-ಜೇನುಗಳಿಗೆ ಅಥವಾ ರಾಣಿಜೇನಿಗೆ ಪಾನ ಮಾಡಿಸುವಂತೆ **ಪಾಯಯನ್ ಆಸ್ತೇ** ಪಾನ ಮಾಡಿಸುತ್ತಿರುವನೋ **ತಂ ಅಥ ಪುರುಷಂ** ಪೂರ್ಣಷಡ್ಗುಣನಾದ **ಋಷಭಂ** ಸರ್ವೋತ್ತಮನಾದ **ಆದ್ಯಂ** ಸರ್ವಕಾರಣನಾದ **ವಿಷ್ಣುಸಂಜ್ಞಂ** ಶ್ರೀವಿಷ್ಣುಎಂಬ ಹೆಸರಿನ ಶ್ರೀಹರಿಯನ್ನು **ನತೋಽಸ್ಮಿ** ನಮಸ್ಕರಿಸುವೆನು.॥೫೦॥

**॥ ಇತಿ ಶ್ರೀಮದ್ಭಾಗವತೇ ಏಕಾದಶಸ್ಕಂಧೇ ಏಕೋನವಿಂಶೋಽಧ್ಯಾಯಃ ॥**

★★★



# ಅಥ ತ್ರಿಂಶೋಽಧ್ಯಾಯಃ

ಭಗವಂತನ (ಬಂಧಕ) ಮೋಹಕಶಕ್ತಿಯ ಮಾಹಾತ್ಮ್ಯವನ್ನು ಪ್ರಕಟಗೊಳಿಸಲು ಯಾದವರು ಪರಸ್ಪರ ಹೊಡೆದಾಡಿ ನಿಧನರಾದದ್ದು, ಸಜ್ಜನರಿಗೆ ಸಂತೋಷವಾಗಲು ನಾಲ್ಕು ಕೈ ಮುಂತಾದ ಲಕ್ಷಣವುಳ್ಳ ತನ್ನ ರೂಪವನ್ನು ತೋರಿಸುವುದು, ದುರ್ಜನರನ್ನು ಮೋಹಗೊಳಿಸಲು ಜರನೆಂಬ ಬೇಡನ ಬಾಣದಿಂದ ಗಾಯಗೊಂಡ ಪಾದವನ್ನು ತೋರಿಸುವುದು, ಬೇಡನಿಗೆ ಸ್ವರ್ಗವನ್ನೀಯುವುದು ಇವೆಲ್ಲವನ್ನು ಈ ಅಧ್ಯಾಯದಲ್ಲಿ ಹೇಳುವರು-

ಮೊದಲಿಗೆ ಪರೀಕ್ಷಿತನು ಮಾಡಿದ ಪ್ರಶ್ನೆಯ ರೀತಿಯನ್ನು, ಶ್ರೀಹರಿಯ ಮಾತಿನಿಂದ ಯಾದವರು ದ್ವಾರಕೆಯಿಂದ ಹೊರಟು ಪ್ರವಾಸಕ್ಕೆ ಪ್ರಯಾಣ ಮಾಡಿದ್ದು, ತೀರ್ಥ ಸ್ನಾನಮಾಡಿ ಬ್ರಾಹ್ಮಣ ಮುಂತಾದವರ ಪೂಜೆ ಮಾಡಿದ್ದನ್ನೂ ಹೇಳುವರು-

**ರಾಜೋವಾಚ-**

ಪರೀಕ್ಷಿತನು ಪ್ರಶ್ನಿಸುವನು-

**ತತೋ ಮಹಾಭಾಗವತ ಉದ್ಧವೇ ಬದರೀಂ ಗತೇ ।**
**ದ್ವಾರವತ್ಯಾಂ ಕಿಮಕರೋದ್ ಭಗವಾನ್ ಭೂತಭಾವನಃ ॥೧॥**

**ಮಹಾಭಾಗವತ** ಶ್ರೇಷ್ಠಭಗವದ್ಭಕ್ತನಾದ **ಉದ್ಧವೇ** ಉದ್ಧವನು **ತತಃ** ದ್ವಾರಕೆಯಿಂದ **ಬದರೀಂ ಗತೇ** ಬದರಿಗೆ ಪ್ರಯಾಣ ಮಾಡುತ್ತಿರಲು (**ತತಃ** ಅನಂತರ) **ದ್ವಾರವತ್ಯಾಂ** ದ್ವಾರಕೆಯಲ್ಲಿ **ಭೂತಭಾವನಃ** ಸಮಸ್ತಪ್ರಾಣಿಗಳಿಗೆ ತಮ್ಮ ತಮ್ಮ ಗತಿಯನ್ನು ಹೊಂದಿಸುವ (ಭೂತಾನಿ ಭಾವಯತಿ ಇತಿ ಭೂತಭಾವನಃ) **ಭಗವಾನ್** ಶ್ರೀಕೃಷ್ಣನು **ಕಿಂ ಅಕರೋತ್** ಏನು ಮಾಡಿದನು?

**ಬ್ರಹ್ಮಶಾಪೋಪಸಂಸೃಷ್ಟೇ ಸ್ವಕುಲೇ ಯಾದವರ್ಷಭಃ ।**
**ಪ್ರೇಯಸೀಂ ಸರ್ವನೇತ್ರಾಣಾಂ ತನುಂ ಸ ಕಥಮತ್ಯಜತ್ ॥೨॥**

**ಸ್ವಕುಲೇ** ತನ್ನ ಯಾದವಕುಲವು **ಬ್ರಹ್ಮಶಾಪೋಪಸಂಸೃಷ್ಟೇ** ಬ್ರಾಹ್ಮಣರ ಶಾಪಕ್ಕೊಳಗಾಗುತ್ತಿರಲು **ಯಾದವರ್ಷಭಃ** ಯಾದವರಿಗೆ ಶ್ರೇಷ್ಠನಾದ **ಸಃ** ಶ್ರೀಕೃಷ್ಣನು **ಸರ್ವನೇತ್ರಾಣಾಂ** ಎಲ್ಲರ ಕಣ್ಣುಗಳಿಗೆ **ಪ್ರೇಯಸೀಂ** ಪ್ರಿಯವಾದ **ತನುಂ** ದೇಹವನ್ನು **ಕಥಂ** ಹೇಗೆ **ಅತ್ಯಜತ್** ಭೂಲೋಕದಿಂದ ಸ್ವರ್‌ಲೋಕಕ್ಕೆ

ಹರಣಮಾಡಿದನು.

ಈ ಶ್ಲೋಕದಲ್ಲಿ ಶ್ರೀಹರಿಯು ದೇಹತ್ಯಾಗ ಮಾಡಿದನೆಂದು ಅರ್ಥ ತೋರುವುದು. ಕಾರಣ ವ್ಯಾಖ್ಯಾನಿಸುವರು-

**ತಾತ್ಪರ್ಯ- ತನುಂ ಅತ್ಯಜತ್ ಅತಿಶಯೇನಾಹರತ್ । ಅಜ ಹರಣೇ ಇತಿ ಧಾತೋಃ ಭೂಲೋಕಾತ್ ಸ್ವರ್ಗಲೋಕಂ ಪ್ರತ್ಯಹರತ್ ಇತ್ಯರ್ಥಃ॥**

ಅತ್ಯಜತ್ ಎಂಬಲ್ಲಿಯ ಅತಿ ಶಬ್ದಕ್ಕೆ ಅತಿಶಯವೆಂದರ್ಥ. ಅತ್ಯಜತ್ ಎಂದರೆ ಅಹರತ್ ಎಂದರ್ಥ ಮಾಡಿದಂತಾಯಿತು. ಭಾವಾರ್ಥ ಭೂಲೋಕದಿಂದ ಸ್ವರ್ಗಲೋಕಕ್ಕೆ ತಿರುಗಿ ಕೊಂಡೊಯ್ದನೆಂದರ್ಥ.

ಶ್ರೀಕೃಷ್ಣನ ಸೌಂದರ್ಯಾತಿಶಯವನ್ನು ವರ್ಣಿಸುವರು-

**ಪ್ರತ್ಯಾಕ್ರಷ್ಟುಂ ನಯನಮಬಲಾ ಯತ್ರ ಮಗ್ನಂ ನ ಶೇಕುಃ**
**ಕರ್ಣಾವಿಷ್ಟಂ ನ ಸರತಿ ಯಶೋ ಯತ್ ಸತಾಮಾತ್ಮಲಗ್ನಮ್ ।**
**ಯಚ್ಛ್ರೀವಾಕ್ಯಂ ಜನಯತಿ ರತಿಂ ಕೋಽನುಮಾನಃ ಕವೀನಾಂ**
**ದೃಷ್ಟ್ವಾ ಜಿಷ್ಣೋರ್ಯುಧಿ ರಥಗತಂ ಯಚ್ಚ ತತ್ಸಾಮ್ಯಮೀಯುಃ ॥**

**ಅಬಲಾಃ** ಸ್ತ್ರೀಯರು **ಯತ್ರ** ಯಾವ ಶ್ರೀಕೃಷ್ಣನ ದೇಹದಲ್ಲಿ **ಮಗ್ನಂ** ಸೌಂದರ್ಯಾತಿಶಯದಿಂದ ಸಂಬದ್ಧವಾದ **ನಯನಂ** ಕಣ್ಣನ್ನು **ಪ್ರತ್ಯಾಕ್ರಷ್ಟುಂ** ತಿರುಗಿ ತೆಗೆದುಕೊಳ್ಳಲು **ನ ಶೇಕುಃ** ಸಮರ್ಥರಾಗಲಿಲ್ಲವೋ **ಯತ್** ಯಾವ ಕಾರಣ **ಕರ್ಣಾವಿಷ್ಟಂ** ಕಿವಿಯಲ್ಲಿ ಪ್ರವೇಶಿಸಿದ **ಯಶಃ** ಶ್ರೀಕೃಷ್ಣನ ಕೀರ್ತಿಯು **ಸತಾಂ** ಸಜ್ಜನರ **ಆತ್ಮಲಗ್ನಂ** ಮನಸ್ಸಿನಲ್ಲಿ ಸಂಬದ್ಧವಾದುದು **ನ ಸರತಿ** ಹೊರಗೆ ಹೋಗಲಾರದೋ, ಮರೆಯಲಾರದೋ **ಯಚ್ಛ್ರೀವಾಕ್ಯಂ** ಯಾವ ಶ್ರೀಕೃಷ್ಣನ ತತ್ತ್ವೋಪದೇಶರೂಪವಾದ ವಾಕ್ಯವು **ರತಿಂ ಜನಯತಿ** ನಿತ್ಯಸುಖವನ್ನುಂಟು ಮಾಡುವುದೋ **ಯಃ** ಯಾವನು **ಕಃ** ಸುಖರೂಪನೋ **ಕವೀನಾಂ** ಜ್ಞಾನಿಗಳಿಗೆ **ಅನುಮಾನಃ** ಪ್ರಮಾಣಾನುಸಾರ ತಿಳಿಸಲ್ಪಡುವವನೋ **ಯುಧಿ** ಮಹಾಭಾರತ ಯುದ್ಧದಲ್ಲಿ **ಜಿಷ್ಣೋಃ** ಅರ್ಜುನನ **ರಥಗತಂ** ರಥದಲ್ಲಿರುವ **ಯತ್** ಯಾವ ದೇಹವನ್ನು **ದೃಷ್ಟ್ವಾ** ನೋಡಿ **ತತ್ಸಾಮ್ಯಂ ಇಯುಃ** ಸಾತ್ವಿಕಕ್ಷತ್ರಿಯರು ದುಃಖ-ರಹಿತರಾಗಿ ಅಂಥ ಪರಮಾತ್ಮನ ಸಾಮ್ಯವನ್ನು ಹೊಂದಿದರೋ, ಅಂಥ ಮಹಾಮಹಿಮೆಯಿಂದ ಸಂಪನ್ನನು ಶ್ರೀಕೃಷ್ಣನು.

**ತಾತ್ಪರ್ಯ- ಕಃ ಸುಖರೂಪಃ । ಅನುಮಾನಃ ಕವಿನಾಂ ಮಾನಾನುಸಾರೀ ।**

ಮೇಲಿನ ಶ್ಲೋಕದಲ್ಲಿ ಶ್ರೀಕೃಷ್ಣನೆಂದು ನಿರ್ಧಾರವಿರುವುದರಿಂದ ಕಃ ಎಂಬುದು ಪ್ರಶ್ನಾರ್ಥಕವಾಗಲಾರದು. ಶ್ರೀಹರಿಯು ಅನುಮಾನವಾಗಲು ಸಾಧ್ಯವಿಲ್ಲ. ಅವನ ಇರುವಿಕೆಗೆ ಪ್ರಯೋಜನಕವಾದ ವ್ಯಾಪಕವಾದುದು ಬೇರೊಂದು ಇಲ್ಲ . ಇದ್ದರೂ ಪುಲ್ಲಿಂಗ ಕೂಡುವುದಿಲ್ಲ. ಕಾರಣ ಮಾನಾನುಸಾರೀ ಅನುಮಾನಃ ಎಂದು ಈ ರೀತಿ ಅರ್ಥ ಮಾಡಿರುವರು.

''**ಯಚ್ಛ್ರೀವಾಚಾ**'' ಎಂಬ ಪಾಠವಿರುವುದೆಂದು ಸುಧೀಂದ್ರರ ವ್ಯಾಖ್ಯಾನದಲ್ಲಿ ಕಂಡು ಬರುವುದು. ಆಗ ಟಾಬಂತವಾದ ವಾಚಾ ಶಬ್ದವು ಪ್ರಥಮಾಂತ ಎಂದು ತಿಳಿಯಬೇಕು. ಎರಡನೆಯ ಪಾದದಲ್ಲಿ '**ನ ಸರತಿ ತತೋ**' ಎಂಬ ಪಾಠವಿಟ್ಟುಕೊಂಡು ತತಃ ಆ ದೇಹದಿಂದ ಪ್ರತ್ಯಾಕೃಷ್ಟುಂ ಎಂದು ಅರ್ಥ ಮಾಡಿರುವರು. ಮೂರನೆಯ ಪಾದದಲ್ಲಿ ''**ಯಚ್ಛ್ರೀವಾಚಾಂ ಜನಯತಿ ರತಿಂ ಕೋಽನುಮಾನಃಕವಿನಾಂ**'' ಎಂಬ ಪಾಠಾನುಸಾರ ವಿಜಯಧ್ವಜರ ವ್ಯಾಖ್ಯಾನವಿದೆ. ಲಕ್ಷ್ಮಿಯ ಮಾತಿಗೂ ಶ್ರೋತೃಗಳಿಗೂ ರತಿಯನ್ನು ಹುಟ್ಟಿಸುವುದು. ''**ಕೋಽನುಮಾನಃ**'' ಎಂಬ ಪಾಠವೇ ತಾತ್ಪರ್ಯಕಾರರಿಗೆ ಸಮ್ಮತವಾದುದು.

**ಶ್ರೀಶುಕ ಉವಾಚ -**

**ದಿವಿ ಭುವ್ಯಂತರಿಕ್ಷೇ ಚ ಮಹೋತ್ಪಾತಾನ್ ಸಮುತ್ಥಿತಾನ್ ।**
**ದೃಷ್ಟ್ವಾಽಽಸೀನಾನ್ ಸುಧರ್ಮಾಯಾಂ ಕೃಷ್ಣಃ ಪ್ರಾಹ ಯದೂನಿದಮ್ ॥**

**ದಿವಿ** ಸ್ವರ್ಗದಲ್ಲಿ **ಭುವಿ** ಭೂಲೋಕದಲ್ಲಿ **ಅಂತರಿಕ್ಷೇ** ಅಂತರಿಕ್ಷಲೋಕದಲ್ಲಿ **ಸಮುತ್ಥಿತಾನ್** ಉತ್ಪನ್ನವಾದ **ಮಹೋತ್ಪಾತಾನ್** ಅನಿಷ್ಟಸೂಚಕಗಳಾದ ಧೂಮಕೇತು ಮುಂತಾದವನ್ನು **ದೃಷ್ಟ್ವಾ** ನೋಡಿ **ಸುಧರ್ಮಾಯಾಂ** ಆ ಹೆಸರಿನ ಸಭಾಭವನದಲ್ಲಿ **ಆಸೀನಾನ್** ಕುಳಿತಿರುವ **ಯಾದವಾನ್ ಪ್ರತಿ** ಯಾದವರನ್ನು ಕುರಿತು **ಇದಂ** ಮುಂದೆ ಹೇಳುವ ಮಾತನ್ನು **ಕೃಷ್ಣಃ** ಶ್ರೀಕೃಷ್ಣನು **ಪ್ರಾಹ** ಹೇಳಿದನು.॥೪॥

**ಶ್ರೀಭಗವಾನುವಾಚ -**

**ಏತೇ ಘೋರಾ ಮಹೋತ್ಪಾತಾ ದ್ವಾರ್ವತ್ಯಾಂ ಯಮಕೇತವಃ ।**
**ಮುಹೂರ್ತಮಪಿ ನ ಸ್ಥೇಯಮತ್ರ ವೋ ಯದುಪುಂಗವಾಃ ॥೫॥**

**ಹೇ ಯದುಪುಂಗವಾಃ** ಯಾದವಶ್ರೇಷ್ಠರೇ **ದ್ವಾರ್ವತ್ಯಾಂ** ದ್ವಾರಕೆಯಲ್ಲಿ **ಏತೇ** ಈ **ಘೋರಾಃ** ಭಯಂಕರಗಳಾದ **ಉತ್ಪಾತಾಃ** ಅಪಶಕುನಗಳು **ಯಮಕೇತವಃ** ಮರಣ ಸೂಚಕವಾದವುಗಳು **ದೃಶ್ಯಂತೇ** ಕಾಣುತ್ತಿರುವವು. ಇವುಗಳನ್ನು ನೋಡಿದ ನಾವುಗಳು **ಅತ್ರ** ಇಲ್ಲಿ **ಮೂಹರ್ತಮಪಿ ನ ಸ್ಥೇಯಂ** (೪೮ ನಿಮಿಷ ಒಂದು ಮುಹೂರ್ತ.) ಮೂಹೂರ್ತದಷ್ಟು ಕಾಲವೂ ಇರಕೂಡದು ಇದ್ದರೆ ನಾಶವಾಗುವೆವು.

**ಸ್ತ್ರಿಯೋ ಬಾಲಾಶ್ಚ ವೃದ್ಧಾಶ್ಚ ಶಂಖೋದ್ಧಾರಂ ವ್ರಜಂತ್ವಿತಃ ।**
**ವಯಂ ಪ್ರಭಾಸಂ ಯಾಸ್ಯಾಮೋ ಯತ್ರ ಪ್ರತ್ಯಕ್ ಸರಸ್ವತೀ ॥೬॥**

**ಸ್ತ್ರೀಯಃ** ಹೆಣ್ಣುಮಕ್ಕಳು **ಬಾಲಾಃ** ಹುಡುಗರು **ವೃದ್ಧಾಃ** ಮುದುಕರು **ಇತಃ** ಇಲ್ಲಿಂದ **ಶಂಖೋದ್ಧಾರಂ** ಇಲ್ಲಿ ಶ್ರೀಕೃಷ್ಣನು ಸಮುದ್ರದಿಂದ ಪಂಚಜನ ರಾಕ್ಷಸನಿಂದ ಆವೃತವಾದ ಶಂಖವನ್ನು ತೆಗೆದದ್ದು. ಶಂಖೋದ್ಧಾರ ಎಂಬ ಸ್ಥಳಕ್ಕೆ **ವ್ರಜಂತು** ಹೋಗಲಿ **ಯತ್ರ** ಎಲ್ಲಿ **ಪ್ರತ್ಯಕ್ ಸರಸ್ವತೀ ವರ್ತತೇ** ಪಶ್ಚಿಮ ವಾಹಿನಿಯಾದ ಸರಸ್ವತಿಯು ಗುಪ್ತವಾಗಿ ಹರಿಯುವಳೋ ಅಂಥ **ಪ್ರಭಾಸಂ** ಪ್ರಭಾಸಕ್ಷೇತ್ರಕ್ಕೆ **ವಯಂ** ನಾವು **ಯಾಸ್ಯಾಮಃ** ಹೋಗೋಣ.॥೬॥

**ತತ್ರಾಭಿಷಿಚ್ಯ ಶುಚಯ ಉಪೋಷ್ಯ ಸುಸಮಾಹಿತಾಃ ।**
**ದೇವತಾಃ ಪೂಜಯಿಷ್ಯಾಮಃ ಸ್ನಪನಾಲೇಪನಾರ್ಹಣೈಃ ॥೭॥**

**ತತ್ರ** ಸರಸ್ವತಿಯಲ್ಲಿ **ಅಭಿಷಿಚ್ಯ** ಸ್ನಾನಮಾಡಿ **ಶುಚಯಃ** ಶುದ್ಧರಾಗಿ **ಉಪೋಷ್ಯ** ಉಪವಾಸ ಮಾಡಿ **ಸುಸಮಾಹಿತಾಃ** ಏಕಾಗ್ರಚಿತ್ತರಾಗಿ **ದೇವತಾಃ** ದೇವತೆಗಳನ್ನು **ಸ್ನಪನಾಲೇಪನಾರ್ಹಣೈಃ** ಅಭಿಷೇಕ, ಗಂಧಲೇಪನ, ಮತ್ತು ಆಭರಣ, ಮುಂತಾದ ಪೂಜಾಸಾಧನಗಳಿಂದ **ಪೂಜಯಿಷ್ಯಾಮಃ** ಪೂಜೆಯನ್ನು ಮಾಡೋಣ.॥೭॥

**ಬ್ರಾಹ್ಮಣಾಂಸ್ತು ಮಹಾಭಾಗಾನ್ ಕೃತಸ್ವಸ್ತ್ಯಯನಾ ವಯಮ್ ।**
**ಗೋಭೂಹಿರಣ್ಯವಾಸೋಭಿರ್ಗಜಾಶ್ವರಥವೇಶ್ಮಭಿಃ ॥೮॥**

**ಕೃತಸ್ವಸ್ತ್ಯಯನಾಃ ವಯಂ** ಪುಣ್ಯಾಹವಾಚನವನ್ನು ಮಾಡಿದ ನಾವು **ಮಹಾಭಾಗಾನ್** ಭಾಗ್ಯಶಾಲಿಗಳಾದ **ಬ್ರಾಹ್ಮಣಾನ್** ಬ್ರಾಹ್ಮಣರನ್ನು **ಗೋ** ಆಕಳು **ಭೂ** ಭೂಮಿ, **ಹಿರಣ್ಯ** ಚಿನ್ನ, **ವಾಸೋಭಿಃ** ವಸ್ತ್ರಗಳಿಂದಲೂ **ಗಜ** ಆನೆ,

**ಅಶ್ವ** ಕುದುರೆ **ರಥ** ರಥಗಳು **ವೇಶ್ಮಭಿಃ** ಮನೆ ಇವುಗಳಿಂದಲೂ **ಪೂಜಯಿಷ್ಯಾಮಃ** ಪೂಜಿಸೋಣ.॥೮॥

**ವಿಧಿರೇಷ ಹ್ಯರಿಷ್ಟಘ್ನೋ ಮಂಗಲಾಯನಮುತ್ತಮಮ್ ।**
**ದೇವದ್ವಿಜಗವಾಂ ಪೂಜಾ ಭೂತೇಷು ಪರಮಾ ದಯಾ ॥೯॥**

**ಭೂತೇಷು** ಪ್ರಾಣಿಗಳಲ್ಲಿ **ಪರಮಾ ದಯಾ** ಅತಿಶಯವಾಗಿ ದಯ ತೋರುವುದು **ಇತಿ ಏಷಃ** ಇದು **ಅರಿಷ್ಟಘ್ನಃ** ಅನಿಷ್ಟನಾಶಕವಾದ **ವಿಧಿಃ** ಉಪಾಯವು **ಉತ್ತಮಂ ಮಂಗಲಾಯನಂ** ಒಳ್ಳೆ ಮಂಗಲದಾಯಕವೂ ಆಗಿದೆ. ॥೯॥

**ಇತಿ ಸರ್ವೇ ಸಮಾಕರ್ಣ್ಯ ಯದುವೃದ್ಧಾ ಮಧುದ್ವಿಷಃ ।**
**ತಥೇತಿ ನೌಭಿರುತ್ತೀರ್ಯ ಪ್ರಭಾಸಂ ಪ್ರಯಯೂ ರಥೈಃ ॥೧೦॥**

**ಮಧುದ್ವಿಷಃ** ಶ್ರೀಕೃಷ್ಣಪರಮಾತ್ಮನ **ಇತಿ** ಈ ರೀತಿಯಾದ ಮಾತನ್ನು **ಸರ್ವೇ ಸಮಾಕರ್ಣ್ಯ** ಎಲ್ಲರೂ ಕೇಳಿ **ಯದುವೃದ್ಧಾಃ** ಯಾದವಹಿರಿಯರು **ಮಧುದ್ವಿಷಃ** ಶ್ರೀಕೃಷ್ಣನಿಗೆ **ತಥಾ ಇತಿ** ಹಾಗೆ ಆಗಲಿ ಎಂದು ಹೇಳಿ **ನೌಭಿಃ** ನೌಕೆಗಳಿಂದ **ಉತ್ತೀರ್ಯ** ದ್ವಾರಕೆಯ ಸುತ್ತಲಿರುವ ಸಮುದ್ರವನ್ನು ದಾಟಿ **ರಥೈಃ** ರಥಗಳಿಂದ **ಪ್ರಭಾಸಂ** ಪ್ರಭಾಸಕ್ಷೇತ್ರಕ್ಕೆ **ಪ್ರಯಯುಃ** ನಡೆದರು.

**ತಸ್ಮಿನ್ ಭಗವತಾಽದಿಷ್ಟಂ ಯದುದೇವೇನ ಯಾದವಾಃ ।**
**ಚಕ್ರುಃ ಪರಮಯಾ ಭಕ್ತ್ಯಾ ಸರ್ವಶ್ರೇಯೋಪಬೃಂಹಿತಮ್ ॥೧೧॥**

**ತಸ್ಮಿನ್** ಆ ಕ್ಷೇತ್ರದಲ್ಲಿ **ಯಾದವಾಃ** ಯಾದವರು **ಯದುದೇವೇನ** ಯಾದವರ ದೈವನಾದ **ಭಗವತಾ** ಶ್ರೀಕೃಷ್ಣನಿಂದ **ಆದಿಷ್ಟಂ** ಉಪದೇಶಿಸಲ್ಪಟ್ಟ **ಸರ್ವ-ಶ್ರೇಯೋಪಬೃಂಹಿತಂ** ಸಮಸ್ತಕಲ್ಯಾಣದಿಂದ ಕೂಡಿದ ಸ್ನಾನ, ದೇವ-ಬ್ರಾಹ್ಮಣಪೂಜಾ ಮುಂತಾದ್ದನ್ನು **ಪರಮಯಾ ಭಕ್ತ್ಯಾ ಚಕ್ರುಃ** ಅತ್ಯಂತ ಶ್ರದ್ಧೆಯಿಂದ ಮಾಡಿದರು.॥೧೧॥

**ತತಸ್ತಸ್ಮಿನ್ ಮಹಾಪಾನಂ ಪಪುರ್ಮೈರೇಯಕಂ ಮಧು ।**
**ದಿಷ್ಟವಿಭ್ರಂಶಿತಧಿಯೋ ಯಾದವಾ ನಷ್ಟಮಂಗಲಾಃ ॥೧೨॥**

**ತತಃ** ಬ್ರಾಹ್ಮಣರ ಪೂಜಾದಿಗಳು ಮುಗಿದ ನಂತರ **ತಸ್ಮಿನ್** ಆ ಕ್ಷೇತ್ರದಲ್ಲಿ **ದಿಷ್ಟವಿಭ್ರಂಶಿತಧಿಯಃ** ಅದೃಷ್ಟಪ್ರೇರಕನಾದ ಶ್ರೀಹರಿಯಿಂದ ನಾಶ ಮಾಡಲ್ಪಟ್ಟ ಇಷ್ಟಾನಿಷ್ಟವಿವೇಕ ಉಳ್ಳವನಾಗಿ **ನಷ್ಟಮಂಗಲಾಃ** ಪುಣ್ಯ ತೀರಿದವರಾಗಿ **ಯಾದವಾಃ** ಯಾದವರು **ಮಹಾಪಾನಂ** ಬಹಳವಾದ ಅಪೇಯವಾದ **ಮೈರೆಯಕಂ** ಕಬ್ಬಿನ ರಸ ಮುಂತಾದವುಗಳಿಂದ ನಿರ್ಮಿಸಿದ, ಉತ್ತಮ ಜಾತಿಯು ಈಚಲಗಿಡದಿಂದ ನಿರ್ಮಿತವಾದ **ಮಧು** ಮದ್ಯವನ್ನು **ಪಪುಃ** ಕುಡಿದರು. **ಮಹಾಪಾನಂ** ಮಹತ್ ಪರಿಮಾಣದಿಂದ ಮಹತ್ತಾದ **ಅಪಾನಂ** ಅಪೇಯವಾದ ಎಂದು ಅರ್ಥ ಮಾಡಬೇಕು.

**ಮಹಾಪಾನೇನ ಮತ್ತಾನಾಂ ವೀರಾಣಾಂ ದೃಪ್ತಚೇತಸಾಮ್ ।**
**ಕೃಷ್ಣಮಾಯಾವಿಮೂಢಾನಾಂ ಸಂಘರ್ಷಃ ಸುಮಹಾನಭೂತ್ ॥೧೩॥**

**ಮಹಾಪಾನೇನ ಮತ್ತಾನಾಂ** ಅತಿಯಾದ ಮದ್ಯಪಾನದಿಂದ ಉನ್ಮತ್ತರಾದ **ದೃಪ್ತಚೇತಸಾಂ** ಗರ್ವಿಷ್ಠವಾದ ಮನಸ್ಸುಳ್ಳ **ಕೃಷ್ಣಮಾಯಾವಿಮೂಢಾನಾಂ** ಶ್ರೀಹರಿಯ ಮೋಹಕಶಕ್ತಿಯಿಂದ ಮೋಹಿತರಾದ **ವೀರಾಣಾಂ** ಯಾದವ ಯೋಧರಿಗೆ **ಸುಮಹಾನ್ ಸಂಘರ್ಷಃ ಅಭೂತ್** ದೊಡ್ಡ ಜಗಳವೇ ಆಯಿತು.

**ಯುಯುಧುಃ ಕ್ರೋಧಸಂರಬ್ಧಾ ವೇಲಾಯಾಮಾತತಾಯಿನಃ ।**
**ಧನುರ್ಭಿರಸಿಭಿರ್ಭಲ್ಲೈರ್ಗದಾಭಿಸ್ತೋಮರರ್ಷ್ಟಿಭಿಃ ॥೧೪॥**

**ವೇಲಾಯಾಂ** ಸಮುದ್ರತೀರದಲ್ಲಿ **ಆತತಾಯಿನಃ** ಪರಸ್ಪರ ಕೊಲ್ಲಲು ಉದ್ಯುಕ್ತರಾದ **ಕ್ರೋಧಸಂರಬ್ಧಾಃ** ಸಿಟ್ಟಿನಿಂದ ವ್ಯಗ್ರರಾದ ಯಾದವರು **ಧನುರ್ಭಿಃ** ಬಿಲ್ಲುಗಳಿಂದ **ಅಸಿಭಿಃ** ಕತ್ತಿಗಳಿಂದ **ಭಲ್ಲೈಃ** ಭರ್ಜಿಗಳಿಂದ **ಗದಾಭಿಃ** ಗದೆಗಳಿಂದ **ತೋಮರ** ಈಟಿ **ಅರ್ಷ್ಟಿಭಿಃ** ಆಯುಧವಿಶೇಷಗಳಿಂದ **ಯುಯುಧುಃ** ಯುದ್ಧ ಮಾಡಿದರು.॥೧೪॥

**ಪತತ್ಪತಾಕೈಃ ರಥಕುಂಜರಾರ್ವಭಿಃ**
**ಖರೋಷ್ಟ್ರಗೋಭಿರ್ಮಹಿಷೈರ್ನರೈರಪಿ ।**
**ಮಿಥಃ ಸಮೇತ್ಯಾಶ್ವತರೈಃ ಸುದುರ್ಮದಾ**
**ನ್ಯಹನ್ಛರೈರ್ದದ್ಭಿರಿವ ದ್ವಿಪಾ ವನೇ ॥೧೫॥**

**ಪತತ್ಪತಾಕೈಃ** ಹಾರಾಡುವ ಪತಾಕೆಗಳುಳ್ಳ **ರಥ** ರಥಗಳಿಂದ **ಕುಂಜರ** ಆನೆಗಳಿಂದ **ಅರ್ವಭಿಃ** ಕುದುರೆಗಳಿಂದ **ಖರ** ಕತ್ತೆಗಳಿಂದ **ಉಷ್ಟ್ರಭಿಃ** ಒಂಟೆಗಳಿಂದ **ಗೋಭಿಃ** ಆಕಳುಗಳಿಂದ **ಮಹಿಷೈಃ** ಕೋಣಗಳಿಂದ **ನರೈಃ ಅಪಿ** ಮನುಷ್ಯರಿಂದಲೂ **ಅಶ್ವತರೈಃ** ಹೇಸರಗತ್ತೆಗಳಿಂದಲೂ **ಮಿಥಃ ಸಮೇತ್ಯ** ಪರಸ್ಪರ ಸೇರಿಕೊಂಡು **ಸುದುರ್ಮದಾಃ** ಅತ್ಯಂತ ಮದ ಉಳ್ಳ ಇವರು **ವನೇ** ಅಡವಿಯಲ್ಲಿ **ದ್ವಿಪಾಃ** ಆನೆಗಳು **ದದ್ಭಿಃ** ಇವ ದಂತಗಳಿಂದ ಹೇಗೋ ಹಾಗೆ **ಶರೈಃ** ಬಾಣಗಳಿಂದ **ನ್ಯಹನ್** ಹೊಡೆದರು.।।೧೫।।

**ಪ್ರದ್ಯುಮ್ನಸಾಂಬೌ ಯುಧಿ ರೂಢಮತ್ಸರಾ-**
**ವಕ್ರೂರಭೋಜಾವನಿರುದ್ಧಸಾತ್ಯಕೀ ।**
**ಸುಭದ್ರಸಂಗ್ರಾಮಜಿತೌ ಸುಚಾರು-**
**ಗದೌ ಸುಮಿತ್ರಾಸುರಥೌ ಸಮೀಯತುಃ ।। ೧೬।।**

**ಯುಧಿ** ಯುದ್ಧದಲ್ಲಿ **ರೂಢಮತ್ಸರೌ** ನಿರೂಢವಾದ (ದೃಢವಾದ) ಮಾತ್ಸರ್ಯ ಉಳ್ಳ **ಪ್ರದ್ಯುಮ್ನಸಾಂಬೌ** ರುಕ್ಮಿಣಿ ಮತ್ತು ಜಾಂಬವತಿಯ ಮಕ್ಕಳು **ಅಕ್ರೂರಭೋಜೌ** ಅಕ್ರೂರ, ಕೃತವರ್ಮರು, **ಅನಿರುದ್ಧಸಾತ್ಯಕೀ** ಅನಿರುದ್ಧ ಮತ್ತು ಸಾತ್ಯಕಿಯು **ಸುಭದ್ರಸಂಗ್ರಾಮಜಿತೌ** ಸುಭದ್ರ, ಸಂಗ್ರಾಮ ಜಿತರು **ಸುಚಾರುಗದೌ** ಸುಚಾರು, ಗದರು (ಶ್ರೀಕೃಷ್ಣನ ತಮ್ಮ) **ಸುಮಿತ್ರಾ-ಸುರಥೌ** ಸುಮಿತ್ರ, ಸುರಥರು **ಸಮೀಯತುಃ** ಪರಸ್ಪರ ಎದುರಾದರು.।।೧೬।।

**ಅನ್ಯೇ ಚ ಯೇ ವೈ ನಿಶಠೋಲ್ಮುಕಾದಯಃ**
**ಸಹಸ್ರಜಿಚ್ಛತಜಿದ್ಭಾನುಮುಖ್ಯಾಃ ।**
**ಅನ್ಯೋನ್ಯಮಾಸಾದ್ಯ ಮದಾಂಧಕಾರಿತಾಃ**
**ಜಘ್ನುರ್ಮುಕುಂದೇನ ವಿಮೋಹಿತಾ ಭೃಶಮ್ ।।೧೭।।**

**ಮುಕುಂದೇನ** ಶ್ರೀಕೃಷ್ಣನಿಂದ **ಭೃಶಂ** ಬಹಳವಾಗಿ **ವಿಮೋಹಿತಾಃ** ಮೋಹವುಳ್ಳವರಾಗಿ **ಮದಾಂಧಕಾರಿತಾಃ** ಮದದಿಂದ ಕುರುಡರಾದ ಕರ್ತವ್ಯಾ-ಕರ್ತವ್ಯ ವಿಚಾರ ಮೂಢರಾಗಿ **ಅನ್ಯೇ ಚ** ಮಿಕ್ಕ **ನಿಶಠೋಲ್ಮುಕಾದಯಃ** ನಿಶಠ ಉಲ್ಮುಕ ಮೊದಲಾದವರು **ಸಹಸ್ರಜಿಚ್ಛತಜಿದ್ಭಾನುಮುಖ್ಯಾಃ** ಸಹಸ್ರಜಿತ್ ಶತಜಿತ್ ಭಾನು ಮೊದಲಾದವರು **ಅನ್ಯೋನ್ಯಂ ಆಸಾದ್ಯ ಜಘ್ನುಃ** ಪರಸ್ಪರರು ಸೇರಿ ಸಂಹರಿಸಿದರು.।।೧೭।।

**ದಾಶಾರ್ಹವೃಷ್ಣ್ಯಂಧಕಭೋಜಸಾತ್ವತಾ**
**ಅಧ್ವರ್ಯುರ್ದಾ ಮಾಧುರಶೂರಸೇನಾಃ ।**
**ವಿಸರ್ಜನಾಃ ಕುಕುರಾಃ ಕುಂತಯಶ್ಚ**
**ಮಿಥಶ್ಚ ಜಘ್ನುಃ ಸುವಿಸೃಜ್ಯ ಸೌಹೃದಮ್ ॥೧೮॥**

**ದಾಶಾರ್ಹವೃಷ್ಣ್ಯಂಧಕಭೋಜಸಾತ್ವತಾಃ** ದಾಶಾರ್ಹ, ವೃಷ್ಣಿ, ಅಂಧಕ, ಭೋಜ, ಸಾತ್ವತರು **ಅಧ್ವರ್ಯುರ್ದಾ** ಅಧ್ವರ್ಯುರ್ದ ಎಂಬ ಯಾದವರು **ಮಾಧುರಶೂರಸೇನಾಃ** ಮಾಧುರ, ಶೂರಸೇನರು **ವಿಸರ್ಜನಾಃ** ವಿಸರ್ಜನರು **ಕುಕುರಾಃ** ಕುಕುರರು **ಚ** ಮತ್ತು **ಕುಂತಯಃ** ಕುಂತರು ಯಾದವಪ್ರಭೇದರಾದ ಇವರೆಲ್ಲರೂ **ಸೌಹೃದಂ** ಸೌಹಾರ್ದವನ್ನು **ಸುವಿಸೃಜ್ಯ** ಅತ್ಯಂತವಾಗಿ ತೊರೆದು **ಮಿಥಃ** ಪರಸ್ಪರ **ಜಘ್ನುಃ** ಸಂಹರಿಸಿದರು.॥೧೮॥

**ಪುತ್ರಾಸ್ತ್ವಯುಧ್ಯನ್ ಪಿತೃಭಿರ್ಭ್ರಾತೃಭಿಶ್ಚ**
**ಸ್ವಸ್ರೀಯದೌಹಿತ್ರಪಿತೃವ್ಯಮಾತುಲೈಃ ।**
**ಮಿತ್ರಾಣಿ ಮಿತ್ರೈಃ ಸುಹೃದಃ ಸುಹೃದ್ಭಿಃ**
**ಜ್ಞಾತೀನ್ ತ್ವಹನ್ ಜ್ಞಾತಯ ಏವ ಮೂಢಾಃ ॥೧೯॥**

**ಪುತ್ರಾಃ** ಮಕ್ಕಳು **ಪಿತೃಭಿಃ** ತಂದೆಗಳೊಡನೆ **ಭ್ರಾತೃಭಿಃ** ಪರಸ್ಪರ ಅಣ್ಣ ತಮ್ಮಂದಿರೊಡನೆ **ಸ್ವಸ್ರೀಯ** ತಂಗಿಯ ಮಕ್ಕಳು **ದೌಹಿತ್ರ** ಮಗಳ ಮಕ್ಕಳು **ಪಿತೃವ್ಯ** ಕಕ್ಕಂದಿರು **ಮಾತುಲೈಃ** ಸೋದರಮಾವರಿಂದಲೂ **ಮಿತ್ರಾಣಿ** ಗೆಳೆಯರು **ಮಿತ್ರೈಃ** ಗೆಳೆಯರಿಂದ **ಸುಹೃದಃ** ಉಪಕಾರ ಮಾಡಿದವರು **ಸುಹೃದ್ಭಿಃ** ಉಪಕಾರ ಮಾಡಿದವರೊಡನೆ **ಅಯುಧ್ಯನ್** ಯುದ್ಧ ಮಾಡಿದರು. **ಮೂಢಾಃ** ವಿವೇಕರಹಿತರಾದ **ಜ್ಞಾತಯಃ** ಜ್ಞಾತಿಗಳು **ಜ್ಞಾತೀನ್** ಜ್ಞಾತಿಗಳನ್ನು **ಅಹನ್** ಸಂಹರಿಸಿದರು.॥೧೯॥

**ಶರೇಷು ಹೀಯಮಾನೇಷು ಭಜ್ಯಮಾನೇಷು ಧನ್ವಸು ।**
**ಶಸ್ತ್ರೇಷು ಕ್ಷೀಯಮಾಣೇಷು ಮುಷ್ಟಿಭಿರ್ಜಹ್ರುರೇರಕಾಃ ॥೨೦॥**

**ಶರೇಷು** ಬಾಣಗಳು **ಹೀಯಮಾನೇಷು** ಮುಗಿಯುತ್ತಿರಲು **ಧನ್ವಸು** ಬಿಲ್ಲುಗಳು **ಭಜ್ಯಮಾನೇಷು** ಮುರಿಯುತ್ತಿರಲು **ಶಸ್ತ್ರೇಷು** ಶಸ್ತ್ರಗಳೂ ಸಹ **ಕ್ಷೀಯಮಾಣೇಷು** ಕಡಿಮೆಯಾಗುತ್ತಿರಲು ನಾಶವಾಗುತ್ತಿರಲು **ಮುಷ್ಟಿಭಿಃ**

ಮುಷ್ಟಿಗಳಿಂದ **ಏರಕಾಃ** ಸಮುದ್ರತೀರದಲ್ಲಿ ಬೆಳೆದ ಸೂಚೀಮುಖವೆಂಬ ಹುಲ್ಲನ್ನು **ಜಹ್ರುಃ** (ಕಿತ್ತಿ) ತೆಗೆದುಕೊಂಡರು.।।೨೦।।

**ತಾ ವಜ್ರಕಲ್ಪಾ ಅಭವನ್ ಪರಿಘಾ ಮುಷ್ಟಿನಾ ಹೃತಾಃ ।**
**ಜಘ್ನುರ್ದ್ವಿಷಸ್ತೇ ಕೃಷ್ಣೇನ ವಾರ್ಯಮಾಣಾಸ್ತು ತಂ ಚ ತೇ ।।೨೧।।**

**ಮುಷ್ಟಿನಾ ಹೃತಾಃ** ಮುಷ್ಟಿಯಿಂದ ಕಿತ್ತಿದ **ತಾಃ** ಆ ಏರಕಗಳು **ವಜ್ರಕಲ್ಪಾಃ** ವಜ್ರಾಯುಧ ಸಮಾನವಾದ **ಪರಿಘಾಃ** ಪರಿಘಾಯುಧದಂತೆ **ಅಭವನ್** ಆದವು. **ತೇ** ವಂಶವು ಉಳಿಯುವುದಕ್ಕಾಗಿ **ಕೃಷ್ಣೇನ** ಶ್ರೀಕೃಷ್ಣನಿಂದ **ವಾರ್ಯಮಾಣಾಃ ತೇ** ನಿವಾರಿಸಲ್ಪಡುವ ಯಾದವರು **ತಂ** ಶ್ರೀಕೃಷ್ಣನನ್ನು **ದ್ವಿಷಃ** ಭ್ರಾಂತಿಯಿಂದ ದ್ವೇಷಿಯೆಂದು ತಿಳಿದು **ಜಘ್ನುಃ** ಹೊಡೆದರು.।।೨೧।।

**ಪ್ರತ್ಯನೀಕಂ ಮನ್ಯಮಾನಾ ಬಲಭದ್ರಂ ಚ ಮೋಹಿತಾಃ ।**
**ಹಂತುಂ ಕೃತಧಿಯೋ ರಾಜನ್ನಾಪನ್ನಾ ಆತತಾಯಿನಃ ।।೨೨।।**

**ರಾಜನ್** ಪರೀಕ್ಷಿತನೇ **ಮೋಹಿತಾಃ** ಭ್ರಾಂತರಾದ ಆ ಯಾದವರು **ಕೃಷ್ಣಂ ಚ** ಕೃಷ್ಣನನ್ನು **ಬಲಭದ್ರಂ** ಬಲರಾಮನನ್ನು **ಪ್ರತ್ಯನೀಕಂ** ಎದುರಾಳಿಯೆಂದು **ಮನ್ಯಮಾನಾಃ** ತಿಳಿದವರಾಗಿ **ಹಂತುಂ ಕೃತಧಿಯಃ** ಕೊಲ್ಲಲು ನಿಶ್ಚಯಿಸಿದವರಾಗಿ **ಆತತಾಯಿನಃ** ವಧೋದ್ಯುಕ್ತರು **ನ ಆಪನ್ನಾಃ** ಸಮರ್ಥರಾಗಲಿಲ್ಲ.।।೨೨।।

**ಅಥ ತಾವಪಿ ಸಂಕ್ರುದ್ಧಾವುದ್ಯಮ್ಯ ಕುರುನಂದನ ।**
**ಏರಕಾಮುಷ್ಟಿಪರಿಘೈಶ್ಚರಂತೌ ಜಘ್ನತುರ್ಯುಧಿ ।।೨೩।।**

**ಕುರುನಂದನ** ಪರೀಕ್ಷಿತನೇ **ಅಥ** ಅನಂತರ **ಸಂಕ್ರುದ್ಧೌ** ಕುಪಿತರಾದ **ತೌ ಅಪಿ** ರಾಮಕೃಷ್ಣರೂ ಸಹ **ಉದ್ಯಮ್ಯ** ಪ್ರಯತ್ನಮಾಡಿ **ಏರಕಾಮುಷ್ಟಿಪರಿಘೈಃ** ಏರಕಾಯುಕ್ತವಾದ ಮುಷ್ಟಿ ಎಂಬ ಪರಿಘಗಳಿಂದ **ಚರಂತೌ** ಸಂಚರಿಸುವವರಾಗಿ **ಯುಧಿ** ಯುದ್ಧದಲ್ಲಿ **ಜಘ್ನತುಃ** ಹೊಡೆದರು.।।೨೩।।

**ಬ್ರಹ್ಮಶಾಪೋಪಸೃಷ್ಟಾನಾಂ ಕೃಷ್ಣಮಾಯಾವೃತಾತ್ಮನಾಮ್ ।**
**ಸ್ಪರ್ಧಾ ಕ್ರೋಧಃ ಕ್ಷಯಂ ನಿನ್ಯೇ ವೈಣವೋಽಗ್ನಿರ್ಯಥಾವನಮ್।।೨೪।।**

**ಬ್ರಹ್ಮಶಾಪೋಪಸೃಷ್ಟಾನಾಂ** ಬ್ರಾಹ್ಮಣರ ಶಾಪಕ್ಕೆ ಗುರಿಯಾದವರ **ಕೃಷ್ಣಮಾಯಾವೃತಾತ್ಮನಾಂ** ಶ್ರೀಕೃಷ್ಣನ ಮೋಹಕಶಕ್ತಿಯಿಂದ ಆವರಿಸಲ್ಪಟ್ಟವರ

**ಸ್ಪರ್ಧಾಕ್ರೋಧಃ** ಸ್ಪರ್ಧೆಯ ಈರ್ಷ್ಯೆಯಿಂದ ಉಂಟಾದ ಕೋಪವು **ವೈಣವಃ** ಬಿದರಿನ ಸಂಘರ್ಷದಿಂದ ಉಂಟಾದ ಅಗ್ನಿಯು **ವನಂ ಯಥಾ** ವನವನ್ನು ಸುಡುವಂತೆ **ಕ್ಷಯಂ ನಿನ್ಯೇ** ಯಾದವಕುಲದ ನಾಶವನ್ನೇ ಮಾಡಿತು.।।೨೪।।

**ಏವಂ ಸರ್ವೇಷು ನಷ್ಟೇಷು ಕುಲೇಷು ಸ್ವೇಷು ಕೇಶವಃ ।**
**ಉತ್ತಾರಿತೋ ಭುವೋ ಭಾರ ಇತಿ ಮೇನೇऽವಶೇಷಿತಃ ।।೨೫।।**

**ಕೇಶವಃ** ಶ್ರೀಕೃಷ್ಣನು **ಏವಂ** ಈ ರೀತಿಯಾಗಿ **ಸ್ವೇಷು ಕುಲೇಷು** ತನ್ನ ಕುಲಗಳು **ಸರ್ವೇಷು** ಎಲ್ಲವೂ **ನಷ್ಟೇಷು** ನಾಶವಾಗುತ್ತಿರಲು **ಅವಶೇಷಿತಃ** ಪೂತನಾಸಂಹಾರದಿಂದ ಆರಂಭಮಾಡಿ ಕೌರವರ ನಾಶಮಾಡಿದ ಮೇಲೂ ಉಳಿದ **ಭೂವಃ ಭಾರಃ** ಭೂಮಿಯ ಭಾರವು **ಉತ್ತಾರಿತಃ** ಇಳಿಸಲ್ಪಟ್ಟಿತು ಪರಿಹೃತವಾಯಿತೆಂದು **ಇತಿ ಮೇನೇ** ಹೀಗೆ ತಿಳಿದನು.।।೨೫।।

**ರಾಮಃ ಸಮುದ್ರವೇಲಾಯಾಂ ಯೋಗಮಾಸ್ಥಾಯ ಪೌರುಷಮ್ ।**
**ತತ್ಯಜೇ ಯೋಗಮಾವಿಶ್ಯ ಸಂಯೋಜ್ಯಾತ್ಮಾನಮಾತ್ಮನಿ ।।೨೬।।**

**ರಾಮಃ** ಬಲರಾಮನು **ಸಮುದ್ರವೇಲಾಯಾಂ** ಸಮುದ್ರದಂಡೆಯಲ್ಲಿ **ಪೌರುಷಂ ಯೋಗಂ ಆಸ್ಥಾಯ** ಪೂರ್ಣಷಡ್ಗುಣನಾದ ಭಗವಂತನ ಧ್ಯಾನವನ್ನು ಏಕಾಗ್ರಚಿತ್ತದಿಂದ ಪ್ರಾರಂಭ ಮಾಡಿ **ಯೋಗಂ** ಯೋಗನಾಮಕ ಪರಮಾತ್ಮನನ್ನು **ಆವಿಶ್ಯ** ಪ್ರವೇಶಮಾಡಿ (ತನಗೆ ವಿಷ್ಣುವಿನಲ್ಲಿ ಪ್ರವೇಶವನ್ನು ಚಿಂತಿಸಿ) **ಆತ್ಮಾನಂ** ತನ್ನ ಅಂತರ್ಯಾಮಿಯಾದ ಪರಮಾತ್ಮನನ್ನು **ಆತ್ಮನಿ** ವ್ಯಾಪ್ತನಾದ ಭಗವದ್ರೂಪದಲ್ಲಿ **ಸಂಯೋಜ್ಯ** ಐಕ್ಯವನ್ನು ಚಿಂತಿಸಿ ಒಬ್ಬನೇ ಎಂದು ತಿಳಿದು **ತತ್ಯಜೇ** ದೇಹವನ್ನು ಬಿಟ್ಟನು. **ಯೋಗಂ ಆವಿಶ್ಯ** ಧ್ಯಾನವನ್ನು ಪೂರ್ಣಗೊಳಿಸಿ ಹೀಗೂ ಅರ್ಥ.।।೨೬।।

**ರಾಮನಿರ್ಯಾಣಮಾಲೋಕ್ಯ ಭಗವಾನ್ ದೇವಕೀಸುತಃ ।**
**ನಿಷಸಾದ ಧರೋಪಸ್ಥೇ ತೂಷ್ಣೀಮಾಸಾದ್ಯ ಪಿಪ್ಪಲಮ್ ।।೨೭।।**

**ಭಗವಾನ್ ದೇವಕೀಸುತಃ** ಷಡ್ಗುಣ ಸಂಪನ್ನನಾದ ಶ್ರೀಕೃಷ್ಣನು **ರಾಮನಿರ್ಯಾಣಂ** (ನಿರ್ವಾಣಂ) ಬಲರಾಮನ ದೇಹತ್ಯಾಗವನ್ನು **ಆಲೋಕ್ಯ** ನೋಡಿ **ಧರೋಪಸ್ಥೇ** ಭೂಮಿಯ ಮೇಲೆ **ಪಿಪ್ಪಲಂ** ಅಶ್ವತ್ಥವೃಕ್ಷವನ್ನು **ಆಸಾದ್ಯ** ಸಮೀಪಿಸಿ **ತೂಷ್ಣೀಂ ನಿಷಸಾದ** ಸುಮ್ಮನೇ ಕುಳಿತುಕೊಂಡನು.।।೨೭।।

ಮುಷ್ಟಿಗಳಿಂದ **ಏರಕಾಃ** ಸಮುದ್ರತೀರದಲ್ಲಿ ಬೆಳೆದ ಸೂಚೀಮುಖವೆಂಬ ಹುಲ್ಲನ್ನು **ಜಹ್ರುಃ** (ಕಿತ್ತಿ) ತೆಗೆದುಕೊಂಡರು.।।೨೦।।

**ತಾ ವಜ್ರಕಲ್ಪಾ ಅಭವನ್ ಪರಿಘಾ ಮುಷ್ಟಿನಾ ಹೃತಾಃ ।**
**ಜಘ್ನುರ್ದ್ವಿಷಸ್ತೇ ಕೃಷ್ಣೇನ ವಾರ್ಯಮಾಣಾಸ್ತು ತಂ ಚ ತೇ ।।೨೧।।**

**ಮುಷ್ಟಿನಾ ಹೃತಾಃ** ಮುಷ್ಟಿಯಿಂದ ಕಿತ್ತಿದ **ತಾಃ** ಆ ಏರಕಗಳು **ವಜ್ರಕಲ್ಪಾಃ** ವಜ್ರಾಯುಧ ಸಮಾನವಾದ **ಪರಿಘಾಃ** ಪರಿಘಾಯುಧದಂತೆ **ಅಭವನ್** ಆದವು. **ತೇ** ವಂಶವು ಉಳಿಯುವುದಕ್ಕಾಗಿ **ಕೃಷ್ಣೇನ** ಶ್ರೀಕೃಷ್ಣನಿಂದ **ವಾರ್ಯಮಾಣಾಃ ತೇ** ನಿವಾರಿಸಲ್ಪಡುವ ಯಾದವರು **ತಂ** ಶ್ರೀಕೃಷ್ಣನನ್ನು **ದ್ವಿಷಃ** ಭ್ರಾಂತಿಯಿಂದ ದ್ವೇಷಿಯೆಂದು ತಿಳಿದು **ಜಘ್ನುಃ** ಹೊಡೆದರು.।।೨೧।।

**ಪ್ರತ್ಯನೀಕಂ ಮನ್ಯಮಾನಾ ಬಲಭದ್ರಂ ಚ ಮೋಹಿತಾಃ ।**
**ಹಂತುಂ ಕೃತಧಿಯೋ ರಾಜನ್ನಾಪನ್ನಾ ಆತತಾಯಿನಃ ।।೨೨।।**

**ರಾಜನ್** ಪರೀಕ್ಷಿತನೇ **ಮೋಹಿತಾಃ** ಭ್ರಾಂತರಾದ ಆ ಯಾದವರು **ಕೃಷ್ಣಂ ಚ** ಕೃಷ್ಣನನ್ನು **ಬಲಭದ್ರಂ** ಬಲರಾಮನನ್ನು **ಪ್ರತ್ಯನೀಕಂ** ಎದುರಾಳಿಯೆಂದು **ಮನ್ಯಮಾನಾಃ** ತಿಳಿದವರಾಗಿ **ಹಂತುಂ ಕೃತಧಿಯಃ** ಕೊಲ್ಲಲು ನಿಶ್ಚಯಿಸಿದವರಾಗಿ **ಆತತಾಯಿನಃ** ವಧೋದ್ಯುಕ್ತರು **ನ ಆಪನ್ನಾಃ** ಸಮರ್ಥರಾಗಲಿಲ್ಲ.।।೨೨।।

**ಅಥ ತಾವಪಿ ಸಂಕ್ರುದ್ಧಾವುದ್ಯಮ್ಯ ಕುರುನಂದನ ।**
**ಏರಕಾಮುಷ್ಟಿಪರಿಘೈಶ್ಚರಂತೌ ಜಘ್ನತುರ್ಯುಧಿ ।।೨೩।।**

**ಕುರುನಂದನ** ಪರೀಕ್ಷಿತನೇ **ಅಥ** ಅನಂತರ **ಸಂಕ್ರುದ್ಧೌ** ಕುಪಿತರಾದ **ತೌ ಅಪಿ** ರಾಮಕೃಷ್ಣರೂ ಸಹ **ಉದ್ಯಮ್ಯ** ಪ್ರಯತ್ನಮಾಡಿ **ಏರಕಾಮುಷ್ಟಿಪರಿಘೈಃ** ಏರಕಾಯುಕ್ತವಾದ ಮುಷ್ಟಿ ಎಂಬ ಪರಿಘಗಳಿಂದ **ಚರಂತೌ** ಸಂಚರಿಸುವವರಾಗಿ **ಯುಧಿ** ಯುದ್ಧದಲ್ಲಿ **ಜಘ್ನತುಃ** ಹೊಡೆದರು.।।೨೩।।

**ಬ್ರಹ್ಮಶಾಪೋಪಸೃಷ್ಟಾನಾಂ ಕೃಷ್ಣಮಾಯಾವೃತಾತ್ಮನಾಮ್ ।**
**ಸ್ಪರ್ಧಾ ಕ್ರೋಧಃ ಕ್ಷಯಂ ನಿನ್ಯೇ ವೈಣವೋಽಗ್ನಿರ್ಯಥಾವನಮ್।।೨೪।।**

**ಬ್ರಹ್ಮಶಾಪೋಪಸೃಷ್ಟಾನಾಂ** ಬ್ರಾಹ್ಮಣರ ಶಾಪಕ್ಕೆ ಗುರಿಯಾದವರ **ಕೃಷ್ಣಮಾಯಾವೃತಾತ್ಮನಾಂ** ಶ್ರೀಕೃಷ್ಣನ ಮೋಹಕಶಕ್ತಿಯಿಂದ ಆವರಿಸಲ್ಪಟ್ಟವರ

**ಸ್ಪರ್ಧಾಕ್ರೋಧಃ** ಸ್ಪರ್ಧೆಯ ಈರ್ಷ್ಯೆಯಿಂದ ಉಂಟಾದ ಕೋಪವು **ವೈಣವಃ** ಬಿದರಿನ ಸಂಘರ್ಷದಿಂದ ಉಂಟಾದ ಅಗ್ನಿಯು **ವನಂ ಯಥಾ** ವನವನ್ನು ಸುಡುವಂತೆ **ಕ್ಷಯಂ ನಿನ್ಯೇ** ಯಾದವಕುಲದ ನಾಶವನ್ನೇ ಮಾಡಿತು.।।೨೪।।

**ಏವಂ ಸರ್ವೇಷು ನಷ್ಟೇಷು ಕುಲೇಷು ಸ್ವೇಷು ಕೇಶವಃ ।**
**ಉತ್ತಾರಿತೋ ಭುವೋ ಭಾರ ಇತಿ ಮೇನೇಽವಶೇಷಿತಃ ।।೨೫।।**

**ಕೇಶವಃ** ಶ್ರೀಕೃಷ್ಣನು **ಏವಂ** ಈ ರೀತಿಯಾಗಿ **ಸ್ವೇಷು ಕುಲೇಷು** ತನ್ನ ಕುಲಗಳು **ಸರ್ವೇಷು** ಎಲ್ಲವೂ **ನಷ್ಟೇಷು** ನಾಶವಾಗುತ್ತಿರಲು **ಅವಶೇಷಿತಃ** ಪೂತನಾಸಂಹಾರದಿಂದ ಆರಂಭಮಾಡಿ ಕೌರವರ ನಾಶಮಾಡಿದ ಮೇಲೂ ಉಳಿದ **ಭೂವಃ ಭಾರಃ** ಭೂಮಿಯ ಭಾರವು **ಉತ್ತಾರಿತಃ** ಇಳಿಸಲ್ಪಟ್ಟಿತು ಪರಿಹೃತವಾಯಿತೆಂದು **ಇತಿ ಮೇನೇ** ಹೀಗೆ ತಿಳಿದನು.।।೨೫।।

**ರಾಮಃ ಸಮುದ್ರವೇಲಾಯಾಂ ಯೋಗಮಾಸ್ಥಾಯ ಪೌರುಷಮ್ ।**
**ತತ್ಯಜೇ ಯೋಗಮಾವಿಶ್ಯ ಸಂಯೋಜ್ಯಾತ್ಮಾನಮಾತ್ಮನಿ ।।೨೬।।**

**ರಾಮಃ** ಬಲರಾಮನು **ಸಮುದ್ರವೇಲಾಯಾಂ** ಸಮುದ್ರದಂಡೆಯಲ್ಲಿ **ಪೌರುಷಂ ಯೋಗಂ ಆಸ್ಥಾಯ** ಪೂರ್ಣಷಡ್ಗುಣನಾದ ಭಗವಂತನ ಧ್ಯಾನವನ್ನು ಏಕಾಗ್ರಚಿತ್ತದಿಂದ ಪ್ರಾರಂಭ ಮಾಡಿ **ಯೋಗಂ** ಯೋಗನಾಮಕ ಪರಮಾತ್ಮನನ್ನು **ಆವಿಶ್ಯ** ಪ್ರವೇಶಮಾಡಿ (ತನಗೆ ವಿಷ್ಣುವಿನಲ್ಲಿ ಪ್ರವೇಶವನ್ನು ಚಿಂತಿಸಿ) **ಆತ್ಮಾನಂ** ತನ್ನ ಅಂತರ್ಯಾಮಿಯಾದ ಪರಮಾತ್ಮನನ್ನು **ಆತ್ಮನಿ** ವ್ಯಾಪ್ತನಾದ ಭಗವದ್ರೂಪದಲ್ಲಿ **ಸಂಯೋಜ್ಯ** ಐಕ್ಯವನ್ನು ಚಿಂತಿಸಿ ಒಬ್ಬನೇ ಎಂದು ತಿಳಿದು **ತತ್ಯಜೇ** ದೇಹವನ್ನು ಬಿಟ್ಟನು. **ಯೋಗಂ ಆವಿಶ್ಯ** ಧ್ಯಾನವನ್ನು ಪೂರ್ಣಗೊಳಿಸಿ ಹೀಗೂ ಅರ್ಥ.।।೨೬।।

**ರಾಮನಿರ್ಯಾಣಮಾಲೋಕ್ಯ ಭಗವಾನ್ ದೇವಕೀಸುತಃ ।**
**ನಿಷಸಾದ ಧರೋಪಸ್ಥೇ ತೂಷ್ಣೀಮಾಸಾದ್ಯ ಪಿಪ್ಪಲಮ್ ।।೨೭।।**

**ಭಗವಾನ್ ದೇವಕೀಸುತಃ** ಷಡ್ಗುಣ ಸಂಪನ್ನನಾದ ಶ್ರೀಕೃಷ್ಣನು **ರಾಮನಿರ್ಯಾಣಂ** (ನಿರ್ವಾಣಂ) ಬಲರಾಮನ ದೇಹತ್ಯಾಗವನ್ನು **ಆಲೋಕ್ಯ** ನೋಡಿ **ಧರೋಪಸ್ಥೇ** ಭೂಮಿಯ ಮೇಲೆ **ಪಿಪ್ಪಲಂ** ಅಶ್ವತ್ಥವೃಕ್ಷವನ್ನು **ಆಸಾದ್ಯ** ಸಮೀಪಿಸಿ **ತೂಷ್ಣೀಂ ನಿಷಸಾದ** ಸುಮ್ಮನೇ ಕುಳಿತುಕೊಂಡನು.।।೨೭।।

ಭಗವಂತನು ದೇಹವನ್ನು ಬಿಟ್ಟು ವೈಕುಂಠಕ್ಕೆ ತೆರಳಲಿಲ್ಲ. ಆ ರೀತಿ ತೋರಿಸಿದ್ದು ಅಸುರಜನಮೋಹನಕ್ಕಾಗಿ ಎಂದು ತಿಳಿಸುತ್ತ ಶುಕಾಚಾರ್ಯರು ಆವಾಗಿನ ಶ್ರೀಹರಿಯ ಸ್ವರೂಪವನ್ನು ತಿಳಿಸುವರು-

**ಬಿಭ್ರಚ್ಚತುರ್ಭುಜಂ ರೂಪಂ ಭ್ರಾಜಿಷ್ಣುಪ್ರಭಯಾ ಸ್ವಯಾ ।**
**ದಿಶೋ ವಿತಿಮಿರಾಃ ಕುರ್ವನ್ ವಿಧೂಮ ಇವ ಪಾವಕಃ ॥೨೮॥**

**ವಿಧೂಮಃ ಪಾವಕಃ ಇವ** ಹೊಗೆಯಿಲ್ಲದ ಪ್ರಜ್ವಲಿಸುವ ಅಗ್ನಿಯಂತೆ **ಸ್ವಯಾ** ತನ್ನ **ಭ್ರಾಜಿಷ್ಣುಪ್ರಭಯಾ** ಹೊಳೆಯುವ ಕಾಂತಿಯಿಂದ **ದಿಶಃ** ದಿಕ್ಕುಗಳನ್ನು **ವಿತಿಮಿರಾಃ ಕುರ್ವನ್** ಕತ್ತಲೆ ಇಲ್ಲದಂತೆ ಮಾಡುತ್ತ **ಚತುರ್ಭುಜಂ** ನಾಲ್ಕು ಕೈಗಳುಳ್ಳ **ರೂಪಂ** ರೂಪವನ್ನು **ಬಿಭ್ರತ್** ಧರಿಸಿದವನಾಗಿ, ಬಹಳ ಪ್ರಕಾಶಗೊಳಿಸಿ ಎಂದು ಭಾವ.

**ಶ್ರೀವತ್ಸಾಂಕಂ ಘನಶ್ಯಾಮಂ ತಪ್ತಹಾಟಕವರ್ಚಸಮ್ ।**
**ಕೌಶೇಯಾಂಬರಯುಗ್ಮೇನ ಪರಿವೀತಂ ಸುಮಂಗಲಮ್ ॥೨೯॥**

**ಶ್ರೀವತ್ಸಾಂಕಂ** ಶ್ರೀವತ್ಸವನ್ನು ಧರಿಸಿದ ಹೃದಯ ಉಳ್ಳ **ಘನಶ್ಯಾಮಂ** ಮೋಡದಂತೆ ಕಪ್ಪಾದ **ತಪ್ತಹಾಟಕವರ್ಚಸಂ** ಪುಟಕ್ಕೆ ಹಾಕಿದ ಚಿನ್ನದಂತೆ ಕಾಂತಿಯುಳ್ಳ **ಕೌಶೇಯಾಂಬರಯುಗ್ಮೇನ ಪರಿವೀತಂ** ರೇಷ್ಮೆಯ ಎರಡು ವಸ್ತ್ರಗಳನ್ನು ಧರಿಸಿದ **ಸುಮಂಗಲಂ** ಪರಮಮಂಗಲಕರವಾದ,॥೨೯॥

**ಸುಂದರಸ್ಮಿತವಕ್ತ್ರಾಬ್ಜಂ ನೀಲಕುಂತಲಮಂಡಿತಮ್ ।**
**ಪುಂಡರೀಕಾಭಿರಾಮಾಕ್ಷಂ ಸ್ಫುರನ್ಮಕರಕುಂಡಲಮ್ ॥೩೦॥**

**ಸುಂದರಸ್ಮಿತವಕ್ತ್ರಾಭಂ** ಮನೋಹರವಾದ ಮಂದಹಾಸದಿಂದ ಯುಕ್ತವಾದ ಮುಖಕಮಲ ಉಳ್ಳ **ನೀಲಕುಂತಲಮಂಡಿತಂ** ಕಪ್ಪಾದ ಕೂದಲಿನಿಂದ ಶೋಭಿಸುವ **ಪುಂಡರೀಕಾಭಿರಾಮಾಕ್ಷಂ** ಕಮಲದಂತೆ ನಯನ ಮನೋಹರಗಳಾದ ಕಣ್ಣುಗಳುಳ್ಳ **ಸ್ಫುರನ್ಮಕರಕುಂಡಲಂ** ಹೊಳೆಯುವ ಮಕರಕುಂಡಲವನ್ನು ಕಿವಿಯಲ್ಲಿ ಧರಿಸಿದ ॥೩೦॥

**ಕಟಿಸೂತ್ರಬ್ರಹ್ಮಸೂತ್ರಕಿರೀಟಕಟಕಾಂಗದೈಃ ।**
**ಹಾರನೂಪುರಮುದ್ರಾಭಿಃ ಕೌಸ್ತುಭೇನ ವಿರಾಜಿತಮ್ ॥೩೧॥**

**ಕಟಿಸೂತ್ರ** ಉಡುದಾರ, **ಬ್ರಹ್ಮಸೂತ್ರ** ಯಜ್ಞೋಪವೀತ, **ಕಿರೀಟ-ಕಟಕಾಂಗದೈಃ** ಕಿರೀಟ, ಕಡಗ ಮತ್ತು ಕೇಯೂರಗಳಿಂದ **ಹಾರ** ಕಂಠದಲ್ಲಿ ಧರಿಸುವ ಆಭರಣ **ನೂಪುರ** ಕಾಲಿನಲ್ಲಿಯ ಗೆಜ್ಜೆ **ಮುದ್ರಾಭಿಃ** ಉಂಗುರ-ಗಳಿಂದಲೂ **ಕೌಸ್ತುಭೇನ** ಬ್ರಹ್ಮಾಭಿಮನ್ಯಮಾನವಾದ ಕೌಸ್ತುಭಮಣಿ-ಯಿಂದಲೂ **ವಿರಾಜಿತಂ** ಶೋಭಿತವಾದ||೩೧||

**ವನಮಾಲಾಪರೀತಾಂಗಂ ಮೂರ್ತಿಮದ್ಭಿರ್ನಿಜಾಯುಧೈಃ |**
**ಕೃತ್ವೋರೌ ದಕ್ಷಿಣಂ ಪಾದಮಾಸೀನಂ ಪಂಕಜಾರುಣಮ್ ||೩೨||**

**ವನಮಾಲಾಪರೀತಾಂಗಂ** ವನಮಾಲಾವನ್ನು ಧಾರಣಮಾಡಿದ **ಮೂರ್ತಿ-ಮದ್ಭಿಃ ನಿಜಾಯುಧೈಃ** ಪ್ರತ್ಯಕ್ಷವಾಗಿರುವ ತನ್ನ ಸ್ವರೂಪಾಯುಧಗಳಿಂದ ಕೂಡಿದ ನಾಲ್ಕು ಕೈಗಳಿಂದ ಯುಕ್ತವಾದ ದೇಹ ಉಳ್ಳವನಾಗಿ **ಊರೌ** ಎಡತೊಡೆಯ ಮೇಲೆ **ಪಂಕಜಾರುಣಂ** ಕಮಲದಂತೆ ಕೆಂಪಾದ **ದಕ್ಷಿಣಂ ಪಾದಂ** ಬಲಪಾದವನ್ನು **ಕೃತ್ವಾ** ಇಟ್ಟುಕೊಂಡು **ಆಸೀನಂ** ಕುಳಿತಿರುವ,||೩೨||

**ಮುಸಲಾವಶೇಷಾಯಃಖಂಡಕೃತೇಷುರ್ಲುಬ್ಧಕೋ ಜರಃ |**
**ಮೃಗಾಕಾರಂ ತಚ್ಚರಣಂ ವಿವ್ಯಾಧ ಮೃಗಶಂಕಯಾ ||೩೩||**

**ಮುಸಲ** ವನಕೆಯಲ್ಲಿ **ಅವಶೇಷ** ಉಳಿದ **ಅಯಃಖಂಡ** ಕಬ್ಬಿಣದ ತುಣಿಕಿನಿಂದ **ಕೃತೇಷುಃ** ತಯಾರಿಸಿದ ಬಾಣ ಉಳ್ಳ **ಜರಃ ಲುಬ್ಧಕಃ** ಜರನೆಂಬ ಬೇಡನು **ಮೃಗಾಕಾರಂ** ಜಿಂಕೆಯಂತೆ ಕಾಣುವ **ತಚ್ಚರಣಂ** ಶ್ರೀಕೃಷ್ಣನ ಪಾದವನ್ನು **ಮೃಗಶಂಕಯಾ** ಜಿಂಕೆಯೆಂದು ಭ್ರಾಂತನಾಗಿ **ವಿವ್ಯಾಧ** ಹೊಡೆದನು.||೩೩||

**ಚತುರ್ಭುಜಂ ತಂ ಪುರುಷಂ ದೃಷ್ಟ್ವಾ ಸ ಕೃತಕಿಲ್ಬಿಷಃ |**
**ಭೀತಃ ಪಪಾತ ಶಿರಸಾ ಪಾದಯೋರಸುರದ್ವಿಷಃ ||೩೪||**

**ಚತುರ್ಭುಜಂ ಪುರುಷಂ ದೃಷ್ಟ್ವಾ** ನಾಲ್ಕು ಕೈಯುಳ್ಳ ಪುರುಷನೆಂದು ತಿಳಿದು **ಯಃ ಕೃತಕಿಲ್ಬಿಷಃ** ಪಾಪ ಮಾಡಿದವನಾವನೋ ಅವನು **ಭೀತಃ** ಭಯಗೊಂಡು **ಅಸುರದ್ವಿಷಃ** ಶ್ರೀಕೃಷ್ಣನ **ಪಾದಯೋಃ** ಕಾಲುಗಳಿಗೆ **ಶಿರಸಾ** ಶಿರಸ್ಸಿನಿಂದ **ಪಪಾತ** ಎರಗಿದನು.||೩೪||

**ವ್ಯಾಧ ಉವಾಚ -**

**ಅಜಾನತಾ ಕೃತಮಿದಂ ಪಾಪೇನ ಮಧುಸೂದನ ।**
**ಕ್ಷಂತುಮರ್ಹಸಿ ಪಾಪಸ್ಯ ಉತ್ತಮಶ್ಲೋಕ ಮೇಽನಘ ।।೩೫।।**

**ಹೇ ಅನಘ** ಪಾಪರಹಿತನೇ **ಉತ್ತಮಶ್ಲೋಕ** ಉತ್ತಮರಾದ ಬ್ರಹ್ಮಾದಿಗಳಿಂದ ಸ್ತುತಿಸಲ್ಪಡುವವನೇ ಅಥವಾ ಪುಣ್ಯಕೀರ್ತಿಯೇ **ಮಧುಸೂದನ** ಮಧುನಾಮಕ ದೈತ್ಯನನ್ನು ಸಂಹರಿಸಿದ ಶ್ರೀಕೃಷ್ಣನೇ **ಅಜಾನತಾ** ನಿನ್ನನ್ನು ತಿಳಿಯದಿರುವ **ಪಾಪೇನ** ಪಾಪಿಷ್ಟನಾದ ನನ್ನಿಂದ **ಇದಂ** ಈ ಕಾರ್ಯವು **ಕೃತಂ** ಮಾಡಲ್ಪಟ್ಟಿತು **ಪಾಪಸ್ಯ** ಪಾಪಿಯಾದ **ಮೇ** ನನ್ನ ಅಪರಾಧವನ್ನು **ಕ್ಷಂತುಂ ಅರ್ಹಸಿ** ಕ್ಷಮಿಸಲು ಸಮರ್ಥನಾಗಿರುವಿ.।।೩೫।।

**ಯಸ್ಯಾನುಸ್ಮರಣಂ ನೃಣಾಮಜ್ಞಾನಧ್ವಾಂತನಾಶನಮ್ ।**
**ವದಂತಿ ತಸ್ಯ ತೇ ವಿಷ್ಣೋ ಮಯಾಽಸಾಧು ಕೃತಂ ವಿಭೋ ।।೩೬।।**

**ವಿಭೋ** ಸ್ವಾಮಿಯೇ **ವಿಷ್ಣೋ** ಶ್ರೀಕೃಷ್ಣನೇ **ಯಸ್ಯ** ಯಾವ ನಿನ್ನ **ಅನುಸ್ಮರಣಂ** ಪುನಃ ಪುನಃ ಸ್ಮರಿಸುವುದು **ನೃಣಾಂ** ಜನರಿಗೆ **ಅಜ್ಞಾನಧ್ವಾಂತನಾಶನಂ** ಅಜ್ಞಾನವೆಂಬ ಕತ್ತಲೆಗೆ ನಾಶಕವೆಂದು **ವದಂತಿ** ಜ್ಞಾನಿಗಳು ಹೇಳುವರೋ **ತಸ್ಯ ತೇ** ಅಂಥ ನಿನಗೆ, **ಮಯಾ** ನನ್ನಿಂದ **ಅಸಾಧು ಕೃತಂ** ಅಪಚಾರ ಮಾಡಲ್ಪಟ್ಟಿತು.।।೩೬।।

**ತಮಾಶು ಜಹಿ ವೈಕುಂಠ ಪಾಪ್ಮಾನಂ ಮೃಗಲುಬ್ಧಕಮ್ ।**
**ಯಥಾ ಪುನರಹಂ ತ್ವೇವಂ ನ ಕುರ್ಯಾಂ ಸದತಿಕ್ರಮಮ್ ।।೩೭।।**

**ಹೇ ವೈಕುಂಠ** ಶ್ರೀಕೃಷ್ಣನೇ **ಮೃಗಲುಬ್ಧಕಂ** ಮೃಗದ ಲೋಭ ಉಳ್ಳ ಆದ್ದರಿಂದಲೇ **ತಂ ಪಾಪ್ಮಾನಂ** ಪಾಪಿಯೆಂದು ಪ್ರಸಿದ್ಧನಾದ ನನ್ನನ್ನು **ಆಶು** ಶೀಘ್ರದಲ್ಲಿ **ಜಹಿ** ಸಂಹರಿಸು **ಯಥಾ** ಯಾವ ಕಾರಣ **ಪುನಃ** ಮರಣಾನಂತರ **ಅಹಂ** ನಾನು **ಏವಂ** ಈ ರೀತಿ **ಸದತಿಕ್ರಮಂ** ಉತ್ತಮರ ದ್ರೋಹವನ್ನು **ನ ತು ಕುರ್ಯಾಂ** ಮಾಡಲಾರೆನು ಕಾರಣ ಸಂಹರಿಸು.।।೩೭।।

**ಯಸ್ಯಾತ್ಮಯೋಗರಚಿತಂ ನ ವಿದುರ್ವಿರಿಂಚ-**
**ರುದ್ರಾದಯೋಽಸ್ಯ ತನಯಾಃ ಪತಯೋ ಗಿರಾಂ ಯೇ ।**

**ತ್ವನ್ಮಾಯಯಾ ವಿಹತದೃಷ್ಟಯ ಏತದಂಜಃ**
**ಕಿಂ ತಸ್ಯ ತೇ ವಯಮಸದ್ಗತಯೋ ಗೃಣೀಮಃ ॥೩೮॥**

**ತ್ವನ್ಮಾಯಯಾ** ನಿನ್ನ ಬಂಧಕ ಶಕ್ತಿಯಿಂದ **ವಿಹತದೃಷ್ಟಯಃ** ಜ್ಞಾನದ ಲೋಪವನ್ನು ಹೊಂದಿದ **ವಿರಿಂಚರುದ್ರಾದಯಃ** ಬ್ರಹ್ಮ, ರುದ್ರ, ಇಂದ್ರಾದಿಗಳು, **ಅಸ್ಯ ತನಯಾಃ** ಬ್ರಹ್ಮಪುತ್ರರಾದ ಮರಿಚೀ ಮುಂತಾದ **ಗಿರಾಂ ಪತಯಃ** ಬೃಹಸ್ಪತಿ ಮೊದಲಾದ **ಯೇ** ಯಾವ ದೇವತೆಗಳು **ಯಸ್ಯ** ಯಾವ ನಿನ್ನ **ಆತ್ಮಯೋಗರಚಿತಂ** ಸ್ವರೂಪಸಾಮರ್ಥ್ಯದಿಂದ ಮಾಡಿದ ಸೃಷ್ಟ್ಯಾದಿಗಳನ್ನು **ನ ವಿದುಃ** ತಿಳಿಯಲಾರರೋ **ತಸ್ಯ ತೇ** ಅಂಥ ನಿನ್ನ **ಏತತ್** ಈ ಚರಿತ್ರೆಯನ್ನು **ಅಸದ್ಗತಯಃ** ಬೇಡರ ಜಾತಿಯವರಾದ ನಾವು **ಅಂಜಃ ಗೃಣೀಮಃ ಕಿಂ** ಚೆನ್ನಾಗಿ ಸ್ತುತಿಸಲು ಸಾಧ್ಯವೇನು?

**ಶ್ರೀಭಗವಾನುವಾಚ -**

**ಮಾ ಭೈರ್ಜರ ತ್ವಮುತ್ತಿಷ್ಠ ಕಾಮ ಏಷ ಕೃತೋ ಹಿ ಮೇ ।**
**ಯಾಹಿ ತ್ವಂ ಮದನುಜ್ಞಾತಃ ಸ್ವರ್ಗಂ ಸುಕೃತಿನಾಂ ಪದಮ್ ॥೩೯॥**

**ಹೇ ಜರ** ಎಲೋ ಜರನೇ **ಮಾ ಭೈಃ** ಹೆದರಬೇಡ **ತ್ವಂ** ನೀನು **ಉತ್ತಿಷ್ಠ** ಏಳು **ಕೃತಃ ಏಷಃ** ನಿನ್ನಿಂದ ಮಾಡಲ್ಪಟ್ಟ ನನ್ನ ಕಾಲಿಗೆ ಬಾಣ ಹೊಡೆದುದು **ಹಿ** ದುಷ್ಟಜನಮೋಹನವಾಗಬೇಕಾದ್ದರಿಂದ **ಮೇ ಕಾಮಃ** ನನಗೆ ಅಪೇಕ್ಷಿತವೇ **ಮದನುಜ್ಞಾತಃ** ನನ್ನಿಂದ ಅಪ್ಪಣೆ ಪಡೆದವನಾಗಿ **ತ್ವಂ** ನೀನು **ಸುಕೃತಿನಾಂ ಪದಂ ಸ್ವರ್ಗಂ** ಪುಣ್ಯಶಾಲಿಗಳು ಪಡೆಯುವ ಸ್ವರ್ಗವನ್ನು ಕುರಿತು **ಯಾಹಿ** ಹೋಗು ಇದರಿಂದಇದುಕೂಡಪುಣ್ಯವೇಆಗಲಿಎಂದುಸೂಚಿಸಿದಂತಾಯಿತು.॥೩೯॥

**ಶ್ರೀಶುಕ ಉವಾಚ-**

**ಇತ್ಯಾದಿಷ್ಟೋ ಭಗವತಾ ಕೃಷ್ಣೇನೇಚ್ಛಾಶರೀರಿಣಾ।**
**ತ್ರಿಃ ಪರಿಕ್ರಮ್ಯ ತಂ ನತ್ವಾ ವಿಮಾನೇನ ದಿವಂ ಯಯೌ ॥೪೦॥**

**ಇಚ್ಛಾಶರೀರಣಾ** ತನ್ನ ಇಚ್ಛೆಯಿಂದ ಆವಿರ್ಭೂತವಾದ ರೂಪ ಉಳ್ಳ **ಭಗವತಾ ಕೃಷ್ಣೇನ** ಷಡ್ಗುಣೈಶ್ವರ್ಯಪರಿಪೂರ್ಣನಾದ ಶ್ರೀಕೃಷ್ಣನಿಂದ **ಇತಿ** ಈ ರೀತಿಯಾಗಿ **ಆದಿಷ್ಟಃ** ಆಜ್ಞಪ್ತನಾಗಿ **ತಂ** ಶ್ರೀಕೃಷ್ಣನನ್ನು **ತ್ರಿಃ ಪರಿಕ್ರಮ್ಯ** ಮೂರು ಪ್ರದಕ್ಷಿಣೆ ಮಾಡಿ **ನತ್ವಾ** ನಮಸ್ಕರಿಸಿ **ವಿಮಾನೇನ** ವಿಮಾನದಿಂದ **ದಿವಂ ಯಯೌ** ಸ್ವರ್ಗಕ್ಕೆ ಹೋದನು.॥೪೦॥

**ದಾರುಕಃ ಕೃಷ್ಣಪದವೀಮನ್ವಿಚ್ಛನ್ ನಾಧಿಗಮ್ಯ ತಮ್ ।**
**ವಾಯುಂ ತುಲಸಿಕಾಮೋದಮಾಘ್ರಾಯಾಭಿಮುಖಂ ಯಯೌ ।।೪೧।।**

**ದಾರುಕಃ** ಶ್ರೀಕೃಷ್ಣನ ಸಾರಥಿಯು **ಕೃಷ್ಣಪದವೀಂ** ಶ್ರೀಕೃಷ್ಣನಿರುವ ಸ್ಥಳವನ್ನು **ಅನ್ವಿಚ್ಛನ್** ಹುಡುಕುತ್ತ **ತಂ** ಶ್ರೀಕೃಷ್ಣನನ್ನು **ನಾಧಿಗಮ್ಯ** ಕಾಣದಲೇ **ತುಲಸಿಕಾಮೋದಂ ವಾಯುಂ** ತುಲಸಿಯ ವಾಸನೆಯುಳ್ಳ ಗಾಳಿಯನ್ನು **ಆಘ್ರಾಯ** ವಾಸನೆಯನ್ನು ತಿಳಿದು **ಅಭಿಮುಖಂ ಯಯೌ** ಗಾಳಿಗೆ ಎದುರಾಗಿ ನಡೆದನು.।।೪೧।।

**ತಂ ತತ್ರ ತಿಗ್ಮದ್ಯುತಿಮಾಯುಧೈರ್ವೃತಂ**
**ಹ್ಯಶ್ವತ್ಥಮೂಲೇ ಕೃತಕೇತನಂ ಪತಿಮ್ ।**
**ಸ್ನೇಹಪ್ಲುತಾತ್ಮಾ ನಿಪಪಾತ ಪಾದಯೋಃ**
**ರಥಾದವಪ್ಲುತ್ಯ ಸಬಾಷ್ಪಲೋಚನಃ ।।೪೨।।**

**ತತ್ರ ಅಶ್ವತ್ಥಮೂಲೇ** ಆ ಅಶ್ವತ್ಥದ ಕೆಳಗೆ **ಕೃತಕೇತನಂ** ವಾಸಿಸಿದ **ತಿಗ್ಮದ್ಯುತಿಂ** ಸುತ್ತಲೂ ವ್ಯಾಪ್ತವಾದ ತೀಕ್ಷ್ಣವಾದ ಪ್ರಕಾಶ ಉಳ್ಳ **ಆಯುಧೈಃ ವೃತಂ** ಆಯುಧಗಳಿಂದ ಕೂಡಿದ **ಪತಿಂ** ಸ್ವಾಮಿಯನ್ನು **ದೃಷ್ಟ್ವಾ** ನೋಡಿ **ಸ್ನೇಹಪ್ಲುತಾತ್ಮಾ** ಭಕ್ತಿಯಿಂದ ಕರಗಿದ ಮನಸ್ಸುಳ್ಳವನಾಗಿ **ರಥಾದವಪ್ಲುತ್ಯ** ರಥದಿಂದ ಕೆಳಗಿಳಿದು **ಸಬಾಷ್ಪಲೋಚನಃ** ಕಣ್ಣೀರು ಸುರಿಸುತ್ತ **ಪಾದಯೋಃ ನಿಪಪಾತ** ಕಾಲಿಗೆರಗಿದನು.।।೪೨।।

**ಅದೃಶ್ಯತಸ್ತೇ ಚರಣಾಂಬುಜಂ ಪ್ರಭೋ**
**ದೃಷ್ಟಿಃ ಪ್ರಣಷ್ಟಾ ತಮಸಿ ಪ್ರವಿಷ್ಟಾ ।**
**ದಿಶೋ ನ ಜಾನೇ ನ ಲಭೇ ಚ ಶಾಂತಿಂ**
**ಯಥಾ ನಿಶಾಯಾಮುಡುಪೇ ಪ್ರಣಷ್ಟೇ ।।೪೩।।**

**ಪ್ರಭೋ** ಸ್ವಾಮಿಯೇ **ತೇ ಚರಣಾಂಬುಜಂ** ನಿನ್ನ ಪಾದಕಮಲವನ್ನು **ಅಪಶ್ಯತಃ** ಕಾಣದ **ದೃಷ್ಟಿಃ** ಕಣ್ಣು **ತಮಸಿ ಪ್ರವಿಷ್ಟಾ** ಕತ್ತಲೆಯಲ್ಲಿ ಪ್ರವೇಶ ಮಾಡಿದ್ದಾಗಿ (ಕಣ್ಣಿಗೆ ಕತ್ತಲೆ ಬಂದು ಎಂದರ್ಥ) **ಪ್ರಣಷ್ಟಾ** ಕಾಣದಾಯಿತು. ಕಾರಣದಿಂದ **ದಿಶೋ ನ ಜಾನೇ** ದಿಕ್ಕುಗಳನ್ನು ಕಾಣಲಾರೆ. **ಶಾಂತಿಂ** ಸುಖವನ್ನು **ನ ಲಭೇ** ಹೊಂದಲಾರೆ. **ಯಥಾ** ಹೇಗೆ **ನಿಶಾಯಾಂ** ರಾತ್ರಿಯಲ್ಲಿ **ಉಡುಪೇ**

**ಪ್ರಣಷ್ಟೇ** ಚಂದ್ರನು ಅಸ್ತಂಗತನಾಗಲು ದಾರಿ ಕಾಣದಾಗುವುದೋ ಹಾಗೇ ಇಲ್ಲಿ ನಕ್ಷತ್ರಗಳೊಡನೆ ಚಂದ್ರನು ಕಾಣದಿರುವಾಗ ಎಂದರ್ಥ ವಿವಕ್ಷಿತವಾಗಿದೆ. ಇಲ್ಲವಾದರೆ ನಕ್ಷತ್ರಗಳನ್ನು ನೋಡಿ ದಿಕ್ಕುಗಳ ಜ್ಞಾನವಾಗಬಹುದು. ಈ ಕಾರಣದಿಂದಲೇ ಉಡುಪಪದವನ್ನು ಪ್ರಯೋಗ ಮಾಡಿದ್ದಾರೆ.

**ಶ್ರೀಶುಕ ಉವಾಚ -**

**ಇತಿ ಬ್ರುವತಿ ಸೂತೇ ವೈ ರಥೋ ಗರುಡಲಾಂಛನಃ ।**
**ಖ ಉತ್ಪಪಾತ ರಾಜೇಂದ್ರ ಸಾಶ್ವಧ್ವಜ ಉದೀಕ್ಷಿತಃ ॥೪೪॥**

**ಸೂತೇ** ಸಾರಥಿಯಾದ ದಾರುಕನು **ಇತಿ** ಈ ರೀತಿ **ಬ್ರುವತಿ ಸತಿ** ಹೇಳುತ್ತಿರಲು **ಗರುಡಲಾಂಛನಃ** ಗರುಡಧ್ವಜ ಉಳ್ಳ **ರಥಃ** ರಥವು **ಸಾಶ್ವಧ್ವಜಃ** ಕುದುರೆ-ಧ್ವಜಗಳಿಂದ ಸಹಿತವಾಗಿ **ಉದೀಕ್ಷಿತಃ ಸತಃ** ಸಾರಥಿಯು ನೋಡುತ್ತಿರುವಾಗಲೇ **ಖಂ ಪ್ರತಿ ಉತ್ಪಪಾತ** ಆಕಾಶವನ್ನು ಕುರಿತು ಹಾರಿತು. (ಪಾಠಾಂತರ) **ಉದೀಕ್ಷಿತಃ** ಶ್ರೀಕೃಷ್ಣನಿಂದ ಪ್ರೇರಿತವಾಗಿ ಹೀಗೂ ಅರ್ಥ. ಇಲ್ಲಿ ಸಾರಥಿ ಮುಂತಾದ ಚೇತನರ ಪ್ರೇರಣೆಯಿಲ್ಲದೇ ಅಚೇತನ ರಥ ಚಲಿಸುವುದನ್ನು ನೋಡುವ ಜ್ಞಾನಿಗಳಿಗೆ ಅಚ್ಯುತನ ರಥ ಆಯುಧಾದಿಗಳೂ ಕೂಡ ಚೈತನ್ಯಾತ್ಮಕಗಳೇ ಆಗಿವೆ. ಇದು ಆಶ್ಚರ್ಯಕರವಾದ ಶ್ರೀಹರಿಯ ಮಹಿಮೆ ಎಂದು ತಿಳಿಯುವರು ಎಂದು ತಿಳಿಯಬೇಕು.॥೪೪॥

**ತಮನ್ವಗಚ್ಛನ್ ದಿವ್ಯಾನಿ ವಿಷ್ಣುಪ್ರಹರಣಾನಿ ವೈ ।**
**ತೇನಾತಿವಿಸ್ಮಿತಾತ್ಮಾನಂ ಸೂತಮಾಹ ಜನಾರ್ದನಃ ॥೪೫॥**

**ವಿಷ್ಣು ಪ್ರಹರಣಾನಿ ಚ ದಿವ್ಯಾನಿ** ತೇಜೋಮಯವಾದ ಶ್ರೀಕೃಷ್ಣನ ಆಯುಧಗಳು **ತಂ ಅನ್ವಗಚ್ಛನ್** ರಥವನ್ನು ಅನುಸರಿಸಿ ನಡೆದವು. **ತೇನ** ರಥ-ಆಯುಧಾದಿಗಳ ಆಗಮನದಿಂದ **ಅತಿವಿಸ್ಮಿತಾತ್ಮಾನಂ** ಬಹಳ ಆಶ್ಚರ್ಯಚಕಿತನಾದ **ಸೂತಂ** ದಾರುಕನನ್ನು ಕುರಿತು **ಜನಾರ್ದನಃ** ಶ್ರೀಕೃಷ್ಣನು **ಆಹ** ಹೇಳಿದನು.

**ಶ್ರೀಭಗವಾನುವಾಚ-**

**ಗಚ್ಛ ದ್ವಾರವತೀಂ ಸೂತ ಜ್ಞಾತೀನಾಂ ನಿಧನಂ ಮಿಥಃ ।**
**ಸಂಕರ್ಷಣಸ್ಯ ನಿರ್ಯಾಣಂ ಬಂಧುಭ್ಯೋ ಬ್ರೂಹಿ ಮದ್ದಶಾಮ್ ॥೪೬॥**

**ಹೇ ಸೂತ** ದಾರುಕನೇ **ದ್ವಾರವತೀಂ ಗಚ್ಛ** ದ್ವಾರಕಾಪಟ್ಟಣಕ್ಕೆ ಹೋಗು **ಬಂಧುಭ್ಯಃ** ನಮ್ಮ ಬಂಧುಗಳಿಗೆ ಪಾಂಡವರಿಗೆ **ಜ್ಞಾತೀನಾಂ ಮಿಥಃ ನಿಧನಂ** ಜ್ಞಾತಿಗಳು ಪರಸ್ಪರ ಹೊಡೆದಾಡಿ ಮರಣ ಹೊಂದಿದ್ದನ್ನು **ಸಂಕರ್ಷಣಸ್ಯ ನಿರ್ಯಾಣಂ** ಬಲರಾಮನ ದೇಹತ್ಯಾಗವನ್ನು **ಮದ್ದಶಾಂ** ನನ್ನ ಸ್ವಲೋಕ ಪ್ರಯಾಣವನ್ನು **ಬ್ರೂಹಿ** ಹೇಳು.।।೪೬।।

**ದ್ವಾರಕಾಯಾಂ ನ ಚ ಸ್ಥೇಯಂ ಭವದ್ಭಿಶ್ಚ ಸ್ವಬಂಧುಭಿಃ ।**
**ಮಯಾ ತ್ಯಕ್ತಾಂ ಯದುಪುರೀಂ ಸಮುದ್ರಃ ಪ್ಲಾವಯಿಷ್ಯತಿ ।।೪೭।।**

**ಭವದ್ಭಿಃ ಸ್ವಬಂಧುಭಿಃ ಸಾಕಂ** ಬಂಧುಗಳಿಂದ ಸಹಿತರಾದ ನಿಮ್ಮಗಳಿಂದ **ದ್ವಾರಕಾಯಾಂ** ದ್ವಾರಕೆಯಲ್ಲಿ **ನ ಸ್ಥೇಯಂ** ಇರಕೂಡದು. **ಮಯಾ** ನನ್ನಿಂದ **ತ್ಯಕ್ತಾಂ** ಬಿಡಲ್ಪಟ್ಟ **ಯದುಪುರೀಂ** ದ್ವಾರಕೆಯನ್ನು **ಸಮುದ್ರಃ** ಸಮುದ್ರವು **ಪ್ಲಾವಯಿಷ್ಯತಿ** ಮುಳುಗಿಸುವುದು.।।೪೭।।

**ಸ್ವಂ ಸ್ವಂ ಪರಿಗ್ರಹಂ ಸರ್ವೇ ಆದಾಯ ಪಿತರೌ ಚ ನಃ ।**
**ಅರ್ಜುನೇನಾನ್ವಿತಾಃ ಸರ್ವೇ ಇಂದ್ರಪ್ರಸ್ಥಂ ಗಮಿಷ್ಯಥ ।।೪೮।।**

**ಸರ್ವೇ** ಎಲ್ಲರೂ **ಸ್ವಂ ಸ್ವಂ** ತಮ್ಮ ತಮ್ಮ **ಪರಿಗ್ರಹಂ** ಹೆಂಡತಿ ಮುಂತಾದ ಪರಿವಾರ ಪರಿಕರಗಳನ್ನು **ನಃ** ನಮ್ಮ **ಪಿತರೌ ಚ** ತಂದೆ-ತಾಯಿಗಳನ್ನು **ಸರ್ವೇ** ಎಲ್ಲರೂ **ಆದಾಯ** ಕರೆದುಕೊಂಡು **ಅರ್ಜುನೇನ ಅನ್ವಿತಾಃ** ಅರ್ಜುನನೊಟ್ಟಿಗೆ ಸೇರಿ **ಇಂದ್ರಪ್ರಸ್ಥಂ ಗಮಿಷ್ಯಥ** ಇಂದ್ರಪ್ರಸ್ಥಕ್ಕೆ ತೆರಳಿರಿ.।।೪೮।।

**ತ್ವಂ ತು ಮದ್ಧರ್ಮಮಾಸ್ಥಾಯ ಜ್ಞಾನನಿಷ್ಠ ಉಪೇಕ್ಷಕಃ ।**
**ಮನ್ಮಾಯಾರಚನಾಮೇತಾಂ ವಿಜ್ಞಾಯೋಪಶಮಂ ವ್ರಜ ।।೪೯।।**

**ತ್ವಂ ತು** ನೀನಾದರೂ **ಮದ್ಧರ್ಮಂ** ನನ್ನ ಪ್ರೀತಿಕರವಾದ ಧರ್ಮವನ್ನು **ಆಸ್ಥಾಯ** ಅನುಷ್ಠಾನ ಮಾಡುತ್ತಾ **ಜ್ಞಾನನಿಷ್ಠಃ** ಜ್ಞಾನಾಸಕ್ತನಾಗಿ **ಉಪೇಕ್ಷಕಃ** ಹೆಂಡತಿ-ಮಕ್ಕಳು ಮುಂತಾದ ವಿಷಯಗಳನ್ನು ತ್ಯಜಿಸಿದವನಾಗಿ **ಏತಾಂ** ಈ ಸಂಸಾರವನ್ನು **ಮನ್ಮಾಯಾರಚನಾಂ** ನನ್ನ ಇಚ್ಛೆಯಿಂದ ಉಂಟಾದುದು ಎಂದು **ವಿಜ್ಞಾಯ** ತಿಳಿದು **ಉಪಶಮಂ ವ್ರಜ** ಸುಖವನ್ನು ಹೊಂದು. ನನ್ನ ನಿಷ್ಠೆಯನ್ನು ಹೊಂದು.।।೪೯।।

**ಇತ್ಯುಕ್ತಸ್ತಂ ಪರಿಕ್ರಮ್ಯ ನಮಸ್ಕೃತ್ಯ ಪುನಃ ಪುನಃ ।**
**ತತ್ಪಾದೌ ಶೀರ್ಷ್ಣ್ಯುಪಾಧಾಯ ದುರ್ಮನಾಃ ಪ್ರಯಯೌ ಪುರೀಮ್ ॥**

**ಇತ್ಯುಕ್ತಃ** ಈ ರೀತಿ ಹೇಳಿಸಿಕೊಳ್ಳಲ್ಪಟ್ಟ ದಾರುಕನು **ತಂ ಪರಿಕ್ರಮ್ಯ** ಶ್ರೀಕೃಷ್ಣನನ್ನು ಪ್ರದಕ್ಷಿಣೆ ಮಾಡಿ **ಪುನಃ ಪುನಃ ನಮಸ್ಕೃತ್ಯ** ಮತ್ತೆ ಮತ್ತೆ ನಮಸ್ಕರಿಸಿ **ತತ್ಪಾದೌ** ಅವನ ಪಾದಗಳನ್ನು **ಶೀರ್ಷ್ಣಿ** ತಲೆಯ ಮೇಲೆ **ಉಪಾಧಾಯ** ಇಟ್ಟುಕೊಂಡು **ದುರ್ಮನಾಃ** ದುಃಖಿತವಾದ ಮನಸ್ಸಿನಿಂದ **ಪುರೀಂ** ದ್ವಾರಾವತಿಯನ್ನು ಕುರಿತು **ಪ್ರಯಯೌ** ಪ್ರಯಾಣ ಮಾಡಿದನು.

॥ ಇತಿ ಶ್ರೀಮದ್ಭಾಗವತೇ ಏಕಾದಶಸ್ಕಂಧೇ ತ್ರಿಂಶೋಽಧ್ಯಾಯಃ ॥

★★★



## ಅಥ ಏಕತ್ರಿಂಶೋಽಧ್ಯಾಯಃ

ಶ್ರೀಕೃಷ್ಣನ ಸ್ವಲೋಕ ಪ್ರಯಾಣ ಪ್ರಕಾರವನ್ನು ಈ ಅಧ್ಯಾಯದಲ್ಲಿ ಹೇಳುವರು. ಮೊದಲಿಗೆ ದೇವತೆಗಳ ಆಗಮನ ಹೇಳುವರು-

**ಶ್ರೀಶುಕ ಉವಾಚ -**

**ಅಥ ತತ್ರಾಗಮದ್ ಬ್ರಹ್ಮಾ ಭವಾನ್ಯಾ ಚ ಸಮಂ ಭವಃ ।**
**ಮಹೇಂದ್ರಪ್ರಮುಖಾ ದೇವಾ ಮುನಯಃ ಸಪ್ರಜೇಶ್ವರಾಃ ॥೧॥**

**ಅಥ** ದಾರುಕನು ಹೋದ ನಂತರ **ತತ್ರ** ಅಶ್ವತ್ಥವೃಕ್ಷದ ಮೂಲದಲ್ಲಿ **ಬ್ರಹ್ಮಾ ಆಗಮತ್** ಚತುರ್ಮುಖನು ಬಂದನು **ಭವಾನ್ಯಾ ಸಮಂ ಭವಃ** ಹೆಂಡತಿಯಾದ ಪಾರ್ವತಿಯೊಡನೆ ಶಿವನು **ಮಹೇಂದ್ರಪ್ರಮುಖಾಃ ದೇವಾಃ** ಇಂದ್ರ ಮೊದಲಾದ ದೇವತೆಗಳು **ಮುನಯಃ** ಸನಕಾದಿಗಳು **ಸಪ್ರಜೇಶ್ವರಾಃ** ಕಶ್ಯಪಾದಿ ಪ್ರಜಾಪತಿಗಳಿಂದ ಸಹಿತರಾಗಿ **ಆಗಮನ್** ಬಂದರು.॥೧॥

**ಪಿತರಃ ಸಿದ್ಧಗಂಧರ್ವಾ ವಿದ್ಯಾಧರಮಹೋರಗಾಃ ।**
**ಚಾರಣಾ ಯಕ್ಷರಕ್ಷಾಂಸಿ ಕಿನ್ನರಾಪ್ಸರಸೋ ದ್ವಿಜಾಃ ॥೨॥**

**ಪಿತರಃ** ಪಿತೃಗಳು, **ಸಿದ್ಧಗಂಧರ್ವಾಃ** ಸಿದ್ಧರು, ಗಂಧರ್ವರು, **ವಿದ್ಯಾಧರಮಹೋರಗಾಃ** ವಿದ್ಯಾಧರರು, ಸರ್ಪಗಳು, **ಚಾರಣಾಃ** ಚಾರಣರು, **ಯಕ್ಷರಕ್ಷಾಂಸಿ** ಯಕ್ಷರು, ರಾಕ್ಷಸರು, **ಕಿನ್ನರಾಪ್ಸರಸಃ** ಕಿನ್ನರರು, ಅಪ್ಸರೆಯರು, **ದ್ವಿಜಾಃ** ಗರುಡಾದಿ ಪಕ್ಷಿಗಳು ಋಷಿಗಳು,॥೨॥

**ದ್ರಷ್ಟುಕಾಮಾ ಭಗವತೋ ನಿರ್ಯಾಣಂ ಪರಮೋತ್ಸುಕಾಃ ।**
**ಗಾಯಂತಶ್ಚ ಗೃಣಂತಶ್ಚ ಶೌರೇಃ ಕರ್ಮಾಣಿ ಜನ್ಮ ಚ ॥೩॥**

**ಭಗವತಃ** ಶ್ರೀಕೃಷ್ಣನ **ನಿರ್ಯಾಣಂ** ತನ್ನ ಲೋಕಗಮನವನ್ನು **ದ್ರಷ್ಟುಕಾಮಾಃ** ನೋಡಲು ಇಚ್ಛಿಸಿ **ಪರಮೋತ್ಸುಕಾಃ** ಬಹಳ ಉತ್ಸಾಹ ಉಳ್ಳವರಾಗಿ **ಶೌರೇಃ** ಶ್ರೀಕೃಷ್ಣನ **ಜನ್ಮ** ಅವತಾರವನ್ನು **ಕರ್ಮಾಣಿ ಚ** ಅವನು ಮಾಡಿದ ಕಂಸ-ಸಂಹಾರಾದಿ ಕ್ರಿಯೆಗಳನ್ನು **ಗೃಣಂತಃ** ಸ್ತುತಿಸುತ್ತ, **ಗಾಯಂತಃ** ಹಾಡುತ್ತಾ,॥೩॥

**ವವೃಷುಃ ಪುಷ್ಪವರ್ಷಾಣಿ ವಿಮಾನಾವಲಿಭಿರ್ನಭಃ ।**
**ಕುರ್ವಂತಃ ಸಂಕುಲಂ ರಾಜನ್ ಭಕ್ತ್ಯಾ ಪರಮಯಾ ಯುತಾಃ ॥೪॥**

**ವಿಮಾನಾವಲಿಭಿಃ** ವಿಮಾನಗಳ ಸಮೂಹಗಳಿಂದ **ನಭಃ** ಆಕಾಶವನ್ನು **ಸಂಕುಲಂ ಕುರ್ವಂತಃ** ತುಂಬಿಸುವವರಾಗಿ **ಪರಮಯಾ ಭಕ್ತ್ಯಾ ಯುತಾಃ** ಅತ್ಯಂತ ಭಕ್ತಿಯಿಂದ ಕೂಡಿದವರಾಗಿ **ಪುಷ್ಪವರ್ಷಾಣಿ ವವೃಷುಃ** ಹೂವಿನ ಮಳೆಗೆರೆದರು.।।೪।।

**ಭಗವಾನಪಿ ತಾನ್ವೀಕ್ಷ್ಯ ವಿಭೂತೀರಾತ್ಮನೋ ವಿಭುಃ ।**
**ಸಂಯುಜ್ಯಾತ್ಮನಿ ಚಾತ್ಮಾನಂ ಪದ್ಮನೇತ್ರೇ ನ್ಯಮೀಲಯತ್ ।।೫।।**

**ವಿಭುಃ ಭಗವಾನ್** ಸ್ವಾಮಿಯಾದ ಶ್ರೀಕೃಷ್ಣನು **ಆತ್ಮನಃ** ತನ್ನ **ವಿಭೂತೀಃ** ವಿಶೇಷ ಸನ್ನಿಧಾನ ಪಾತ್ರರಾದ **ತಾನ್** ದೇವತೆಗಳನ್ನು **ವೀಕ್ಷ್ಯ** ನೋಡಿ **ಆತ್ಮನಿ** ಮೂಲ ರೂಪದಲ್ಲಿ **ಆತ್ಮಾನಂ ಸಂಯೋಜ್ಯ** ಒಂದೇ ಸಂಸ್ಥಾನ ಬರುವಂತೆ ಯೋಚಿಸಿ **ಪದ್ಮನೇತ್ರೇ** ಕಮಲದಂತಿರುವ ಕಣ್ಣುಗಳನ್ನು **ನ್ಯಮೀಲಯತ್** ಮುಚ್ಚಿದನು.।।೫।।

**ಲೋಕಾಭಿರಾಮಾಂ ಸ್ವತನುಂ ಧಾರಣಾಧ್ಯಾನಮಂಗಲಾಮ್ ।**
**ಯೋಗಧಾರಣಯಾಽಽಗ್ನೇಯ್ಯಾಽದಗ್ಧ್ವಾ ಧಾಮಾವಿಶತ್ ಸ್ವಕಮ್ ।।೬।।**

**ಧಾರಣಾಧ್ಯಾನಮಂಗಲಾಂ** ಖಂಡಸ್ಮೃತಿಗಳಿಂದ ಮಂಗಲಪ್ರದವಾದ **ಲೋಕಾಭಿರಾಮಂ** ಜನಮನೋಹರವಾದ **ಸ್ವತನುಂ** ತನ್ನ ದೇಹವನ್ನು **ಆಗ್ನೇಯ್ಯಾ ಯೋಗಧಾರಣಯಾ** ದೇಹದಾಹಕ್ಕೆ ಉಪಯುಕ್ತವಾದ ಅಗ್ನಿಜನಕವಾದುದರಿಂದ ಆಗ್ನೇಯೀ ಎನ್ನಿಸಿಕೊಳ್ಳುವ ಧಾರಣಾದಿಂದ ಅಂದರೆ ಧಾರಣಜನ್ಯವಾದ ಅಗ್ನಿಯಿಂದ **ಅದಗ್ಧ್ವಾ** ಸುಡದಲೇ (ದಹಿಸದೇ) **ಸ್ವಕಂ ಧಾಮ ಆವಿಶತ್** ತನ್ನ ಸ್ಥಾನವನ್ನು ಪ್ರವೇಶಿಸಿದನು.।।೬।।

ಇಲ್ಲಿ ದಗ್ಧ್ವಾ ಆವಿಶತ್ ಎಂದು ತೋರುತ್ತದೆ. ಅದು ಸರಿಯಲ್ಲ. ತೃತೀಯ ಸ್ಕಂಧದಲ್ಲಿ ''**ಆದಾಯಾಂತರಾಧಾದ್ಯಸ್ತು ಸ್ವಬಿಂಬಂ ಲೋಕಲೋಚನಮ್**'' ಎಂದು ದೇಹಸಹಿತವಾಗಿ ಅಂತರ್ಧಾನ ಹೇಳಿದ್ದರ ವಿರೋಧ ಬರುತ್ತದೆ. ಆದ್ದರಿಂದ ವ್ಯಾಖ್ಯಾನಿಸುವರು-

**ತಾತ್ಪರ್ಯ- ಆಗ್ನೇಯ್ಯಾ ಧಾರಣಯಾ ಸ್ವತನುಂ ಅದಗ್ಧ್ವಾ ಸ್ವಕಂ ಧಾಮ ಆವಿಶತ್।**

ಇದರಿಂದ ಅಕಾರಪ್ರಶ್ಲೇಷ ಮಾಡಿ ಅದಗ್ಧ್ವಾ ಎಂದು ಪದವಿಭಾಗವನ್ನು ತಿಳಿಸಿದಂತಾಯಿತು. ಈ ವಿಷಯದಲ್ಲಿ ಪ್ರಮಾಣ ಹೇಳುವರು-

**ತಾತ್ಪರ್ಯ**- ಆಗ್ನೇಯ್ಯಾऽನ್ಯೇ ಧಾರಣಯಾ ದಗ್ಧ್ವಾ ದೇಹಂ ಪರಂ ಪದಮ್।
ಯಾಂತಿ ದೇವಾ ಸಮಸ್ತಾಶ್ಚ ತೇಷಾಮನ್ಯಾಂ ತನುಂ ಹರಿಃ ।
ನೃಸಿಂಹರೂಪೀ ಸರ್ವೇಷಾಂ ಭಿತ್ವಾ ತಾಭಿರಲಂಕೃತಃ ।
ನೃತ್ಯತೇ ಪ್ರಲಯೇ ದೇವಃ ಸ್ವಯಂ ಕೃಷ್ಣಾದಿರೂಪವಾನ್ ।
ಅದಗ್ಧ್ವೈವ ತನುಂ ಯಾತಿ ನಿತ್ಯಾನಂದಸ್ವರೂಪತಃ॥ಇತಿ ತಂತ್ರಭಾಗವತೇ ।

ಶ್ರೀಹರಿಯಿಂದ ಭಿನ್ನರಾದ ಸಮಸ್ತದೇವತೆಗಳು ಯೋಗಧಾರಣೆಯಿಂದ ಉಂಟಾದ ಅಗ್ನಿಯಿಂದ ತಮ್ಮ ಸ್ಥೂಲದೇಹವನ್ನು ದಹಿಸಿಕೊಂಡು ಪರಮಾತ್ಮನ ಸ್ಥಾನವನ್ನು ಹೊಂದುವರು. ನರಸಿಂಹರೂಪಿಯಾದ ಪರಮಾತ್ಮನು ಅವರ ಬೇರೆ ಶರೀರಗಳನ್ನು ದೇವತೆಗಳಿಂದ ಬೇರ್ಪಡಿಸಿ ಆ ಶರೀರಗಳಿಂದ ಅಲಂಕೃತನಾಗಿ ಪ್ರಲಯಕಾಲದಲ್ಲಿ ನರ್ತನ ಮಾಡುವನು. ತಾನು ಕೃಷ್ಣರಾಮಾದಿ ಶರೀರಗಳನ್ನು ಯೋಗಾಗ್ನಿಯಿಂದ ದಹಿಸದೇ ತನ್ನ ಧಾಮಕ್ಕೆ ಹೋಗುವನು. ಆ ದೇಹಗಳು ನಿತ್ಯಾನಂದರೂಪವಾಗಿವೆ. ಆದ ಕಾರಣ ದಾಹವಿಲ್ಲ.

ಸರ್ವೇ ನಿತ್ಯಾಃ ಶಾಶ್ವತಾಶ್ಚ ದೇಹಾಸ್ತಸ್ಯ ಮಹಾತ್ಮನಃ ।
ಪರಮಾನಂದಸಂದೋಹಜ್ಞಾನಮಾತ್ರಾಶ್ಚ ಸರ್ವಶಃ ॥

ಮುಂತಾದ ಪ್ರಮಾಣಾನುಸಾರ ಹೀಗೆಯೇ ಅರ್ಥ ಮಾಡಬೇಕು.

ಇಲ್ಲಿ ಅದಗ್ಧ್ವಾ ಎಂದು ಪದಚ್ಛೇದ ಮಾಡಿ ದಾಹವಿಲ್ಲವೆಂದು ಅರ್ಥ-ಮಾಡಿದರೆ ಮೂಲದಲ್ಲಿ ಯೋಗಧರಣಯಾ ಎಂಬ ಪದ ವ್ಯರ್ಥವಾಗುವುದು. ದಾಹವಾಗದಿರಲು ಧಾರಣಾದ ಉಪಯೋಗವಿಲ್ಲವಲ್ಲ? ಎಂದು ಶಂಕಿಸಿ ಬೇರೆ ದೇವತೆಗಳಿಗೆ ಹೇಗೆ ಯೋಗಧಾರಣಾಗ್ನಿಯಿಂದ ದೇಹದಾಹವಾಗಿ ಭಗವದ್ಧಾಮಪ್ರಾಪ್ತಿಯೋ ಹಾಗೆ ಶ್ರೀಹರಿಗೆ ಅಲ್ಲ. ಧಾರಣಾದಿಂದ ದೇಹದಾಹವಿಲ್ಲದೇ ಸ್ವಧಾಮಪ್ರಾಪ್ತಿಯೆಂದು ತಿಳಿಸಲು ಆ ಪದ ಸಾರ್ಥಕವೆಂಬ ಅಭಿಪ್ರಾಯದಿಂದ ಆಚಾರ್ಯರು ಪ್ರಮಾಣ ಹೇಳಿರುವರು.

ಇಲ್ಲಿ ಯೋಗಾಗ್ನಿಯಿಂದ ದೇವತೆಗಳ ದೇಹನಾಶ ಹೇಳಿದೆ. ಬೇರೆ ಸ್ಥಳದಲ್ಲಿ ಸ್ವೋತ್ತಮಪ್ರವೇಶದಿಂದ ದೇಹಲಯ ಹೇಳಿದೆ. ಮತ್ತು ವಾಸುದೇವಸಹಸ್ರನಾಮ ಪ್ರಕರಣದಲ್ಲಿ

ಬ್ರಹ್ಮಚರ್ಮಶಿರಃಪಟ್ಟೀ ದಿಕ್ಪಾಲೋರ್ಧ್ವಾಂಗಭೂಷಣಃ ।
ದ್ವಾದಶಾರ್ಕಶಿರೋದಾಮಾ ರುದ್ರಶೀರ್ಷೈಕನೂಪುರಃ ॥

ಮುಂತಾಗಿ ಬ್ರಹ್ಮದೇವರ ಚರ್ಮವನ್ನು ತಲೆಗೆ ಪಟ್ಟಿಯಾಗಿ ಕಟ್ಟಿ ಅದರಲ್ಲಿ ದಿಕ್ಪಾಲಕರ ದೇಹಗಳನ್ನು ನವಿಲು ಗರಿಯಂತೆ ಸಿಕ್ಕಿಸಿಕೊಂಡು, ದ್ವಾದಶಾದಿತ್ಯರನ್ನು ತಲೆಗೆ ಕಟ್ಟುವ ದಾರವನ್ನಾಗಿ ಮಾಡಿ, ರುದ್ರದೇವರ ತಲೆಗಳನ್ನು ಕಾಲ್ಗೆಜ್ಜೆ ಮಾಡಿಕೊಂಡು ನರ್ತಿಸುವನು. ಎಂದು ನರಸಿಂಹದೇವರು ದೇವತೆಗಳ ದೇಹನಾಶಕನೆಂದು ಹೇಳಿರುವುದು. ಈ ವಿರೋಧ ಪರಿಹಾರ (ತೇಷಾಂ ಅನ್ಯಾಃ ತನೂಃ) ಎಂಬುದರಿಂದ ತಿಳಿಯಬೇಕು. ಅಂದರೆ ದೇವತೆಗಳು ಅನೇಕ ಸಲ ಜನಿಸುವುದರಿಂದ ದೇಹಗಳು ಬೇರೆ ಬೇರೆ ಇರುವುದರಿಂದ ಒಂದು ಅಗ್ನಿದಗ್ಧ, ಇನ್ನೊಂದು ಉತ್ತಮರಲ್ಲಿ ಪ್ರವೇಶದಿಂದ ನಷ್ಟ, ಮತ್ತೊಂದು ನರಸಿಂಹನಿಂದ ನಾಶಿತವೆಂದು ತಿಳಿಯಬೇಕು. (ಅನ್ಯಾಃ ತನೂಃ ಮೂಲರೂಪದ ಶರೀರಗಳು ನರಸಿಂಹನಾಶಿತ ಎಂದು ಶ್ರೀನಿವಾಸತೀರ್ಥರು) ಸ್ವರೂಪದೇಹ ಭಿನ್ನ ಶರೀರಗಳು ಎಂದು ಪ್ರಭೋದಿನೀಕಾರರು.

ತಾತ್ಪರ್ಯದೀಪಿಕಾಕಾರರು ಕೇವಲ ಸ್ಥೂಲದೇಹನಾಶದಿಂದ ಪರಪದ ಪ್ರಾಪ್ತಿ ಹೇಗಾದೀತು? ಎಂದು ಶಂಕಿಸಿ ಅದಕ್ಕೆ ಉತ್ತರವಾಗಿ **ಅನ್ಯ** ಎಂದರೆ ಸ್ಥೂಲದೇಹಭಿನ್ನವಾದ ಲಿಂಗದೇಹವನ್ನು ಎಂದರ್ಥ ಮಾಡಿರುವರು. **ತಾಭಿಃ** ಎಂದರೆ ಶರೀರಪರಾಮರ್ಶ ಮಾಡದೇ ಆವರಣಭೂತ ತನ್ನ ರೂಪಗಳಿಂದ ಅಲಂಕೃತನಾಗಿ ನರ್ತಿಸುವನು ಎಂದಿರುವರು.

೧. ದೇವತೆಗಳು ಭೂಮಿಯಲ್ಲಿ ಅವತಾರ ಮಾಡಿದಾಗ ಯೋಗಧಾರಣೆ-ಯಿಂದ ಸ್ಥೂಲದೇಹವನ್ನು ತ್ಯಜಿಸುವರು.

(''**ಉತ್ಕ್ರಾಂತಿಮಾರ್ಗೌ ದೇವಾನಾಂ ನ ಪ್ರಾಯೇಣ ಭವಿಷ್ಯತಃ**'' ಎಂಬ ಅನುವ್ಯಾಖಾನದ ವ್ಯಾಖ್ಯಾನದಲ್ಲಿ ಮನುಷ್ಯರಾಗಿ ಅವತರಿಸಿದಾಗ ಉತ್ಕ್ರಮಣವಿರುವುದರಿಂದ ಪ್ರಾಯಃ ಎಂದಿದ್ದಾರೆ. ಎಂದು ಹೇಳಿದೆ.)

೨. ಬ್ರಹ್ಮಾಂಡದ ಒಳಗಿರುವ ದೇವತೆಗಳ ದೇಹವನ್ನು ನರಸಿಂಹದೇವರು ನಾಶಪಡಿಸುವರು.

೩. ಬ್ರಹ್ಮಾಂಡದ ಹೊರಗೆ ತತ್ವಗಳು ಲಯವಾಗುವಾಗ ಯಾವ ತತ್ವ ಯಾವ ತತ್ವದಿಂದ ಹುಟ್ಟಿದೆಯೋ ಆ ತತ್ವ ಆ ತತ್ವದಲ್ಲಿ ಲಯವಾಗುವಂತೆ ಯಾರಿಂದ ಯಾವ ದೇವತೆ ಹುಟ್ಟಿರುವನೋ ಆ ಹುಟ್ಟಿದ ದೇವತೆ ಹುಟ್ಟಿಸಿದ ದೇವತೆಯಲ್ಲಿ ಸಶರೀರವಾಗಿ ಪ್ರವೇಶಿಸುವನು. ಅಲ್ಲಿ ಆ ಸ್ಥೂಲದೇಹವು ನಾಶವಾಗುವುದು. ಲಿಂಗದೇಹನಾಶ ಬ್ರಹ್ಮದೇವರೊಟ್ಟಿಗೆ ವಿರಜಾನದಿಯಲ್ಲಿ ಆಗುವುದು ಹೀಗೆ ತಿಳಿಯಬೇಕು.।।೬।।

**ದಿವಿ ದುಂದುಭಯೋ ನೇದುಃ ಪೇತುಃ ಸುಮನಸಶ್ಚ ಖಾತ್ ।**
**ಸತ್ಯಂ ಧರ್ಮೋ ಧೃತಿರ್ಭೂತಿಃ ಕೀರ್ತಿಃ ಶ್ರೀಶ್ಚಾನು ತಂ ಯಯುಃ ।।೭।।**

**ದಿವಿ** ಅಂತರಿಕ್ಷದಲ್ಲಿ **ದುಂದುಭಯಃ ನೇದುಃ** ನಗಾರಿಗಳು ಮೊಳಗಿದವು **ಖಾತ್** ಆಕಾಶದಿಂದ **ಸುಮನಸಃ ಪೇತುಃ** ಹೂಗಳು ಉದುರಿದವು. **ಸತ್ಯಂ** ಸತ್ಯವಚನವು, **ಧರ್ಮಃ** ಧರ್ಮವು **ಧೃತಿಃ** ಧೈರ್ಯ, **ಭೂತಿಃ** ಐಶ್ವರ್ಯ, **ಕೀರ್ತಿಃ** ಕೀರ್ತಿಯು, **ಚ** ಮತ್ತು **ಶ್ರೀಃ** ಸಂಪತ್ತು ಇವುಗಳ ಅಭಿಮಾನಿಗಳು **ತಂ ಅನುಯಯುಃ** ಶ್ರೀಕೃಷ್ಣನನ್ನು ಅನುಸರಿಸಿ ಹೋದವು. ಅಂದರೆ ಕಲಿಯುಗದಲ್ಲಿ ಸತ್ಯ-ಧರ್ಮ ಮುಂತಾದವು ಇರಲಾರವು ಎಂದರ್ಥ.।।೭।।

**ದೇವಾದಯೋ ಬ್ರಹ್ಮಮುಖಾ ಆವಿಶಂತಂ ಸ್ವಧಾಮನಿ ।**
**ಅವಿಜ್ಞಾತಗತಿಂ ಕೃಷ್ಣಂ ದದೃಶುಶ್ಚಾತಿವಿಸ್ಮಿತಾಃ ।।೮।।**

**ಬ್ರಹ್ಮಮುಖಾಃ ದೇವಾದಯಃ** ಚತುರ್ಮುಖನೇ ಮೊದಲಾದ ದೇವತೆಗಳು ಪಿತೃಗಳು, ಗಂಧರ್ವರು, ಮುಂತಾದವರು **ಅವಿಜ್ಞಾತಗತಿಂ** ತಿಳಿಯದಿರುವ ಸ್ವರೂಪ ಉಳ್ಳ **ಸ್ವಧಾಮನಿ ಆವಿಶಂತಂ** ತನ್ನ ಧಾಮವನ್ನು ಪ್ರವೇಶ ಮಾಡುತ್ತಿರುವ **ಕೃಷ್ಣಂ** ಶ್ರೀಕೃಷ್ಣನನ್ನು **ಅತಿವಿಸ್ಮಿತಾಃ** ಬಹು ಆಶ್ಚರ್ಯಚಕಿತರಾಗಿ **ದದೃಶುಃ** ನೋಡಿದರು. ಯಾವ ದೇವತೆಗಳು ಮೊದಲು ಶ್ರೀಕೃಷ್ಣನನ್ನು ನೋಡಿದರೋ ಆ ದೇವತೆಗಳಿಗೂ ತಿಳಿಯದೇ ತನ್ನ ಲೋಕಕ್ಕೆ ಪ್ರಯಾಣ ಮಾಡಿದ ಶ್ರೀಕೃಷ್ಣನ ಶರೀರದ ಅವ್ಯಕ್ತತೆಯನ್ನು ನೋಡಿ ಆಶ್ಚರ್ಯಪಟ್ಟರೆಂದರ್ಥ.।।೮।।

**ಸೌದಾಮಿನ್ಯಾ ಯಥಾಽಽಕಾಶೇ ಯಾಂತ್ಯಾ ಭಿತ್ವಾಽಭ್ರಮಂಡಲಮ್ ।**
**ಗತಿರ್ನ ಲಕ್ಷ್ಯತೇ ಮರ್ತ್ಯೈಸ್ತಥಾ ಕೃಷ್ಣಸ್ಯ ದೈವತೈಃ ।।೯।।**

**ಯಥಾ** ಹೇಗೆ **ಮರ್ತ್ಯೈಃ** ಮನುಷ್ಯರಿಂದ **ಅಭ್ರಮಂಡಲಂ ಭಿತ್ವಾ** ಮೋಡಗಳ ಸಮೂಹವನ್ನು ಭೇದಿಸಿ **ಯಾಂತ್ಯಾಃ** ಹೋಗುವ **ಸೌದಾಮಿನ್ಯಾಃ** ವಿದ್ಯುತ್ತಿನ **ಗತಿಃ** ಗಮನವು **ನ ಲಕ್ಷ್ಯತೇ** ತಿಳಿಯಲ್ಪಡುವುದಿಲ್ಲವೋ **ತಥಾ** ಹಾಗೆ **ದೈವತೈಃ** ದೇವತೆಗಳಿಂದ **ಕೃಷ್ಣಸ್ಯ** ಶ್ರೀಕೃಷ್ಣನ **ಗತಿಃ** ಗಮನವು **ನ ಲಕ್ಷ್ಯತೇ** ಸಂಪೂರ್ಣವಾಗಿ ತಿಳಿಯಲ್ಪಡುವುದಿಲ್ಲ. ಕಂಡೂ ಕಾಣದಿರುವಲ್ಲಿ ಮಿಂಚಿನ ದೃಷ್ಟಾಂತ ಶ್ರೀಕೃಷ್ಣನಾದರೂ ವ್ಯಕ್ತವಾದ ರೂಪದಿಂದಲೇ ಅವ್ಯಕ್ತನಾದನು ಎಂದು ಭಾವ.।।೯।।

**ಬ್ರಹ್ಮರುದ್ರಾದಯಸ್ತೇ ತು ದೃಷ್ಟ್ವಾ ಯೋಗಗತಿಂ ಹರೇಃ ।**
**ವಿಸ್ಮಿತಾಸ್ತಾಂ ಪ್ರಶಂಸಂತಃ ಸ್ವಂ ಸ್ವಂ ಧಾಮಾಗಮನ್ ನೃಪ ।।೧೦।।**

**ತೇ ಬ್ರಹ್ಮರುದ್ರಾದಯಃ ತು** ಬ್ರಹ್ಮ, ರುದ್ರ, ಮೊದಲಾದ ಆ ದೇವತೆಗಳೆಲ್ಲರೂ **ಹರೇಃ** ಶ್ರೀಕೃಷ್ಣನ **ಯೋಗಗತಿಂ** ಯೋಗಸಾಮರ್ಥ್ಯವನ್ನು **ದೃಷ್ಟ್ವಾ** ನೋಡಿ **ವಿಸ್ಮಿತಾಃ** ಆಶ್ಚರ್ಯಚಕಿತರಾಗಿ **ತಾಂ** ಯೋಗಗತಿಯನ್ನು **ಪ್ರಶಂಸಂತಃ** ಹೊಗಳುತ್ತ **ಸ್ವಂ ಸ್ವಂ** ತಮ್ಮ ತಮ್ಮ **ಲೋಕಂ** ಲೋಕವನ್ನು ಕುರಿತು **ತದಾ** ಆವಾಗ **ಅಗಮನ್** ಹೋದರು.।।೧೦।।

ಶ್ರೀಕೃಷ್ಣನು ದೇಹಾಂತರವನ್ನು ದಾಹಗೊಳಿಸಿದುದು ಏಕೆ? ಎಂದರೆ ಅದೂ ಒಂದು ಲೀಲೆ ಎಂದು ಹೇಳುವರು-

**ರಾಜನ್ ಪರಸ್ಯ ತನುಭೃಜ್ಜನನಾಪ್ಯಯೇಹಾ**
**ಮಾಯಾವಿಡಂಬನಮವೈಹಿ ಯಥಾ ನಟಸ್ಯ ।**
**ಸೃಷ್ಟ್ವಾಽಽತ್ಮನೇದಮನುವಿಶ್ಯ ವಿಹೃತ್ಯ ಚಾಂತೇ**
**ಸಂಹೃತ್ಯ ಚಾತ್ಮಮಹಿಮೋಪರತಃ ಸ ಆಸ್ತೇ ।।೧೧।।**

**ಹೇ ರಾಜನ್** ಪರೀಕ್ಷಿತನೇ **ಪರಸ್ಯ** ಲೋಕವಿಲಕ್ಷಣನಾದ ಶ್ರೀಕೃಷ್ಣನ **ತನುಭೃಜ್ಜನನಾಪ್ಯಯೇಹಾ** ಪ್ರಾಕೃತಶರೀರ ಉಳ್ಳ ಪ್ರಾಣಿಗಳಂತೆ ಜನನ ಉಳ್ಳವನಂತೆ ನಾಶ ಉಳ್ಳವನಂತೆ **ಈಹಾ** ಚೇಷ್ಟೆಯು **ಮಾಯಾವಿಡಂಬನಂ ಅವೈಹಿ** ತನ್ನ ಇಚ್ಛೆಯಿಂದ ಲೋಕಾನುಕರಣವೆಂದು ತಿಳಿ **ಯಥಾ ನಟಸ್ಯ** ನಟಿಸುವ ರಾಜ ಮುಂತಾದ ವೇಷವನ್ನು ಧರಿಸಿ ಬಿಡುವಂತೆ ತನಗೆ ದೇಹವಿಲ್ಲದಿದ್ದರೆ ಸೃಷ್ಟ್ಯಾದಿಗಳನ್ನು ಹೇಗೆ ಮಾಡುವನು. ಎಂದರೆ

ಹೇಳುವರು **ಸಃ** ಶ್ರೀಹರಿಯು **ಆತ್ಮನಾ** ತನ್ನ ಸ್ವರೂಪಶಕ್ತಿಯಿಂದ **ಇದಂ** ಜಗತ್ತನ್ನು **ಸೃಷ್ಟ್ವಾ** ಹುಟ್ಟಿಸಿ **ಅನುವಿಶ್ಯ** ಪ್ರೇರಕರೂಪಗಳಿಂದ ಪ್ರವೇಶಮಾಡಿ **ವಿಹೃತ್ಯ** ಅವತಾರರೂಪಗಳಿಂದ ಕ್ರೀಡಿಸಿ **ಅಂತೇ** ಪ್ರಲಯಕಾಲದಲ್ಲಿ **ಸಂಹೃತ್ಯ** ಪ್ರಪಂಚವನ್ನು ಸಂಹರಿಸಿ ತನ್ನ ರೂಪವನ್ನು ಉಪಸಂಹರಿಸಿ **ಆತ್ಮಮಹಿಮೋ-ಪರತಃ ಆಸ್ತೇ** ಜಗದ್ವ್ಯಾಪಾರರಹಿತನಾಗಿ ತನ್ನ ಮಹಿಮೆಯಲ್ಲಿ ಇರುವವ-ನಾಗುತ್ತಾನೆ. ತನ್ನ ಮಹಾಮಹಿಮೆಯಿಂದಲೇ ದೇಹಾದಿಗಳಿಲ್ಲದೇ ಸ್ವಧಾಮ ಪ್ರವೇಶಾದಿಗಳನ್ನು ಮಾಡುವನೆಂದು ಭಾವ.||೧೧||

ಮೇಲಿನ ಶ್ಲೋಕದಲ್ಲಿ **ತನುಭೃತಾಂ** ಜೀವರುಗಳ **ಜನನ** ಉತ್ಪತ್ತಿ ವಿಷಯದಲ್ಲಿ **ಅಪ್ಯಯ** ನಾಶವಿಷಯದಲ್ಲಿಯೂ ಇರುವ ಯಾವ **ಈಹಾ** ಚೇಷ್ಟೇ ಇದೆಯೋ **ಸಾ** ಅದು **ಮಯಾವಿಡಂಬನಂ** ಮಿಥ್ಯಾ ಹೀಗೆ ಜೀವಾದಿ ಸೃಷ್ಟ್ಯಾದಿ ವ್ಯಾಪಾರಕ್ಕೆ ಮಿಥ್ಯಾತ್ವ ಹೇಳುವಂತೆ ತೋರುವುದು. ಆದ್ದರಿಂದ ತಾತ್ಪರ್ಯ ಹೇಳುವರು.

**ತಾತ್ಪರ್ಯ-** ತನುಭೃದ್ವಜ್ಜನನವದಪ್ಯಯವಚ್ಚ ಈಹಾ ತನುಭೃಜ್ಜನನಾಪ್ಯೇಹಾ||

ಅಂದರೆ ದೇಹಧಾರಿಗಳಾದ ಜೀವರ ಜನನಮರಣಗಳಂತೆ ತನ್ನ ಜನನ-ಮರಣ ವಿಷಯಕ ವ್ಯಾಪಾರವು ಮಾಯಾವಿಡಂಬನಂ ಎಂದರೆ ತನ್ನ ಇಚ್ಛೆಯಿಂದ ಅಸುರಜನಮೋಹನಕ್ಕಾಗಿ ನಟನೆ ಮಾತ್ರ. (ಅನುಕರಣವಷ್ಟೇ) ಎಂದರ್ಥ. ಹೊರತು ಜೀವಾದಿ ಜಗತ್ಸೃಷ್ಟ್ಯಾದಿ ವ್ಯಾಪಾರ ಸುಳ್ಳು ಎಂದಲ್ಲ. ಹಾಗೆ ಹೇಳಿದರೆ ''ಸತ್ಯಃ ಸೋ ಅಸ್ಯ ಮಹಿಮಾ ಗೃಣೇ ಶವಃ'' ''ಯಃ ಸತ್ಯರೂಪಂ ಜಗದೇತದೀದೃಕ್ ಸೃಷ್ಟ್ವಾತ್ವಭೂತ್ ಸತ್ಯಕರ್ಮಾ ಮಹಾತ್ಮಾ'' ''ಅವಿನಾಶೀ ವಾ ಅರೇ ಅಯಮಾತ್ಮಾ ಅನುಚ್ಛಿತ್ತಿಧರ್ಮಾ'' ''ಸತ್ಯಾ ವಿಷ್ಣೋರ್ಗುಣಾಸ್ಸರ್ವೇ'' ಮುಂತಾದ ಶ್ರುತಿ-ಸ್ಮೃತಿಗಳು ಭಗವಂತನ ಸೃಷ್ಟಿ ಮುಂತಾದವು ಸತ್ಯವೆಂದು ಹೇಳುತ್ತಿರುವುದರಿಂದ ಅವುಗಳ ವಿರೋಧ ಬರುವುದು. ಅದರಂತೆ ''ರಾಮೋ ದಶರಥಾಜ್ಜಾತಃ'' ''ಜಾತಃ ಕಂಸವಧಾ-ರ್ಥಾಯ'' ಮುಂತಾದ ವಾಕ್ಯಸಹಿತವಾದ ಚೇತನತ್ವ ಯುಕ್ತಿಯಿಂದ ರಾಮಕೃಷ್ಣಾದಿ ದೇಹಗಳಿಗೆ ಜನನಾದಿಗಳನ್ನು ಹೇಳಲೂ ಆಗುವುದಿಲ್ಲ. ನಿರವಕಾಶಶ್ರುತಿ ಮುಂತಾದವುಗಳಿಂದ ಅನುಮಾನ ಪ್ರಮಾಣವು ಅದಕ್ಕೆ ಅನುಗ್ರಾಹಕ ವಾಕ್ಯಗಳು ಪ್ರಾದುರ್ಭಾವಾರ್ಥಕವಾದ್ದರಿಂದ ಸಾವಕಾಶ-

ವಾಗುತ್ತವೆ. ಈ ಅಭಿಪ್ರಾಯದಿಂದ ಶ್ರೀಹರಿಗೆ ವಾಸ್ತವ ಜನನಾದಿಗಳಿಲ್ಲ ಎನ್ನಲು ಶ್ರುತಿ-ಸ್ಮೃತಿಗಳನ್ನು ಹೇಳುವರು.

**ತಾತ್ಪರ್ಯ– ''ಪ್ರಜಾಪತಿಶ್ಚರತಿ ಗರ್ಭೇ ಅಂತಃ'' ''ಅಜಾಯಮಾನೋ ಬಹುಧಾ ವಿಜಾಯತೇ'' ಇತಿ ಚ । ''ಅಜಾತೋ ಜಾತವದ್ವಿಷ್ಣುರಮೃತೋ ಮೃತವತ್ ತಥಾ'' ''ಮಾಯಯಾ ದರ್ಶಯನ್ನಿತ್ಯಮಜ್ಞಾನಾಂ ಮೋಹನಾಯ ಚ ॥ ಇತಿ ಬ್ರಾಹ್ಮೇ ।**

**ದೇಹಭೃದ್ವತ್** ದೇಹಧಾರಿಗಳಂತೆ ಪರಮಾತ್ಮ ಗರ್ಭದಲ್ಲಿರುವನು ಹೊರತು ಗರ್ಭವಾಸ ದುಃಖವಿಲ್ಲ. ಆದ್ದರಿಂದ ಜೀವನ ಜನನದಂತೆ ಪರಮಾತ್ಮನಿಗೆ ಜನನವಿಲ್ಲ. ಎಂಬುದನ್ನೇ ''ಅಜಾಯಮಾನಃ'' ''ಪ್ರಜಾಪತಿಃ ಗರ್ಭೇ ಅಂತಃ ಚರತಿ'' ಎಂದು ಹೇಳಿದ್ದಾರೆ. **ಜನನವತ್** ಜನನ ಸಾಮ್ಯ ಎಂದರೆ ಅವತಾರ ಮಾಡುವುದು ಎಂಬುದನ್ನೇ **ಅಜಾಯಮಾನಃ** ಹುಟ್ಟದಲೇ **ಬಹುಧಾ ವಿಜಾಯತೇ** ಅನೇಕ ವಿಧ ಅವತಾರ ಮಾಡುವನು ಎಂದು ಹೇಳಿರುವರು. **ಅಪ್ಯಯವತ್** ಮರಣಸಾಮ್ಯ ಎಂದು ಮೃತನೆಂಬ ಭ್ರಾಂತಿಯುಂಟು ಮಾಡುವುದು ಎಂಬುದನ್ನು ಬ್ರಾಹ್ಮ ಪುರಾಣ ಹೇಳುವುದು.॥೧೧॥

ಕೃಷ್ಣನು ಜರಾವ್ಯಾಧನ ಬಾಣದಿಂದ ವಿದ್ಧನಾಗಿ ಶರೀರತ್ಯಾಗವನ್ನು ಮಾಡಿದನು ಎಂದು ಯಾಕಾಗಬಾರದು ಎಂದು ಶಂಕಿಸಿದರೇ ಹೇಳುತ್ತಿದ್ದಾರೆ-

**ಮರ್ತ್ಯೇನ ಯೋ ಗುರುಸುತಂ ಯಮನೀತಲೋಕಂ**
**ತ್ವಾಂ ಚಾನಯಚ್ಛರಣದಃ ಪರಮಾಸ್ತ್ರದಗ್ಧಮ್ ।**
**ಜಿಗ್ಯೇ ಪುರೇಽಂತಕಮಪೀಶತನಾವನೀಶಃ**
**ಕಿಂ ಸ್ವಾವನೇ ಸ್ವರನಯನ್ ಮೃಗಯೋಃ ಸ್ವದೇಹೇ ॥೧೨॥**

ಜಿಗ್ಯೇಂತಕಾಂತಕಮಪಿ ಪಾಠಾಂತರ, ಮೃಗಯುಂ ಸದೇಹಂ ಎಂಬುದು ಪಾಠಾಂತರ.

**ಯಃ** ಯಾವ ಶ್ರೀಕೃಷ್ಣನು **ಯಮನೀತಲೋಕಂ** ಯಮನಿಂದ ತನ್ನ ಲೋಕಕ್ಕೆ ಒಯ್ಯಲ್ಪಟ್ಟ **ಗುರುಸುತಂ** ಸಾಂದಿಪೀನಿಯ ಮಗನನ್ನು **ಮರ್ತ್ಯೇನ ಸಹ** ದೇಹ ಸಹಿತವಾಗಿ **ಆನಯತ್** ಕರೆತಂದನೋ **ಶರಣದಃ** ರಕ್ಷಕನಾದ ಯಾವ ಶ್ರೀಕೃಷ್ಣನು **ಪರಮಾಸ್ತ್ರದಗ್ಧಂ** ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದ ಸುಟ್ಟ **ತ್ವಾಂ**

ನಿನ್ನನ್ನು **ಆನಯತ್** ಬದುಕಿನ ಭೂಮಿಗೆ ತಂದನೋ **ಪುರೇ** ಬಾಣಪುರದಲ್ಲಿ **ಅಂತಕಂ** ರುದ್ರನನ್ನು ಅಥವಾ ಪಾರಿಜಾತಾಪಹರಣಕಾಲದಲ್ಲಿ **ಅಂತಕಂ** ಯಮನನ್ನು **ಅಂತಕಾಂತಕಂ** ಎಂಬ ಪಾಠದಲ್ಲಿ ಯಮನಿಗೂ ನಾಶಕನಾದ ರುದ್ರನನ್ನು **ಜಿಗ್ಯೇ** ಗೆದ್ದನೋ ಅವನು **ಅನೀಶಃ** ತನಗೆ ಬೇರೊಬ್ಬ ನಿಯಾಮಕ ರಹಿತನು **ಈಶತನೌ** ಸರ್ವೇಶರಾದ ರುದ್ರಾದಿಗಳಿಗೆ ಈಶತ್ವವನ್ನು ಕೊಡುವ (ಈಶಾನಾಂ ಈಶತ್ವಂ ತನೋತಿ ಇತಿ ಈಶತನುಃ ತಸ್ಮಿನ್ ಈಶತನೌ) ಇಂತಹ ತನ್ನ ದೇಹದಲ್ಲಿ **ಮೃಗಯೋಃ ಅನೀಶಃ ಕಿಂ** ಬೇಡನಿಂದ ರಕ್ಷಿಸಲು ಅಸಮರ್ಥನೇನು? ಅಲ್ಲ. **ಯಃ** ಯಾವನು **ಸ್ವಾವನೇ** ತನ್ನ ರಕ್ಷಣದಲ್ಲಿ **ಅನಿಶಃ ಕಿಂ** ರಕ್ಷಿಸಲು ಅಸಮರ್ಥನೇನು? ಅಲ್ಲ. **ಮೃಗಯುಂ** ಬೇಟೆಗಾರನನ್ನು **ಸದೇಹಂ** ದೇಹಸಹಿತವಾಗಿ **ಸ್ವಃ ಅನಯತ್** ಸ್ವರ್ಗಕ್ಕೆ ಕಳಿಸಿದನು. ಎಂದು ಭಾವ. ಇಲ್ಲಿ ವ್ಯಾಖ್ಯಾನ ಮೂಲಗಳಿಗೆ ವ್ಯತ್ಯಾಸವಿದೆ. ||೧೨||

ಬ್ರಾಹ್ಮಣರ ಶಾಪವನ್ನು ಸ್ಮರಿಸಿ, ಸ್ವಯಂ ತಾನು ಅವಿದ್ಧನಾದರೂ ತನ್ನ ಭಕ್ತನನ್ನು ವ್ಯಾಧಶರೀರದಿಂದ ಮೋಚನ ಮಾಡಲು ಅವನ ಬಾಣದಿಂದ ವಿದ್ಧನಾದಂತೆ ತೋರಿಸಿದನು ಎಂದು ಅಭಿಪ್ರಾಯ.

**ತಥಾಪ್ಯಶೇಷಸ್ಥಿತಿಸಂಭವಾಪ್ಯಯೇ-**
**ಷ್ವನನ್ಯಹೇತುರ್ಯದಶೇಷಶಕ್ತಿಧೃಕ್ ।**
**ನೈಚ್ಛತ್ ಪ್ರಣೇತುಂ ವಪುರತ್ರ ಶೇಷಿತಂ**
**ಮರ್ತ್ಯೇನ ಕಿಂ ಸ್ವಸ್ಯ ಗತಿಂ ಪ್ರದರ್ಶಯನ್ ||೧೩||**

**ಯತ್** ಯಾವ ಕಾರಣ **ಅಶೇಷಶಕ್ತಿಧೃಕ್** ಪ್ರಧಾನಾದಿ ಉಪದಾನ ಕಾರಣ, ಕಾಲಾದೃಷ್ಟಾದಿ ನಿಮಿತ್ತಕಾರಣ, ಭೂಮಿ ಮುಂತಾದ ಅಧಿಷ್ಠಾನ ಇವುಗಳ ಸತ್ತಾಪ್ರವೃತ್ತ್ಯಾದಿಗಳಿಗೆ ಧಾರಕನಾದುದರಿಂದ ಅವುಗಳ ಅಪೇಕ್ಷೆ ಮಾಡಿದರೂ ನಿರಪೇಕ್ಷ ಇದ್ದಂತೆ ಆದ ಕಾರಣ **ಅಶೇಷಸ್ಥಿತಿಸಂಭವಾಪ್ಯಯೇಷು** ಸಮಸ್ತ ಪದಾರ್ಥಗಳ ಸ್ಥಿತಿ, ಉತ್ಪತ್ತಿ, ನಾಶಗಳಲ್ಲಿ, **ಅನನ್ಯಹೇತುಃ** ಸ್ವತಂತ್ರ ಕಾರಣಾಂತರ ನಿರಪೇಕ್ಷನಾಗಿ ಕಾರಣನು **ತಥಾಪಿ** ಹಾಗಿದ್ದರೂ **ವಪುಃ** ಬಲರಾಮಾದಿಗಳ ಶರೀರವನ್ನು **ಪ್ರಣೇತುಂ** ಮೇಲೊಯ್ಯಲು **ನೈಚ್ಛತ** ಇಚ್ಛಿಸಲಿಲ್ಲ. **ಮರ್ತ್ಯೇನ** ಮರಣಶೀಲವಾದ ಈ ದೇಹದಿಂದ **ಕಿಂ** ಅವರಿಗಾದರೂ ಏನು ಪ್ರಯೋಜನ ಎಂಬ ಅಭಿಪ್ರಾಯದಿಂದ **ಶೇಷಿತಂ**

ಶ್ರೀಹರಿಯಿಂದ ಬಲರಾಮಾದಿಗಳ ದೇಹ ಉಳಿಸಲ್ಪಟ್ಟಿತು. **ಸ್ವಸ್ಯ ಗತಿಂ ಪ್ರದರ್ಶಯನ್** ತನ್ನ ಭಕ್ತರಿಗೆ ತನ್ನ ಜ್ಞಾನವೆಂಬ ಯೋಗವನ್ನು ತೋರಿಸುವುದಕ್ಕಾಗಿ ಎಂದರ್ಥ. ಅಥವಾ ಸರ್ವಸಮರ್ಥನಾದ ಶ್ರೀಹರಿಗೆ ಬ್ರಾಹ್ಮಣಶಾಪವನ್ನು ನಾಶ ಮಾಡುವುದೇನು ಅಸಾಧ್ಯವಲ್ಲ. ಆದರೂ **ಪ್ರಣೇತುಂ** ವಿಪ್ರಶಾಪವನ್ನು ಪರಿಹರಿಸಲು ಇಚ್ಛಿಸಲಿಲ್ಲ. ಕಾರಣ ತಾನೂ ಸಹ ಜರನ ಬಾಣವಿದ್ಧನಾದಂತೆ ತೋರಿದನು. ಜರನಂತೆ ಬಲರಾಮಾದಿಗಳನ್ನು ಸದೇಹವಾಗಿ ಸ್ವರ್ಗಕ್ಕೆ ಕಳಿಸಲು ಸಮರ್ಥನಾದರೂ ದೇವತೆಗಳಾದ ಬಲರಾಮಾದಿಗಳಿಗೆ ಈ ಮನುಷ್ಯದೇಹದಿಂದ ಪ್ರಯೋಜನವಿಲ್ಲದ್ದರಿಂದ **ಸ್ವಗತಿಂ ಪ್ರದರ್ಶಯನ್** ತನ್ನ ಲೋಕವನ್ನು ತೋರಿಸುವವನಾಗಿ ಅದೇ ದೇಹದಿಂದ **ಪ್ರಣೇತುಂ** ತನ್ನ ಲೋಕಕ್ಕೆ ಕರೆದೊಯ್ಯಲು ಇಚ್ಛಿಸಲಿಲ್ಲ. ಕಾರಣ ಇಲ್ಲಿ ಅವರ ದೇಹ ಉಳಿಸಿದನು.

ಮೇಲಿನ ಶ್ಲೋಕದಲ್ಲಿ ಈ ಮನುಷ್ಯ ದೇಹದಿಂದೇನು ಪ್ರಯೋಜನವೆಂದು ತನ್ನ ದೇಹವನ್ನೇ ಇಲ್ಲಿ ಉಳಿಸಿ ಹೋದನು. ಎಂಬಂತೆ ತೋರುವುದು ಕಾರಣ ತಾತ್ಪರ್ಯ ಹೇಳುವರು.

**ತಾತ್ಪರ್ಯ- ಶೇಷಿತಂ ವಪುಃ ಬಲರಾಮಾದೀನಾಮ್ ।**

ಬಲರಾಮಾದಿಗಳನ್ನು ಸಶರೀರ ಕರೆದೊಯ್ಯುವ ಸಾಮರ್ಥ್ಯವಿದ್ದರೂ ಅವರಿಗೆ ಅದರಿಂದ ಪ್ರಯೋಜನವಿಲ್ಲದ್ದರಿಂದ ಇಲ್ಲಿಯೇ ಉಳಿಸಿದನು ಎಂದು ಭಾವ.

ಅರ್ಜುನನು ಶ್ರೀಕೃಷ್ಣನ ದೇಹಕ್ಕೆ ಸಂಸ್ಕಾರವನ್ನು ಮಾಡಿದನು ಎಂದು ಕೇಳಿ ಬರುವುದರಿಂದ ಶ್ರೀಕೃಷ್ಣನ ದೇಹವನ್ನೇ ಉಳಿಸಿದನು ಎಂದು ಏಕೆ ಅರ್ಥ ಮಾಡಬಾರದು ಎಂಬ ಶಂಕೆಯನ್ನು ಪ್ರಮಾಣದಿಂದ ಪರಿಹರಿಸುವರು-

**ಜಗತಾಂ ಮೋಹನಾರ್ಥಾಯ ಭಗವಾನ್ ಪುರುಷೋತ್ತಮಃ ।**
**ದರ್ಶಯೇನ್ಮಾನುಷೀಂ ಚೇಷ್ಟಾಂ ತಥಾ ಮೃತಕವದ್ವಿಭುಃ ।**

**ಪ್ರಕಾಶಯೇದದೇಹೋಽಪಿ ಮೋಹಾಯ ಚ ದುರಾತ್ಮನಾಮ್ ।**
**ಮಾಯಾಯಾ ಮೃತಕಂ ದೇಹಂ ತದಾ ಸೃಷ್ಟ್ವಾ ಪ್ರದರ್ಶಯೇತ್ ।**
**ಕುತೋ ಹಿ ಮೃತಕಂ ತಸ್ಯ ಮೃತ್ಯಭಾವಾತ್ಪರಾತ್ಮನಃ ॥ ಇತಿ ಚ ।**

ಶ್ರೀಹರಿಯು ದುರ್ಜನರನ್ನು ಮೋಹಗೊಳಿಸಲು ಮನುಷ್ಯರಂತೆ ಸ್ತ್ರೀಪುರುಷರಿಂದ ಹುಟ್ಟಿದವನಂತೆ ತೋರಿಸುವನು. ತನಗೆ ಪ್ರಾಕೃತ ದೇಹವಿಲ್ಲದಿದ್ದರೂ ದೈತ್ಯರಿಗೆ ಮೋಹ ಬರುವುದಕ್ಕಾಗಿ ಮರಣವಿದ್ದವನಂತೆ ತೋರಿಸುವನು. ಆಗ ತನ್ನ ಇಚ್ಛೆಯಿಂದ ಮೃತವಾದ ಒಂದು ಶರೀರವನ್ನು ಸೃಷ್ಟಿ ಮಾಡಿ ತೋರಿಸುವನು. ಶ್ರೀಹರಿಗೆ ಮರಣವೇ ಇಲ್ಲದ್ದರಿಂದ ಮೃತ ಶರೀರವೆಲ್ಲಿಯದು? ಶ್ರೀಕೃಷ್ಣನ ಆ ದೇಹಕ್ಕೆ ವಿಯೋಗವಿಲ್ಲದಿದ್ದರೂ ಜೀವೇಶ್ವರರಿಗೆ ಅಭೇದವಿರುವುದರಿಂದ ಬಲರಾಮಾದಿಗಳ ದೇಹ ವಿಯೋಗವೇ ಶ್ರೀಕೃಷ್ಣನ ದೇಹವಿಯೋಗ ಎನ್ನಬಹುದಲ್ಲ ಎಂದರೆ ಹೇಳುವರು-

**ತಾತ್ಪರ್ಯ**- **ಜೀವವಿಷ್ಣ್ವೋರಭೇದಶ್ಚ ದೇಹಯೋಗವಿಯೋಜನೇ ।**
**ವಿಷ್ಣೋರ್ದುಃಖಂ ವ್ರಣಿತ್ವಾದಿ ಪರಾಭಾವಸ್ತಥೈವ ಚ ।**
**ಅಸ್ವಾತಂತ್ರ್ಯಂ ಚ ವೇದದಾವುಕ್ತವದ್ಭಾಸತೇ ವಿಭೋಃ ।**
**ಕ್ವಚಿತ್ ಕ್ವಚಿದ್ವಿಮೋಹಾಯ ದೈತ್ಯಾದೀನಾಂ ದುರಾತ್ಮನಾಮ್ ।**
**-ಇತ್ಯಾದಿ ಬ್ರಹ್ಮಾಂಡೇ**

ಜೀವೇಶ್ವರರ ಅಭೇದವು ಮತ್ತು ದೇಹಸಂಬಂಧ ಮತ್ತು ವಿಯೋಗಗಳು, ದುಃಖವು, ಗಾಯ ಮುಂತಾದವುಗಳು ಸೋಲು, ಅಸ್ವಾತಂತ್ರ್ಯ ಮುಂತಾದವುಗಳು ಭಗವಂತನಿಗೆ ಇವೆ ಎಂದು ಹೇಳಿದಂತೆ ವೇದಾದಿಗಳಲ್ಲಿ ತೋರುತ್ತವೆ. ವಾಸ್ತವಿಕವಾಗಿ ಭಗವಂತನಿಗೆ ಈ ಯಾವ ದೋಷಗಳೂ ಇಲ್ಲವೇ ಇಲ್ಲ.

**ಯ ಏತಾಂ ಪ್ರಾತರುತ್ಥಾಯ ಕೃಷ್ಣಸ್ಯ ಪದವೀಂ ಪರಾಮ್ ।**
**ಪ್ರಯತಃ ಕೀರ್ತಯೇದ್ ಭಕ್ತ್ಯಾ ತಾಮೇವಾಪ್ನೋತ್ಯನುತ್ತಮಾಮ್ ।।೧೪।।**

**ಯಃ** ಯಾವನು **ಏತಾಂ ಕೃಷ್ಣಸ್ಯ ಪರಾಂ ಪದವೀಂ** ಶ್ರೀಕೃಷ್ಣನ ಈ ದೇಹತ್ಯಾಗ ಮಾಡದೇ ಪರಂಧಾಮ ತೆರಳಿದ ಎಂಬ ಕಥೆಯನ್ನು **ಪ್ರಾತಃ ಉತ್ಥಾಯ** ಬೆಳಿಗ್ಗೆ ಎದ್ದು **ಪ್ರಯತಃ** ಪ್ರಯತ್ನಪೂರ್ವಕವಾಗಿ **ಭಕ್ತ್ಯಾ** ಭಕ್ತಿಯಿಂದ **ಕೀರ್ತಯೇತ್** ಹೇಳುವನೋ **ಸಃ** ಅವನು **ಅನುತ್ತಮಾಂ ತಾಂ ಏವ ಆಪ್ನೋತಿ** ಶ್ರೇಷ್ಠವಾದಪರಮಾತ್ಮನಪದವಿಯನ್ನೇ (ಸ್ಥಾನವನ್ನೇ) ಹೊಂದುವನು.।।೧೪।।

**ದಾರುಕೋ ದ್ವಾರಕಾಮೇತ್ಯ ವಸುದೇವೋಗ್ರಸೇನಯೋಃ ।**
**ಪತಿತ್ವಾ ಚರಣಾವಾಸ್ರೈರ್ನ್ಯಷಿಂಚತ್ ಕೃಷ್ಣವಿಚ್ಯುತಃ ।।೧೫।।**

**ದಾರುಕಃ** ಶ್ರೀಕೃಷ್ಣನಿಂದ ಆಜ್ಞಪ್ತನಾದ ಸಾರಥಿಯು **ದ್ವಾರಕಾಂ ಏತ್ಯ** ದ್ವಾರಕಾಪಟ್ಟಣಕ್ಕೆ ಬಂದು **ವಸುದೇವೋಗ್ರಸೇನಯೋಃ ಚರಣೌ ಪತಿತ್ವಾ** ವಸುದೇವ ಉಗ್ರಸೇನರ ಕಾಲುಗಳಿಗೆ ಎರಗಿ **ಕೃಷ್ಣವಿಚ್ಯುತಃ** ಶ್ರೀಕೃಷ್ಣನಿಂದ ರಹಿತನಾಗಿ **ಚರಣೌ** ವಸುದೇವ ಉಗ್ರಸೇನರ ಪಾದಗಳನ್ನು **ಅಸ್ರೈಃ ನ್ಯಷಿಂಚತ್** ಕಣ್ಣೀರಿನಿಂದ ತೋಯಿಸಿದನು.॥೧೫॥

**ಕಥಯಾಮಾಸ ನಿಧನಂ ವೃಷ್ಣೀನಾಂ ಕೃತ್ಸ್ನಶೋ ನೃಪ ।**
**ತಚ್ಛ್ರುತ್ವೋದ್ವಿಗ್ನಹೃದಯಾ ಜನಾಃ ಶೋಕವಿಮೂರ್ಛಿತಾಃ ॥೧೬॥**

**ಹೇ ನೃಪ** ರಾಜನೇ **ವೃಷ್ಣೀನಾಂ** ಯಾದವರ **ನಿಧನಂ** ದೇಹತ್ಯಾಗವನ್ನು **ಕೃತ್ಸ್ನಶಃ** ಸಂಪೂರ್ಣವಾಗಿ **ಕಥಯಾಮಾಸ** ಹೇಳಿದನು. **ತಚ್ಛ್ರುತ್ವಾ** ಅದನ್ನು ಕೇಳಿ **ಉದ್ವಿಗ್ನಹೃದಯಾಃ ಜನಾಃ** ಉದ್ವೇಗಕ್ಕೆ ಒಳಗಾದ ಜನರು **ಶೋಕವಿಮೂರ್ಛಿತಾಃ** ದುಃಖದಿಂದ ಮೂರ್ಛಿತರಾದರು.

**ತತ್ರ ವೈ ತ್ವರಿತಾ ಜಗ್ಮುಃ ಕೃಷ್ಣವಿಶ್ಲೇಷವಿಹ್ವಲಾಃ ।**
**ವ್ಯಸವಃ ಶೇರತೇ ಯತ್ರ ಜ್ಞಾತಯೋ ಘ್ನಂತ ಆಯುಧೈಃ ॥೧೭॥**

**ಕೃಷ್ಣವಿಶ್ಲೇಷವಿಹ್ವಲಾಃ** ಶ್ರೀಕೃಷ್ಣನ ವಿಯೋಗದಿಂದ ದುಃಖಿತರಾದ ವಸುದೇವಾದಿಗಳು **ಆಯುಧೈಃ ಘ್ನಂತ ಸಂತಃ** ಆಯುಧಗಳಿಂದ ಹೊಡೆದು-ಕೊಂಡು **ವ್ಯಸವಃ** ಪ್ರಾಣ ಕಳೆದುಕೊಂಡು **ಜ್ಞಾತಯಃ** ಬಂಧುಗಳು **ಯತ್ರ ಶೇರತೇ** ಎಲ್ಲಿ ಮಲಗಿರುವರೋ ಬಿದ್ದಿರುವರೋ **ತತ್ರ** ಅಲ್ಲಿಗೆ **ತ್ವರಿತಾಃ ಜಗ್ಮುಃ** ಶೀಘ್ರವಾಗಿ ಹೋದರು.॥೧೭॥

**ದೇವಕೀ ರೋಹಿಣೀ ಚೈವ ವಸುದೇವಸ್ತಥಾ ಸುತೌ ।**
**ಕೃಷ್ಣರಾಮಾವಪಶ್ಯಂತಃ ಶೋಕಾರ್ತಾ ವಿಜಹುಃ ಸ್ಮೃತಿಮ್ ॥೧೮॥**

**ದೇವಕೀ** ದೇವಕಿಯು **ರೋಹಿಣೀ ಚ** ರೋಹಿಣಿಯೂ ಸಹ **ತಥಾ** ಮತ್ತು **ವಸುದೇವಃ** ವಸುದೇವನು ಕೂಡ **ಸುತೌ** ಮಕ್ಕಳಾದ **ಕೃಷ್ಣರಾಮೌ** ಶ್ರೀಕೃಷ್ಣ-ರಾಮರನ್ನು **ಅಪಶ್ಯಂತಃ** ಏವ ನೋಡದೆ **ಶೋಕಾರ್ತಾಃ** ದುಃಖಿತರಾಗಿ **ಸ್ಮೃತಿಂ ವಿಜಹುಃ** ಮೂರ್ಛಿತರಾದರು.॥೧೮॥

**ಪ್ರಾಣಾಂಶ್ಚ ವಿಜಹುಸ್ತತ್ರ ಭಗವದ್ವಿರಹಾತುರಾಃ ।**
**ಉಪಗುಹ್ಯ ಪತೀಂಸ್ತಾತ ಚಿತಾಮಾರುರುಹುಃ ಸ್ತ್ರಿಯಃ ॥೧೯॥**

**ತಾತ** ರಾಜನೇ **ಭಗವದ್ವಿರಹಾತುರಾಃ** ಶ್ರೀಕೃಷ್ಣನ ವಿರಹದಿಂದ ದುಃಖಿತರಾಗಿ **ತತ್ರ** ಅಲ್ಲಿಯೇ **ಪ್ರಾಣಾನ್ ಚ** ಪ್ರಾಣವನ್ನೂ **ವಿಜಹುಃ** ಬಿಟ್ಟರು. **ಸ್ತ್ರಿಯಃ** ಸ್ತ್ರೀಯರು **ಪತೀನ್** ತಮ್ಮ ತಮ್ಮ ಗಂಡಂದಿರನ್ನು **ಉಪಗುಹ್ಯ** ಆಲಿಂಗಿಸಿಕೊಂಡು **ಚಿತಾಂ ಆರುರುಹುಃ** ಚಿತೆಯನ್ನೇರಿದರು. ಅಂದರೆ ಸಹಗಮನ ಮಾಡಿದರೆಂದರ್ಥ.॥೧೯॥

**ರಾಮಪತ್ನ್ಯಶ್ಚ ತಂ ದೇಹಮುಪಗುಹ್ಯಾಗ್ನಿಮಾವಿಶನ್ ।**
**ವಸುದೇವಪತ್ನ್ಯಸ್ತದ್ಗಾತ್ರಂ ಪ್ರದ್ಯುಮ್ನಾದೀನ್ ಹರೇಃ ಸ್ನುಷಾಃ ।**
**ಕೃಷ್ಣಪತ್ನ್ಯೋಽವಿಶನ್ನಗ್ನಿಂ ರುಕ್ಮಿಣ್ಯಾದ್ಯಾಸ್ತದಾತ್ಮಿಕಾಃ ॥೨೦॥**

**ರಾಮಪತ್ನ್ಯಃ** ಬಲರಾಮನ ಹೆಂಡತಿಯರು **ತಂ ದೇಹಂ** ಆ ಬಲರಾಮನ ದೇಹವನ್ನು **ಉಪಗುಹ್ಯ** ಹಿಡಿದುಕೊಂಡು **ಅಗ್ನಿಂ ಆವಿಶನ್** ಅಗ್ನಿಪ್ರವೇಶ ಮಾಡಿದರು. **ವಸುದೇವಪತ್ನ್ಯಃ** ವಸುದೇವನ ಹೆಂಡಂದಿರು **ತದ್ಗಾತ್ರಂ** ಅವನ ದೇಹವನ್ನು **ಉಪಗುಹ್ಯ** ತಬ್ಬಿಕೊಂಡು **ಹರೇಃ ಸ್ನುಷಾಃ** ಶ್ರೀಕೃಷ್ಣನ ಸೊಸೆಯಂದಿರು **ಪ್ರದ್ಯುಮ್ನಾದೀನ್** ಪ್ರದ್ಯುಮ್ನ, ಸಾಂಬ ಮುಂತಾದವರನ್ನು **ಉಪಗುಹ್ಯ** ಆಲಿಂಗಿಸಿಕೊಂಡು **ಅಗ್ನಿಂ ಆವಿಶನ್** ಅಗ್ನಿಪ್ರವೇಶ ಮಾಡಿದರು **ತದಾತ್ಮಿಕಾಃ** ಶ್ರೀಕೃಷ್ಣನಲ್ಲೇ ಮನಸ್ಸಿಟ್ಟ ಮತ್ತು ಶ್ರೀಕೃಷ್ಣನಂತೆ ಜ್ಞಾನಾತ್ಮಕದೇಹ ಉಳ್ಳ **ರುಕ್ಮಿಣ್ಯಾದ್ಯಾಃ** ಅಷ್ಟಮಹಿಷಿಯರು **ಅಗ್ನಿಂ ಆವಿಶನ್** ಅಂದರೆ ರುಕ್ಮಿಣಿಯು ಅಗ್ನಿಯಲ್ಲಿ ಅಂತರ್ಧಾನಳಾದಳು. ಸತ್ಯಭಾಮೆಯು ವನದಲ್ಲಿ ಅಂತರ್ಧಾನಳಾದಳು. ಇವರಿಬ್ಬರು ದೇಹತ್ಯಾಗ ಮಾಡಲಿಲ್ಲ. ಉಳಿದ ಷಣ್ಮಹಿಷಿಯರು ಅಗ್ನಿಯಲ್ಲಿ ದೇಹತ್ಯಾಗ ಮಾಡಿದರು ಎಂದು ಭಾವ.

ಹಿಂದೆಲ್ಲ ರಾಮಾದಿ ಪತ್ನಿಯರು ರಾಮಾದಿಗಳ ದೇಹದೊಡನೇ ಅಗ್ನಿಪ್ರವೇಶ ಮಾಡಿದರು ಎಂದು ಹೇಳಿ ಕೃಷ್ಣಪತ್ನಿಯರು ಅಗ್ನಿಪ್ರವೇಶ ಮಾಡಿದರು. ಎಂದು ಹೇಳಿದರೆ ಕೃಷ್ಣನ ದೇಹದೊಡನೆ ಎಂದರ್ಥವಾಗುತ್ತದೆ. ಕೃಷ್ಣನ ದೇಹಕ್ಕೆ ಅಗ್ನಿದಾಹ ಉಂಟಾಯಿತು ಎನ್ನುವುದೂ ಸರಿಯಲ್ಲ. ಮುಂದೆ ಕೃತಕವಾದ ಆ ದೇಹವನ್ನು ಅರ್ಜುನ ಸುಡುವನು ಎಂದು ಹೇಳಲಾಗಿದೆ. ಅಲ್ಲದೇ ರುಕ್ಮಿಣಿ-ಸತ್ಯಭಾಮೆಯರು ನಿತ್ಯಮುಕ್ತಳಾದ ಲಕ್ಷ್ಮೀದೇವಿಯ ಸ್ವರೂಪರು. ಹೀಗಾಗಿ ಅವರ ದೇಹದ ನಾಶವಾಯಿತು ಎನ್ನುವುದು ಹೇಗೆ? ಎಂಬ ಶಂಕೆಗೆ ಉತ್ತರಿಸುವರು-

**ಅಗ್ನಾವಂತರ್ದಧೇ ಭೈಷ್ಮೀ ಸತ್ಯಭಾಮಾ ವನೇ ತಥಾ ।**
**ನ ತು ದೇಹವಿಯೋಗೋಽಸ್ತಿ ತಯೋಃ ಶುದ್ಧಚಿದಾತ್ಮನೋಃ ॥ ಇತಿ ಚ ।**

ಭೀಷ್ಮಕನ ಮಗಳಾದ ರುಕ್ಮಿಣಿಯು ಅಗ್ನಿಯಲ್ಲಿ ಕಾಣದಾದಳು. ಸತ್ಯಭಾಮೆಯು ಅಡವಿಯಲ್ಲಿ ಕಾಣದಾದಳು. ಜ್ಞಾನಾನಂದಾತ್ಮಕದೇಹ ಉಳ್ಳ ಅವರೀರ್ವರಿಗೆ ದೇಹವಿಯೋಗವಿಲ್ಲ.॥೨೦॥

**ಅರ್ಜುನಃ ಪ್ರೇಯಸಃ ಸಖ್ಯುಃ ಕೃಷ್ಣಸ್ಯ ವಿರಹಾತುರಃ ।**
**ಆತ್ಮಾನಂ ಸಾಂತ್ವಯಾಮಾಸ ಕೃಷ್ಣಗೀತೈಃ ಸದುಕ್ತಿಭಿಃ ॥೨೦॥**

**ಅರ್ಜುನಃ** ಅರ್ಜುನನು **ಪ್ರೇಯಸಃ ಸಖ್ಯುಃ** ಅತ್ಯಂತ ಪ್ರಿಯಸ್ನೇಹಿತನಾದ **ಕೃಷ್ಣಸ್ಯ** ಶ್ರೀಕೃಷ್ಣನ **ವಿರಹಾತುರಃ** ವಿಯೋಗದಿಂದ ದುಃಖಿತನಾಗಿ **ಆತ್ಮಾನಂ** ತನ್ನನ್ನು **ಕೃಷ್ಣಗೀತೈಃ** ಶ್ರೀಕೃಷ್ಣನು ಹೇಳಿದ **ಸದುಕ್ತಿಭಿಃ** ಗೀತೋಪನಿಷತ್ತುಗಳಿಂದ **ಸಾಂತ್ವಯಾಮಾಸ** ಸಮಾಧಾನಪಡಿಸಿಕೊಂಡನು.॥೨೦॥

**ಬಂಧೂನಾಂ ನಷ್ಟಗೋತ್ರಾಣಾಮರ್ಜುನಃ ಸಾಂಪರಾಯಿಕಮ್ ।**
**ಹತಾನಾಂ ಕಾರಯಾಮಾಸ ಯಥಾವದನುಪೂರ್ವಶಃ ॥೨೨॥**

**ನಷ್ಟಗೋತ್ರಾಣಾಂ ಹತಾನಾಂ ಬಂಧೂನಾಂ** ಒಬ್ಬರೂ ಉಳಿಯದಂತೆ ಗೋತ್ರವೇ ನಾಶವಾಗಿ ಮೃತರಾದ ಬಂಧುಗಳಿಗೆ **ಅರ್ಜುನಃ** ಅರ್ಜುನನು **ಯಥಾವತ್** ವಿಧ್ಯುಕ್ತವಾಗಿ **ಅನುಪೂರ್ವಶಃ** ಕ್ರಮವಾಗಿ **ಸಾಂಪರಾಯಿಕಂ ಕಾರಯಾಮಾಸ** ಉತ್ತರ ಕ್ರಿಯೆಯನ್ನು ಮಾಡಿದನು.॥೨೨॥

**ದ್ವಾರಕಾಂ ಹರಿಣಾ ತ್ಯಕ್ತಾಂ ಸಮುದ್ರೋಽಪ್ಲಾವಯತ್ ಕ್ಷಣಾತ್ ।**
**ವರ್ಜಯಿತ್ವಾ ಮಹಾರಾಜ ಶ್ರೀಮದ್ಭಗವದಾಲಯಮ್ ॥೨೩॥**

**ಮಹಾರಾಜ** ಪರೀಕ್ಷಿತನೇ **ಶ್ರೀಮದ್ಭಗವದಾಲಯಂ ವರ್ಜಯಿತ್ವಾ** ಶ್ರೀಕೃಷ್ಣನ ಮಂದಿರವನ್ನು ಬಿಟ್ಟು **ಹರಿಣಾ ತ್ಯಕ್ತಾಂ** ಶ್ರೀಕೃಷ್ಣನಿಂದ ಬಿಡಲ್ಪಟ್ಟ **ದ್ವಾರಕಾಂ** ದ್ವಾರಕಾವನ್ನು **ಸಮುದ್ರಃ** ಸಮುದ್ರವು **ಕ್ಷಣಾತ್** ಶೀಘ್ರದಲ್ಲಿಯೇ **ಅಪ್ಲಾವಯತ್** ಮುಳುಗಿಸಿತು.॥೨೩॥

**ನಿತ್ಯಂ ಸನ್ನಿಹಿತಸ್ತತ್ರ ಭಗವಾನ್ ಮಧುಸೂದನಃ ।**
**ಸ್ಮೃತ್ಯಾಽಶೇಷಾಶುಭಹರಃ ಸರ್ವಮಂಗಲಮಂಗಲಃ ॥೨೪॥**

**ಭಗವಾನ್ ಮಧುಸೂಧನಃ** ಷಡ್ಗುಣ್ಯೈಶ್ವರ್ಯಸಂಪನ್ನನಾದ ಮಧುರಿಪು-ವಾದ ಶ್ರೀಕೃಷ್ಣನು **ತತ್ರ** ದ್ವಾರಕಾದಲ್ಲಿ **ನಿತ್ಯಂ** ಯಾವಾಗಲೂ **ಸನ್ನಿಹಿತಃ** ಸನ್ನಿಹಿತನಾಗಿದ್ದು **ಸ್ಮೃತ್ವಾ** ಸ್ಮರಣ ಮಾತ್ರದಿಂದ **ಅಶೇಷಾಶುಭಹರಃ** ಸಮಸ್ತ ಅಮಂಗಲ ನಾಶಕನು **ಸರ್ವಮಂಗಲಮಂಗಲಃ** ಸಮಸ್ತರಿಗೂ ಪರಮ-ಮಂಗಲದಾಯಕನೂ ಆಗಿರುವನು.।।೨೪।।

**ಸ್ತ್ರೀಬಾಲವೃದ್ಧಾನಾದಾಯ ಹತಶೇಷಾನ್ ಧನಂಜಯಃ ।**
**ಇಂದ್ರಪ್ರಸ್ಥಂ ಸಮಾವೇಶ್ಯ ವಜ್ರಂ ತತ್ರಾಭ್ಯಷೇಚಯತ್ ।।೨೫।।**

**ಧನಂಜಯಃ** ಅರ್ಜುನನುಃ **ಹತಶೇಷಾನ್** ಅಳಿದುಳಿದ **ಸ್ತ್ರೀಬಾಲವೃದ್ಧಾನ್ ಆದಾಯ** ಸ್ತ್ರೀಯರು, ಬಾಲಕರು, ವೃದ್ಧರನ್ನು ಕರೆದುಕೊಂಡು **ಇಂದ್ರಪ್ರಸ್ಥಂ** ಇಂದ್ರಪ್ರಸ್ಥನಗರದಲ್ಲಿ **ಸಮಾವೇಶ್ಯ** ಇರಿಸಿ **ತತ್ರ** ಅಲ್ಲಿ **ವಜ್ರಂ** ಶ್ರೀಕೃಷ್ಣನ ಮರಿ ಮಗನನ್ನು **ಅಭ್ಯಷೇಚಯತ್** ಪಟ್ಟಾಭಿಷೇಕ ಮಾಡಿದನು.।।೨೫।।

**ಶ್ರುತ್ವಾ ಸುಹೃದ್ವಧಂ ರಾಜನ್ನರ್ಜುನಾತ್ ತೇ ಪಿತಾಮಹಾಃ ।**
**ತ್ವಾಂ ತು ವಂಶಧರಂ ಕೃತ್ವಾ ಜಗ್ಮುಃ ಸರ್ವೇ ಮಹಾಪಥಮ್ ।।೨೬।।**

**ರಾಜನ್** ಪರೀಕ್ಷಿತನೇ **ತೇ** ನಿನ್ನ **ಪಿತಾಮಹಾಃ** ಅಜ್ಜಂದಿರಾದ ಪಾಂಡವರು **ಅರ್ಜುನಾತ್** ಅರ್ಜುನನಿಂದ **ಸುಹೃದ್ವಧಂ ಶ್ರುತ್ವಾ** ಯಾದವರ ನಿಧನವನ್ನು ಕೇಳಿ **ತ್ವಾಂ** ನಿನ್ನನ್ನು **ವಂಶಧರಂ ಕೃತ್ವಾ** ವಂಶಪ್ರವರ್ತಕನನ್ನಾಗಿ ಮಾಡಿ **ಸರ್ವೇ ಮಹಾಪಥಂ ಜಗ್ಮುಃ** ಎಲ್ಲರೂ ವೀರಮಾರ್ಗವನ್ನು ಕುರಿತು ಹೋದರು.

**ಯ ಏತದ್ ದೇವದೇವಸ್ಯ ವಿಷ್ಣೋಃ ಕರ್ಮಾಣಿ ಜನ್ಮ ಚ ।**
**ಕೀರ್ತಯೇಚ್ಛ್ರದ್ಧಯಾ ಮರ್ತ್ಯಃ ಸರ್ವಪಾಪೈಃ ಪ್ರಮುಚ್ಯತೇ ।।೨೭।।**

**ಯಃ** ಯಾವನು **ಏತತ್** ಈ **ದೇವದೇವಸ್ಯ** ದೇವಾಧಿದೇವನಾದ ಶ್ರೀಕೃಷ್ಣನ **ಕರ್ಮಾಣಿ** ಕಾರ್ಯಗಳನ್ನು **ಜನ್ಮ ಚ** ಅವತಾರಗಳನ್ನು **ಶ್ರದ್ಧಯಾ** ಭಕ್ತಿಯಿಂದ **ಕೀರ್ತಯೇತ್** ಸ್ತುತಿಸುವನೋ **ಸಃ ಮರ್ತ್ಯಃ** ಆ ಮನುಷ್ಯನು **ಸರ್ವಪಾಪೈಃ ಪ್ರಮುಚ್ಯತೇ** ಎಲ್ಲ ಪಾಪಗಳಿಂದ ಮುಕ್ತನಾಗುವನು.।।೨೭।।

**ಇತ್ಥಂ ಹರೇರ್ಭಗವತೋ ರುಚಿರಾವತಾರಂ**
**ವೀರ್ಯಾಣಿ ಚಾಸ್ಯ ಚರಿತಾನಿ ಚ ಮಂಗಲಾನಿ ।**

**ಅನ್ಯತ್ರ ಚೇಹ ಚ ಶ್ರುತಾನಿ ಗೃಣನ್ ಮನುಷ್ಯೋ**
**ಭಕ್ತಿಂ ಪರಾಂ ಪರಮಹಂಸಗತೌ ಲಭೇತ ॥೨೮॥**

**ಇತ್ಥಂ** ಈ ರೀತಿಯಾಗಿ **ಭಗವತಃ** ಷಡ್ಗುಣೈಶ್ವರ್ಯಸಂಪನ್ನನಾದ **ಹರೇಃ** ಶ್ರೀಕೃಷ್ಣನ **ರುಚಿರಾವತಾರಂ** ಮನೋಹರವಾದ ಅವತಾರವನ್ನು **ವೀರ್ಯಾಣಿ** ದುಷ್ಟನಿಗ್ರಹರೂಪವಾದ ಪರಾಕ್ರಮವನ್ನು **ಮಂಗಲಾನಿ ಚರಿತಾನಿ ಚ** ಶಿಷ್ಟಪರಿಪಾಲನರೂಪವಾದ ಮಂಗಲಮಯವಾದ ಚರಿತ್ರೆಯನ್ನು **ಸಮ್ಮತಾನಿ** ಸ್ಮರಣಮಾತ್ರದಿಂದ ಸುಖಕೊಡುವ **ಇಹ** ಭಾಗವತದಲ್ಲಿ **ಅನ್ಯತ್ರ** ಬೇರೆ ಗ್ರಂಥಗಳಲ್ಲಿ **ಶ್ರುತಾನಿ** ಕೇಳಲ್ಪಟ್ಟ ಅಥವಾ **ಇಹ** ಭಗವಂತನಲ್ಲಿ **ಅನ್ಯತ್ರ** ಭಕ್ತರಲ್ಲಿರುವ ಚರಿತ್ರೆಗಳನ್ನು **ಗೃಣನ್ ಮನುಷ್ಯಃ** ಸ್ತುತಿಸುವ ಮನುಷ್ಯನು **ಪರಮಹಂಸಗತೌ ಪರಾಂ ಭಕ್ತಿಂ ಲಭೇತ** ಪರಮಹಂಸರಿಂದ ಪ್ರಾಪ್ಯನಾದ ಶ್ರೀನಾರಾಯಣನಲ್ಲಿ ಉತ್ತಮವಾದ ಭಕ್ತಿಯನ್ನು ಹೊಂದುವನು.॥೨೮॥

**॥ ಇತಿ ಶ್ರೀಮದ್ಭಾಗವತೇ ಏಕಾದಶಸ್ಕಂಧೇ ಏಕತ್ರಿಂಶೋಽಧ್ಯಾಯಃ ॥**

**॥ ಸಮಾಪ್ತಶ್ಚಾಯಂ ಸ್ಕಂಧಃ ॥**

**॥ಶ್ರೀಕೃಷ್ಣಾರ್ಪಣಮಸ್ತು ॥**

**॥ ಇತ್ಯಶೇಷಮತಿಮಂಗಲಮ್ ॥**

★★★



ಶ್ಲೋಕಾರ್ಧಂ ಶ್ಲೋಕಪಾದಂ ವಾ ನಿತ್ಯಂ ಭಾಗವತೋದ್ಭವಮ್ ।
ಯಃ ಪಠೇತ್ ಪ್ರಾತರುತ್ಥಾಯ ಸ ಜೀವನ್ನೇವ ಮುಕ್ತಿಗಃ ॥★॥

ಎಂಬ ಉಕ್ತಿಯಂತೆ ಧರ್ಮದ ರಕ್ಷಣೆಗಾಗಿ ಅವತರಿಸಿದ ಶ್ರೀಕೃಷ್ಣನ ಪ್ರತಿಮೆಯಂತಿರುವ, ಅಜ್ಞಾನಾಂಧಕಾರಕ್ಕೆ ಸೂರ್ಯನಂತೆ ಇರುವ 'ಶ್ರೀಮದ್ಭಾಗವತ' ಗ್ರಂಥದ ಒಂದು ಶ್ಲೋಕದ ಅರ್ಧಭಾಗವನ್ನು ಅಥವಾ ಪಾದವನ್ನು ಪಠಿಸಿದರೂ ಮಹಾಫಲವಿದೆ. ಆದರೆ ಅರ್ಥಾನುಸಂಧಾನವಿದ್ದಾಗ ಮಾತ್ರ ಅಧಿಕವಾದ ಲಾಭ. ಆದರೆ ಭಾಗವತದ ಒಂದೊಂದು ಶ್ಲೋಕಗಳೂ ಕಬ್ಬಿಣದ ಕಡಲೆಗಳಂತೆ.

ಶ್ರೀಮದಾಚಾರ್ಯರ ಭಾಗವತತಾತ್ಪರ್ಯ, ಶ್ರೀವಿಜಯಧ್ವಜತೀರ್ಥರು, ಶ್ರೀಯಾದವಾರ್ಯರು, ಶ್ರೀಸತ್ಯಧರ್ಮತೀರ್ಥರು, ಶ್ರೀಸುಧೀಂದ್ರತೀರ್ಥರು, ಶ್ರೀನಿವಾಸತೀರ್ಥರು, ಶ್ರೀತಾಮ್ರಪರ್ಣಿ ಆಚಾರ್ಯರೇ ಮೊದಲಾದವರ ವ್ಯಾಖ್ಯಾನಗಳ ಉಪಕಾರವಿಲ್ಲದೇ ಶ್ರೀಮದ್ಭಾಗವತ ಅರ್ಥವಾಗುವುದು ಅಸಾಧ್ಯ.

ಪ್ರಕೃತ ಶ್ರೀಮದ್ಭಾಗವತದ ಅಧ್ಯಯನ ಹಾಗೂ ಪಾಠಪ್ರವಚನಾಸಕ್ತರಾದ, ನಮ್ಮ ಸ್ವರೂಪೋದ್ಧಾರಕ ಗುರುಗಳಾದ ಶ್ರೀ ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದ ಒಡೆಯರ ಪ್ರಿಯಶಿಷ್ಯರಾದ, ಶ್ರೀಜಯತೀರ್ಥವಿದ್ಯಾಪೀಠದ ಕುಲಪತಿಗಳಾದ, ನಿರಂತರ ಶ್ರೀಮನ್ನ್ಯಾಯಸುಧಾ, ವ್ಯಾಸತ್ರಯ, ದ್ವೈತದ್ಯುಮಣ್ಯಾದಿಗಳ ಪಾಠ ಪ್ರವಚನಗಳಲ್ಲಿ ಆಸಕ್ತರಾದ ಪಂಡಿತವರೇಣ್ಯ ಶ್ರೀಗುತ್ತಲ ಆಚಾರ್ಯರವರು (ಪಂ.ರಂಗಾಚಾರ್ಯರು) ಸಕಲ ವ್ಯಾಖ್ಯಾನಗಳಿಂದ ಸಹಿತವಾದ ಶ್ರೀಮದ್ಭಾಗವತ ಅನುವಾದ ಕಾರ್ಯವನ್ನು ಮಾಡಿದ್ದಾರೆ. ಈ ಭಾಗದ ಮುದ್ರಣದೊಂದಿಗೆ ಸಮಗ್ರ ಭಾಗವತ ಮುದ್ರಣವು ಶ್ರೀಕೃಷ್ಣನಿಗೆ ಸಮರ್ಪಿತವಾಯಿತು.

– ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರು